# ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ)




ಸಂಶೋಧಕರು
ಬಸಯ್ಯ ಕೆ. ಗವಿಮಠ

ಮಾರ್ಗದರ್ಶಕರು
ಡಾ. ಬಿ.ಕೆ. ಹಿರೇಮಠ















ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

**ಬಸಯ್ಯ ಕೊಟ್ರಯ್ಯ ಗವಿಮಠ**

ಮಾರ್ಗದರ್ಶಕರು

**ಡಾ.ಬಿ.ಕೆ. ಹಿರೇಮಠ**

ಬಾಗಲಕೋಟೆ

ಲಲಿತಕಲಾ ನಿಕಾಯ

**ದೃಶ್ಯಕಲಾ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ-೫೮೩ ೨೭೬**

**೨೦೧೩-೧೪**

# ದೃಢೀಕರಣ ಪತ್ರ

ಬಸಯ್ಯ ಕೊಟ್ರಯ್ಯ ಗವಿಮಠ ಇವರು ನನ್ನ ಮಾರ್ಗದರ್ಶನದಲ್ಲಿ ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಸಿದ್ದಪಡಿಸಿದ್ದು, ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಈ ಮೂಲಕ ಸಲ್ಲಿಸುತ್ತಿದ್ದಾರೆ.

ಸದರಿ ಮಹಾಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು, ಇದರ ಯಾವುದೇ ಭಾಗ ಮತ್ತು ವಿಷಯವನ್ನು ಯಾವುದೇ ಉದ್ದೇಶಕ್ಕೆ ಬಳಸಿಕೊಂಡಿಲ್ಲ ಮತ್ತು ಈ ಮೊದಲು ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: 6-6-13

(ಡಾ.ಬಿ.ಕೆ. ಹಿರೇಮಠ)
ಮಾರ್ಗದರ್ಶಕರು
ಬಾಗಲಕೋಟೆ

# ಪ್ರಮಾಣ ಪತ್ರ

**ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ **ಡಾ.ಬಿ.ಕೆ. ಹಿರೇಮಠ** ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಈ ಮೂಲಕ ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಇನ್ನಿತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: 7-6-2013

**(ಬಸಯ್ಯ ಕೊಟ್ರಯ್ಯ ಗವಿಮಠ)**
ಸಂಶೋಧಕರು
ದೃಶ್ಯಕಲಾ ವಿಭಾಗ

# ಪರಿವಿಡಿ


ಅಧ್ಯಾಯ ಒಂದು

**೧. ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆ / ೧**

ಅಧ್ಯಾಯ ಎರಡು

**ಬಾಗಲಕೋಟೆ ಜಿಲ್ಲೆಯ ಶಿಲಾಶ್ರಯ ಚಿತ್ರಕಲೆ / ೧೩**

ಅಧ್ಯಾಯ ಮೂರು

**ಬಾಗಲಕೋಟೆ ಜಿಲ್ಲೆಯ ಭಿತ್ತಿ ಮಾಧ್ಯಮ ಚಿತ್ರಕಲೆ / ೩೩**

ಅ. ಗುಹಾಭಿತ್ತಿ / ೩೪

ಆ. ಗೃಹಭಿತ್ತಿ(ಮನೆ, ಮಠ ಇತ್ಯಾದಿ) / ೪೬

ಅಧ್ಯಾಯ ನಾಲ್ಕು

**ಬಾಗಲಕೋಟೆ ಜಿಲ್ಲೆಯ ಹಸ್ತಪ್ರತಿ ಮಾಧ್ಯಮ ಚಿತ್ರಕಲೆ / ೯೪**

ಅ. ತಾಳೆಗರಿ / ೧೦೧

ಆ. ಫಲಕ / ೧೦೯

ಅಧ್ಯಾಯ ಐದು

**ಬಾಗಲಕೋಟೆ ಜಿಲ್ಲೆಯ ತೊಗಲು ಮಾಧ್ಯಮ ಚಿತ್ರಕಲೆ / ೧೨೨**

ಅ. ತೊಗಲುಗೊಂಬೆ ಚಿತ್ರಗಳು / ೧೨೨

ಆ. ಹಚ್ಚೆ ಚಿತ್ರಗಳು / ೧೫೯

ಇ. ಮದರಂಗಿ ನಕ್ಷೆಗಳು / ೧೬೭

ಅಧ್ಯಾಯ ಆರು

**ಬಾಗಲಕೋಟೆ ಜಿಲ್ಲೆಯ ಬಟ್ಟೆ ಮಾಧ್ಯಮ ಚಿತ್ರಕಲೆ / ೧೭೧**

ಅ. ರಂಗಪರದೆಗಳು / ೧೭೧

ಆ. ಇತರೆ: ೧. ಜನಪದ / ೧೮೪

೨. ಶಿಷ್ಟ / ೧೯೧

ಅಧ್ಯಾಯ ಏಳು

**ಬಾಗಲಕೋಟೆ ಜಿಲ್ಲೆಯ ಗಾಜು ಮಾಧ್ಯಮ ಚಿತ್ರಕಲೆ / ೨೩೧**

ಅಧ್ಯಾಯ ಎಂಟು

**ಸಮಾರೋಪ / ೨೭೫**

ಅನುಬಂಧಗಳು

**೧. ಗ್ರಂಥಋಣ / ೨೮೫**

**೨. ನಕ್ಷೆಗಳು / ೨೮೮**



ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆ

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆ

## ಅಧ್ಯಯನದ ಉದ್ದೇಶ

ಚಿತ್ರಕಲೆ ಆದಿಮಾನವನಿಂದ ಮೊದಲುಗೊಂಡು ಇಂದಿಗೂ ಬದುಕಿನ ಅವಿಭಾಜ್ಯ ಅಂಗವಾಗಿದೆ. ಪಾಶ್ಚಿಮಾತ್ಯ ಕಲಾವಿದ ಜಗತ್‌ಪ್ರಸಿದ್ಧ ಮೊನಾಲಿಸಾ ಕೃತಿಕಾರ ಲಿಯೋನಾರ್ಡೋ ಡ ವಿಂಚಿ ಜಗತ್ತಿನಲ್ಲಿ "ಕಲೆಯೊಂದೇ ಈಶ್ವರ, ಉಳಿದದ್ದೆಲ್ಲ ನಶ್ವರ" ಎಂಬ ಮಾತು ಕಲೆಯ ಬಗೆಗಿನ ಆದರಣೀಯ ಭಾವನೆ ಹಾಗೂ ಜಗತ್ತಿಗೆ ನೀಡುವ ಸಂದೇಶವಾಗಿ ತುಂಬ ಅದ್ಭುತವೆನಿಸುತ್ತದೆ. ಭಾರತೀಯ ಚಿತ್ರಪರಂಪರೆಯಂತೂ ಬೆಳಿಗ್ಗೆ ಎದ್ದು ರಂಗೋಲಿ ಹಾಕುವುದರಿಂದ ಆರಂಭಗೊಂಡು, ರಾತ್ರಿ ಹೊದ್ದು ಮಲಗುವ ಹಾಸಿಗೆಯವರೆಗೂ, ಹುಟ್ಟಿನಿಂದ ಸಾವು ಗಾಣುವವರೆಗೂ ದಿನನಿತ್ಯದ ಬದುಕನ್ನು, ಬದುಕಿನ ಕ್ಷಣ ಕ್ಷಣಗಳನ್ನು ವ್ಯಾಪಿಸಿದೆ. ಪ್ರತಿನಿತ್ಯದ ಬದುಕಿನಲ್ಲಿ ಬಟ್ಟೆ ಬಳಸುವ ವಸ್ತು, ವಾಸಿಸುವ ಮನೆ, ಪೂಜಿಸುವ ದೇವರು, ದೇವಸ್ಥಾನ, ವ್ಯಾಪಾರ-ವಹಿವಾಟು, ಶಿಕ್ಷಣ, ಕಲೆ, ವಿಜ್ಞಾನ, ಸಾಮಾಜಿಕ, ಸಾಂಸ್ಕೃತಿಕ ಹೀಗೆ ಎಲ್ಲ ವಿದ್ಯಮಾನಗಳಲ್ಲಿಯೂ ಚಿತ್ರಕಲೆ ಹಾಸುಹೊಕ್ಕಾಗಿದೆ.

ಸಂಸ್ಕೃತಿ ಮತ್ತು ಕಲಾ ದೃಷ್ಟಿಯಿಂದ ಬಾಗಲಕೋಟೆ ಜಿಲ್ಲೆಯನ್ನು ಅವಲೋಕಿಸುವ ಪೂರ್ವದಲ್ಲಿ ಅದರ ದಾಖಲಿತ ಭೌಗೋಳಿಕ ಸ್ವರೂಪವನ್ನಿಲ್ಲಿ ಪರಿಶೀಲಿಸಬಹುದು.

ಬಾಗಲಕೋಟೆ ಜಿಲ್ಲೆಯ ದಖನ್‌ಪ್ರಸ್ಥಭೂಮಿಯ ಒಣ ಮತ್ತು ಶುಷ್ಕ ಪ್ರದೇಶದಲ್ಲಿದೆ. ದಕ್ಷಿಣ ಕರಾವಳಿಯಿಂದ ಸುಮಾರು ೨೦೦ ಕಿ.ಮೀ.ಗಳಷ್ಟು ದೂರದಲ್ಲಿರುವ ಜಿಲ್ಲೆಯು ಸಮುದ್ರಮಟ್ಟದಿಂದ ಸರಾಸರಿ ೬೨೫ ಮೀಟರ್ ಎತ್ತರದಲ್ಲಿದೆ. ಜಿಲ್ಲೆಯ ಉತ್ತರ ಮತ್ತು ಈಶಾನ್ಯಕ್ಕೆ ಬಿಜಾಪುರ ಜಿಲ್ಲೆ, ದಕ್ಷಿಣ ಮತ್ತು ನೈಋತ್ಯಕ್ಕೆ ಗದಗ ಜಿಲ್ಲೆ, ಪೂರ್ವಕ್ಕೆ ರಾಯಚೂರು ಮತ್ತು ಗುಲ್ಬರ್ಗಾ ಜಿಲ್ಲೆಗಳು. ಪಶ್ಚಿಮ ಮತ್ತು ವಾಯುವ್ಯಕ್ಕೆ ಬೆಳಗಾವಿ ಜಿಲ್ಲೆ ಹಾಗೂ ಆಗ್ನೇಯಕ್ಕೆ ಕೊಪ್ಪಳ ಜಿಲ್ಲೆಗಳಿವೆ. ಜಿಲ್ಲೆಯ ಉತ್ತರ ಭಾಗ ಕೃಷ್ಣಾ ಕಣಿವೆಯ ದಕ್ಷಿಣ ಪ್ರದೇಶವಾದರೆ, ದಕ್ಷಿಣ ಭಾಗ ಮಲಪ್ರಭಾ ಕಣಿವೆ ಪ್ರದೇಶವಾಗಿದೆ. ಜಿಲ್ಲೆಯ ಮಧ್ಯಭಾಗದಲ್ಲಿ ಘಟಪ್ರಭಾ ಕಣಿವೆಯಿದೆ. ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿರುವ ಬಾಗಲಕೋಟೆ ಜಿಲ್ಲೆಯ ಭೂಪ್ರದೇಶವು ೭೪.೫೯ ಪೂರ್ವ ರೇಖಾಂಶದಿಂದ, ೭೬.೨೨ ಪೂರ್ವ ರೇಖಾಂಶಗಳ ಮಧ್ಯೆ, ೧೫.೪೮ ಉತ್ತರ ಅಕ್ಷಾಂಶದಿಂದ, ೧೬.೫೩ ಉತ್ತರ ಅಕ್ಷಾಂಶಗಳ ಮಧ್ಯೆ

ಹರಡಿಕೊಂಡಿದೆ. ಜಿಲ್ಲೆಯ ಒಟ್ಟು ವಿಸ್ತೀರ್ಣ ೬೫೮೭.೯೨ ಚ.ಕಿ.ಮೀ.ಗಳಷ್ಟಿದೆ. ಜಿಲ್ಲೆಯಲ್ಲಿ ಬೆಟ್ಟ-ಗುಡ್ಡಗಳ ನಡುವೆ ನದಿ ಕಣಿವೆಗಳಿರುವುದು ಒಂದು ವಿಶೇಷ. ಹುನಗುಂದ ಬಯಲನ್ನು ಬಿಟ್ಟರೆ ಹೆಚ್ಚು-ಕಡಿಮೆ ಇಡೀ ಜಿಲ್ಲೆ ಬೆಟ್ಟಗಳಿಂದ ಕೂಡಿದೆ.

ಜಿಲ್ಲೆಯ ಹವಾಮಾನ ಆರೋಗ್ಯಕರವಾಗಿದೆ. ಡಿಸೆಂಬರ್ ತಿಂಗಳ ಚಳಿಗಾಲದ ಅವಧಿಯಲ್ಲಿ ಕನಿಷ್ಠ ಉಷ್ಣಾಂಶ ೧೫ ಡಿಗ್ರಿ ಸೆಂಟಿಗ್ರೇಡ್ ಇರುತ್ತದೆ. ಮೇ ತಿಂಗಳ ಬೇಸಿಗೆ ಅವಧಿಯಲ್ಲಿ ಗರಿಷ್ಠ ತಾಪಮಾನ ೪೯ ಡಿಗ್ರಿ ಸೆಂಟಿಗ್ರೇಡ್‌ವರೆಗೆ ಇರುತ್ತದೆ. ಜಿಲ್ಲೆಯ ವಾರ್ಷಿಕ ಮಳೆಯ ಪ್ರಮಾಣ ಸರಾಸರಿ ೫೯೧ ಮಿ.ಮೀ. ಜಿಲ್ಲೆಯಲ್ಲಿ ಅರಣ್ಯ ಸಂಪತ್ತು ಗಮನಾರ್ಹವಾಗಿದೆ. ಜಿಲ್ಲೆಯ ಒಟ್ಟು ವಿಸ್ತೀರ್ಣದ ಶೇಕಡ ೧೨.೩೨ರಷ್ಟು ಅಂದರೆ ೮೧,೦೮೧ ಹೆಕ್ಟೇರು ಪ್ರದೇಶದಲ್ಲಿ ಅರಣ್ಯವಿದೆ. ಮೂರು ನದಿಗಳಾದ ಕೃಷ್ಣಾ, ಘಟಪ್ರಭಾ ಮತ್ತು ಮಲಪ್ರಭಾ ಈ ಜಿಲ್ಲೆಯ ಜನತೆಯ ಜೀವನಾಡಿಗಳಾಗಿವೆ. ಶಾಸನಗಳಲ್ಲಿ ಪೆರ್ದೊರೆ, ಸಂಸ್ಕೃತದಲ್ಲಿ ಕೃಷ್ಣವೇಣಿ ಹಾಗೂ ಜಾನಪದದಲ್ಲಿ ಹಿರಿಹೊಳೆ ಎಂದು ಕರೆಯಲಾಗುವ ಕೃಷ್ಣೆಯು ಜಿಲ್ಲೆಯ ಪ್ರಮುಖ ನದಿಯಾಗಿದೆ. ಜಿಲ್ಲೆಯ ಖನಿಜಸಂಪತ್ತು ಸಮೃದ್ಧವಾಗಿದೆ. ಲೋಕಾಪುರ, ಕಲಾದಗಿ, ಬಾಗಲಕೋಟೆ ಭಾಗಗಳಲ್ಲಿ ಸುಣ್ಣಶಿಲೆ, ರಾಮತಾಳ ಹುನಗುಂದ ಭಾಗದಲ್ಲಿ ಕಬ್ಬಿಣದ ಅದಿರು, ಖಜ್ಜಿಡೋಣಿ, ಗದ್ದನಕೇರಿ ಸಮೀಪದ ಪ್ರದೇಶದಲ್ಲಿರುವ ಸುಣ್ಣಶಿಲೆಗಳಲ್ಲಿ ತಾಮ್ರ ಸಂಚಯನದ ಮಚ್ಚೆಗಳಿರುವುದು ಪತ್ತೆಯಾಗಿದೆ. ಇಲಾಳ ಭಾಗದಲ್ಲಿ ಕಾಗೆ ಬಂಗಾರದ ಸಂಚಯವಿದೆ. ಯಲ್ಲನಹಟ್ಟಿ, ಯಳ್ಳಿಗುತ್ತಿ ಭಾಗದಲ್ಲಿ ಬಿರುಸಾದ ಎಳೆಗಳುಳ್ಳ ಕಲ್ನಾರಿನ ಶಿಲೆಗಳಿವೆ. ಬೆನಕಟ್ಟಿ, ಮಹಾಕೂಟ, ಮುಚಖಂಡಿ, ಗುಳೇದಗುಡ್ಡ ಬೆಟ್ಟ ಪ್ರದೇಶಗಳು ದಟ್ಟ ಹಸಿರಿನಿಂದ ಕಂಗೊಳಿಸುತ್ತವೆ.

ಇದು ಆಗಸ್ಟ್ ೧೯೯೭ ಜಿಲ್ಲಾ ಪುನರ್‌ವಿಂಗಡಣೆ ಸಂದರ್ಭದಲ್ಲಿ ಅಖಂಡ ವಿಜಾಪುರ ಜಿಲ್ಲೆಯಿಂದ ಬೇರ್ಪಟ್ಟು, ಬಾಗಲಕೋಟೆ ಜಿಲ್ಲೆಯು ಜಮಖಂಡಿ, ಮುಧೋಳ, ಬೀಳಗಿ, ಬಾದಾಮಿ, ಹುನಗುಂದ ಹಾಗೂ ಬಾಗಲಕೋಟೆ ಈ ಆರು ತಾಲ್ಲೂಕುಗಳ ಜಿಲ್ಲೆಯಾಯಿತು.

ಪ್ರಸಕ್ತ ಬಾಗಲಕೋಟೆ ಭೌಗೋಳಿಕವಾಗಿ ಬರದ ನಾಡೆಂದು ಅಂದುಕೊಂಡರೂ ಇತಿಹಾಸ ಪೂರ್ವ ಪ್ರಾಚೀನ ಕಲಾ ನೆಲೆಗಳಿಂದ ಹಾಗೂ ಇತಿಹಾಸ ಕಾಲದ ಚಾಲುಕ್ಯರ ಶಿಲ್ಪಕಲೆ, ಚಿತ್ರಕಲೆಗಳ ವೈಭವದಿಂದ ಹಲವಾರು ನಿಟ್ಟಿನ ಅಧ್ಯಯನಗಳಿಗೆ ತೆರೆದುಕೊಂಡಿದೆ.

ದೇಶದ, ನಾಡಿನ ಕಲಾ ಚರಿತ್ರೆಯಲ್ಲಿ ಮಹತ್ವದ ಸ್ಥಾನಮಾನಗಳನ್ನು ಸಂಪಾದಿಸಿಕೊಂಡ ಐಹೊಳೆ ಶಿಲ್ಪಕಲೆ, ಪಟ್ಟದಕಲ್ಲಿನ ದೇವಾಲಯಗಳ ಸಮುಚ್ಚಯ, ಬಾದಾಮಿಯ ಮೇಣಬಸದಿ ಚಿತ್ರಕಲೆ ಮೊದಲಾದವು ಜಿಲ್ಲೆಯ ಕಲಾ ಪರಂಪರೆಯ ತೊಟ್ಟಿಲು, ಅನೇಕ ಪ್ರಯೋಗ ಹಾಗೂ ಪರಿಣತಿಗಳ ವೇದಿಕೆ. ಹಾಗೆ ಪ್ರದೇಶದ ಸಿಡಿಲಪಡಿಯ ಚಿತ್ರಗಳು, ಜಮಖಂಡಿ ತಾಲ್ಲೂಕಿನ ಕುಲ್ಲಳ್ಳಿಯ ಗೊಂಬಿ ಗುಡ್ಡದ ಆದಿಮಾನವರವೆನ್ನಲಾಗುವ ರೇಖಾಚಿತ್ರಗಳು ಸ್ವಾತಂತ್ರ್ಯ ಪೂರ್ವ, ಸ್ವಾತಂತ್ರ್ಯ ನಂತರದ ಮಹಾಲಿಂಗಪುರ, ಗುಳೇದಗುಡ್ಡ, ಅಮೀನಗಡಗಳಲ್ಲಿರುವ ಭಿತ್ತಿ ಹಾಗೂ ಗಾಜಿನ ಚಿತ್ರಗಳು, ಜಿಲ್ಲೆಯ ಶಿವಯೋಗ

ಮಂದಿರದಂತಹ ಧಾರ್ಮಿಕ ಸಂಸ್ಥೆ, ಮಠಮಾನ್ಯಗಳಲ್ಲಿ ಸಂಗ್ರಹವಾಗಿರುವ ಹಸ್ತಪ್ರತಿ ಚಿತ್ರಗಳು ಗ್ರಾಮೀಣ ಸೊಗಡಿನ ಜಾನಪದ ಚಿತ್ರಗಳು ಮುಂತಾದ ಸಾಂಸ್ಕೃತಿಕ ಪರಂಪರೆಯ ಕಲೆಗಳನ್ನು ಒಳಗೊಂಡು ಸಮಕಾಲೀನ ಕಲಾ ಸಂದರ್ಭದವರೆಗೂ ದಾಖಲಿಸುವುದು ಈ ಅಧ್ಯಯನದ ಸ್ಥೂಲ ಸ್ವರೂಪವಾದರೆ, ಪ್ರತ್ಯೇಕಗೊಂಡ ಜಿಲ್ಲೆಯೂ, ಕೃಷ್ಣಾ ಮೇಲ್ದಂಡೆ ಯೋಜನೆಯಡಿ ಮುಳುಗಡೆ ಪ್ರದೇಶವೂ ಆಗುವ ಈ ಜಿಲ್ಲೆಯ ಚಿತ್ರಕಲೆಯ ಸಮಗ್ರ ಅಧ್ಯಯನವು ಈ ಮಹಾಪ್ರಬಂಧದ ಪ್ರಮುಖ ಉದ್ದೇಶವಾಗುತ್ತದೆ.

ಬಾಗಲಕೋಟೆ ಜಿಲ್ಲೆಯು ಕರ್ನಾಟಕದ ಕಲಾ ಇತಿಹಾಸದ ಭವ್ಯತೆ, ವೈವಿಧ್ಯತೆಗಳನ್ನು ಒಳಗೊಂಡಂತೆಯೂ ಹಲವಾರು ಪ್ರಾದೇಶಿಕ ಅಂಶಗಳಿಂದ ತುಂಬಿಕೊಂಡಿದೆ. ಬಾಗಲಕೋಟೆ ಜಿಲ್ಲೆಯ ಚಿತ್ರಕಲೆಯ ಅಧ್ಯಯನವೆಂದರೆ ಸಾವಿರಾರು ವರ್ಷಗಳ ಮನುಕುಲ ವಿಕಸನದ ಹಲವು ಮಜಲುಗಳನ್ನು ಕಾಣುವ ಬಗೆಯೂ ಆದೀತು.

'ಉದ್ದಗಲ ಕ್ಷೇತ್ರ ಪರಿಮಿತಿ ಮಾತ್ರ ನಾಡಲ್ಲವೊ!
ನಾಡ ಘನತೆಗೆ ಸಾಕ್ಷಿ
ನಾಡಿನಂತಸ್ಸತ್ವ...'

ಇಲ್ಲಿ ನಾಡಿನ ಅಂತಃಸತ್ವ ಎಂಬುದು ನಾಡಿನ ಸಂಸ್ಕೃತಿ ಮತ್ತು ಕಲೆಗಳು.

ಈ ಕ್ಷೇತ್ರ ಪರಿಮಿತಿಗೆ ಪೌರಾಣಿಕ ಕಾಲದಲ್ಲಿ ಯಾವ ರೀತಿಯ ಅಸ್ತಿತ್ವವಿತ್ತೆಂಬುದು ಗೊತ್ತಿಲ್ಲ ಅಥವಾ ಅದರ ಹೆಸರು ಯಾವುದಿತ್ತು ಎಂಬುದರ ಪರಿಚಯವೂ ದೊರೆತಿಲ್ಲ.

ಇತಿಹಾಸ ಕಾಲದ ಇತ್ತೀಚಿನ ನಗರಸಭೆಯ ದಾಖಲೆಗಳಲ್ಲಿ ಅಂದಿನ ಬ್ರಿಟಿಷ್ ಮೇಲಾಧಿಕಾರಿಗೆ ಸಲ್ಲಿಸಿದ ರಿಪೋರ್ಟ್‌ನಲ್ಲಿ ಹುಲಿ ಬೇಟೆಯ ಪ್ರಯುಕ್ತ ಈ ಸ್ಥಳವನ್ನು ಭಾಗನೂರು ಎಂದಿದೆ. ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ಬಾಗಡೆಗೆ ಬಗ್ಗಡಗೆ, ತರ್ದವಾಡಿಯ ಬಾಗಡಗೆ ೨೦ ಆದಿಲ್‌ಶಾಹಿ ಸಾಮ್ರಾಜ್ಯದಲ್ಲಿ ಬಾಗಡಗೆ, ಬಾಂಗಡಕೋಟ ಆಗಿದ್ದುದು. ಒಂದು ಹೇಳಿಕೆಯಂತೆ ಆದಿಲ್‌ಶಾಹಿ ತನ್ನ ಮಗಳಿಗೆ ಬಳೆಗಾಗಿ ಬಿಟ್ಟ ಊರು ಬಾಂಗಡಕೋಟೆ ಎಂದೂ ಹೇಳಲಾಗುತ್ತದೆ. ಇದನ್ನು ವಿಜಯನಗರದ ಅರಸರು ಆದಿಲ್‌ಶಾಹಿಗಳು, ಮರಾಠರು, ಪೇಶ್ವೆಗಳು, ಸವಣೂರಿನ ನವಾಬರು, ಹೈದರಾಲಿ-ಟಿಪ್ಪು ಹಾಗೂ ಬ್ರಿಟಿಷರು ತಮ್ಮ ಅಧಿಪತ್ಯದಲ್ಲಿಟ್ಟುಕೊಂಡಿದ್ದ ರೆಂದು ಇತಿಹಾಸ ಹೇಳುತ್ತದೆ.

ಇಂದಿನ ಕಿಲ್ಲಾ ಭಾಗವೇ ಮೂಲದ ಬಾಗಲಕೋಟೆ. ಉತ್ತರಕ್ಕೆ ಹರಿಯುತ್ತಿರುವ ಘಟಪ್ರಭೆ ಅದರಾಚೆಯ ಗುಡ್ಡ, ಹಸಿರು ಭೂಮಿ, ಅಂಚುಗುಂಟ ಕೋಟೆಗೋಡೆ, ಬುರುಜುಗಳ ಕಂದಕ, ಪೂರ್ವ ಹಾಗೂ ದಕ್ಷಿಣಾಭಿಮುಖವಾಗಿ ನಿಂತ ಎತ್ತರದ ಅಗಸೆ ಬಾಗಿಲುಗಳು ಇದರ ಹತ್ತಿರದ ಬುರುಜಲ್ಲೇ ಕೊತ್ತಲೇಶನ ಪುರಾತನ ಮಂದಿರವಿದೆ. ಈ ಕೊತ್ತಲೇಶನಿಗೆ ವಿಜಯನಗರ, ಪೇಶ್ವೆ, ನವಾಬರು ಕವಚ, ಕೊರಳ ಸರ ದಾನವಿತ್ತಿದ್ದಾರೆ. ಪೇಶ್ವೆಗಳ ಆಡಳಿತಾವಧಿಯಲ್ಲಿ ಆನಂದರಾವ ಭಿಕಾಜಿ ನಿರ್ಮಿಸಿದ ಪಾಣಿಮಹಲು, ಖಜಾನೆ, ಟಂಕಶಾಲೆ, ಕುದುರೆಪಾಗ, ಆನೆಪಾಗ, ಠಾಣಾ, ಅಮಲ್ದಾರ ಕಾರ್ಯಾಲಯಗಳು ಇಂದು ಅವಶೇಷಗಳಾಗಿವೆ.

ಕರ್ನಾಟಕವು "ಪ್ರಾಕೃತಿಕವಾಗಿ ಭಾರತದ ದಕ್ಷಿಣ ಭಾಗದಲ್ಲಿ ಫಲವತ್ತಾದ ದಖನ್ ಪ್ರಸ್ಥಭೂಮಿಯ ಮೇಲಿದೆ. ಶ್ರೀಮಂತ ಸಾಂಸ್ಕೃತಿಕ ಪರಂಪರೆಗೆ ಹೆಸರಾಗಿದೆ. ಕರ್ನಾಟಕದ ಉತ್ತರ ಭಾಗದಲ್ಲಿರುವ ಬಾಗಲಕೋಟೆ ಜಿಲ್ಲಾ ಭೂಪ್ರದೇಶವು. ಕ್ರಿಟೇಸಿಯನ್ ಇಯೋಸಿನ್ ಯುಗದಲ್ಲಿ ರೂಪಿತಗೊಂಡಿದೆ. ಇದು ಕೃಷ್ಣ ಮತ್ತದರ ಉಪನದಿ ಹಳ್ಳಕೊಳ್ಳಗಳಿಂದ ಸಮೃದ್ಧವಾಗಿದ್ದರೂ, ಅನಾವೃಷ್ಟಿಯಿಂದಾಗಿ ಬರಗಾಲ ಪೀಡಿತ ಪ್ರದೇಶವೆಂದೇ ಗುರುತಿಸಲ್ಪಟ್ಟಿದೆ. ಆದರೂ ಶತಶತಮಾನಗಳ ಮಾನವ ವಿಕಾಸದ ವಿವಿಧ ಹಂತಗಳನ್ನು ಗುರುತಿಸುವಲ್ಲಿ ಸಾಂಸ್ಕೃತಿಕ ಬೆಳವಣಿಗೆಗಳನ್ನು ಅರಿಯುವಲ್ಲಿ ಬಾಗಲಕೋಟೆ ಜಿಲ್ಲೆ ಒಂದು ಅಕ್ಷಯ ಆಕರವಾಗಿದೆ.

ಪ್ರಸ್ತುತ ಅಧ್ಯಯನವು ಬಾಗಲಕೋಟೆ ಜಿಲ್ಲೆಯ ಹಲವಾರು ವೈಶಿಷ್ಟ್ಯಗಳನ್ನು ಕುರಿತು ಪ್ರಸ್ತಾಪಿಸುತ್ತದೆ. ಬಾಗಲಕೋಟೆ ಜಿಲ್ಲೆಯಾದ್ಯಂತ ಇತಿಹಾಸ ಪೂರ್ವಕಾಲಕ್ಕೆ ಸೇರಿದ ಗವಿ ವರ್ಣಚಿತ್ರ, ಬಯಲುಬಂಡೆ ರೇಖಾಚಿತ್ರಗಳು ಜಿಲ್ಲೆಯ ದಕ್ಷಿಣ ಭಾಗದಿಂದ ವರದಿಯಾಗಿದೆ. ಇವುಗಳಲ್ಲಿ ಹೆಚ್ಚಿನವು ಕಲ್ಲಾಸರೆಗಳಲ್ಲಿ ಕಂಡುಬಂದಿದ್ದು. ಬಯಲು ಬಂಡೆ ಚಿತ್ರಗಳು ಕಡಿಮೆ ಪ್ರಮಾಣದಲ್ಲಿ ಲಭಿಸಿವೆ. ಇವುಗಳ ಪ್ರಾಚೀನತೆಯನ್ನು ಗರಿಷ್ಠ ಅಂತ್ಯ ಹಳೆ ಶಿಲಾಯುಗದಿಂದ ಕನಿಷ್ಠ ಬೃಹತ್ ಶಿಲಾ ಸಾಂಸ್ಕೃತಿಯಷ್ಟು ಹಿಂದಕ್ಕೆ ಗುರುತಿಸಬಹುದಾಗಿದೆ. ಈ ಪ್ರದೇಶದ ಇತರೆಡೆಗಳಲ್ಲಿ ಶಿಲಾತಾಮ್ರಯುಗ ಬೃಹತ್ ಶಿಲಾಯುಗಗಳ ಕಾಲಕ್ಕೆ ಸೇರಿದ ಮಡಕೆಗಳ ಮೇಲಿನ ವೈವಿಧ್ಯಮಯವಾದ ವರ್ಣಚಿತ್ರಗಳು ಗಿರಿದ ರೇಖಾಚಿತ್ರಗಳು ಹಾಗೂ ಸುಡಾವೆ ಗೊಂಬೆಗಳೂ ಲಭಿಸಿರುವುದು ಗಮನಾರ್ಹವಾಗಿದೆ.

ಬಾದಾಮಿ, ಹೊಸ ಮಹಾಕೂಟ, ಕುಟುಕನಕೇರಿ, ಐಹೊಳೆಗಳಲ್ಲಿ ಸೂಕ್ಷ್ಮ ಶಿಲಾಯುಗದಿಂದ ಹಿಡಿದು ಬಾದಾಮಿ ಚಾಲುಕ್ಯರ ಕಾಲದವರೆಗಿನ ಕೆಲವು ಅಪೂರ್ವ ಗವಿ ವರ್ಣಚಿತ್ರಗಳು ಶೋಧವಾಗಿದೆ. ಬಾದಾಮಿಯಲ್ಲಿರುವ ಎರಡು ವಿಚಿತ್ರ ರೇಖಾಚಿತ್ರಗಳೂ ಕೂಡ ಸೂಕ್ಷ್ಮ ಶಿಲಾಯುಗ ಕಾಲಕ್ಕೆ ಸೇರಿದ್ದು, ಶಿದ್ಲಫಡಿಯಲ್ಲಿರುವ ಬಿಳಿ ಬಣ್ಣದ ಪಕ್ಷಿ, ಹಾವು ಗಮನಾರ್ಹವಾಗಿದೆ. ಕುಟುಕನಕೇರಿಯಲ್ಲಿರುವ ಮಾನವಾಕೃತಿ ಹಾಗೂ ಪ್ರಾಣಿಯ ರೇಖಾಚಿತ್ರಗಳು ಸೂಕ್ಷ್ಮ ಶಿಲಾಯುಗ ಕಾಲದ್ದಾಗಿವೆ. ಐಹೊಳೆಯ ಮೂರೆಡೆಗಳಲ್ಲಿ ಪ್ರಾಗೈತಿಹಾಸಿಕ ವರ್ಣಚಿತ್ರಗಳಿದ್ದು ಅವು ಕೆಮ್ಮಣ್ಣಿನಲ್ಲಿ ಬಿಡಿಸಿದ, ಮೈಮೇಲೆ ಪಟ್ಟಿಯಿರುವ ಪ್ರಾಣಿ ಚಿತ್ರವಿದ್ದು, ಇದು ಸೂಕ್ಷ್ಮ ಶಿಲಾಯುಗಕ್ಕೆ ಸೇರಿದ್ದು, ಸಿದ್ದನಕೊಳ್ಳದಲ್ಲಿ ಪತ್ತೆ ಹಚ್ಚಿರುವ ಚರ್ಟ್ ಕಲ್ಲಿನ ಮೇಲೆ, ಊರಿ ಬಿಡಿಸಿರುವ ಸೂಕ್ಷ್ಮ ಶಿಲಾಯುಗ ಕಾಲದ ರೇಖಾಚಿತ್ರವಿದೆ. ಇದೇ ರೀತಿ ಕಲ್ಗೊಳ್ಳಿಯಲ್ಲಿ ಬೃಹತ್ ಶಿಲಾಸಂಸ್ಕೃತಿಗೆ ಸೇರಿದ ಗೂಳಿ, ಆಕಳು, ಜಿಂಕೆ, ಮನುಷ್ಯ ಮುಂತಾದ ಗೀರು ರೇಖೆಗಳು ಸೂಕ್ಷ್ಮವಾಗಿದ್ದು, ಕೋಡುಗಳು ಮುಂದಕ್ಕೆ ಬಾಗಿವೆ. ಇದರಲ್ಲಿ ಸ್ಥೂಲಕ್ಕಿಂತ ಸೂಕ್ಷ್ಮಭಾವಕ್ಕೆ ಹೆಚ್ಚು ಒತ್ತಿದೆ. ಇವು ಶಿಲಾ ಮಾತ್ರ ಇಲ್ಲದೇ ಬೃಹತ್ ಶಿಲಾಸಂಸ್ಕೃತಿ ಜನರ ರಚನೆಗಳಾಗಿರಬೇಕೆಂದು ಸುಂದರ ಅವರು ಅಭಿಪ್ರಾಯಪಡುತ್ತಾರೆ. ಸೀತಿಡೋಣಿಯ ಕಲ್ಲಾನರೆಯೊಂದರ ಮೇಲೆ ಪ್ರಾಯಶಃ ಬಲೆಂತಹ ರೇಖಾಚಿತ್ರವಿದ್ದು ಅದರೊಳಗೆ ಪ್ರಾಯಶಃ ಕೋಣದ ರೇಖಾಚಿತ್ರವಿದೆ. ಇದು ಅಲ್ಟಮಿರಾ ಗವಿಯ ಕೋಣವನ್ನು ಹೋಲುತ್ತದೆ. ಈ ರೇಖಾಚಿತ್ರವು ಬಲೆಬೀಸಿ ಪ್ರಾಣಿಗಳನ್ನು

ಬೇಟೆಯಾಡುವ ವಿಧಾನವನ್ನು ಸೂಚಿಸುತ್ತಿದ್ದು, ಯಶಸ್ವಿ ಬೇಟೆಗಾಗಿ ಶಿಲಾಯುಗದ ಮಾನವರು ಇದನ್ನು ಚಿತ್ರಿಸಿರುವರೆಂದು ಊಹಿಸಬಹುದೇನೋ. ಜಿಲ್ಲೆಯಲ್ಲಿ ಪ್ರಾಗೈತಿಹಾಸ ಚಿತ್ರಕಲೆ ಸಮೃದ್ಧವಾಗಿದ್ದು, ಬಾದಾಮಿ, ಪಟ್ಟದಕಲ್ಲು ನಡುವೆ ಇರುವ ಅರೆಗುಡ್ಡ, ಹಿರೇಗುಡ್ಡ ಪರಿಸರದಲ್ಲಿ ವರ್ಣಚಿತ್ರಗಳಿರುವ ಸುಮಾರು ೧೦ ನೆಲೆಗಳನ್ನು ಸುಂದರ, ಇರ್ವಿನ್ ನ್ಯೂಮೇಯರ್ ಹಾಗೂ ಯಸೋಧರ ಮಠಪಾಲ್ ಪತ್ತೆಹಚ್ಚಿದ್ದಾರೆ. ಇವು ಶಿಲಾಯುಗ, ತಾಮ್ರ ಶಿಲಾಯುಗ ಸಂಸ್ಕೃತಿ ಕಾಲದ ರಚನೆಗಳಾಗಿವೆ. ಬಾದಾಮಿಯ ಗವಿಯೊಂದರಲ್ಲಿ ಕಪ್ಪು-ಬಿಳಿ ವರ್ಣಗಳಲ್ಲಿ ರಚಿಸಲ್ಪಟ್ಟಿರುವ ಪ್ರಾಣಿ, ಪಕ್ಷಿ ಹಾಗೂ ಮಾನವರ ಚಿತ್ರಗಳು ದ್ವಿವರ್ಣದಲ್ಲಿರುವ ಅಪೂರ್ವ ಚಿತ್ರಗಳಾಗಿವೆ. ಅಂತ್ಯ ಹಳೆ ಶಿಲಾಯುಗಕ್ಕೆ ಗುರುತಿಸಬಹುದಾದ ಇದೊಂದು ಅಪೂರ್ವ ಶೋಧವೆಂದು ವಿದ್ವಾಂಸರು ಪರಿಗಣಿಸಿದ್ದಾರೆ.

ಪ್ರಸ್ತುತ ಜಿಲ್ಲೆಯು ಸಾಂಸ್ಕೃತಿಕ ಶ್ರೀಮಂತಿಕೆಯಲ್ಲಿ ಕನ್ನಡ ನಾಡಿನಲ್ಲಿಯೇ ಮಾದರಿಯೆನಿಸಿದೆ. ಬಾದಾಮಿ ಬನಶಂಕರಿ ಕ್ಷೇತ್ರ ಬನಸಿರಿಯ ಮಧ್ಯೆ ಕಂಗೊಳಿಸಿ ಜಿಲ್ಲೆಯ ಧಾರ್ಮಿಕ ಮತ್ತು ಪ್ರಾಕೃತಿಕ ಉನ್ನತ ವೈಭವಕ್ಕೆ ಸಾಕ್ಷಿಯಾಗಿದೆ. ಜಿಲ್ಲೆಯ ಪ್ರತಿ ತಾಲ್ಲೂಕು ತನ್ನದೇ ಆದ ಸಾಂಸ್ಕೃತಿಕ ಹಿರಿಮೆಗರಿಮೆಗೆ ಹೆಸರಾಗಿವೆ. ಬಾದಾಮಿ ತಾಲ್ಲೂಕಿನ ಪಟ್ಟದಕಲ್ಲು, ಐಹೊಳೆಗಳು ಚಾಲುಕ್ಯರ ಉಜ್ವಲ ಇತಿಹಾಸಕ್ಕೆ ಸಾಕ್ಷಿಯಾಗಿವೆ. ಬಾದಾಮಿ, ಐಹೊಳೆಗಳು ಕನ್ನಡ ನಾಡಿನ ಶಿಲ್ಪಕಲೆಗೂ, ಚಿತ್ರಕಲೆಗೂ ತವರುಮನೆ ಎನಿಸಿವೆ.

ಮಲಪಹಾರಿಯ ಮಗ್ಗುಲಲ್ಲಿ ಹಸಿರ ಸಿರಿಯಲ್ಲಿ ಪುಣ್ಯ ತಾಣವಾಗಿ ಕಂಗೊಳಿಸುತ್ತಿರುವ ಶಿವಯೋಗ ಮಂದಿರ ತಪೋಭೂಮಿ ಎನಿಸಿದೆ. ಅಲ್ಲಿ ಜ್ಞಾನ ಸಂಪತ್ತಾದ ಹಸ್ತಪ್ರತಿಗಳನ್ನು, ಹಸ್ತಪ್ರತಿಗಳಲ್ಲಿನ ಚಿತ್ರ ರಚನೆಗಳನ್ನು ರಕ್ಷಿಸಿ ಇಡಲಾಗಿದೆ. ಇದಕ್ಕೆ ಜಿಲ್ಲೆಯಲ್ಲಿನ ಚರಂತಿಮಠ, ಓಲೆಮಠ, ಟೀಕಿನ ಮಠಗಳು ಹೊರತಾಗಿಲ್ಲ.

ಕೆಲಕಾಲ ಆದಿಲ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟ ಕೆಲ ಭಾಗಗಳಲ್ಲಿ ಭಿತ್ತಿ ಚಿತ್ರಕಲೆಯ ಅವಶೇಷಗಳನ್ನು ಕಾಣಬಹುದು. ಅಂಥ ಭಿತ್ತಿ ಚಿತ್ರಗಳು ಬಹಳಷ್ಟು ನಷ್ಟಗೊಂಡಿದ್ದರೂ ಜಿಲ್ಲೆಯ ಕೆಲ ರಾಜವಾಡೆ, ಶ್ರೀಮಂತರ ವಾಸದ ಮನೆ, ಮಹಾತಪಸ್ವಿಗಳು ಆಗಿಹೋದ ಮಠಮಾನ್ಯಗಳಲ್ಲಿ ಕಾಣಸಿಗುತ್ತವೆ.

ಬಾಗಲಕೋಟೆ ತಾಲ್ಲೂಕಿನ ಬೇವೂರು ಒಂದು ಪ್ರಾಚೀನ ಗ್ರಾಮ. ಜಿಲ್ಲೆಯಾದ್ಯಂತ ಹರಡಿದ ಗ್ರಾಮಾಂತರ ಪ್ರದೇಶಗಳಲ್ಲಿ ಹಚ್ಚೆ, ಬೆಳದಿಂಗಳು ಮುಂತಾದ ಜಾನಪದ ಚಿತ್ರ ರಚನೆಗಳ ಪರಂಪರೆ ಇಂದಿಗೂ ಜೀವಂತವಾಗಿದೆ. ನಾಡಿನ ಜನಪದರ ಮನರಂಜನೆಯಾಗಿ ನಡೆಯುತ್ತಿದ್ದ, ಉತ್ತರ ಕರ್ನಾಟಕದ ದೊಡ್ಡಾಟ, ಸಣ್ಣ ಜಗಳಂತೆ ಜಿಲ್ಲೆಯ ಕೆಲ ಭಾಗಗಳಲ್ಲಿ ತೊಗಲಗೊಂಬೆ ಆಟ ಪ್ರಚುರವಾಗಿತ್ತು. ತೊಗಲುಗೊಂಬೆಯಾಟವನ್ನು ಕಿಳ್ಳೇ ಖ್ಯಾತರಾಜ ಎಂದೂ ಗುರುತಿಸುತ್ತಾರೆ. ಅದಕ್ಕಾಗಿ ತೊಗಲಗೊಂಬೆಗಳನ್ನು ತಯಾರಿಸಿಕೊಡುತ್ತಿದ್ದ ಅಲ್ಪ ಪ್ರಮಾಣದಲ್ಲಿಯಾದರೂ ಉಳಿದುಕೊಂಡಿರುವುದು ಮಹತ್ವದ್ದು.

ಬ್ರಿಟಿಷರ ಆಡಳಿತಕ್ಕೆ ಒಳಪಟ್ಟು ಮುಂಬೈ ಕರ್ನಾಟಕದ ಭಾಗವಾಗಿ ಮುಂಬೈ ಸುಮಾರು ೪೦೦ ವರ್ಷಗಳಷ್ಟು ಪ್ರಾಚೀನವಾದುದು. ರಾಮಾಯಣ ಕಾಲದ ಐತಿಹ್ಯಗಳನ್ನು ನೆನಪಿಸುವಂತೆ ಇರುವ ಕಲಾಶಾಲೆ. ಪ್ರಭಾವಕ್ಕೆ ಒಳಗಾಗಿ ಅನೇಕ ಕಲಾವಿದರಿಗೆ, ಕಲಾಕೃತಿಗಳಿಗೆ ಆಶ್ರಯವೂ ಆಗಿತ್ತು. ಜಿಲ್ಲೆಯಲ್ಲಿ ಕಾಣಸಿಗುವ ಗಾಜಿನ ಚಿತ್ರಗಳ ಸಂಗ್ರಹವು ಜಿಲ್ಲೆಯ ಮೂಲದಲ್ಲಿವಾದರೂ ಅವು ಜಿಲ್ಲೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಸಂಗ್ರಹಗೊಂಡಿರುವುದು ಗಮನಾರ್ಹವಾಗಿದೆ. ಜಿಲ್ಲೆಯ ಸಂಪರ್ಕ ಹಿಂದಿನಿಂದಲೂ ಮುಂಬೈ, ಕಲ್ಕತ್ತಾ ಮತ್ತು ಮದ್ರಾಸುಗಳ ಜೊತೆಗಿದ್ದುದರ ಫಲವಾಗಿ ದೊಡ್ಡ ನಗರಗಳ ಜೀವನ ಶೈಲಿಯ ಪ್ರಭಾವವು ಇಲ್ಲಿನ ವ್ಯಾಪಾರಸ್ಥರ ಮೇಲೆ ಆದುದಿದೆ. ಅದರ ಪರಿಣಾಮವಾಗಿಯೇ ಈ ವ್ಯಾಪಾರಿ ವರ್ಗದ ಆಸಕ್ತಿ, ಅಭಿರುಚಿಗೆ ಅನುಗುಣವಾದ ಗಾಜಿನ ಮೇಲಿನ ಚಿತ್ರಗಳು ಈ ಭಾಗದಲ್ಲಿ ವಿಶೇಷವಾಗಿ ಬಾಗಲಕೋಟೆ, ಅಮಿನಗಡ, ಗುಳೇದಗುಡ್ಡ ಮುಂತಾದೆಡೆಗಳಲ್ಲಿ ಸಂಗ್ರಹಗೊಂಡಿವೆ. ಈ ಗಾಜಿನ ಚಿತ್ರಗಳಲ್ಲಿ ವಿವಿಧ ಶೈಲಿ ಅಂದರೆ, ತಾಣಪೂರು, ಕಲ್ಕತ್ತ, ಮುಂಬೈ ಶೈಲಿಯನ್ನು ಗುರುತಿಸಬಹುದಾಗಿದೆ. ಈಗಿನ ರಾಮಪುರ ಹೆಸರಿನ ಗ್ರಾಮದ ಆಚೆಈಚೆಗಿನ ಊರುಗಳಿಂದ ಸೀತಿಮನಿ, ಜಡ್ರಾಮಕುಂಟಿಗಳು ರಾಮಾಯಣ ಈ ಜಿಲ್ಲೆಯ ಇಲಕಲ್ಲು ಮುಂತಾದ ಪ್ರದೇಶಗಳಲ್ಲಿ ರಂಗಭೂಮಿ, ಜನರ ಜೀವನಾಡಿಯಂತಿತ್ತು. ರಂಗಪರಿಕರಗಳಲ್ಲಿ ಒಂದಾದ ರಂಗಪರದೆಗಳನ್ನು ಬರೆದ ಪ್ರಖ್ಯಾತ ಕಲಾವಿದರು ಈ ಭಾಗದಲ್ಲಿದ್ದರು. ಈ ಕಲಾವಿದರ ರಂಗಪರದೆ(ಸೀನರಿಗಳು)ಗಳು ಕರ್ನಾಟಕ ಹಾಗೂ ಹೊರ ರಾಜ್ಯಗಳಲ್ಲಿಯೂ ಪ್ರಸಿದ್ಧಿ ಪಡೆದಿದ್ದವು.

**ಅಧ್ಯಯನದ ಸ್ವರೂಪ**

ಪ್ರಸ್ತುತ ಅಧ್ಯಯನದ ಉದ್ದೇಶವನ್ನು ಅನುಲಕ್ಷಿಸಿ ಮಹಾಪ್ರಬಂಧದಲ್ಲಿ ಒಟ್ಟು ಎಂಟು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ.

**ಅಧ್ಯಾಯ ಒಂದು:** ಈ ಅಧ್ಯಾಯವು ಬಾಗಲಕೋಟೆ ಜಿಲ್ಲೆಯ ಭೌಗೋಳಿಕ ಪರಿಸರ, ಪ್ರಾಚೀನ, ಅರ್ವಾಚೀನ(ಜನಪದ, ಶಿಷ್ಟಪದ) ಚಿತ್ರಕಲೆಯ ಉಲ್ಲೇಖ, ನಿದರ್ಶನ ಮುಂತಾದ ಚಿತ್ರಕಲೆಯ ವಿವಿಧ ಮಾದರಿಗಳ ಕಲೆಹಾಕಿದ ಮಾಹಿತಿಯನ್ನು ಆಧರಿಸಿ "ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ"ಯನ್ನು ಗುರುತಿಸಿಕೊಂಡು ಅಧ್ಯಯನಕ್ಕೆ ತೊಡಗುತ್ತದೆ.

**ಅಧ್ಯಾಯ ಎರಡು:** "ಬಾಗಲಕೋಟೆ ಜಿಲ್ಲೆಯ ಶಿಲಾಶ್ರಯ ಚಿತ್ರಕಲೆ"ಯಲ್ಲಿ ಇತಿಹಾಸ ಪೂರ್ವ ಕಾಲದ ಅಪರೂಪದ ಚಿತ್ರಗಳನ್ನು ಕ್ರಮವಾಗಿ ನೆಲೆ, ಚಿತ್ರ ರಚನೆಯ ತಂತ್ರ-ವಿಧಾನ, ವಸ್ತುವಿಷಯ ವಿಶೇಷತೆಗಳಿಗನುಗುಣವಾಗಿ ಅಧ್ಯಯನಕ್ಕೆ ತೊಡಗುತ್ತದೆ. ಇಲ್ಲಿಯ ಶಿಲಾಶ್ರಯ ಚಿತ್ರಗಳಲ್ಲಿ ಇತ್ತೀಚೆಗೆ ಆವಿಷ್ಕಾರಗೊಂಡ ಹುಲಿಘಡಿಯ ಚಿತ್ರಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

**ಅಧ್ಯಾಯ ಮೂರು:** "ಬಾಗಲಕೋಟೆ ಜಿಲ್ಲೆಯ ಭಿತ್ತಿ ಮಾಧ್ಯಮ ಚಿತ್ರಕಲೆ"ಯು ಐತಿಹಾಸಿಕ ಕಾಲದ ಬಾದಾಮಿ ಹಾಗೂ ಐಹೊಳೆಯ ಗುಹಾ ಚಿತ್ರಗಳನ್ನು, 'ಗುಹಾ ಭಿತ್ತಿ'ಯಾಗಿ ಅಭ್ಯಸಿಸಿ, ಅರ್ವಾಚೀನ

ಕಾಲದ ರಾಜವಾಡೆ, ಶ್ರೀಮಂತರ ವಾಸದ ಮನೆ, ಮಠಮಾನ್ಯಗಳ ಗೋಡೆ, ಚಿತ್ರಗಳ ಶಿಷ್ಟ ಹಾಗೂ ಜನಪದ ಪರಂಪರೆಯ ನಿದರ್ಶನಗಳೊಂದಿಗೆ 'ಗೃಹಭಿತ್ತಿ'ಯಾಗಿ ಅವುಗಳ ನೆಲೆ, ಚಿತ್ರವಿಧಾನ, ಚಿತ್ರದ ವಸ್ತುಗಳನ್ನು ಕುರಿತು ಪ್ರಸ್ತಾಪಿಸಲಾಗಿದೆ.

**ಅಧ್ಯಾಯ ನಾಲ್ಕು:** ಪ್ರಸ್ತುತ ಅಧ್ಯಾಯವು "ಬಾಗಲಕೋಟೆ ಜಿಲ್ಲೆಯ ಹಸ್ತಪ್ರತಿ ಮಾಧ್ಯಮ ಚಿತ್ರಕಲೆ" ಶೀರ್ಷಿಕೆಯಡಿಯಲ್ಲಿ ತಾಳೆಗರಿ ಹಾಗೂ ಫಲಕ ಮಾಧ್ಯಮಗಳ ಮೇಲಿನ ಚಿತ್ರ ರಚನೆಗಳನ್ನು ಆಧಾರವಾಗಿಟ್ಟುಕೊಂಡು ನೆಲೆ-ತಂತ್ರ-ವಸ್ತುವಿಷಯ-ವಿಶೇಷತೆ ಮುಂತಾದ ಅಂಶಗಳ ವಿವೇಚನೆ ಕೈಗೊಳ್ಳಲಾಗಿದೆ. ಜಿಲ್ಲೆಯ ಶಿವಯೋಗ ಮಂದಿರ, ವಿದ್ಯಾಸಂಸ್ಥೆ ಹಾಗೂ ವೈಯಕ್ತಿಕ ಸಂಗ್ರಹಗಳಲ್ಲಿನ, ಹಸ್ತಪ್ರತಿಗಳಲ್ಲಿನ, ರೇಖಾಪ್ರಧಾನ ಚಿತ್ರಗಳು, ವರ್ಣ ಚಿತ್ರಗಳು, ಕಟ್ಟಿಗೆಯ ಚಿತ್ರ ಪಟ್ಟಿಕೆಗಳು ಅಥವಾ ಫಲಕಗಳಲ್ಲಿನ ಚಿತ್ರಗಳ ವಸ್ತು ವಿಷಯಗಳನ್ನು ವಿಮರ್ಶೆಗೊಳಪಡಿಸಲಾಗಿದೆ. ಹಾಗೆ ಜಿಲ್ಲೆಯ ಹಸ್ತಪ್ರತಿಗಳ ನೆಲೆ, ಚಿತ್ರತಂತ್ರಗಳನ್ನು ಕುರಿತು ವಿವೇಚಿಸಲಾಗಿದೆ.

**ಅಧ್ಯಾಯ ಐದು:** "ಬಾಗಲಕೋಟೆ ಜಿಲ್ಲೆಯ ತೊಗಲು ಮಾಧ್ಯಮ ಚಿತ್ರಕಲೆ" ಅಧ್ಯಾಯದಲ್ಲಿ ಚಿತ್ರಕಲೆಯ ಇನ್ನೊಂದು ವಿಶಿಷ್ಟ ಮಾಧ್ಯಮವಾದ ತೊಗಲನ್ನು ಆಧರಿಸಿ ರಚನೆಗೊಂಡ ಪಾರದರ್ಶಕ ತೊಗಲುಗೊಂಬೆಯಾಟದ ಗೊಂಬೆಗಳನ್ನು ತಯಾರಿಸುವ ನೆಲೆ, ವಿಧಾನ, ವಸ್ತುವಿಷಯಗಳನ್ನು ಕುರಿತು ವಿವರಣಾತ್ಮಕವಾಗಿ ವಿವೇಚಿಸಲಾಗಿದೆ. "ತೊಗಲು ಮಾಧ್ಯಮ"ದ ತೊಗಲುಗೊಂಬೆಗಳಿಗೆ ಪ್ರಸಿದ್ಧವಾದ ಜಿಲ್ಲೆಯ ಏಕೈಕ ತಾಣ ಬಾದಾಮಿ ತಾಲ್ಲೂಕಿನ ಕಾಕನೂರು. ಅನಕ್ಷರಸ್ಥರನೊಬ್ಬ ರಾಮಾಯಣ ಮತ್ತು ಮಹಾಭಾರತದಂತಹ ಮಹಾಕಾವ್ಯಗಳನ್ನು ಕಡಿಮೆ ಅವಧಿಯಲ್ಲಿ ಜನಪದರಿಗೆ ಸೊಗಸಾಗಿ ತಿಳಿಯುವಂತೆ ಪಾರದರ್ಶಕ ತೊಗಲು ಮಾಧ್ಯಮದ ಗೊಂಬೆಗಳನ್ನು ಆಡಿಸುವ ಪರಿ, ನೆರಳು, ಬೆಳಕುಗಳ ವಿನ್ಯಾಸ ಕಲ್ಪನೆಯಸ್ನು ಅವುಗಳ ವರ್ಣರೇಖೆ, ವಸ್ತುವಿಷಯ ಮುಂತಾದವನ್ನು ಆಧರಿಸಿ, ಚರ್ಚಿಸಿ ಪ್ರಸ್ತಾಪಿಸಲಾಗಿದೆ.

ತೊಗಲು ಮಾಧ್ಯಮದ ಇನ್ನೊಂದು ಬಗೆಯ ಚಿತ್ರರಚನೆ-ಹಚ್ಚೆ ಮತ್ತು ಮದರಂಗಿಗಳು. ಪರಂಪರಾಗತವಾಗಿ ಬಂದ ಈ ಕಲೆಯು ನೆಲೆ, ವಿಧಾನ ಮತ್ತು ವಸ್ತುವಿಷಯ ಕುರಿತು ಇಲ್ಲಿ ವಿವೇಚಿಸಲಾಗಿದೆ.

**ಅಧ್ಯಾಯ ಆರು:** "ಬಾಗಲಕೋಟೆ ಜಿಲ್ಲೆಯ ಬಟ್ಟೆ ಮಾಧ್ಯಮ ಚಿತ್ರಕಲೆ" ಅಧ್ಯಾಯವು ಜಿಲ್ಲೆಯ ಹುನಗುಂದ ತಾಲ್ಲೂಕಿನ ಇಲಕಲ್ಲಿನ ಸುಪ್ರಸಿದ್ಧ ರಂಗಪರದೆಗಳ ತಯಾರಿಕೆ ಮತ್ತು ಅನಕ್ಷರಸ್ಥ ಜನಪದ ಕಲಾವಿದರ ಕಲಾಕೃತಿಗಳು, ಜಿಲ್ಲೆಯ ಪ್ರಸಿದ್ಧ ಶಿಷ್ಟ ಪರಂಪರೆಯ ಚಿತ್ರಕಲಾವಿದರು ರಚಿಸಿರುವ ಅಕಾಡೆಮಿಕ್ ಶೈಲಿಯ ಕಲಾಕೃತಿಗಳು ಹಾಗೂ ಅವುಗಳ ಚಿತ್ರ ರಚನಾತಂತ್ರ, ವಸ್ತುವಿಷಯ ಕುರಿತು ಚರ್ಚಿಸಲಾಗಿದ್ದು, ಜಿಲ್ಲೆಯಲ್ಲಿ ಹುಟ್ಟಿಬಂದ ಚಿತ್ರಕಲಾ ಶಾಲೆಗಳು, ಅಲ್ಲಿನ ಪ್ರಸಿದ್ಧ ಕಲಾವಿದರ ಕಲಾಕೃತಿಗಳು, ಕಲಾ ಸಂಸ್ಥೆಗಳು, ಜಿಲ್ಲೆಯಲ್ಲಿ ನಾಡಿನ ಪ್ರಸಿದ್ಧ ಕಲಾವಿದರ ಕಲಾಕೃತಿಗಳು ಸಂಗ್ರಹಗೊಂಡಿರುವ ಗ್ಯಾಲರಿಗಳನ್ನು ಹಾಗೂ ಯುವ ಕಲಾವಿದರು ಅವರ ಕೃತಿಗಳು ಇತ್ಯಾದಿ ರಚನಾತಂತ್ರ, ವಸ್ತುವಿಷಯ ಫಲಿತಗಳನ್ನು ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ಏಳು:** "ಬಾಗಲಕೋಟೆ ಜಿಲ್ಲೆಯ ಗಾಜು ಮಾಧ್ಯಮ ಚಿತ್ರಕಲೆ" ಅಧ್ಯಾಯದಲ್ಲಿ ಬಾಗಲಕೋಟೆಯನ್ನು ಒಳಗೊಂಡು ಜಿಲ್ಲೆಯ ಗುಳೇದಗುಡ್ಡ ಹಾಗೂ ಅಮೀನಗಡ ಮುಂತಾದೆಡೆಗಳಲ್ಲಿ ಸಂಗ್ರಹಿತವಾದ ಚಿತ್ರಗಳು ಸ್ಥಳೀಯವಾಗಿ ಸಂಗ್ರಹಗೊಂಡ ಅನ್ಯಮೂಲದ ಚಿತ್ರರಚನೆಗಳು ಈ ಅಧ್ಯಾಯದಲ್ಲಿ ಗಾಜಿನ ಚಿತ್ರಗಳ ವಸ್ತುವಿಷಯ, ವಿನ್ಯಾಸಗಳ ಕುರಿತು ವಿವರಿಸಲಾಗಿದೆ.

**ಅಧ್ಯಾಯ ಎಂಟು:** "ಸಮಾರೋಪ" ಇಲ್ಲಿ ಇಡೀ ಅಧ್ಯಯನಕ್ಕೆ ಸಂಬಂಧಿಸಿದಂತೆ ಕಾಲ, ಕೃತಿ, ಸ್ಥಳ, ಮಾಧ್ಯಮ, ವ್ಯಕ್ತಿ, ಸಂಸ್ಥೆ ಮುಂತಾದ ಅಂಶಗಳೊಂದಿಗೆ ಮೇಲಿನ ಏಳೂ ಅಧ್ಯಾಯಗಳ ಸಂಕ್ಷಿಪ್ತ ಸಾರದೊಂದಿಗೆ ಒಟ್ಟು ಅಧ್ಯಯನದ ಫಲಿತಗಳಿಂದ ಸಮಾರೋಪಿಸಲಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಬಾಗಲಕೋಟೆ ಜಿಲ್ಲೆಗೆ ಸೀಮಿತವಾಗುತ್ತದೆ. ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಒದಗುವ ಶಿಲಾಶ್ರಯ ಚಿತ್ರದ ನೆಲೆಗಳು, ಭಿತ್ತಿ ಚಿತ್ರಣದ ತಾಣಗಳು ಜನಪದ ಕಲೆಗಳು, ಹಸ್ತಪ್ರತಿ ಲಭ್ಯವಿರುವ ಹಾಗೂ ಸಂಗ್ರಹಿಸಿಟ್ಟಿರುವ ಸಂಸ್ಥೆಗಳು, ಜಿಲ್ಲೆಯ ಐತಿಹಾಸಿಕ ಹಿನ್ನೆಲೆ ಮೊದಲಾದ ಅಂಶ ಗಳೊಂದಿಗೆ ಅನುಲಕ್ಷಿಸಿ ಜಿಲ್ಲೆಯ ವ್ಯಾಪ್ತಿಯ ಅಧ್ಯಯನ ನಡೆಸಲಾಗಿದೆ.

ಒಟ್ಟಾರೆ ಬಾಗಲಕೋಟೆ ಜಿಲ್ಲೆಯ ಶಿಲಾಶ್ರಯ ಚಿತ್ರಗಳ ನೆಲೆಗಳಿಂದ ಇಂದಿನ ಆಧುನಿಕ ವರ್ಣಚಿತ್ರಗಳ ಸಂಗ್ರಹಿಸಿರುವ ಪ್ರತಿಷ್ಠಿತ ಮಠಗಳು ದೇವಸ್ಥಾನ ಹಾಗೂ ಜಿಲ್ಲೆಯ ಸಾಂಸ್ಕೃತಿಕ ಸಮುಚ್ಚಯ ಮುಳುಗಡೆ ಜಾನಪದ ವಸ್ತುಸಂಗ್ರಹಾಲಯ, ಸುಕ್ಷೇತ್ರ ಕೂಡಲಸಂಗಮದ ಮಾತೆ ಮಹಾದೇವಿಯವರ ಬಸವಧರ್ಮ ಪೀಠದ ಸಂಗ್ರದಲ್ಲಿನ ಶರಣರ ಭಾವಚಿತ್ರಗಳು ಕಾಕನೂರಿನ ತೊಗಲುಗೊಂಬೆಗಳ ವೈಶಿಷ್ಟ್ಯಗಳು ಹಾಗೂ ಶಿವಯೋಗ ಮಂದಿರದಲ್ಲಿ ಇತ್ತೀಚೆಗೆ ಸಂಡೂರು ಕಲಾವಿದ ಕಾಳೆಯವರು ರಚಿಸಿದ ಹಾನಗಲ್ಲ ತಾಲ್ಲೂಕು ಕುಮಾರ ಶಿವಯೋಗಿಗಳ ಜೀವನದರ್ಶನ ಕುರಿತು ಕಲಾಕೃತಿಗಳು, ಜಮಖಂಡಿ ಅರಮನೆಯ ಚಿತ್ರಗಳು, ಇಳಕಲ್ಲ ರಂಗಪರದೆ ಚಿತ್ರಗಳು ಮೊದಲಾದ ಜಿಲ್ಲೆಯ ಚಿತ್ರಕಲೆಗೆ ಸಂಬಂಧಿಸಿದ ಕ್ಷೇತ್ರ ವೈವಿಧ್ಯಗಳನ್ನು ಗಮನದಲ್ಲಿಟ್ಟುಕೊಂಡು, ಕಲಾ ನಿದರ್ಶನಗಳನ್ನು ಮುಂದಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

ಗುಹಾಲಯಗಳಿರುವ ಬಾದಾಮಿ, ಮಹಾಕೂಟ, ಬನಶಂಕರಿ, ಜಮಖಂಡಿ ಮೊದಲಾದ ಜಿಲ್ಲಾ ಸ್ಥಳಗಳ ಹಾಗೂ ಒಟ್ಟು ಪರಿಸರದ ಪ್ರಾಗೈತಿಹಾಸಿಕ, ಐತಿಹಾಸಿಕ, ಸಮಕಾಲೀನ ಚಿತ್ರಕಲೆಯ ಅಪಾರ ಸಂಪತ್ತನ್ನು ಒಳಗು ಮಾಡಿಕೊಳ್ಳುತ್ತದೆ.

ಅದು ಶಿಲಾಶ್ರಯ ಚಿತ್ರಗಳ ಪ್ರಾಗೈತಿಹಾಸಿಕ ಕಾಲ ಸಂದರ್ಭದಿಂದ ತೊಡಗಿ, ಜಿಲ್ಲೆಯ ಹಿರಿಯ ಕಲಾವಿದ ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾಗಿದ್ದ ಚಿತ್ರಕಲಾ ಪರಿಷತ್‌ನ ಉಪಾಧ್ಯಕ್ಷರೂ ಆಗಿದ್ದ ಶ್ರೀ ಸೋಮಶೇಖರ ಸಾಲಿ, ಇನ್ನೋರ್ವ ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾಗಿದ್ದ ಬೆಂಗಳೂರಿನ ಕೆನ್ ಕಲಾಶಾಲೆ, ಸಂಸ್ಥಾಪಕ ಖ್ಯಾತ ಕಲಾವಿದ ಆರ್.ಎಂ. ಹಡಪದ್ ಅವರು ಉನ್ನತ ಸ್ಥಾನ ಸಂಪಾದಿಸಿರುವ ಡಾ.ಬಿ.ಕೆ. ಹಿರೇಮಠ ರಾಷ್ಟ್ರ ಪ್ರಶಸ್ತಿ ಪುರಸ್ಕೃತ ಕಲಾವಿದರಾಗಿರುವ ವಿಜಯಸಿಂಧೂರ

ಸಾಹಿತ್ಯ ಚಿತ್ರಕಲಾ ಕ್ಷೇತ್ರಗಳಲ್ಲಿ ಮಹಾದೇವ ಕವಿಶೆಟ್ಟಿ ಹಾಗೂ ಯುವ ಕಲಾವಿದರವರೆಗೂ ವಿಸ್ತಾರಗೊಳ್ಳುತ್ತದೆ.

**ಅಧ್ಯಯನದ ವೈಧಾನಿಕತೆ**

ಪ್ರಸ್ತುತ ಈ ಮಹಾಪ್ರಬಂಧಕ್ಕೆ ಮುಖ್ಯವಾಗಿ ಎರಡು ರೀತಿಯ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಅವುಗಳನ್ನು ಈ ಕೆಳಗಿನಂತೆ ಹೆಸರಿಸಿ ವಿವರಿಸಲಾಗಿದೆ.

೧. ಮೂಲಆಕರ ಸಾಮಗ್ರಿ(ಪ್ರೈಮರಿ ಸೋರ್ಸ್ಸ್)

೨. ಅನುಷಂಗಿಕ ಆಕರ ಸಾಮಗ್ರಿ(ಸೆಕೆಂಡರಿ ಸೋರ್ಸ್ಸ್)

**೧. ಮೂಲಆಕರ ಸಾಮಗ್ರಿ**

ಮೂಲಆಕರ ಸಾಮಗ್ರಿಗಳಲ್ಲಿ ಬಹು ಪ್ರಾಮುಖ್ಯವಾದ ಅಂಶ ಕ್ಷೇತ್ರಕಾರ್ಯ. ಪ್ರಸ್ತುತ ಅಧ್ಯಯನದಲ್ಲಿ ಕ್ಷೇತ್ರಕಾರ್ಯ ಅತ್ಯಂತ ಮಹತ್ವ ಪೂರ್ಣವಾದದ್ದಾಗಿದೆ. ಕ್ಷೇತ್ರಕಾರ್ಯವಿಲ್ಲದ ಚಿತ್ರಕಲೆ ಅಥವಾ ದೃಶ್ಯಕಲೆಯ ಯಾವುದೇ ಒಂದು ಪ್ರಕಾರವನ್ನು ಅಧ್ಯಯನ ಮಾಡುವುದು ಸಾಧ್ಯವಿಲ್ಲ. ಇಡೀ ಜಿಲ್ಲೆಯ ಭೌಗೋಳಿಕ ಅಧ್ಯಯನ ಇತಿಹಾಸದ ಹಿನ್ನೆಲೆಗಳನ್ನಾಧರಿಸಿ ಚಿತ್ರಗಳಿರುವ ನೆಲೆಗಳನ್ನು ಗುರುತಿಸುವುದು ಕ್ಷೇತ್ರಕಾರ್ಯದಿಂದ ಮಾತ್ರ ಸಾಧ್ಯ. ಆದಕಾರಣ ಇಡೀ ಕ್ಷೇತ್ರದಲ್ಲೆಲ್ಲಾ ಖುದ್ದಾಗಿ ಸಂಚರಿಸಿ ಮಾಹಿತಿಗಳನ್ನು ಕಲೆಹಾಕಿ ಪ್ರಸ್ತುತಪಡಿಸಿದೆ.

ಇದು ೧. ಸಂದರ್ಶನ, ೨. ಛಾಯಾಚಿತ್ರಣ, ೩. ಸಂಗ್ರಹಿತ ವಿಷಯಗಳ ಪಟ್ಟಿ ತಯಾರಿಸುವುದು ಹೀಗೆ ವಿವಿಧ ಸ್ವರೂಪದಲ್ಲಿ ಇರುತ್ತದೆ. ಸಮಕಾಲೀನ ಕ್ಷೇತ್ರದ ಮುಖಾಂತರ ದೊರಕುವ ಮೂಲಆಕರ ಸಾಮಗ್ರಿಯಿಂದ ವಿಷಯ ಸಂಗ್ರಹಣೆ ಮಾಡಿಕೊಂಡು ಅನುಷಂಗಿಕ ಆಕರ ಸಾಮಗ್ರಿಗಳಿಂದ ದೊರೆತ ಮಾಹಿತಿಗಳೊಡನೆ ತೌಲನಿಕವಾಗಿ ವಿಶ್ಲೇಷಣೆಗೆ ಒಳಪಡಿಸಿ ಪ್ರಸ್ತುತ ಪ್ರಬಂಧವನ್ನು ರಚಿಸಲಾಗಿದೆ.

**೧. ಸಂದರ್ಶನ:** ಪ್ರಾಗೈತಿಹಾಸಿಕ ನೆಲೆಗಳಿಗಾಗಿ ಇತಿಹಾಸ ತಜ್ಞರು ಹಾಗೂ ಇತಿಹಾಸಕಾರರು ಅಧ್ಯಾಪಕರು ಹಾಗೂ ಹಿರಿಯ ತಲೆಮಾರಿನ ಆ ಪ್ರದೇಶದ ಪ್ರಮುಖ ಆಸಕ್ತರನ್ನು, ಆ ಚಿತ್ರ ತಾಣದ ಸಮೀಪ ವಾಸಿಸುವ ಜನರು ಒದಗಿಸುವ ಮಾಹಿತಿ ಸಂಗ್ರಹಿಸುವುದು ಹಾಗೂ ಹಿರಿಯ ಮತ್ತು ಕಿರಿಯರೊಂದಿಗೆ ಚರ್ಚಿಸುವುದು ಹೌದು, ಅಲ್ಲಗಳನ್ನು ಸ್ಪಷ್ಟಪಡಿಸಿಕೊಳ್ಳಲು ಸಂದರ್ಶನ ಅತ್ಯಂತ ಅಗತ್ಯವೆನಿಸುತ್ತದೆ. ಜನರ ಬಾಯಿಂದ ಬಾಯಿಗೆ ಕಾಲ ಗರ್ಭದಲ್ಲಿ ಹರಿದುಬಂದ ವಿಷಯ ಮಾಹಿತಿಗಳು ಅವರ ಮುಂದಿನ ಪೀಳಿಗೆಯನ್ನು ಸಂದರ್ಶಿಸಿದರೆ ಅಧ್ಯಯನಕ್ಕೆ ಸೂಕ್ತ ಮಾಹಿತಿಗಳು, ಕಾಲಘಟ್ಟದಲ್ಲಿ ಆದ ಬದಲಾವಣೆ ಅಂಶಗಳು ಈ ಎಲ್ಲವನ್ನು ತೂಗಿ, ನಿಶ್ಚಯಕ್ಕೆ ಬರಲು ಸಂದರ್ಶನ ಅತೀ ಮುಖ್ಯವೆನಿಸುತ್ತದೆ.

**೨. ಛಾಯಾಚಿತ್ರಣ:** ವಿಶಾಲವಾದ ದೃಶ್ಯಕಲಾ ಪ್ರಪಂಚಕ್ಕೆ ಛಾಯಾಗ್ರಹಣವೆಂಬ ಸಾಕ್ಷಿ ಹೇಳುವ, ಯಥಾವತ್ತಾದ ಅರಿವು ನೀಡುವ, ದಾಖಲೆ ನಿರ್ಮಿಸುವಾಗಿನ ನಿಖರತೆ ಹಾಗೂ ಖಚಿತತೆಗಾಗಿ ಛಾಯಾಚಿತ್ರ

ಸಂಪೂರ್ಣ ಸಹಕಾರ ನೀಡಬಲ್ಲದಾಗಿದೆ. ಹಾಗಾಗಿ ಕ್ಯಾಮರಾ ಸೃಷ್ಟಿಯಾದ ದಿನದಿಂದ ಎಲ್ಲವನ್ನೂ ಛಾಯಾಚಿತ್ರ, ವರ್ಣಛಾಯಾ ಚಿತ್ರದಲ್ಲಿ ಹಿಡಿದಿಡುವ ಕಾರ್ಯ ಇಂದಿಗೂ ನಡೆದೇ ಇದೆ. ಅಧ್ಯಯನಕ್ಕೆ ಅವಶ್ಯಕ ಬಣ್ಣದ ಛಾಯಾ ಚಿತ್ರಗಳನ್ನು ಈ ಒಂದು ತಂತ್ರಜ್ಞಾನದ ಪೆಟ್ಟಿಗೆ ಒದಗಿಸಬಲ್ಲದು. ಶಬ್ದಗಳಲ್ಲಿ ಹೇಳಲಾದುದನ್ನು ಒಂದು ಚಿತ್ರ ದೃಢೀಕರಿಸಿ ಹೇಳುತ್ತದೆ. ಛಾಯಾಚಿತ್ರಣ, ವರ್ಣಛಾಯಾ ಚಿತ್ರಣವು ಈ ಅಧ್ಯಯನಕ್ಕೆ ಅವಶ್ಯವಾಗಿದೆ.

೩. **ಸಂಗ್ರಹಿತ ವಿಷಯಗಳ ಪಟ್ಟಿ ತಯಾರಿಸುವುದು:** ಈ ಹಿಂದೆ ನಡೆದ ಸಂಶೋಧನೆಗಳಲ್ಲಿ ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ ಕುರಿತು ಒಡಮೂಡಿದ ಅಂಶಗಳನ್ನು ಸಂಗ್ರಹಿಸಿ ಶತಮಾನಕ್ಕೊಮ್ಮೆ ಸೃಷ್ಟಿಯಾಗುವ ಜಿಲ್ಲೆಯ ಗ್ಯಾಜೆಟಿಯರ್‌ಗಳಲ್ಲಿ ಉಲ್ಲೇಖವಾದ ಅಂಶಗಳನ್ನು ಗ್ರಂಥಾಲಯದ ಹಳೆಯ ಪುಸ್ತಕಗಳಲ್ಲಿ ದಾಖಲೆಗೊಂಡ ಶಾಸನಗಳು ಹಸ್ತಪ್ರತಿಗಳು ಪುರಾಣ ಕಾಲದ ಕತೆಗಳು, ಜಿಲ್ಲೆಯ ಸಮಗ್ರ ಐತಿಹಾಸಿಕ ಅಂಶಗಳನ್ನು ಪಟ್ಟಿ ಮಾಡಿ ಇಡೀ ಅಧ್ಯಯನಕ್ಕೆ ಅನುಕೂಲವಾಗುವಂತೆ ಜೋಡಿಸಿಕೊಳ್ಳುವುದು. ಹೀಗೆ ಬಾಗಲಕೋಟೆ ಜಿಲ್ಲೆಯು ಚಿತ್ರಕಲೆಗೆ ನೀಡಿದ ಕೊಡುಗೆ ಅದು ಆದಿಮಾನವನ ಸಂಜ್ಞಾಭಾಷೆ ಆಗಿರಬಹುದು, ಅಕ್ಷರಭ್ಯಾಸದ ನಂತರ ಬರವಣಿಗೆಯಲ್ಲಿನ ಇತಿಹಾಸವಿರಬಹುದು, ಶಾಸನ ಹಾಗೂ ಬಾಯಿ ಮಾತುಗಳು ಆಗಿರಬಹುದು. ಅಂದಿನಿಂದ ಇಂದಿನವರೆಗೆ ಬಾಗಲಕೋಟೆ ಜಿಲ್ಲೆಯ ಚಿತ್ರಕಲೆಯ ವಿವಿಧ ಮಗ್ಗಲುಗಳ ಖಚಿತ ಅಧ್ಯಯನ ನಡೆಸಿ ಅವುಗಳ ಕುರಿತು ದಾಖಲೀಕರಣ ಮತ್ತು ವ್ಯವಸ್ಥಿತ ಅಧ್ಯಯನ ನಡೆಸುವುದು ಒಟ್ಟಾರೆ ಉದ್ದೇಶವಾಗಿದೆ.

ಚಿತ್ರಕಲಾ ಕ್ಷೇತ್ರದಲ್ಲಿ ಇದುವರೆಗೂ ಸಾಕಷ್ಟು ಸಂಶೋಧನಾ ಕಾರ್ಯಗಳು ನಡೆದರೂ ಇನ್ನುಳಿದ ಸಾಹಿತ್ಯ ಹಾಗೂ ಇತರ ಕ್ಷೇತ್ರಗಳ ತುಲನೆ ಮಾಡಿದಾಗ ಚಿತ್ರಕಲೆಯ ಮಟ್ಟಿಗೆ ನಡೆದ, ನಡೆಯುತ್ತಿರುವ ಅಧ್ಯಯನ ತೀರ ಕಡಿಮೆ ಎಂದೇ ಹೇಳಬಹುದು.

**ಈವರೆಗೆ ನಡೆದ ಅಧ್ಯಯನದ ಒಂದು ಪಕ್ಷಿನೋಟವನ್ನು ಇಲ್ಲಿ ಕೊಡಲಾಗಿದೆ.**

ಜಿಲ್ಲೆಯ ಬನಶಂಕರಿ, ಬಾದಾಮಿಯ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಶಿಲ್ಪ ಮತ್ತು ವರ್ಣ ಚಿತ್ರಕಲಾ ವಿಭಾಗದ ಮುಖ್ಯಸ್ಥರಾದ ಡಾ.ಎಸ್.ಸಿ. ಪಾಟೀಲರು, ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ ಒಂದು ಅಧ್ಯಯನ ಎಂಬ ಕಿರು ಸಂಶೋಧನಾ ಪ್ರಬಂಧವು ಈ ನಿಟ್ಟಿನ ಮೊದಲ ಚಿಂತನೆಯಾಗಿದೆ. ಅವರೇ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಕರ್ನಾಟಕದ ಜನಪದ ಚಿತ್ರಕಲೆ ಎಂಬ ಪಿಎಚ್.ಡಿ. ಮಹಾಪ್ರಬಂಧ ಗಮನಾರ್ಹ ಸಂಶೋಧನಾ ಕೃತಿ ೧೯೮೩ರಷ್ಟು ಹಿಂದೆ ಡಾ.ಬಿ.ಕೆ. ಹಿರೇಮಠರು ಕನ್ನಡ ವಿಶ್ವವಿದ್ಯಾಲಯಗೆ ಕನ್ನಡ ಹಸ್ತಪ್ರತಿಗಳ ಒಂದು ಅಧ್ಯಯನ ಎಂಬ ತಮ್ಮ ಮಹಾಪ್ರಬಂಧವು ಹಸ್ತಪ್ರತಿಗಳಲ್ಲಿರುವ ಚಿತ್ರಗಳನ್ನು ಮೊದಲ ಬಾರಿಗೆ ಆಕರವಾಗಿಸಿಕೊಂಡು ನಡೆಸಿದ ಅಧ್ಯಯನವಾಗಿದೆ. ಅನಂತರದಲ್ಲಿ ಡಾ.ಅ.ಲ. ನರಸಿಂಹನ್ ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಡಾ. ಸಂಪದಾಭಟ್‌ರ ಹಿಂದೂಸ್ಥಾನಿ

ಸಂಗೀತ ಮತ್ತು ರಾಗಾಮಾಲಾ ಚಿತ್ರಗಳು, ಡಾ. ಪುಷ್ಪ ದ್ರಾವಿಡರ ಆದಿವಾಸಿ ಭಾರತೀಯ ಕಲಾವಿದ ದಿ. ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು, ಡಾ. ಯಾದಪ್ಪ ಪರದೇಶಿಯವರ ಉತ್ತರ ಕರ್ನಾಟಕದ ಭಿತ್ತಿ ಚಿತ್ರಗಳು, ಡಾ. ಶಿವಾನಂದ ಬಂಟನೂರರ ಕರ್ನಾಟಕ ಜನಪದ ಶಿಲ್ಪಕಲೆ ಒಂದು ಅಧ್ಯಯನ, ಡಾ. ಲಕ್ಷ್ಮಿದೇವಿ ಗವಾಯಿಯವರ ಎಂ.ಎ. ಚಟ್ಟಿಯವರ ಜೀವನ ಕಲಾಕೃತಿಗಳ ಒಂದು ಅಧ್ಯಯನ, ಡಾ. ಮಲ್ಲಿಕಾರ್ಜುನ ಬಾಗೋಡಿಯವರ ಸುರಪುರ ಅರಸರ ಕಾಲದ ಚಿತ್ರಕಲೆ ಒಂದು ಅಧ್ಯಯನ, ಇತ್ತೀಚೆಗೆ ಡಾ. ಮೋಹನ್ ಪಂಚಾಳರು ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಎಸ್.ಎಂ. ಪಂಡಿತರ ಬದುಕು ಮತ್ತು ಚಿತ್ರಕಲೆ, ಎ.ಎಸ್. ವಿಶ್ವನಾಥ ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ ಮುಂತಾದ ಇನ್ನೂ ಅನೇಕ ಪಿಎಚ್.ಡಿ. ಮಹಾಪ್ರಬಂಧಗಳು ರಚನೆಗೊಂಡಿವೆ. ಎಂ.ಫಿಲ್. ಪದವಿಗಾಗಿ ಶಂಕರ ಕುಂದಗೋಳ ಅವರ ಚಿತ್ರಕಲಾವಿದ ಡಿ.ವಿ. ಹಾಲಬಾವಿಯವರ ಬದುಕು ಮತ್ತು ಕಲಾಕೃತಿಗಳು, ಸಿ.ಡಿ. ಜಟ್ಟೆಣ್ಣವರ ಚಿತ್ರಕಲಾವಿದ ಎಂ.ವಿ. ಮಿಣಜಗಿ ಅವರ ಬದುಕು ಮತ್ತು ಕಲಾಕೃತಿಗಳು, ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಸಂಶೋಧನಾ ಅಧ್ಯಯನಗಳಾಗಿವೆ. ಈಗ ಗುಲ್ಬರ್ಗಾ, ಬೆಂಗಳೂರು, ಧಾರವಾಡ ವಿಶ್ವವಿದ್ಯಾಲಯಗಳಲ್ಲಿ ನೂರಾರು ಸಂಶೋಧನೆಗಳು ನಡೆಯುತ್ತಿರುವುದು ಚಿತ್ರಕಲಾ ಕ್ಷೇತ್ರಕ್ಕೆ ದಾಖಲೆ ಕೊಡುಗೆಯಾಗಿದೆ.

**ಪ್ರಸ್ತುತ ವಿಷಯಕ್ಕೆ ಸಂಬಂಧಿಸಿ ನಡೆದ ಅಧ್ಯಯನಗಳು**

ಬಾಗಲಕೋಟೆ ಜಿಲ್ಲೆ ಚಿತ್ರಕಲೆ ಪ್ರಸ್ತುತ ಈ ಅಧ್ಯಯನವನ್ನು ಕುರಿತು ಈಗಾಗಲೇ ನಡೆದಿರುವ ಸಂಶೋಧನೆಗಳು, ಲೇಖನಗಳು, ಕಿರು ಹೊತ್ತಿಗೆಗಳು ಇಂತಿವೆ.

ಬಾಗಲಕೋಟೆ ಜಿಲ್ಲೆಯ ನೆಲೆ ಐತಿಹಾಸಿಕ ಹಿನ್ನೆಲೆ ಭಾರತದ ಗೆಜಿಟೇರ್, ಕರ್ನಾಟಕ ರಾಜ್ಯ ೧೯೯೯ರಲ್ಲಿ ಸಂಪಾದಿತ, ಅಖಂಡ ವಿಜಾಪುರ ಜಿಲ್ಲಾ ಗ್ಯಾಜೆಟಿಯರ್. ಸಂಪಾದಕರು ಡಾ.ಆರ್. ಮುನಿಸ್ವಾಮಿ. "ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ ಬಾಗಲಕೋಟೆ ಜಿಲ್ಲೆಯೂ ಸೇರಿದಂತೆ" ಎಂಬ ಶೀರ್ಷಿಕೆಯ ಹೊತ್ತಿಗೆಯಲ್ಲಿರುವ ಅಂಕಿ-ಅಂಶಗಳ, ಐತಿಹಾಸಿಕ ತಾಣಗಳ ಮಹತ್ವದ ದಾಖಲೆಗಳಿರುವ ಬೃಹತ್ ಗ್ರಂಥ. ಡಾ.ಯಾದಪ್ಪ ಪರದೇಶಿಯವರು ೨೦೦೧ರಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ "ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ" ಅಪ್ರಕಟಿತ. ವೀರಶೈವ ಅಧ್ಯಯನ ಸಂಸ್ಥೆ, ಗದಗರವರು ೧೯೯೬ರಲ್ಲಿ ಪ್ರಕಟಿಸಿದ ಡಾ.ಎಸ್.ಸಿ. ಪಾಟೀಲರ ಪಿಎಚ್.ಡಿ. ಮಹಾಪ್ರಬಂಧ "ಕರ್ನಾಟಕ ಜನಪದ ಚಿತ್ರಕಲೆ" ಪ್ರಕಟಿತ. ಕನ್ನಡ ವಿಶ್ವವಿದ್ಯಾಲಯ, ಹಂಪಿ ಪ್ರಕಟಿಸಿದ ಡಾ.ಶಿಲಾಕಾಂತ ಪತ್ತಾರ ರಚಿಸಿದ "ಕರ್ನಾಟಕ ಚರಿತ್ರೆ ಮಾಲೆ ಸಂಪುಟಗಳು" ಪುಸ್ತಕ. ೧೯೮೩ರಲ್ಲಿ ಡಾ.ಅ.ಸುಂದರ ರಚಿಸಿದ "ವಿಶಿಷ್ಟ ವರ್ಣ ಚಿತ್ರಗಳ ಆಗರ ಬಾದಾಮಿ" ಪುಸ್ತಕ ಹಾಗೂ ೨೦೦೦ದಲ್ಲಿ ಶಾಂಭಾವಿ ಪ್ರಕಾಶನ ಬಾದಾಮಿ ಪ್ರಕಟಿಸಿದ ಆನಂದ ಕೆ.ಪೂಜಾರ ರಚಿಸಿದ "ಐತಿಹಾಸಿಕ ಬಾದಾಮಿ ಪರಿಚಯ" ಪುಸ್ತಕ, ವಿಜಯ ಚಿತ್ರಕಲಾ ಮಹಾವಿದ್ಯಾಲಯ ಇಲಕಲ್‌ರವರು ಪ್ರಕಟಿಸಿದ ಡಾ.ಎಸ್.ಸಿ. ಪಾಟೀಲರು ರಚಿಸಿದ "ವರ್ಣ ಸಂಚಯ" ಕೃತಿ. ಜಮಖಂಡಿಯ ಖ್ಯಾತ ಹೃದಯತಜ್ಞ ಡಾ.ಎಚ್.ಜಿ.

ದಷ್ಟಿಯವರ ಸಂಶೋಧನಾ ಲೇಖನಗಳು ಹಾಗೂ ಪತ್ರಿಕಾ ಲೇಖನಗಳು, ಪ್ರಾಗೈತಿಹಾಸಿಕ ನೆಲೆಗಳ ರಕ್ಷಣೆಗೆ ಸರ್ಕಾರಕ್ಕೆ ಮಾಡಿಕೊಂಡ ಮನವಿ ಪತ್ರಗಳು. ೧೯೯೫ರಲ್ಲಿ ಶ್ರೀ ಡಿ.ವ್ಹಿ. ಹಾಲಬಾವಿ ಸ್ಕೂಲ್ ಆಫ್ ಆರ್ಟ್, ಧಾರವಾಡ ವಜ್ರಮಹೋತ್ಸವದ ಸ್ಮರಣ ಸಂಚಿಕೆಯಾದ ಚಿತ್ರಾಕ್ಷಿ ಪುಸ್ತಕದಲ್ಲಿ ಡಾ.ಎಸ್.ಸಿ. ಪಾಟೀಲರು ಬರೆದ "ಜನಪದ ಚಿತ್ರಕಲೆಯ ಪ್ರಾಚೀನತೆ" ಎಂಬ ಲೇಖನ, ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಕಟಿಸಿದ ಮಹಾದೇವ ಜಗತಾಪ ರಚಿಸಿದ 'ಕಸೂತಿ' ಪುಸ್ತಕ; ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦ದಲ್ಲಿ ಪ್ರಕಟಿಸಿದ ಪ್ರೊ. ಮಹೇಶ ತಿಪ್ಪಶೆಟ್ಟಿಯವರು ಬರೆದ "ಇಲಕಲ್ಲ ಸೀರೆ" ಕೃತಿ. ರೇಣುಕಾ ಮ. ರಾಯನಗೌಡ್ರು ರಚಿಸಿದ "ಗ್ರಾಮೀಣ ಮಹಿಳೆಯರ ಕಲಾಪ್ರಜ್ಞೆ" ಐದನೇ ವರ್ಷ ವಿಶೇಷ ಪರಿಣಿತಿ ಪದವಿಯ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮ರಲ್ಲಿ ಸಲ್ಲಿಸಿದ ಕಿರು ಯೋಜನಾ ವರದಿ. ಕನ್ನಡ ಸಾಹಿತ್ಯ ಪರಿಷತ್ತಿನ ಅಡಿಯಲ್ಲಿ ಆದಿಚುಂಚನಗಿರಿ ಮಠದ ದತ್ತಿ ಪ್ರಕಟಣೆಯಲ್ಲಿ ಪ್ರಕಟಿಸಿದ ಮಹಾದೇವ ಜಗತಾಪರವರು ರಚಿಸಿದ "ಕರ್ನಾಟಕ ಜನಪದ ಚಿತ್ತಾರಗಳು ಹಾಗೂ ಶಿಲ್ಪಗಳು" ಕೃತಿ. ಡಾ.ಎಸ್.ಸಿ. ಪಾಟೀಲರು ರಚಿಸಿದ "ರಂಗೋಲಿ ಚಿತ್ರಕಲೆ" ಕೃತಿ ಮೊದಲಾದವುಗಳು ಪ್ರಮುಖವಾದವುಗಳು.

೧೯೯೩ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯವರು ಪ್ರಕಟಿಸಿದ ಬಿ.ವಿ.ಕೆ. ಸಾಸ್ತ್ರಿ ರಚಿಸಿದ "ಕರ್ನಾಟಕದ ಭಿತ್ತಿ ಚಿತ್ರಗಳು" ಕೃತಿ. ಡಾ.ಅ.ಲ. ನರಸಿಂಹನ್ ಸಾದರಪಡಿಸಿದ ಲಲಿತಕಲಾ ಅಕಾಡೆಮಿ ಬೆಂಗಳೂರು ಪ್ರಕಟಿಸಿದ "ಕರ್ನಾಟಕದ ಭಿತ್ತಿಚಿತ್ರ ಪರಂಪರೆ" ಕೃತಿ. ಅವರೇ ರಚಿಸಿದ 'ಅಲೇಖ್ಯ' ಕೃತಿ.

ಡಾ.ಬಿ.ಕೆ. ಹಿರೇಮಠರು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಲ್ಲಿಸಿದ "ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ" ಮಹಾಪ್ರಬಂಧ. ಕನ್ನಡ ವಿಶ್ವವಿದ್ಯಾಲಯ, ಹಂಪಿ ಪ್ರಕಟಿಸಿದ ಪ್ರೊ.ಎ.ವಿ. ನಾವಡ ಹಾಗೂ ಡಾ.ಎಸ್.ಎಸ್. ಅಂಗಡಿ ಅವರು ಸಂಪಾದಿಸಿದ "ಹಸ್ತಪ್ರತಿ ವ್ಯಾಸಂಗ" ಸಂಚಿಕೆಗಳು.

ಡಾ.ಬಿ.ಕೆ. ಹಿರೇಮಠರ ಅಭಿನಂದನಾ ಗ್ರಂಥ "ನಿಜದ ನೆಲೆ" ಪ್ರಕಟಣೆ(ಪ್ರಧಾನ ಸಂಪಾದಕರು: ಡಾ.ಬಿ.ಆರ್. ಹಿರೇಮಠ) ಲೇಖಕ ಪ್ರವೀಣರಾಜು ಸೊನ್ನದರವರು ರಚಿಸಿದ "ಅಪರೂಪದ ಅಪೂರ್ವ ಚಿತ್ರ ಕಲಾಕೃತಿಗಳು" ಗ್ರಂಥ. ಮಹಾದೇವ ಮ. ಜಗತಾಪರವರ ೨೮.೧೧.೨೦೦೪ರ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ 'ಗಾಜಿನ ಚಿತ್ತಾರ' ಲೇಖನ ಪ್ರವೀಣರಾಜು ಸೊನ್ನದರವರ ೨.೬.೨೦೦೪ರ ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಪ್ರಕಟವಾದ "Glass paintings continue to attract visitor to Guledgudda" ಲೇಖನ.

೧೯೮೨ರಲ್ಲಿ ಎ.ವಿ. ಪಾಟೀಲರು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ ಸಲ್ಲಿಸಿದ "ಉತ್ತರ ಕರ್ನಾಟಕದ ಜನಪದ ಕಲೆ ಮತ್ತು ವಿಧಿಕ್ರಿಯೆ" ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಪ್ರಕಟಿಸಿದ ಶಿವರಾಮ ಕಾರಂತರು ರಚಿಸಿದ "ಕರ್ನಾಟಕದಲ್ಲಿ ಚಿತ್ರಕಲೆ" ಗ್ರಂಥ. ಕೆ.ವಿ. ಕಾಳೆಯವರು ರಚಿಸಿದ "ಕರ್ನಾಟಕ ಚಿತ್ರಕಲೆಯಲ್ಲಿ ಬಣ್ಣದ ಬಳಕೆ" ಕೃತಿ. ಮೊದಲಾದವುಗಳು ಪ್ರಸ್ತುತ ಅಧ್ಯಯನಕ್ಕೆ ಪೂರಕ ಸಾಮಗ್ರಿ ಒದಗಿಸಿವೆ. ಅಲ್ಲದೆ ಇನ್ನೂ ಅನೇಕ ಸಂಶೋಧನಾ ಪ್ರಬಂಧಗಳು, ಕಿರು ಹೊತ್ತಿಗೆಗಳು, ಪತ್ರಿಕಾ ಲೇಖನಗಳು ಸಾಂದರ್ಭಿಕ ಆಕರಗಳಾಗಿ ನಿಲ್ಲುತ್ತವೆ.

# ಬಾಗಲಕೋಟೆ ಜಿಲ್ಲೆಯ ಶಿಲಾಶ್ರಯ ಚಿತ್ರಕಲೆ

## ಶಿಲಾಶ್ರಯ ಚಿತ್ರಕಲೆ ಇತಿಹಾಸ

ಶಿಲಾಶ್ರಯ ಹಾಗೂ ಬಯಲು ಬಂಡೆಗಳ ಮೇಲೆ ರಚನೆಗೊಂಡ ಚಿತ್ರಗಳು ಆದಿಮಾನವನಿಂದ ರಚನೆಗೊಂಡ ಪ್ರಾಗೈತಿಹಾಸಿಕ ಕಾಲದ ಚಿತ್ರಗಳಾಗಿವೆ. ಬಾಗಲಕೋಟೆ ಜಿಲ್ಲೆಯನ್ನು ಅನುಲಕ್ಷಿಸಿ, ಶಿಲಾಶ್ರಯ ಚಿತ್ರಗಳ ನೆಲೆಗಳನ್ನು ಸಂದರ್ಶಿಸಿ ಸಮೀಕ್ಷಿಸಲಾಗಿದೆ. ಇಲ್ಲಿ ಆದಿಮಾನವನಿಂದ ರಚಿತಗೊಂಡ ಶಿಲಾಶ್ರಯದ ಚಿತ್ರಗಳೆಲ್ಲವೂ ಪ್ರಾಗೈತಿಹಾಸಿಕವಾದುದರಿಂದ ಶಿಲಾಶ್ರಯದ ಚಿತ್ರಗಳನ್ನು ಪ್ರಾಗೈತಿಹಾಸಿಕ ಚಿತ್ರಗಳೆನ್ನಬಹುದು. ಈ ಪ್ರಾಗೈತಿಹಾಸಿಕ ಚಿತ್ರಗಳೂ ಕೂಡ ಬಂಡೆಗಳ ಮೇಲೆ, ಗುಹಾಗೋಡೆಗಳ ಮೇಲೆ ರಚಿತವಾಗಿರುವುದರಿಂದ ಇವುಗಳನ್ನು ಭಿತ್ತಿ ಚಿತ್ರಗಳೆಂದು ಪರಿಗಣಿಸಬಹುದಾಗಿದೆ. ಆದಿಮಾನವನಿಂದ ಚಿತ್ರಿತಗೊಂಡ ಶಿಲಾಶ್ರಯದ ಚಿತ್ರಗಳ ನಿರ್ದಿಷ್ಟ ಕಾಲಸೂಚಿಯನ್ನು ಹೇಳುವುದು ಅಸಾಧ್ಯ. ಪ್ರಾಚೀನ ವರ್ಣಚಿತ್ರಗಳಿಗೆ ಅಂಟಿದ ಬಣ್ಣವನ್ನೊ, ಅದರ ಕಲ್ಲನ್ನೊ, ಮಣ್ಣನ್ನೊ ಪರೀಕ್ಷೆಗೆ ಒಳಪಡಿಸಿ ಕಾಲಗಣನೆ ಮಾಡಬೇಕಾಗುತ್ತದೆ. ಅತ್ಯಂತ ಪುರಾತನ ವರ್ಣಭಿತ್ತಿ ಚಿತ್ರಗಳು ಇದುವರೆಗೂ ತಿಳಿದುಬಂದಂತೆ ನೈರುತ್ಯ ಯುರೋಪಿನಲ್ಲಿ ಕಂಡುಬಂದಿದೆ. ಹಾಗೆಯೇ ಭಾರತದಲ್ಲಿಯೂ ಸಹ ಅತ್ಯಂತ ಪುರಾತನ ಶಿಲಾಶ್ರಯ ಚಿತ್ರಕಲೆ ಮಧ್ಯಪ್ರದೇಶದ ಭಿಂಬೇಟ್ಕಾ ಪ್ರದೇಶದಲ್ಲಿದ್ದು, ಕ್ರಿ.ಪೂ. ೨೫,೦೦೦ ವರ್ಷಗಳಷ್ಟು ಪುರಾತನವಾದ ಶಿಲಾಶ್ರಯ ಚಿತ್ರಗಳಿವೆ. ಭಾರತದ ಮಹಾರಾಷ್ಟ್ರ, ತಮಿಳುನಾಡು, ಒರಿಸ್ಸಾ, ಮಧ್ಯಪ್ರದೇಶ, ಕೇರಳ, ರಾಜಸ್ತಾನ, ಉತ್ತರಪ್ರದೇಶ, ಜಮ್ಮುಕಾಶ್ಮೀರ, ಪಂಜಾಬ್ ಹಾಗೂ ಕರ್ನಾಟಕ ರಾಜ್ಯಗಳಲ್ಲಿಯೂ ಶಿಲಾಶ್ರಯ ಚಿತ್ರಗಳನ್ನು ಕಾಣಬಹುದಾಗಿದೆ. ಅಂತೆಯೇ ಕರ್ನಾಟಕದ ಬಾಗಲಕೋಟೆ, ರಾಯಚೂರು, ಚಿತ್ರದುರ್ಗ, ಗುಲ್ಬರ್ಗಾ, ಬೀದರ್, ಬಳ್ಳಾರಿ, ಕೊಪ್ಪಳ, ಬೆಳಗಾವಿ ಜಿಲ್ಲೆಗಳಲ್ಲಿ ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಗಳನ್ನು ಕಾಣಬಹುದು.

## I. ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಕಲೆ

ಇತಿಹಾಸಕ್ಕಿಂತಲೂ ಪೂರ್ವಕಾಲದಲ್ಲಿ ಆದಿಮಾನವನಿಂದ ರಚಿತಗೊಂಡ ಚಿತ್ರಗಳೇ ಪ್ರಾಗೈತಿಹಾಸಿಕ ಚಿತ್ರಗಳು. ಈ ಚಿತ್ರಗಳೇ ಆಯಾ ಪ್ರದೇಶಗಳ ಚಿತ್ರಕಲಾ ಪರಂಪರೆಯ ಮೂಲಗಳು. ಆದಿವಾಸಿ ಮನುಷ್ಯರ ಪ್ರಾಣಿ ಸದೃಶ ಜೀವನದಿಂದ ದೂರವಾಗುತ್ತ ಬೆಳವಣಿಗೆ ಹೊಂದುತ್ತಾ, ಅಲೆಮಾರಿಗಳಾಗಿದ್ದ ಅವರು ಮರದ ಪೊಟರೆ, ಕಲ್ಲಾಸರೆ, ಗುಹೆಗಳನ್ನು ಆಶ್ರಮಿಸಿ ಒಂದೆಡೆ ನೆಲೆನಿಂತರು. ಕಾಲ ಕಳೆದಂತೆ ಬುದ್ಧಿ

ಚುರುಕಾದಂತೆ, ನಾಗರಿಕತೆ ವಿಕಾಸವಾಯಿತು. ನಾಗರಿಕತೆಯು ವಿಕಾಸದೊಂದಿಗೆ ಕಲೆಗಳು ಬೆಳೆಯತೊಡಗಿದವು. ಹೀಗೆ ಆದಿಮಾನವನು ತನ್ನ ಅನುಭವಗಳನ್ನು ಬಂಡೆಗಳ ಮೇಲೆ ರೇಖಾಚಿತ್ರಗಳಲ್ಲಿ ಚಿತ್ರಿಸಿದ. ಹಾಗೆ ಚಿತ್ರಿಸಿದ ಪ್ರಾಣಿ, ಪಕ್ಷಿ, ಮಾನವಾಕೃತಿ, ಬೇಟೆಯ ದೃಶ್ಯ ಇತ್ಯಾದಿಗಳೇ ಪ್ರಾಗೈತಿಹಾಸಿಕ ಭಿತ್ತಿ ಚಿತ್ರಗಳಾಗಿವೆ.

ಈ ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಗಳ ನಿರ್ದಿಷ್ಟವಾದ ಕಾಲಸೂಚಿಯನ್ನು ಹೇಳಲಾಗುವುದಿಲ್ಲ. ಆದಿಮಾನವರು ಗುಹೆಯ ಮುಂದಿನ ಭಾಗಗಳಲ್ಲಿ ವಾಸಿಸುತ್ತಿದ್ದ ನಿದರ್ಶನಗಳು ದೊರೆತಿವೆ. ಆದರೆ ಅವರು ರಚಿಸಿದ ಚಿತ್ರಗಳು ಮಾತ್ರ ಅವರ ವಾಸದ ನೆಲೆಯಿಂದ ದೂರದಲ್ಲಿ ಅಥವಾ ಸುಲಭವಾಗಿ ತಲುಪಲಾರದ ಸ್ಥಳದಲ್ಲಿವೆ.[೧]

**i. ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರ ನೆಲೆಗಳು**

ಬಾಗಲಕೋಟೆ ಜಿಲ್ಲೆಯಲ್ಲಿ ಒಟ್ಟು ಮೂರು ತಾಲ್ಲೂಕುಗಳಲ್ಲಿ ಶಿಲಾಶ್ರಯ ಚಿತ್ರ ನೆಲೆಗಳಿವೆ. ಬಾದಾಮಿ, ಹುನಗುಂದ ಹಾಗೂ ಜಮಖಂಡಿ ತಾಲ್ಲೂಕಿನ ಪ್ರದೇಶಗಳಲ್ಲಿ ಶಿಲಾಶ್ರಯ ಚಿತ್ರ ನೆಲೆಗಳಿವೆ. ಕರ್ನಾಟಕದ ಅತೀ ಹೆಚ್ಚು ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಗಳನ್ನು ಹೊಂದಿರುವ ಜಿಲ್ಲೆಗಳಲ್ಲಿ ಬಾಗಲಕೋಟೆಯು ಒಂದಾಗಿದೆ.

ಬಾದಾಮಿಯ ಉತ್ತರಕ್ಕೆ ಮಹಾಕೂಟಕ್ಕೆ ಹೋಗುವ ಕಾಲು ಹಾದಿಯ ಎಡಬದಿಯಲ್ಲಿ ಹೊಸ ಮಹಾಕೂಟದ ಹತ್ತಿರ ಒಂದು ವಿಶಾಲವಾದ ಕಣಿವೆಯಿದೆ. ಇದರ ಮೂಲದಲ್ಲಿ ಒಂದು ಇಕ್ಕಟ್ಟಾದ ಕಲ್ಲಾಸರೆ ಕೆಳಗೆ ಬಾದಾಮಿ ಚಾಲುಕ್ಯರ ಕಾಲದ ಸಣ್ಣ ದೇವಾಲಯವಿದೆ. ಇದರ ಹಿಂಬದಿಯ ಬಂಡೆಯ ಮೇಲೆ ಕೆಲವು ಕೆಂಪು ಬಣ್ಣದ ಚಿತ್ರಗಳಿವೆ. ಇವುಗಳು ಅಸ್ಪಷ್ಟವಾಗಿದ್ದು, ಕೆಲವು ಮನುಷ್ಯಾಕೃತಿಗಳಿವೆ. ಇದೇ ಹಾದಿಯಲ್ಲಿರುವ ಶಿಡ್ಲಫಡಿಯಲ್ಲಿ ಸ್ವಾಭಾವಿಕವಾಗಿ ಕೊರಕಲುಬದ್ದ ಕಮಾನಿನಂತಹ ಕಲ್ಲಿನ ಬಾಗಿಲಿನ ಎರಡು ಬದಿಗಳ ಒಳಮೈಯಲ್ಲಿ ಬಹಳಷ್ಟು ಚಿತ್ರಗಳಿವೆ. ಕೈಕೈ ಹಿಡಿದು ಕುಣಿಯುತ್ತಿರುವ ಮನುಷ್ಯಾಕೃತಿಗಳು, ಗುಬ್ಬಚ್ಚಿಯಂತಹ ಪಕ್ಷಿಗಳು, ಅವುಗಳ ಮರಿಗಳು, ಇವುಗಳ ಮಧ್ಯೆ ಹಾವುಗಳು ಹಾಗೆ ಸಾಂಕೇತಿಕ ಮನುಷ್ಯಾಕೃತಿಗಳು ಇವೆ. ಹಾಗೆ ಬಿಳಿ ವರ್ಣದಲ್ಲಿ ರಚಿಸಿದ ಒಂದು ಪ್ರಾಣಿಯ ಚಿತ್ರವೂ ಇದೆ.

ಬಾದಾಮಿಯ ರಂಗನಾಥನ ಬೆಟ್ಟದಲ್ಲಿನ ಶಿಲಾಶ್ರಯದಲ್ಲಿ ವಿಚಿತ್ರವಾದ ಮುಖವಾಡ ಧರಿಸಿದ ಕಡ್ಡಿ ಮಾನವರ ಚಿತ್ರಗಳು, ಕಾಡುಹಂದಿಯ ಚಿತ್ರಗಳಿವೆ. ಹಾಗೆಯೇ ಸೀತಿದೋಣಿಯ ಗವಿಯಲ್ಲಿ ನಾಯಿ, ದನ, ಎಮ್ಮೆಯಂತಹ ಒಂದು ಪಶು, ಮನುಷ್ಯರ ಚಿತ್ರಗಳು ರಚನೆಗೊಂಡಿವೆ. ಈಚಿನ ಕಾಲದಲ್ಲಿ ಈ ಗವಿಯ ಒಳಮೈಯನ್ನು ಮಣ್ಣಿನಿಂದ ಬಳಿಯಲಾಗಿದೆ. ಆದ್ದರಿಂದ ಇದ್ದಿರಬಹುದಾದ ಇನ್ನೂ ಕೆಲವು ಚಿತ್ರಗಳು ಮುಚ್ಚಿಹೋಗಿವೆ. ಸಮೀಪದ ತವಕೋಟಿಯ ಶಿಲಾಶ್ರಯಗಳಲ್ಲಿ ಕೆಂಪು ವರ್ಣದಿಂದ ಚಿತ್ರಿತವಾದ ಮನುಷ್ಯ ಬೇಟೆಯಾಡುತ್ತಿರುವ ಬೇಟೆ ಬಿಲ್ಲು, ಬಾಣ ಹಿಡಿದು ನಿಂತ ಮನುಷ್ಯಾಕೃತಿಯ ಚಿತ್ರ, ಪ್ರಾಣಿಗಳು ಹಾಗೂ ಬಲೆಗಳ ಚಿತ್ರಗಳು ರಚಿತವಾಗಿವೆ.

---

೧. ಪಿ.ಆರ್. ತಿಪ್ಪೇಸ್ವಾಮಿ(ಸಂ), ಚಿತ್ರಕಲಾ ಪ್ರಪಂಚ, ಪು. ೧೫

ಬಾದಾಮಿ ಪರಿಸರದ ಕನ್ನೂರು ಗವಿಯ ಭಿತ್ತಿನಲ್ಲಿ ಕೆಂಪು ಬಣ್ಣದ ಮನುಷ್ಯರ ಚಿತ್ರಗಳು ಗುರುತಿಸಲಾಗದ ಆಕಾರಗಳು ಇವೆ. ಹಾಗೆಯೇ ಕಳ್ಳರಫಡಿಯ ಕಲ್ಲಾಸರೆಯ ಒಳಭಾಗದಲ್ಲಿ ಕೆಂಪು ಬಣ್ಣದಿಂದ ರಚಿತವಾದ ರೇಖಾವಿನ್ಯಾಸದ ಚಿತ್ರಗಳಿವೆ. ಇಲ್ಲಿಂದ ಪಶ್ಚಿಮಕ್ಕೆ ಇನ್ನೊಂದು ಕಲ್ಲಾಸರೆಯಲ್ಲಿ ಕೆಂಪು ಬಣ್ಣದ ಮನುಷ್ಯಾಕಾರದ ಚಿತ್ರಗಳಿವೆ. ಗುಡ್ಡದ ರಂಗನಾಥ ದೇವಾಲಯದ ಎದುರಿಗೆ ಬಲಗಡೆಯಲ್ಲಿ ಸ್ವಲ್ಪ ದೂರ ಸಾಗಿದರೆ ಸಿಗುವ ಬೃಹತ್ ಶಿಲೆಯ ಕೆಳಭಾಗದಲ್ಲಿ ಬಿಳಿಬಣ್ಣದಿಂದ ರಚನೆಯಾದ ಮನುಷ್ಯನ ಚಿತ್ರವಿದೆ. ಮಾಲಗಿತ್ತಿ ಶಿವಾಲಯದ ಎದುರಿಗೆ ಕೆಳಗಿನ ಭಾಗದ ಗುಡ್ಡದಲ್ಲಿ ಒಂದು ಕಲ್ಲಾಸರೆಯಲ್ಲಿ ಮಾನವರ, ಬೇಟೆಗಾರರ, ಪ್ರಾಣಿಗಳು, ಬಲೆಯಂತಹ ಚಿತ್ರಗಳು ಕಾಣಸಿಗುತ್ತವೆ. ಕೆ.ಇ.ಬಿ. ಕಚೇರಿಯ ಹಿಂದುಗಡೆಗೆ ಉತ್ತರ ದಿಕ್ಕಿನ ಕಲ್ಲಾಸರೆಯಲ್ಲಿ ಜಿಂಕೆಗಳ ಸಮೂಹ, ಚಿರತೆಗಳ ಚಿತ್ರಗಳಿವೆ. ಪ್ರಾಚ್ಯವಸ್ತು ಇಲಾಖೆಯ ವಸ್ತುಸಂಗ್ರಹಾಲಯದ ಪೂರ್ವದಿಕ್ಕಿನಿಂದ ಉತ್ತರ ದಿಕ್ಕಿಗೆ ಸಾಗಿದರೆ ಸಿಗುವ ದೊಡ್ಡ ಶಿಲಾಶ್ರಯದಲ್ಲಿ ಕೆಂಪು ಬಣ್ಣದ ಮಾನವಾಕೃತಿಗಳು ಹಾಗೂ ಬಿಳಿಯ ಬಣ್ಣದ ಬಲೆಯಾಕಾರದ ಚಿತ್ರಗಳೂ ಕಾಣಸಿಗುತ್ತವೆ.

ಸೀತಿದೋಣಿಯ ಹತ್ತಿರ ಎತ್ತರದಲ್ಲಿರುವ ಬಂಡೆಯಲ್ಲಿ ಬೃಹತ್ತಾದ ಜೇನುಹುಟ್ಟುಗಳು ಸದಾಕಾಲ ಇರುತ್ತವೆ. ಹಾಗಾಗಿಯೇ ಇದನ್ನು ಜೇನುಫಡಿ ಎಂದು ಕರೆಯುವರು. ಕೆಂಪು ಬಣ್ಣದ ದೊಡ್ಡ ಬಲೆಯಾಕಾರದ ಚಿತ್ರ ಇಲ್ಲಿ ರಚಿತವಾಗಿದೆ. ಹಾಗೆ ನೀರಿನದೋಣಿ ಹತ್ತಿರದಲ್ಲಿ ಬಿಳಿಯ ಬಣ್ಣದ ಚಿತ್ರವಿದೆ. ಇಲ್ಲಿಂದ ೨ ಕಿ.ಮೀ. ದೂರದಲ್ಲಿ ಮತ್ತೊಂದು ಬಂಡೆಯಲ್ಲಿ ಕೆಂಪು ಬಣ್ಣದ ಪ್ರಾಣಿ ಹಾಗೂ ಮನುಷ್ಯಾಕೃತಿಗಳಿವೆ.

ಬಾದಾಮಿ ತಾಲ್ಲೂಕಿನ ಕುಟುಕನಕೇರಿಯ ಪ್ರದೇಶದಲ್ಲಿ ಒಂದು ಬೃಹತ್ತಾದ ಬಂಡೆಯ ಕೆಳಗಡೆ ಕೆಂಪು ಬಣ್ಣದಿಂದ ರಚಿಸಿದ ಮನುಷ್ಯಾಕೃತಿಗಳಿವೆ, ಅಲ್ಲದೇ ಎಲೆಯ ವಿನ್ಯಾಸಗಳೂ ಇವೆ. ಇಲ್ಲಿಯೇ ಮತ್ತೊಂದು ಕಡೆಗೆ ಹಳದಿ ಬಣ್ಣದಿಂದ ಚಿತ್ರಿಸಿದ ಆಕೃತಿಗಳಿವೆ. ಇದಲ್ಲದೇ ರೈತರು ಪೂಜಿಸುತ್ತಿರುವ ಒಂದು ಬಂಡೆಯ ಮೇಲಿನ ಭಾಗದಲ್ಲಿ ಕೆಂಪು ಹಾಗೂ ಬಿಳಿಯ ಬಣ್ಣದ ಮಾನವ ಹಾಗೂ ಪ್ರಾಣಿ ಚಿತ್ರಗಳು ಕಂಡುಬರುತ್ತವೆ. ಗೂಡಿನ ಹನುಮಪ್ಪ ಎಂದು ಕರೆಯಲಾಗುವ ಸ್ಥಳದಲ್ಲಿನ ಒಂದು ಬಂಡೆಯಲ್ಲಿ ಕೆಂಪು, ಕರಿ ಮತ್ತು ಬಿಳಿ ಬಣ್ಣದ ಮಾನವಾಕಾರಗಳು, ಪ್ರಾಣಿ ಚಿತ್ರಗಳು ಮತ್ತು ಬಲೆಯಂತಹ ವಿನ್ಯಾಸ ಎದ್ದು ಕಾಣುತ್ತದೆ. ಅಲ್ಲದೇ ಬಾದಾಮಿ ಸಮೀಪದ ಅರೆಗುಡ್ಡ, ಹಿರೇಗುಡ್ಡಗಳಲ್ಲಿ ಬಿಲ್ಲುಬಾಣಗಳನ್ನು ಹಿಡಿದ ಬೇಟೆಗಾರ ಮತ್ತು ಆಯುಧದಿಂದ ಕಾಡೆಮ್ಮೆಯನ್ನು ವ್ಯಕ್ತಿಯೋರ್ವ ಕೊಲ್ಲುತ್ತಿರುವ ಚಿತ್ರಗಳು ಕಾಣಸಿಗುತ್ತವೆ.

ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಅಸಂಗಿ ಮತ್ತು ಕುಲ್ಲಳ್ಳಿ ಗ್ರಾಮಗಳ ನಡುವೆ ಒಂದು ಮೈಲು ಸುತ್ತಳತೆಯ ಒಂದು ಕಲ್ಲಿನ ಗುಡ್ಡವಿದ್ದು, ಇದಕ್ಕೆ "ಗೊಂಬಿಗುಡ್ಡ" ಎಂದು ಕರೆಯುತ್ತಾರೆ. ಈ ಗುಡ್ಡದಲ್ಲಿ ಕಾದಾಡುವ ಗೂಳಿ, ಮನುಷ್ಯರು, ಒಂಟೆಗಳು, ಆನೆಗಳು, ಚಿಗರೆಗಳು ಕೊರೆದ ಪ್ರಾಗೈತಿಹಾಸಿಕ ಭಿತ್ತಿ ಚಿತ್ರಗಳಿವೆ. ಇದೇ ತಾಲ್ಲೂಕಿನ ಯಲ್ಲಟ್ಟಿಯ ಹತ್ತಿರದ ಬಂಡಿಗಣಿ ಎಂಬ ಗುಡ್ಡದಲ್ಲಿಯೂ ಕೂಡ ಕಲ್ಲಿನ ಮೇಲೆ ಬಿಳಿ ಬಣ್ಣದಿಂದ ಚಿತ್ರಿಸಿದ ಚಿತ್ರಗಳಿದ್ದು, ಇದನ್ನು ನೂರಾಳಫಡಿ ಎಂದೂ ಕರೆಯುವುದುಂಟು.

ಹುನಗುಂದ ತಾಲ್ಲೂಕಿನ ಐಹೊಳೆಯ ಸುತ್ತಮುತ್ತಲಿನ ಬೃಹತ್ ಬಂಡೆಯಾಸರೆಗಳು ಹಾಗೂ ಗವಿಗಳಲ್ಲಿ ಪ್ರಾಣಿ-ಪಕ್ಷಿಗಳ ವರ್ಣ ರೇಖಾಚಿತ್ರಗಳು ಕಾಣಸಿಗುತ್ತವೆ. ಅಲ್ಲದೇ ಇದೇ ತಾಲ್ಲೂಕಿನ ಸಿದ್ದನಕೊಳ್ಳದಲ್ಲಿ ಚರ್ಟಕಲ್ಲಿನ ಮೇಲೆ ಕೊರೆದ ಸೂಕ್ಷ್ಮ ಶಿಲಾಯುಗ ಕಾಲದ್ದೆಂದು ನಂಬಲಾಗಿರುವ ರೇಖಾಕೃತಿಯನ್ನು ಡಾ.ಎಸ್.ವಿ. ಪಾಡಿಗಾರ್ ಅವರು ಗುರುತಿಸಿದ್ದಾರೆ. ಐಹೊಳೆ, ಪಟ್ಟದಕಲ್ಲು ಮಾರ್ಗ ಮಧ್ಯದಲ್ಲಿ ಉಪನಾಳ ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಹುಲಿಘಡಿ ಎಂಬಲ್ಲಿ ಇತ್ತೀಚೆಗಷ್ಟೇ ಶಿಲಾಶ್ರಯ ಚಿತ್ರಗಳು ಆವಿಷ್ಕಾರಗೊಂಡಿವೆ.

ಇವು ಜಿಲ್ಲೆಯ ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಗಳ ನೆಲೆಗಳಾಗಿವೆ. ಜಿಲ್ಲೆಯಲ್ಲಿ ಬಾದಾಮಿ ತಾಲ್ಲೂಕಿನಲ್ಲಿಯೇ ಅತೀ ಹೆಚ್ಚು ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರ ನೆಲೆಗಳಿವೆ. ಉಳಿದೆರಡು ತಾಲ್ಲೂಕುಗಳಲ್ಲಿ ಕೆಲವು ಚಿತ್ರಗಳನ್ನು ಮಾತ್ರ ಕಾಣಬಹುದಾಗಿದೆ.

### ii. ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರ ರಚನೆಯ ತಂತ್ರ-ವಿಧಾನಗಳು

ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರ ರಚನಾಕಾರನಾದ ಆದಿಮಾನವನು ತನಗೆ ತಿಳಿದ ವಿಧಾನಗಳಿಂದ, ತನಗೆ ನೈಸರ್ಗಿಕವಾಗಿ ದೊರೆತ ಸಾಮಗ್ರಿಗಳನ್ನು ಬಳಸಿಕೊಂಡು ಚಿತ್ರರಚನೆ ಮಾಡಿದ್ದಾನೆ. ಈ ಹಿನ್ನೆಲೆಯಲ್ಲಿ ಚಿತ್ರ ರಚನೆಗೆ ಬಳಸಿಕೊಂಡಿರಬಹುದಾದ ಸಾಧನ-ಸಾಮಗ್ರಿಗಳನ್ನು ಕೆಳಗಿನಂತೆ ವಿಂಗಡಿಸಿ ವಿವರಿಸಬಹುದಾಗಿದೆ.

೧. ಶಿಲೆ ೨. ಚೂಪಾದ ಸಾಧನ, ೩. ಬಣ್ಣ, ೪. ಅಂಟುಮಾಧ್ಯಮ, ೫. ಕುಂಚ, ೬. ಬಣ್ಣ ಮಿಶ್ರಗೊಳಿಸುವ ಬಟ್ಟಲು, ೭. ಬಣ್ಣ ಲೇಪನ ವಿಧಾನ

### ೧. ಶಿಲೆ

ಚಿತ್ರರಚನೆ ಮಾಡಲು ಬಹುಮುಖ್ಯವಾದ ಅಗತ್ಯ ಒಂದು ತಳಹದಿ ಶಿಲೆ. ಆದಿಮಾನವನು ಬಂಡೆಯ ಮೇಲ್ಮೈಯನ್ನು ಭಿತ್ತಿಯಾಗಿ ಬಳಸಿಕೊಂಡಿದ್ದಾನೆ. ಗುಡ್ಡಗಳಲ್ಲಿ, ಬಂಡೆಗಳ ಮೇಲೆ ಗುಹೆಗಳ ಗೋಡೆಯ ಮೇಲೆ, ಶಿಲಾಶ್ರಯಗಳಲ್ಲಿ ಚಿತ್ರಗಳನ್ನು ರಚಿಸಿದ್ದಾನೆ. ಆದಿಮಾನವನು ಬಂಡೆಯ ಮೇಲೆ ಯಾವುದೇ ಮಿಶ್ರಣವನ್ನು ಲೇಪಿಸಿ, ಪ್ರತ್ಯೇಕ ಭಿತ್ತಿಯನ್ನು ರಚಿಸಿ ಚಿತ್ರವನ್ನು ರಚಿಸಿಲ್ಲ. ನೈಸರ್ಗಿಕವಾಗಿರುವ ಬಂಡೆಯನ್ನು ಯಥಾಸ್ಥಿತಿಯಲ್ಲಿ ಭಿತ್ತಿಯಾಗಿ ಬಳಸಿಕೊಂಡಿದ್ದಾನೆ. ನುಣುಪಾದ ಬಂಡೆಗಳನ್ನು ಚಿತ್ರ ರಚನೆಗಾಗಿ ಆರಿಸಿಕೊಂಡಿದ್ದರೂ, ವಿವಿಧ ವಿನ್ಯಾಸದ ಬಂಡೆಗಳಲ್ಲೂ ಸಹ ಚಿತ್ರಗಳನ್ನು ರಚಿಸಿದ್ದಾನೆ. ಬಾದಾಮಿಯ ರಂಗನಾಥ ಗುಡ್ಡದ ಚಿತ್ರಗಳು ಬೃಹತ್ ಬಂಡೆಯೊಂದರ ನುಣುಪಾದ, ಸಮತಟ್ಟಾಗಿರುವ, ತಗ್ಗು ಪ್ರದೇಶದಲ್ಲಿ ರಚನೆಯಾಗಿವೆ. ಮಹಾಕೂಟದಲ್ಲಿ ಉರುಟಾಗಿರುವ ಹೆಚ್ಚು ಉಬ್ಬು-ತಗ್ಗುಗಳಿರುವ ಅಸಮಾನವಾದ ಬಂಡೆಯ ಮೇಲೆ ಚಿತ್ರಗಳು ರಚಿತವಾಗಿವೆ. ಅಲ್ಲದೇ ಆದಿಮಾನವ ಆಯಾ ಪ್ರದೇಶದಲ್ಲಿ ತನಗೆ ಬೇಕೆನ್ನಿಸಿದ ವಿವಿಧ ವಿನ್ಯಾಸದ ಬಂಡೆಗಳ ಮೇಲೆ ಚಿತ್ರಗಳನ್ನು ರಚಿಸಿರುವುದನ್ನು ನಾವು ಕಾಣುತ್ತೇವೆ.

೨. ಚೂಪಾದ ಸಾಧನ

ಆದಿಮಾನವ ಬಂಡೆಗಳ ಮೇಲೆ ಚಿತ್ರ ರಚಿಸಲು ಯೋಚಿಸಿದ ಮೇಲೆ ತಾನು ಬೇಟೆಯಾಡಲು ಉಪಯೋಗಿಸುತ್ತಿದ್ದಂತಹ ಚೂಪಾದ ಸಾಧನಗಳನ್ನು ಬಳಸಿ ಕೊರೆದು, ಕುಟ್ಟಿ, ಚಿತ್ರಗಳನ್ನು ರಚಿಸಿದಂತಿದೆ. ಇದಕ್ಕಾಗಿ ಅವರು ಹಿಂದೆ ಹಿಡಿಯಲು ಅನುಕೂಲವಿರುವ, ಮುಂದೆ ಹರಿತವಾದ ಮೊನೆಯುಳ್ಳ ಕಲ್ಲಿನ ಚಕ್ಕೆಯನ್ನು ಉಪಯೋಗಿಸಿರಬಹುದು. ಇಂತಹ ಉದ್ದವಾದ ಕಲ್ಲಿನಿಂದ ಕುಟ್ಟಿ, ಕೆರೆದು ಚಿತ್ರಗಳನ್ನು ರಚಿಸಲಾಗಿದೆ. ಮೊದಲು ಚಿತ್ರಿಸಬೇಕೆಂದುಕೊಂಡ ಆಕಾರವನ್ನು ಬಂಡೆಯ ಮೇಲೆ ತೆಳುವಾದ ರೇಖೆಯಿಂದ ಮೂಡಿಸಿ ನಂತರ ಆ ರೇಖೆಗಳಿಗುಂಟ ಚೂಪಾದ ಸಾಧನಗಳಿಂದ ಏಕ ಪ್ರಕಾರವಾಗಿ ಕುಟ್ಟುತ್ತ ಇಲ್ಲವೇ ಆಳವಾಗಿ ಕೆರೆದು ಚಿತ್ರಗಳನ್ನು ರಚಿಸಿರುವಂತೆ ಕಂಡುಬರುತ್ತದೆ.[೨] ಹೀಗೆ ಚೂಪಾದ ಸಾಧನದಿಂದ ಕುಟ್ಟಿ ಕೆರೆದ ಭಿತ್ತಿ ಚಿತ್ರಗಳು ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಕಲ್ಲೊಳ್ಳಿಯ ಸಮೀಪದ ಗೊಂಬಿಗುಡ್ಡದಲ್ಲಿವೆ. ಜೊತೆಗೆ ಬಾದಾಮಿಯ ಉತ್ತರಗುಡ್ಡ, ಸೀತಿದೋಣಿ, ಮಹಾಕೂಟಗಳಲ್ಲಿಯೂ ಕಂಡುಬರುತ್ತವೆ.

೩. ಬಣ್ಣ

ಆದಿಮಾನವ ಬಂಡೆಗಳ ಮೇಲೆ ಕುಟ್ಟಿ, ಕೊರೆದು ಚಿತ್ರಗಳನ್ನು ರಚಿಸಿದಂತೆಯೇ ಪ್ರಕೃತಿಯಲ್ಲಿ ಸ್ವಾಭಾವಿಕವಾಗಿ ಸಿಗುವ ವಸ್ತುಗಳನ್ನು ಬಳಸಿಕೊಂಡು ಬಣ್ಣ ತಯಾರಿಸಿ ಚಿತ್ರಗಳನ್ನು ರಚಿಸಿದ್ದಾನೆ. ನೈಸರ್ಗಿಕವಾಗಿ ದೊರೆಯುವ ಹುರಿಮಂಜಿನಂತಹ ಕೆಮ್ಮಣ್ಣಿನ ಗಡ್ಡಿಗಳಿಂದ ಕೆಲವು ವನಸ್ಪತಿಗಳಿಂದ, ಬಿಳಿ ಮಣ್ಣಿನ ಗಟ್ಟಿಗಳಿಂದ ವರ್ಣಪಡೆದು ಉಪಯೋಗಿಸಿರಬಹುದಾಗಿದೆ.[೩] ಹಾಗೆಯೇ ಪ್ರಾಗೈತಿಹಾಸಿಕ ಬಂಡೆ ವರ್ಣಚಿತ್ರಗಳಲ್ಲಿ ಖನಿಜಮೂಲ ವರ್ಣಗಳನ್ನೇ ಹೆಚ್ಚಾಗಿ ಬಳಸಲಾಗಿದೆ ಎಂಬುದು ಸಂಶೋಧಕರ ಹಾಗೂ ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಖನಿಜಮೂಲ ವರ್ಣಗಳಲ್ಲೇ ಅತೀ ಹೆಚ್ಚು ಬಳಕೆಯಾದ ವರ್ಣವೆಂದರೆ "ರೆಡ್‌ಹೆಮಟೈಟ್". ಈ "ರೆಡ್‌ಹೆಮಟೈಟ್"ನಿಂದ ಪಡೆಯಲಾದ ಕೆಂಪು ವರ್ಣವನ್ನೇ ತೆಳು, ದಟ್ಟ ಹೀಗೆ ವಿವಿಧ ಛಾಯೆಗಳಲ್ಲಿ ಉಪಯೋಗಿಸಲಾಗಿದೆ. ಅಲ್ಲದೇ ರೆಡ್‌ಹೆಮಟೈಟ್‌ನಿಂದ ಕೆಂಪುವರ್ಣ ತಯಾರಿಸಿ ಉಪಯೋಗಿಸಿದ್ದನ್ನು ಪ್ರಾರಂಭದ ಅಚೂಲಿಯನ್ ಕಾಲದಲ್ಲಿ ವಾಸವಾಗಿದ್ದ ಆಫ್ರಿಕ, ಯುರೋಪ್‌ಗಳಲ್ಲಿನ ಜನಗಳಲ್ಲಿಯೂ ಕಾಣಬಹುದು.[೪]

ಭಾರತದಲ್ಲಿ ಮೆಸೋಲಿಥಿಕ್ ಕೊನೆಯ ಹಂತದ ನಂತರ ಕಂಡುಬರುವ ಸರಿಸುಮಾರು ಎಲ್ಲಾ ಪ್ರಾಗೈತಿಹಾಸಿಕ ನೆಲೆಗಳಲ್ಲಿ ಹೆಮಟೈಟ್ ವರ್ಣ ಕಂಡುಬಂದಿದೆ. ಇದನ್ನು ಹಲವಾರು ಸಂಶೋಧಕರು ಭಾರತದ ವಿವಿಧ ಪ್ರದೇಶಗಳಲ್ಲಿ ಪತ್ತೆ ಹಚ್ಚಿದ್ದಾರೆ. ಮಾತ್ರವಲ್ಲದೆ ಹಳದಿ ಅಕರ್ಸ್(Yellow Ochre), ಟೆರ್ರಾವರ್ಟ್(Terravert) ಎಂಬ ಮ್ಯಾಂಗನೀಸ್ ಸಂಯುಕ್ತ ವರ್ಣಗಳನ್ನು ಗುರುತಿಸಿದ ವಿದ್ವಾಂಸರು

---

೨. ಡಾ.ಎಸ್.ಸಿ. ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪು. ೪೫.

೩. ಶ್ರೀ ಬಿ.ವಿ.ಕೆ. ಶಾಸ್ತ್ರಿ, ಪ್ರಬುದ್ಧ ಕರ್ನಾಟಕ(ಸಂಪುಟ ೨೩, ೩.೮.೧೯೪೩), 'ಪ್ರಾಚೀನ ಚಿತ್ರಕಲೆ'.

೪. ಯಶೋಧರ ಮತಪಾಲಿ, ಪ್ರಿ-ಹಿಸ್ಟಾರಿಕ್ ರಾಕ್ ಪೇಂಟಿಂಗ್ಸ್ ಆಫ್ ಬಿಂಬೇಟ್ಕಾ, ಪು. ೯.

ಇವುಗಳನ್ನೂ ಸಹ ಪ್ರಾಗೈತಿಹಾಸಿಕ ಮಾನವರು ಚಿತ್ರರಚನೆಗೆ ಬಳಸಿಕೊಂಡಿದ್ದಾರೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಹಾಗೆಯೇ ಕಟ್ಟಿಗೆ ಸುಟ್ಟು ತಯಾರಿಸಿರುವ ಇದ್ದಿಲುಗಳಿಂದ, ಕಪ್ಪು ಬಣ್ಣದ ಕಲ್ಲುಗಳಿಂದ ಮತ್ತು ಸುಟ್ಟ ಎಲುಬುಗಳಿಂದ ತಯಾರಿಸಿದ ಇದ್ದಿಲಿನಿಂದ ಕಪ್ಪು ವರ್ಣವನ್ನು ತಯಾರಿಸಿಕೊಳ್ಳುತ್ತಿದ್ದುದು ತಿಳಿದುಬರುತ್ತದೆ. ಅಲ್ಲದೆ ವಿವಿಧ ವರ್ಣಗಳ ಕಲ್ಲು, ಮಣ್ಣುಗಳು, ಬಿಳಿಕಡುವಿನ ವರ್ಣಗಳನ್ನು, ವಿವಿಧ ಸಸ್ಯಮೂಲ ವರ್ಣಗಳನ್ನು ಪ್ರಾಗೈತಿಹಾಸಿಕ ಜನರು ಚಿತ್ರರಚನೆಗಾಗಿ ಬಳಸಿಕೊಂಡಿದ್ದಾರೆ.

ಹೀಗೆ ಪ್ರಾಗೈತಿಹಾಸಿಕ ಮಾನವನು ನೈಸರ್ಗಿಕವಾಗಿ ದೊರತಂತಹ ವರ್ಣಮೂಲಗಳನ್ನು ತೆಗೆದುಕೊಂಡು ಹದವಾಗಿ ವರ್ಣಗಳನ್ನು ತಯಾರಿಸಿಕೊಳ್ಳುತ್ತಿದ್ದನೆಂಬುದು ತಿಳಿದರೂ ಇದರ ಬಗ್ಗೆ ನಿಖರವಾದ ಮಾಹಿತಿ ದೊರೆಯುವುದಿಲ್ಲ. ಆದರೆ ಪ್ರಾಗೈತಿಹಾಸಿಕ ಮಾನವನು ಬಣ್ಣದ ಗಟ್ಟಿಗಳನ್ನು ಕಲ್ಲಿನ ತಗ್ಗು ಪ್ರದೇಶದಲ್ಲಿಟ್ಟು ಕುಟ್ಟಿ ಪುಡಿ ಮಾಡಿ ಅಥವಾ ನೀರಿನಲ್ಲಿ ತೇಯ್ದು ಅದಕ್ಕೆ ವಿವಿಧ ರೀತಿಯ ಬಂಧಕ ಅಥವಾ ಅಂಟುಮಾಧ್ಯಮಗಳನ್ನು ಬೆರೆಸಿ ಮಂದವಾಗಿ, ಹದವಾಗಿ ವರ್ಣಗಳನ್ನು ತಯಾರಿಸಿಕೊಂಡು ಉಪಯೋಗಿಸಿದ್ದಿರಬೇಕು ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಆದರೆ ಜಿಲ್ಲೆಯ ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಗಳಲ್ಲಿ ಹೆಚ್ಚಾಗಿ ಕಂದು ವರ್ಣಗಳನ್ನೇ ಬಳಸಲಾಗಿರುವುದನ್ನು ನೋಡಿದರೆ ಇವುಗಳಲ್ಲಿ ಕೆಮ್ಮಣ್ಣಿನೊಂದಿಗೆ ಅಂಟುಮಾಧ್ಯಮ ಅಥವಾ ಬಂಧಕವನ್ನು ಬಳಸಿ ಚಿತ್ರ ರಚಿಸಿರಬಹುದಾಗಿದೆ. ಬಿಳಿ ವರ್ಣದ ರೇಖಾಚಿತ್ರಗಳೂ ಸಹ ಕಾಣಸಿಗುತ್ತವೆ. ಇದಲ್ಲದೇ ಕಪ್ಪು ವರ್ಣವನ್ನು ಚಿತ್ರದ ಹೊರರೇಖೆಯಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ.

### ೪. ಅಂಟು ಮಾಧ್ಯಮ

ಚಿತ್ರವನ್ನು ರಚಿಸಲು ಬೇಕಾಗಿರುವ ವರ್ಣವನ್ನು ಉಪಯೋಗಿಸುವ ಮುನ್ನ ಅದನ್ನು ಅಂಟು ಮಾಧ್ಯಮದಲ್ಲಿ ಬೆರೆಸಿಕೊಳ್ಳಬೇಕಾಗುತ್ತದೆ. ಹೀಗೆ ಮಾಡುವುದರಿಂದ ವರ್ಣವು ಭದ್ರವಾಗಿ ಅಂಟಿಕೊಳ್ಳುವುದಲ್ಲದೇ ಹೆಚ್ಚು ದಿನ ಬಾಳಿಕೆ ಬರುತ್ತದೆ. ಹೀಗೆ ಆದಿಮಾನವನು ವರ್ಣಬಂಧಕವಾಗಿ ಬಳಸಿರುವ ವಸ್ತುಗಳ ಬಗೆಗೆ ಹಲವಾರು ವಿದ್ವಾಂಸರು ಭಿನ್ನ ಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಆದರೆ ಇಂತಹುದೇ ಅಂಟುಮಾಧ್ಯಮ ಬಳಕೆಯಾಗಿದೆ ಎನ್ನುವುದಕ್ಕೆ ಖಚಿತ ಆಧಾರಗಳಿಲ್ಲ. ಮೊಟ್ಟೆಯೊಳಗಿನ ಹಳದಿಲೋಳೆ(Yolk of egg), ಜೇನುಮೇಣ, ಸಸ್ಯಮೂಲದ ಅಂಟುಗಳು, ಪ್ರಾಣಿಗಳ ರಕ್ತ ಇವುಗಳನ್ನು ಬಳಸಿರುವ ಸಾಧ್ಯತೆಯನ್ನು ವಿದ್ವಾಂಸರು ಮಂಡಿಸಿದ್ದಾರೆ.[೫] ಹಾಗೆಯೇ ಕೆಲವೆಡೆ ಎಲುಬಿನೊಳಗಿರುವ ಜಿಗಟು ಪದಾರ್ಥವಾದ ಕೊಬ್ಬು(Fat), ಪ್ರಾಣಿಗಳ ಮೂತ್ರವನ್ನು ಬಳಸಿರುವ ಸಾಧ್ಯತೆಗಳಿವೆ ಎಂಬುದು ಸಂಶೋಧಕರ ತರ್ಕ. ಅಂತೆಯೇ ಪ್ರಾಣಿಗಳ ರಕ್ತವನ್ನು ಬಳಸಿರಲಾರರು[೬] ಎಂಬ ವಾದವೂ ಇದೆ.

---

೫. ಯಶೋಧರ ಮತಪಾಲಿ, ಪ್ರಿ-ಹಿಸ್ಟಾರಿಕ್ ರಾಕ್ ಪೇಂಟಿಂಗ್ಸ್ ಆಫ್ ಬಿಂಬೇಟ್ಕಾ, ಪು. ೧೧.
೬. ಯಶೋಧರ ಮತಪಾಲಿ, ಪ್ರಿ-ಹಿಸ್ಟಾರಿಕ್ ರಾಕ್ ಪೇಂಟಿಂಗ್ಸ್ ಆಫ್ ಬಿಂಬೇಟ್ಕಾ, ಪು. ೧೨.

೫. ಕುಂಚ

ಅಂಟು ಮಾಧ್ಯಮವನ್ನು ಬೆರೆಸಿ ಬಣ್ಣವನ್ನು ಹದವಾಗಿ ತಯಾರಿಸಿಕೊಂಡು ಲೇಪಿಸಲು ಹಲವಾರು ರೀತಿಯ ನೈಸರ್ಗಿಕ ಕುಂಚದ ರೀತಿಯ ವಸ್ತುಗಳನ್ನು ಬಳಸಿಕೊಂಡಿರಬಹುದು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಗಿಡದ ಟೊಂಗೆಯನ್ನು ಜಜ್ಜಿ ಅದರ ತುದಿಯನ್ನು ಎಳೆ ಎಳೆಯಾಗಿ ಬಿಡಿಸಿ ಅದನ್ನು ಕುಂಚವಾಗಿ ಬಳಸಿರಬಹುದು[೭] ಅಥವಾ ಕಟ್ಟಿಗೆ ತುಂಡಿಗೆ ಪ್ರಾಣಿಗಳ ಚರ್ಮವನ್ನು ಸುತ್ತಿ, ಇಲ್ಲವೇ ಕೆಲವು ಸಸ್ಯಗಳಲ್ಲಿ ಅಡಕವಾಗಿರುವ ನಾರು ಪದಾರ್ಥವನ್ನು ಬೇರ್ಪಡಿಸಿ ಅದರಿಂದ ಕುಂಚಗಳನ್ನು ಬಳಸಿಕೊಂಡಿರಬಹುದು. ಅಲ್ಲದೇ ಪ್ರಾಣಿಗಳ ಕೂದಲುಗಳನ್ನು ಒಟ್ಟುಗೂಡಿಸಿ ಕಟ್ಟಿ ಮಾಡಿದ ಕುಂಚಗಳನ್ನು ಚಿತ್ರರಚನೆಗೆ ಬಳಸಿರಬಹುದೆಂದು ವಿದ್ವಾಂಸರು ಊಹಿಸುತ್ತಾರೆ. ಹೀಗೆ ಹತ್ತುಹಲವು ಅಭಿಪ್ರಾಯಗಳು ವ್ಯಕ್ತವಾಗಿದ್ದು, ಒಟ್ಟಿನಲ್ಲಿ ಆದಿಮಾನವನು ಸಂದರ್ಭಕ್ಕನುಸಾರವಾಗಿ ತನ್ನ ಸುತ್ತಲಿನ ಪರಿಸರದಲ್ಲಿ ಸಿಕ್ಕುವ ಸಸ್ಯ, ಪ್ರಾಣಿಗಳ ನಾರು, ರೋಮಗಳನ್ನು ಕುಂಚತೆ ರೂಪಿಸಿಕೊಂಡಿರುವಂತಿದೆ. ಇವುಗಳ ಜೊತೆಗೆ ಕೈಯಿಂದಲೂ, ಬೆರಳುಗಳಿಂದಲೂ ಕೂಡ ವರ್ಣಲೇಪನ ಮಾಡಿರುವ ಗುರುತುಗಳು ಸಿಗುತ್ತವೆ.

## ಬಣ್ಣ ಮಿಶ್ರಣದ ಬಟ್ಟಲು

ನೈಸರ್ಗಿಕವಾಗಿ ದೊರೆತ ಬಣ್ಣಗಳು ಹಾಗೂ ಅದಕ್ಕೆ ಬೆರೆಸಬೇಕಾಗಿರುವ ಅಂಟು ಮಾಧ್ಯಮವನ್ನು ಮಿಶ್ರಣ ಮಾಡಿಕೊಳ್ಳಲು ಬಟ್ಟಲುಗಳಂತಹ ವಸ್ತುಗಳ ಅವಶ್ಯಕತೆ ಇರುವುದರಿಂದ ಆದಿಮಾನವರು ಆರಂಭದಲ್ಲಿ ಬಂಡೆಗಳ ತಗ್ಗು ಪ್ರದೇಶಗಳನ್ನು ಬಳಸಿಕೊಂಡಿರಬಹುದಾಗಿದೆ. ನಂತರದ ದಿನಗಳಲ್ಲಿ ಎಲೆಯ ದೊಣ್ಣೆಗಳು, ಎಲುಬಿನ ಟೊಳ್ಳುಗಳು, ಸೋರೆಕಾಯಿ, ಬಿಲ್ವಪತ್ರಿ ಕಾಯಿಗಳನ್ನು ಡೊಳ್ಳಾಗಿಸಿ ಪ್ರತ್ಯೇಕ ವಸ್ತುಗಳಾಗಿ ಬಳಸಿರುವ ಸಾಧ್ಯತೆಗಳಿವೆ. ಮಾತ್ರವಲ್ಲದೆ ಕಲ್ಲಿನಲ್ಲಿ ಕಡೆದು ರೂಪಿಸಿರುವ ಪಾತ್ರೆಗಳನ್ನು ಸಹ ಬಳಸಿಕೊಂಡ ಬಗೆಗೆ ಅವಶೇಷಗಳೂ ದೊರೆತಿವೆ.

## ಬಣ್ಣಲೇಪನ ವಿಧಾನ

ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಗಳಲ್ಲಿ ಬಣ್ಣವನ್ನು ಲೇಪನ ಮಾಡಿರುವ ಬಗೆಗೆ ಹಲವಾರು ವಿಧಾನಗಳನ್ನು ವಿದ್ವಾಂಸರು ಹೇಳಿದ್ದಾರೆ. ಮೊದಲನೆಯದಾಗಿ ಬಣ್ಣದ ಗಟ್ಟಿಗಳನ್ನು ಬಣ್ಣದ ಸೀಸಗಳ ಹಾಗೆ ಉಪಯೋಗಿಸಿ ರೇಖಾಚಿತ್ರಗಳನ್ನು ರಚಿಸಿದಂತಿದೆ. ಕೆಲವು ಸಲ ಈ ಬಣ್ಣದ ಗಟ್ಟಿಗಳ ಮೈಯನ್ನೇ ಚಿತ್ರಗಳ ಒಳಭಾಗಕ್ಕೆ ಉಜ್ಜಿ ವರ್ಣಲೇಪನ ಮಾಡಲಾಗಿದೆ. ಇಲ್ಲವೇ ವರ್ಣಗಳನ್ನು ಹದವಾಗಿ, ಮಂದವಾಗಿ ಕಲಿಸಿಕೊಂಡು ಅಂಗೈಯಿಂದ ಬೆರಳುಗಳಿಂದ ಲೇಪಿಸಲಾಗಿದೆ. ಅಂತೆಯೇ ವರ್ಣಗಳನ್ನು ದ್ರವರೂಪವಾಗಿ ಕಲಿಸಿಕೊಂಡು ವಿವಿಧ ರೀತಿಯ ಕುಂಚಗಳಿಂದ ವರ್ಣಲೇಪಿಸುತ್ತಿದ್ದರು. ಹೀಗೆ ಒಂದೊಂದು ವಿಧಾನದಲ್ಲಿ ವರ್ಣಲೇಪನ ಮಾಡಿರುವುದರ ಮಾಹಿತಿ ದೊರೆಯುತ್ತದೆ. ಇವುಗಳಲ್ಲದೇ ಕೆಲವು ಕಡೆಗಳಲ್ಲಿ ಮೊದಲಿಗೆ ಚಿತ್ರಗಳ ಹೊರರೇಖೆಯನ್ನು ಹಾಕಿಕೊಂಡು ಒಳಭಾಗದಲ್ಲಿ ಅಂಟು ಪದಾರ್ಥವನ್ನು ಲೇಪಿಸಿ, ಅದು ಹಸಿ ಇರುವಾಗಲೇ ಅದರ ಮೇಲೆ ಒಣದಾದ ಬಣ್ಣದ ಪುಡಿಯನ್ನು ಒತ್ತುತ್ತಿದ್ದರು. ಈ ರೀತಿಯ ವಿಧಾನಗಳೇ

---

೭. ವಿ.ಎಸ್. ವಾಕಣಕರ್, ಪೇಂಟೆಡ್ ರಾಕ್ ಶೆಟರ್ಸ್ ಆಫ್ ಇಂಡಿಯಾ, ಪು. ೧೦೩.

ಬಾಗಲಕೋಟೆ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಗಳಲ್ಲಿ ಅನುಸರಿಸಲಾಗಿದೆ ಎನ್ನಬಹುದು. ಅಲ್ಲದೇ ಇನ್ನೂ ಹಲವೆಡೆಗಳಲ್ಲಿ ವರ್ಣದ್ರವವನ್ನು ಬಾಯಿಯಲ್ಲಿ ಹಾಕಿಕೊಂಡು ಊದಿ ಇಲ್ಲವೇ ಇನ್ನಾವುದೇ ರೀತಿಯಿಂದ ಸಿಡಿಸಿ ಚಿತ್ರರಚನೆ ಮಾಡಿರಬಹುದು.[೮] ಅಲ್ಲದೇ ಟೊಳ್ಳಾದ ಮೂಳೆಯೊಳಗೆ ಬಣ್ಣವನ್ನು ತುಂಬಿ ಬಂಡೆಯಲ್ಲಿ ಕೊರೆದ ರೇಖೆಗಳಲ್ಲಿ ಇಳಿಸಿ ಚಿತ್ರ ರಚಿಸಲಾಗಿದೆ. ಹಾಗೆ ಅಚ್ಚು ತಂತ್ರದಿಂದಲೂ ಕೂಡ ಚಿತ್ರರಚನೆ ಮಾಡಿರಬಹುದಾಗಿದೆ ಎಂಬುದು ಹಿರೇಬೆನಕಲ್ ಗುಡ್ಡಗಳಲ್ಲಿ ಕಂಡುಬರುವ ಜಿಂಕೆಯ ಚಿತ್ರಗಳ ಅಳತೆ, ವಿನ್ಯಾಸ, ಶೈಲಿ ಹೀಗೆ ಪ್ರತಿಯೊಂದು ಅಂಶಗಳಲ್ಲೂ ಒಂದೇ ತೆರನಾಗಿದ್ದುದರಲ್ಲಿ ಕಾಣಬಹುದು. ಇವುಗಳನ್ನು ಪ್ರಾಣಿಗಳ ಚರ್ಮ ಇಲ್ಲವೇ ಗಿಡದ ತೊಗಟೆಯಲ್ಲಿ ಮೊದಲಿಗೆ ಚಿತ್ರಿಸಿ ಚಿತ್ರದ ಭಾಗವನ್ನು ಕತ್ತರಿಸಿಕೊಂಡು ಅದನ್ನು ಬಂಡೆಯ ಮೇಲಿಟ್ಟು ಕತ್ತರಿಸಿದ ಭಾಗಕ್ಕೆ ಬಣ್ಣ ತುಂಬಿ ರಚಿಸಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಬಾಗಲಕೋಟೆ ಜಿಲ್ಲೆಯ ಚಿತ್ರಗಳಲ್ಲಿ ಈ ತಂತ್ರಗಳು ಕಂಡುಬರುವುದಿಲ್ಲ. ಮೊದಲಿಗೆ ತಿಳಿಸಿರುವಂತಹ ವರ್ಣಗಟ್ಟಿಗಳಿಂದ ನೇರವಾಗಿ ಇಲ್ಲವೆ ಕುಂಚ ಮತ್ತು ಕೈಗಳನ್ನು ಬಳಸಿಕೊಂಡು ಚಿತ್ರರಚನೆ ಮಾಡಲಾಗಿದೆ ಎನ್ನಬಹುದು.

**iii. ಶಿಲಾಶ್ರಯ ಚಿತ್ರಗಳ ವಸ್ತುವಿಷಯ**

**ಅ. ಪ್ರಾಣಿ ಚಿತ್ರಗಳು**

**೧. ಎತ್ತು**

ಬಾದಾಮಿ ಸಮೀಪದ ಸಿಡಿಲಫಡಿಯಲ್ಲಿರುವ ಕಂದು ಬಣ್ಣದ ಬಂಡೆಯ ಮೇಲೆ ಬಿಳಿಯ ಬಣ್ಣದಿಂದ ಎತ್ತಿನ ಚಿತ್ರವನ್ನು ಚಿತ್ರಿಸಲಾಗಿದೆ. ಎತ್ತೊಂದು ಮೇಲ್ಮುಖವಾಗಿ ಚಲಿಸುತ್ತಿದೆ. ನೀಳವಾದ ಎರಡು ಕೋಡುಗಳು ಹಿಂದಕ್ಕೆ ಬಾಗಿದ್ದು, ಮುಖದ ಆಕೃತಿಯನ್ನು ಇಣಿಯಿಂದ ಬೆನ್ನವರೆಗೂ ಚಿತ್ರಿಸಿದ್ದು, ಕಾಲಗಳು ಅಪೂರ್ಣವಾಗಿವೆ. ಕೋಡುಗಳು ಎರಡು ಎಂಬಂತೆ ಜೊತೆಯಾಗಿ ಆಯಾಮದಲ್ಲಿ ಚಿತ್ರಿಸಲಾಗಿದೆ. ಎತ್ತಿನ ಹಿಂಬದಿಯಲ್ಲಿ ಬಲಗೈ ಮೇಲೆ ಮಾಡಿ ಹಿಂದೆ ನೋಡಿದ ಮನುಷ್ಯಾಕೃತಿಯೆಂದು ಕಾಣುತ್ತದೆ. ಚಿತ್ರವು ಕಂದು ಬಣ್ಣದ ಅಖಂಡ ಬಂಡೆಯ ಮೇಲೆ ಚಿತ್ರಿಸಲಾಗಿದ್ದು, ಕಂದು ಬಣ್ಣದ ಚಿತ್ರವಿರುವ ಜಾಗೆಯನ್ನು ಬಿಟ್ಟು ಉಳಿದೆಲ್ಲಾ ಕಡುಗಪ್ಪೆಯ ಕಲ್ಲುಪ್ರದೇಶವಾಗಿದ್ದು, ಎತ್ತು ಎಂಬುದು ಸ್ಪಷ್ಟವಾಗಿ ಗೋಚರವಾಗುತ್ತದೆ.

ಮುನ್ನುಗ್ಗುತ್ತಿರುವ ಎತ್ತಿನ ಇಣಿಯನ್ನು ನೋಡಿದರೆ ಕೊಬ್ಬಿದ ಗೂಳಿಯಂತೆ ಭಾಸವಾಗುತ್ತದೆ. ಮುಂದಿರುವ ಹಿಂದೆ ಬಾಗಿರುವ ಮನುಷ್ಯಾಕೃತಿಯನ್ನು ಇರಿಯಲು ಧಾವಿಸಿದಂತೆ ಕಂಡುಬರುತ್ತದೆ. ದೂರದಲ್ಲಿ ಎರಡು ಮನುಷ್ಯಾಕೃತಿಗಳು ಬೆನ್ನು ತಿರುಗಿಸಿ ಹೋಗುವಂತೆ ಕಾಣುತ್ತವೆ. ಒಟ್ಟು ಚಿತ್ರವು ಆ ಕಾಲದ ಪ್ರಾಣಿಗಳೊಂದಿಗೆ ಮನುಷ್ಯ ಸಂಬಂಧಗಳು ಮಾನವನು ಪ್ರಾಣಿಗಳನ್ನು ಪಳಗಿಸುವ, ಅದಕ್ಕೆ ಒಗ್ಗದ ಪ್ರಾಣಿಗಳು ಕುಪಿತಗೊಂಡು ಇರಿಯುವ, ಕಚ್ಚುವ, ಸೇಡು ತೀರಿಸಿಕೊಳ್ಳುವ ಚಿತ್ರಣದಂತಿದೆ ಎಂದು ಅನಿಸುತ್ತದೆ. ಮಾನವ ತನ್ನ ಅನುಭವಜನ್ಯ ಅಭಿವ್ಯಕ್ತಿಯನ್ನು ಏಕವರ್ಣದಿಂದ ಕತೆ ಹೇಳುವಂತೆ ಚಿತ್ರಿಸಿದ್ದು, ಆದಿಕಾಲದ ಚಿತ್ರಕಲಾ ಅಭಿವ್ಯಕ್ತಿ ಸ್ವರೂಪವನ್ನು ನಿದರ್ಶಿಸುವಂತಿದೆ.

---

೮. ಎಸ್.ಕೆ. ಪಾಂಡೆ, ಇಂಡಿಯನ್ ರಾಕ್ ಆರ್ಟ್, ಪು. ೩೫.

೨. ಸಿಂಹ

ಸಿಡಿಲಫಡಿಯಲ್ಲಿರುವ ಬಂಡೆಯ ಮೇಲೆ ಸಿಂಹವೊಂದು ಮನುಷ್ಯನನ್ನು ಸಂಹರಿಸಿ ತಿಂದು ಮೂಳೆಗಳನ್ನು ಸಾಕ್ಷಿಯಾಗಿ ಬಿಟ್ಟು ವಿಮುಖವಾಗಿ ಚಲಿಸುತ್ತಿರುವ ಚಿತ್ರವಿದೆ. ಸಿಂಹದ ಚಿತ್ರ ಕಪ್ಪು ಬಣ್ಣದಿಂದ ರಚಿನೆಗೊಂಡಿದ್ದು, ದುಂಡನೆಯ ಬಾಲ, ಹಿಂದಿನ ಎರಡು ಕಾಲುಗಳು, ಕೆದರಿದ ಕೂದಲುಗಳನ್ನು ಶಿಷ್ಟ ಚಿತ್ರಗಳಂತೆ ನೀಟಾಗಿ ಗೆರೆ ಕೊರೆಯಲಾಗಿದೆ. ಮುಖದ ಚಿತ್ರ ಅಸ್ಪಷ್ಟವಾಗಿದ್ದು, ಗೆದರಿದ ಕೂದಲುಗಳಿಂದ ಮಾತ್ರ ಸಿಂಹವೆಂದು ಪರಿಗಣಿಸಬಹುದು. ಜೊತೆಯಲ್ಲಿ ಮನುಷ್ಯಾಕೃತಿಯಲ್ಲಿ ತಲೆಬುರುಡೆ, ಕೈಮೂಳೆ, ಅಸ್ಥಿಪಂಜರ, ಕಾಲಿನ ಎಲುಬುಗಳ ಕೆಲಭಾಗ ಕಾಣುವುದಲ್ಲದೆ ಇನ್ನೊಂದು ತಲೆಬುರುಡೆಯೂ ಸ್ಪಷ್ಟವಾಗಿ ಕಾಣುತ್ತಾ ಶರೀರದ ಕೆಳ ಭಾಗವೆಲ್ಲಾ ನಶಿಸಿ ಹೋಗಿದೆ.

ಕಂದು ಬಣ್ಣದ ಶಿಲೆಯ ಮೇಲೆ, ಬಿಳಿಯ ಪದರು ಇದ್ದು, ಅದರ ಮೇಲೆ ಕಪ್ಪು ಶಾಹಿಯಂತಹ ಪದಾರ್ಥದಿಂದ ರಚಿತವಾದ(ಸಿಂಹ?) ಚಿತ್ರ. ಮನುಷ್ಯಾಕೃತಿಗಾಗಿ ಮೂಳೆಗಳ ಬಿಳಿಯ ಬಣ್ಣವನ್ನು ಬಳಸಿದ್ದು, ಇಲ್ಲಿನ ವಿಶೇಷತೆ. ಅಲ್ಲಲ್ಲಿ(ಸಿಂಹ?)ದ ಜೊತೆಗೆ ಸೆಣಸಾಡಿ ಸಾವನ್ನಪ್ಪಿದ ಮನುಷ್ಯನ ಕತೆ ಹೇಳುವಂತಹ ಚಿತ್ರ ಇದಾಗಿದೆ. ಇಡೀ ಚಿತ್ರವು ಮನುಷ್ಯ ಪ್ರಾಣಿಯನ್ನು ಬೇಟೆಯಾಡುವುದು ಒಂದೆಡೆಯಾದರೆ, ಪ್ರಾಣಿಗಳೇ ಬೇಟೆಗಾರರನ್ನು ಕೊಂದು ತಿಂದ ಭಯಾನಕ ಅನಿಸಿಕೆಗಳನ್ನು ವ್ಯಕ್ತಪಡಿಸುವಂತಿದೆ. ಬಾದಾಮಿ ಪರಿಸರದಲ್ಲಿ ಸಿಂಹ, ಸಿಂಹದ ಬೇಟೆ ಅಷ್ಟು ಸಂಭವನೀಯವೆನಿಸದು, ಪರಿಸರ ಅಲಕ್ಷಿಸಿ ಹೇಳುವುದಾದರೆ ಅದು ಏದು ಅಥವಾ ಮುಳ್ಳುಹಂದಿಯಾಗಿರ ಬಹುದಾಗಿದೆ. ಆದ್ದರಿಂದ ಮುಳ್ಳುಹಂದಿಯ ಬೇಟೆ ಪ್ರಸಂಗದ ಚಿತ್ರಣವಾಗಿರುವಂತಿದೆ. ಕೇವಲ ಎರಡು ಬಣ್ಣಗಳಿಂದ ಕಪ್ಪು-ಬಿಳುಪಿನ ಪ್ರಭಾವ ಭಾವಗಳನ್ನು ತೋರ್ಪಡಿಸುವ ಚಿತ್ರವಿದಾಗಿದೆ.

೩. ಜಿಂಕೆಗಳು

ಬಾದಾಮಿ ಪರಿಸರದ ಕುಟಕನಕೇರಿ ಬೆಟ್ಟದಲ್ಲಿರುವ ಕಲ್ಲಾಸರೆಯಲ್ಲಿ ಮೈದೆಳೆದ ಆದಿಮಾನವನ ಭಾವನಾತ್ಮಕ ಚಿತ್ರ ಈ ಜಿಂಕೆಗಳ ಸಾಲು. ಜಿಂಕೆಗಳು ಒಂದು, ಎರಡು, ಮೂರು ಹೀಗೆ ಒಂದರ ಹಿಂದೊಂದು ಸಾಲುಗಟ್ಟಿ ಹೊರಟಂತೆ ಕಾಣುತ್ತವೆ. ಜಿಂಕೆಯ ಕೊಂಬು ಟಿಸಿಲೊಡೆಯದಿದ್ದರೂ, ಬೆನ್ನ ಮೇಲಿರುವ ಚುಕ್ಕೆಗಳಿಂದ ಜಿಂಕೆ ಎನ್ನುವುದು ಖಚಿತವಾಗುತ್ತದೆ. ಕಾಲಿಡುವ ಗಾಂಭೀರ್ಯ ಬಾಲ, ಮುನ್ನುಗ್ಗುವ ನೋಟ ಏನನ್ನೋ ಕಂಡು ಆಹಾರಕ್ಕಾಗಿ ಹುಡುಕಲು ಹೊರಟಂತೆ ಕಾಣುತ್ತವೆ. ಇನ್ನೊಂದು ಜಿಂಕೆ ಅದರ ಕೆಳಭಾಗದಲ್ಲಿ ಮುಖ ಕೆಳಗೆ ಮಾಡಿ ಆಹಾರವನ್ನು ಅರಸುತ್ತಿರುವಂತೆ ಭಾಸವಾಗುತ್ತದೆ. ಜಿಂಕೆಗಳ ಮುಂದೆ ಮನುಷ್ಯಾಕೃತಿಗಳಂತೆ ಕಾಣುವ ಆಕೃತಿಗಳಿವೆ. ಆದಿಮಾನವನು ಬೇಟೆಯ ಸಾಂಪ್ರದಾಯಿಕ ಕಟ್ಟಳೆಗಳಲ್ಲಿ ಹಾಗೆ ಕೆಲವು ರೇಖೆಗಳನ್ನು ಹಾಕುವುದು ಬೇಟೆಯ ಪ್ರಾಣಿಗಳು ತಮಗೆ ದಕ್ಕಲಿ ಎಂದು ಬೇಟೆಗೆ ಹೋಗುವ ಮುನ್ನ ಆ ಪ್ರಾಣಿಗಳ ಚಿತ್ರವನ್ನು ಬರೆದು ಹೋಗುತ್ತಿದ್ದುದು, ಅದರ ಹಿಂದೆ ಆ ಪ್ರಾಣಿ ತನ್ನ ವಶವಾಗುತ್ತದೆ ಎಂಬ ನಂಬಿಕೆಯಿಂದ ಬೇಟೆಗೆ ಹೋಗುತ್ತಿದ್ದರೆಂಬುದು ಪ್ರಾಚ್ಯಚಿತ್ರ ತಜ್ಞರ ಅಭಿಪ್ರಾಯವಾಗಿದೆ.

ಅತೀ ಕಂದು ಬಣ್ಣದ ದುಂಡನೆಯ ದೀರ್ಘ ವರ್ತುಳಾಕಾರದಲ್ಲಿ ರಚಿತಗೊಂಡ ಜಿಂಕೆಯು ಸಾಲನ್ನು ಬಿಟ್ಟು ಉಳಿದೆಲ್ಲಾ ಬಂಡೆ ಬಿಳಿ ಮಿಶ್ರಿತ ಕಂದು ಬಣ್ಣದ್ದಾಗಿದೆ. ಅರ್ಧ ಚಿತ್ರವು ತಗ್ಗು ಭಾಗದಲ್ಲಿದ್ದು, ಇಂದಿನವರೆಗೆ ಸ್ಪಷ್ಟವಾಗಿ ಗೋಚರಿಸುವುದಕ್ಕೆ ಕಾರಣವಾಗಿರಬಹುದು. ಒಟ್ಟು ಚಿತ್ರವು ಬೇಟೆಯ ಆಂತರ್ಯವನ್ನು ಬಿಂಬಿಸುವಂತಿದ್ದು, ಜಿಂಕೆಯ ವೈಲಕ್ಷಣಗಳನ್ನು ಚಿತ್ರಿಸಿದ್ದು, ಆದಿಮಾನವನ ನಿರೀಕ್ಷಣಾ ದೃಷ್ಟಿಯನ್ನು ಎತ್ತಿ ತೋರುವಂತಿದೆ.

### ೪. ನರಿ

ಕುಟಕನಕೇರಿ ಬೆಟ್ಟದಲ್ಲಿರುವ ಅತೀ ಬಿಳಿ ಕಂದು ಪ್ರದೇಶದ ಕಲ್ಲುಬಂಡೆಯ ಮೇಲೆ(ನರಿ?)ಯೊಂದು ವಿಮುಖವಾಗಿ ಚಲಿಸುತ್ತಿರುವ ಚಿತ್ರದಂತಿದೆ. ಕೆಂಪು ಹೆಮಟೈಟ್ ಖನಿಜದ್ರವದಿಂದ ಚಿತ್ರಿಸಿದ(ನರಿ?)ಯ ಮೈಮೇಲೆಲ್ಲಾ ತ್ರಿಕೋನಾಕಾರಾದ ಗೆರೆಗಳನ್ನು ಎಳೆಯಲಾಗಿದೆ. ಹೀಗೆ ಗೆರೆ ಎಳೆದ ಮಾನವ ತನ್ನ ಬೇಟೆ ಖಚಿತಪಡಿಸಿಕೊಳ್ಳಲು ಮಂತ್ರ ಹಾಕಿದಂತೆ ಎಂದು ಭಾವಿಸುತ್ತಿದ್ದನಂತೆ ಎಂಬುದು ತಜ್ಞರ ಒಂದು ಅಭಿಪ್ರಾಯ.

ಇಡೀ ಬಂಡೆಯ ತುಂಬಾ ಒಂದೇ ಒಂದು ನರಿ ಅದೂ ತನಗೆ ಬೇಟೆಯಾಗಿ ದಕ್ಕಲೇಬೇಕೆಂಬ ಬಯಕೆಯನ್ನು ಅಭಿವ್ಯಕ್ತಪಡಿಸಿದ ಕಲಾತ್ಮಕ ಅಭಿವ್ಯಕ್ತಿ ಚಿತ್ರ ಇದಾಗಿದೆ. ಇನ್ನೊಂದು ವಿಚಾರ, ಚಿತ್ರಿತವಾದ ಪ್ರಾಣಿಯು ನರಿಯಾಗಿರದೆ ಮೈತುಂಬ ಪಟ್ಟಿಗಳಿರುವ ಕಿರುಬ ಆಗಿರಬಹುದೆನಿಸುತ್ತದೆ.

### ೫. ಸಾರಂಗ

ಕುಟಕನಕೇರಿ ಬೆಟ್ಟದಲ್ಲಿರುವ ಕಪ್ಪುಕಂದು ಬಣ್ಣದ ಕಲ್ಲಾಸರೆಯಲ್ಲಿ ಸಾರಂಗವೊಂದು ಮುಂಜೋಲಿಯಾಗಿ ಏನನ್ನೋ ತಿನ್ನಲು ಬಾಯಿ ಹಾಕಿದೆ. ಅದರ ಕೋಡುಗಳನ್ನು ಮುಂದಕ್ಕೆ ಬಾಗಿದಂತೆ ಚಿತ್ರಿಸಲಾಗಿದೆ. ಸಾರಾಂಗದ ಎರಡೇ ಕಾಲುಗಳು, ಒಂದೇ ಕೋಡು, ಒಂದು ಬದಿಯ ಕಲ್ಪನೆಯನ್ನು ಕೊಡುವಂತೆ ಚಿತ್ರಿಸಲಾಗಿದೆ. ಏಕಾಂಗಿಯಾದ ಸಾರಂಗವು ಆಹಾರ ತಿನ್ನುವುದರಲ್ಲಿ ಮಗ್ನವಾಗಿರುವಂತೆ ಭಾಸವಾಗುತ್ತದೆ.

## ಬ. ಮನುಷ್ಯನ ಚಿತ್ರಗಳು

### ೧. ಕುಣಿಯುತ್ತಿರುವ ಮನುಷ್ಯ

ಕುಟಕನಕೇರಿ ಬೆಟ್ಟದಲ್ಲಿರುವ ಬಿಳಿದಾದ ಕಲ್ಲು ಪದರಿನ ಮೇಲೆ, ಕಪ್ಪು ಮಿಶ್ರಿತ ಕೆಂಪು ಹೆಮಟೈಟ್ ಖನಿಜದ್ರವದಿಂದ ಚಿತ್ರಿತಗೊಂಡ ಮನುಷ್ಯಾಕೃತಿಯು ಆದಿಮಾನವನ ಸಂತಸದ ಕ್ಷಣವೊಂದನ್ನು ತೋರುವಂತಿದೆ. ಬೇಟೆಯಿಂದಲೋ ಅಥವಾ ಇನ್ಯಾವುದೋ ಕಾರಣಕ್ಕಾಗಿ ಸಂತಸಗೊಂಡ ಮನುಷ್ಯ ಕೈಮೇಲೆ ಮಾಡಿ, ಮೊಣಕಾಲುಗಳನ್ನು ಎತ್ತಿ ನರ್ತಿಸುವಂತೆ ಚಿತ್ರಿಸಲಾಗಿದೆ. ದಪ್ಪನೆಯ ಉದ್ದವಾದ ಕುತ್ತಿಗೆಯನ್ನು ಅದರ ಮೇಲೆ ಕುಣಿತದ ತನ್ಮಯತೆಯನ್ನು ಸೂಚಿಸುವಂತೆ ಒಂದು ಬದಿಗೆ ಹೊರಳಿ ಮೇಲ್ಮುಖ ಮಾಡಲಾಗಿದೆ. ಶರೀರದ ಇನ್ಯಾವುದೇ ಭಾಗವನ್ನು ನೈಜವಾಗಿ ತೋರಿಸದೇ ಕೇವಲ ೩-೪ ರೇಖೆಗಳಲ್ಲಿ

ಕುಣಿದು ಸಂತೋಷಿಸುವ ಭಾವನೆಯನ್ನು ತೋರ್ಪಡಿಸಿದ್ದಾನೆ. ಕೆಲವೇ ರೇಖೆಗಳ ಮೂಲಕ ಆನಂದದ ಕ್ಷಣವನ್ನು ಸೆರೆಹಿಡಿದಿರುವುದು ಗಮನಾರ್ಹವಾಗಿದೆ.

**೨. ಬೇಟೆಗೆ ಹೊರಟ ಮನುಷ್ಯರು**

ಇದು ಕರಡಿಗುಡ್ಡದಲ್ಲಿರುವ ಚಿತ್ರವಾಗಿದ್ದು, ಈ ಹಿಂದೆ ಹೇಳಿರುವ ಚಿತ್ರದಂತೆ ಕೇವಲ ರೇಖಾಪ್ರಧಾನವಾಗಿರದೇ ಶರೀರದ ಎಲ್ಲಾ ಅಂಗಾಂಗಗಳ ದಪ್ಪವನ್ನು ತೋರಿಸಲು ಆದಿಮಾನವ ಇಲ್ಲಿ ಪ್ರಯತ್ನಿಸಿದಂತಿದೆ. ಜೊತೆಗೆ ಎಲ್ಲಿಗೋ ಹೊರಟಂತೆ ಒಂದು ಆಕೃತಿ ಸ್ಪಷ್ಟವಾಗಿದ್ದು, ಉಳಿದೆಲ್ಲವೂ ಅಸ್ಪಷ್ಟವಾಗಿವೆ. ಇಲ್ಲಿ ಬಹುತೇಕ ಗುಂಪುಕುಣಿತ ಇರಬಹುದೇನೋ ಎನಿಸುತ್ತದೆ. ಕಲ್ಲಿನ ವರ್ಣವು ವಿಶಿಷ್ಟವಾಗಿದ್ದು ತೀರಾ ಕೆಂಪು ಬಣ್ಣವನ್ನು ಕಲ್ಲಿಗೆ ಲೇಪಿಸಿದಂತೆ ಭಾಸವಾಗುತ್ತದೆ. ಕಪ್ಪು ಮಿಶ್ರಿತ ಕೆಂಪು ವರ್ಣದಿಂದ ರೇಖೆಗಳನ್ನು ಎಳೆಯಲಾಗಿದೆ.

ಇನ್ನೊಂದು ಆಕೃತಿಯಲ್ಲಿ ಕೈ ಮುಂದೆ ಮಾಡಿ ಹೆಗಲ ಮೇಲೆ ಬಡಿಗೆಯಂತಹ ವಸ್ತುವನ್ನು ಕೊಂಡೊಯ್ಯುತ್ತಿರುವಂತೆ ಭಾಸವಾಗುತ್ತದೆ.

**೩. ಕೈ ಕಟ್ಟಿದ ಮನುಷ್ಯ**

ಇದು ಕರಡಿಗುಡ್ಡದಲ್ಲಿರುವ ಚಿತ್ರವಾಗಿದ್ದು, ಬಿಳಿ ಮಿಶ್ರಿತ ಕಂದುವರ್ಣದಲ್ಲಿ ರಕ್ತದಂತಹ ಕೆಂಪುವರ್ಣದಿಂದ ಕೈಕಟ್ಟಿ ಸಮತೋಲನವಾಗಿ ನಿಂತ ಮನುಷ್ಯನ ಚಿತ್ರ ಇದಾಗಿದೆ. ಒಂದೇ ಕಾಲನ್ನು ತೋರುವುದರೊಂದಿಗೆ ಇನ್ನೊಂದು ಕಾಲೂ ಅದರೊಂದಿಗೆ ಗೌಣವಾದಂತೆ ಕಾಣುತ್ತದೆ. ಕುತ್ತಿಗೆಯ ಭಾಗವೇ ಇಲ್ಲದೇ ನೇರವಾಗಿ ಕೈಯ ನಂತರ ಮುಖಕ್ಕೆ ದುಂಡಾಕಾರದಲ್ಲಿ ವರ್ಣವನ್ನು ಲೇಪಿಸಲಾಗಿದೆ.

ಇಲ್ಲಿ ಕಂಡುಬರುವ ಅತೀ ಮುಖ್ಯ ಅಂಶವೆಂದರೆ ಕೈಕಟ್ಟಿ ಒಂದೇ ಕಾಲಿನ ಮೇಲೆ, ಸ್ವಲ್ಪ ಬಾಗಿ ಬೀಳದಿರುವಂತೆ ಭಾಸವಾಗುವ ಚಿತ್ರ ಇದಾಗಿದೆ. ಕೇವಲ ೨ ರೇಖೆಗಳು ಒಂದನ್ನೊಂದು ಛೇದಿಸಿ ಮೇಲೊಂದು ರುಂಡ ಸೃಷ್ಟಿಸಿದ ಕಲಾತ್ಮಕತೆ ಚಿತ್ರದಲ್ಲಿ ಕಾಣುತ್ತದೆ. ಅತೀ ಸೂಕ್ಷ್ಮವಾಗಿ ಗಮನಿಸಿದರೆ ಮಾತ್ರ ಇದು ಮನುಷ್ಯಾಕೃತಿ ಎಂದು ಕಾಣುತ್ತದೆ. ಬೇರೆ ಬೇರೆ ಕಡೆ ತಿರುಗಿಸಿ ನೋಡಿದರೆ ಇದು ಮನುಷ್ಯಾಕೃತಿ ಅಲ್ಲವೆನಿಸುವಷ್ಟು ವಿಶಿಷ್ಟವಾಗಿದೆ.

**೪. ಹೆಜ್ಜೆ ಹಾಕುವ ಮನುಷ್ಯರು**

ಬಾದಾಮಿ ಪರಿಸರದ ಉತ್ತರ ಗುಡ್ಡದಲ್ಲಿರುವ ತೀರ ನೀಲ ಮಿಶ್ರಿತ ಕಪ್ಪುವರ್ಣದ ಬಂಡೆಯ ಮೇಲೆ ಬಿಳಿಯ ಸುಣ್ಣದ ಕಲ್ಲಿನಿಂದ ರಚಿತಗೊಂಡ ರೇಖಾಚಿತ್ರಗಳು ಆದಿಮಾನವನ ಸಾಮೂಹಿಕ ಕಲಾಪವನ್ನು ಎತ್ತಿ ತೋರುತ್ತದೆ. ಕೈಕೈ ಹಿಡಿದು ಹೆಜ್ಜೆ ಹಾಕುವ ಮೂರು ಜನ ಒಂದೆಡೆಯಾದರೆ ದೂರದಲ್ಲಿ ವಿಮುಖವಾಗಿ ಚಲಿಸುವ ಒಬ್ಬಂಟಿ ಮನುಷ್ಯನ ಅಸ್ಪಷ್ಟವಾದ ಚಿತ್ರದೊಂದಿಗೆ ಇನ್ನೂ ಹಲವಾರು ಆಕೃತಿಗಳು ಬಿಳಿಯ ವರ್ಣದಲ್ಲಿ ಕಂಡುಬರುತ್ತವೆ. ಮೂರೂ ಜನರ ಮೇಲ್ಭಾಗದಲ್ಲಿ ಕೈಯಲ್ಲಿ ಏನನ್ನೋ ಹಿಡಿದುಕೊಂಡು ಹರ್ಷಿತನಾಗಿ ಹೆಜ್ಜೆ ಹಾಕಿದ ಅನುಭವ ನೀಡುವ ಚಿತ್ರ ಇದಾಗಿದೆ.

ಮೇಲ್ಭಾಗದಲ್ಲಿ ದೀರ್ಘ ವರ್ತುಲಾಕಾರದ ರೇಖೆ ಇದ್ದು, ಸೂರ್ಯನಂತೆ ಭಾಸವಾಗುತ್ತದೆ. ಒಟ್ಟು ಚಿತ್ರದ ಆಶಯವು ಗೆಲುವಿನ ಸಂಕೇತ, ಸಂತೋಷ ಕೂಟದಲ್ಲಿ ಕೈಕೈ ಹಿಡಿದು ನರ್ತಿಸುವ ಚಿತ್ರ ಇದಾಗಿದೆ. ಅತೀ ಹೆಚ್ಚು ಆಕೃತಿಗಳನ್ನು ಹೊಂದಿದ ಬಿಳಿಯ ಬಣ್ಣದ ರೇಖಾಚಿತ್ರಗಳಿಗೆ ಇದು ಒಂದು ಉದಾಹರಣೆಯಾಗಿದೆ.

**ಕ. ಬೇಟೆಯ ಚಿತ್ರಗಳು**

**೧. ಬೇಟೆಯಾಡುವ ಮನುಷ್ಯ**

ಕುಟಕನಕೇರಿ ಬೆಟ್ಟದಲ್ಲಿರುವ ಬಿಳಿ ಮಿಶ್ರಿತ ಕಂದುವರ್ಣದಲ್ಲಿ ಉದ್ದನೆಯ ಶರೀರದ ವ್ಯಕ್ತಿಯೊಬ್ಬ ಹಿಂದೆ ಬಾಗಿ ಎಡಗೈಯಲ್ಲಿ ಹಿಡಿದ ಆಯುಧದಿಂದ ತನ್ನ ಕಾಲುಗಳ ಬಳಿ ಇರುವ ಜಿಂಕೆಯನ್ನು ಚುಚ್ಚುತ್ತಿರುವಂತೆ ಭಾಸವಾಗುತ್ತದೆ. ಶರೀರ ಸಮತೋಲನಕ್ಕಾಗಿ ಹಿಂದೆ ಬಾಗಿ ಬಲಗೈಯನ್ನು ೯೦ ಅಂಶದಷ್ಟು ಮಡಿಚಿ ಎಡಗಾಲನ್ನು ಮುಂದಿಟ್ಟು, ಬಲಗಾಲನ್ನು ಹಿಂದೆ ಚಾಚಿ ಬೇಟೆ ಆಡುವ ಚಿತ್ರ ಇದಾಗಿದೆ.

ದೂರದಲ್ಲಿ ಜಿಂಕೆಯೊಂದು ಹಿಂದೆ ನೋಡುತ್ತ ತಪ್ಪಿಸಿಕೊಂಡಂತೆ ಓಡುತ್ತಿರುವುದು, ಸಿಕ್ಕಿಹಾಕಿಕೊಂಡ ಜಿಂಕೆ ತೆಪ್ಪಗಾಗಿರುವುದು ಈ ಚಿತ್ರದ ವಿಶೇಷತೆಯಾಗಿದೆ.

**೨. ಬೇಟೆಗಾಗಿ ಸಮೂಹ ತಂತ್ರ**

ಕರಡಿಗುಡ್ಡದಲ್ಲಿರುವ ಈ ಚಿತ್ರದಲ್ಲಿ ಸಾಮೂಹಿಕವಾಗಿ ಪ್ರಾಣಿಯೊಂದನ್ನು ಬೇಟೆಯಾಡುತ್ತಿರುವಂತೆ ಚಿತ್ರಿಸಲಾಗಿದೆ. ಹಲವಾರು ಮನುಷ್ಯಾಕೃತಿಗಳನ್ನು ಸಾಂಕೇತಿಕವಾಗಿ ಚಿತ್ರಿಸಲಾಗಿದ್ದು, ಪ್ರಾಣಿಯನ್ನು, ಬೇಟೆಯಾಡಲು ಸಿದ್ಧರಾಗಿ ನಿಂತಿರುವಂತೆ ಚಿತ್ರಿಸಲಾಗಿದೆ. ದೂರದಿಂದ ಪ್ರಾಣಿಯನ್ನು ತನ್ನ ಸಮೂಹವಿರುವ ಕಡೆಗೆ ಓಡಿಸಿಕೊಂಡು ಬಂದ ಇಬ್ಬರು ಪ್ರಾಣಿಯ ಹಿಂದೆ ಬಿಲ್ಲು, ಬಾಣವನ್ನು ಹಿಡಿದು ನಿಂತಿದ್ದಾರೆ. ಪ್ರಾಣಿಯು ತಪ್ಪಿಸಿಕೊಂಡು ಹೋಗದಂತೆ ಒಂದು ಬದಿಯಲ್ಲಿ ತಡೆಯನ್ನು ನಿರ್ಮಿಸಿದ್ದಾರೆ. ಮತ್ತೊಂದು ಬದಿಯಲ್ಲಿ ಮನುಷ್ಯರು ಆಯುಧಗಳನ್ನು ಹಿಡಿದು ಸುತ್ತುವರಿದು ನಿಂತಿದ್ದಾರೆ. ಪ್ರಾಣಿಯು ಮುಂದೆ ಹೋಗದಂತೆ ಇಬ್ಬರು ಮನುಷ್ಯರು ತಮ್ಮ ಎರಡೂ ಕೈಗಳನ್ನು ಅಗಲಿಸಿ ಪ್ರಾಣಿಯ ಮುಂದೆ ನಿಂತಿದ್ದಾರೆ. ಒಬ್ಬರ ಹಿಂದೊಬ್ಬರಂತೆ ನಿಂತಿದ್ದು, ಸುತ್ತುವರಿದು ನಿಂತಿರುವ ಪ್ರತೀ ಮಾನವಾಕೃತಿಗಳ ಕೈಯಲ್ಲಿ ಖಡ್ಗ ಹಾಗೂ ಗುರಾಣಿಗಳಂತಹ ಆಯುಧಗಳಿವೆ. ಹೀಗೆ ಸಾಮೂಹಿಕ ಬೇಟೆಗಾರರ ಮಧ್ಯದಲ್ಲಿ ಪ್ರಾಣಿಯೊಂದು ಸಿಲುಕಿಕೊಂಡಿದ್ದರೆ, ಈ ಸ್ಥಳದಿಂದ ಸ್ವಲ್ಪ ದೂರದಲ್ಲಿರುವ ಪ್ರಾಣಿಗಳು ಹೆದರಿ ಕಕ್ಕಾಬಿಕ್ಕಿಯಾಗಿ ಓಡುತ್ತಿರುವಂತೆ ಚಿತ್ರಿಸಲಾಗಿದೆ.

**೩. ಬೇಟೆಗಾಗಿ ಬಲೆ**

ಬಾದಾಮಿ ಪರಿಸರದ ಸೀತಿ ಡೋಣಿ ಒಂದು ಅಪರೂಪದ ತಾಣ. ಇಲ್ಲಿ ೧೨ ತಿಂಗಳು ತಂಪಾದ ನೀರು ಕುಡಿಯಲು ಸಿಗುತ್ತದೆ. ಇಂಥ ವಿಶಿಷ್ಟ ತಾಣವನ್ನು ಆಯ್ದುಕೊಂಡ ಆದಿಮಾನವ ಬೇಟೆಗಾಗಿ ಗೊಂದಲಮಯ ವಾತಾವರಣವನ್ನು ಸೃಷ್ಟಿಸಿದ್ದೇನೆಂದು ತೋರುವಂತೆ ಪ್ರಾಣಿಗಳನ್ನು ಸೆರೆ ಹಿಡಿಯಲು ಬಾಗಿದ ಬೃಹತ್ ಬಂಡೆಯ ಮೇಲೆ ರೇಖೆಗಳ ಸುರಿಮಳೆಯನ್ನೇ ಸುರಿಸಿದ್ದಾನೆ. ಅದರ ಒಳಗೆ ಸಿಕ್ಕಿಹಾಕಿಕೊಂಡ

ಪ್ರಾಣಿಗಳ ಆಕೃತಿಗಳನ್ನು ರಚಿಸಿದ್ದಾನೆ. ಜಿಂಕೆ, ಕಾಡುಹಂದಿ, ನರಿ ಮೊದಲಾದ ಪ್ರಾಣಿಗಳು ಆತ ಬೀಸುವ ಬಲೆಗೆ ಸಿಕ್ಕಿಹಾಕಿಕೊಂಡ ಒದ್ದಾಡುತ್ತಿರುವ ಚಿತ್ರ ಇದೆಂದು ಭಾಸವಾಗುತ್ತದೆ. ತೀರ ಕರಿದಾದ ಬಂಡೆಯ ಮೇಲೆ ಕಂಡೂ ಕಾಣದಂತೆ ಎಳೆದಿರುವ ರೇಖೆಗಳು ಆಕ್ರೋಶವನ್ನೂ ಸೂಚಿಸುವಂತಿವೆ. ದೂರದಲ್ಲಿ ನಿಂತು ತಾನು ಬರೆದ ಚಿತ್ರವನ್ನೇ ನೋಡಿ ಆನಂದಿಸಿರಬಹುದಾದ ಆದಿಮಾನವ ತನ್ನ ಬೇಟೆಯ ಕನಸುಗಳನ್ನು ಸಾಕಾರಗೊಳಿಸಿಕೊಂಡಿದ್ದಾನೆ.

**೪. ಬೇಟೆಗೆ ಹೊರಟ ಮನುಷ್ಯರು**

ಬಾದಾಮಿಯ ರಂಗನಾಥ ಬೆಟ್ಟದ ಹಿಂದಿರುವ ಮಾಸಿದ ತಿಳಿನೀಲಿ ವರ್ಣದಂತಿರುವ ಬಂಡೆಯ ಮೇಲೆ ಬಿಡಿಸಿದ ಅಪರೂಪ ಚಿತ್ರ ಇದಾಗಿದೆ. ತನ್ನ ಜೊತೆಗಿರುವ ಇನ್ನೋರ್ವನನ್ನು ಕರೆದುಕೊಂಡು ಎಡಗೈಯಲ್ಲಿ ಉದ್ದನೆಯ ಬಡಿಗೆಯಂತಹ ಆಯುಧವನ್ನು ಹಿಡಿದು ಹಿಂದೆ ನೋಡಿ ಜೊತೆಗಿರುವವನಿಗೆ ಏನನ್ನೋ ನಿರ್ದೇಶಿಸಿರುವಂತೆ ತೋರ್ಬೆರಳನ್ನು ತೋರಿ ಹೆಜ್ಜೆ ಹಾಕುತ್ತಿರುವ ಸನ್ನಿವೇಶ ಇದಾಗಿದೆ. ಜೊತೆಯಲ್ಲಿ ಸಾಗುವ ಇತರ ಮನುಷ್ಯಾಕೃತಿಗಳು ಅವರೊಂದಿಗೆ ಹೆಜ್ಜೆ ಹಾಕುತ್ತಿರುವಂತೆ ಚಿತ್ರಿಸಲಾಗಿದೆ. ಇನ್ನೊಂದು ವಿಶೇಷವೆಂದರೆ ಬಾಣಗಳನ್ನು ತುಂಬಿದ ಭತ್ತಳಿಕೆಯಂತಹ ವಸ್ತುವನ್ನು, ಆಯುಧಗಳನ್ನು ಬದಿಯಲ್ಲಿಟ್ಟಿರುವ ದೃಶ್ಯ ತುಂಬಾ ಸೊಗಸಾಗಿದೆ. ಚಿತ್ರ ಪ್ರಜ್ಞೆಯನ್ನುವರೆಗೆ ಹಚ್ಚುವಂತೆ ಮಾಡುವ ಕೃತಿ ಇದಾಗಿದೆ.

ಒಟ್ಟಿನಲ್ಲಿ ವಿಮರ್ಶಾತ್ಮಕವಾಗಿ ಅನುಭವಿಸಬಹುದಾದ ಮಾನವನ ಮೈವಳಿಕೆ, ಅದರಲ್ಲೂ ಪಟ್ಟಿಪಟ್ಟಿಯಾದ ನಕ್ಷೆಗಳು, ಉದ್ದವಾದ ಹೊಟ್ಟೆ ಮತ್ತು ಸೊಂಟದ ಭಾಗ ಆಕರ್ಷಣೆ ಎನಿಸುತ್ತದೆ. ಇಲ್ಲಿರುವ ವರ್ಣ ಮಾತ್ರ ನೀಲಿ ಇರುವುದು ಕಾಲಾನಂತರದ ಬಂಡೆಗೆ ಬಂದ ಭೂಳಸು ಅಥವಾ ವಿಶಿಷ್ಟವಾದ ಪದರು ಸೃಷ್ಟಿಯಾಗಿರಬಹುದು. ಏಕೆಂದರೆ ನೀಲವರ್ಣವನ್ನು ಸೃಷ್ಟಿಸುವ ಜಾಣ್ಮೆ ಇನ್ನೂ ಮಾನವನಿಗೆ ಬಂದಿರಲಾರದ ಕಾಲದ ಚಿತ್ರ ಇದಾಗಿದೆ. ಆಕೃತಿಗಳ ರೇಖೆಗಳು ಮಾತ್ರ ಎಂದಿನಂತೆ ಕಡುಕೆಂಪು ಬಣ್ಣದ್ದಾಗಿವೆ. ನೀಳ ದೇಹದ ಮನುಷ್ಯಾಕೃತಿಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿದೆ. ಬೇಟೆಯ ಚಿತ್ರವಾದ ಇದರಲ್ಲಿ ಮಾನವಾಕೃತಿಯ ಕಾಲಲ್ಲಿ ಪ್ರಾಣಿಗಳಿವೆ. ಬೇಟೆಗಾರರ ಮುಖ ಮತ್ತು ಮೈಮೇಲೆ ಬಣ್ಣದ ಗೆರೆಗಳನ್ನು ಅಲಂಕಾರದಂತೆ ಬರೆದುಕೊಂಡುದು ವಿಶೇಷವಾಗಿದೆ.

**೫. ಬೇಟೆಗಾಗಿ ಬಲೆ**

ಕುಟಕನಕೇರಿ ಬೆಟ್ಟದಲ್ಲಿರುವ ಬಾಗಿದ ಕಪ್ಪನೆಯ ಬಂಡೆಯ ಮೇಲೆ ನಕ್ಷಾವಿನ್ಯಾಸಗಳೊಂದಿಗೆ ಬಲೆಯ ಚಿತ್ರವನ್ನೂ ನೇಯ್ಯಲಾಗಿದೆ. ಇಲ್ಲಿಯೂ ಕೂಡ ಅಂಗಾತ ಮಲಗಿ ಬಲೆಗೆ ಸಿಕ್ಕಿ ಹಾಕಿಕೊಂಡ ಪ್ರಾಣಿ ಸಂಕುಲ ವಿಶೇಷ ಆಕರ್ಷಣೆಯನ್ನು ಹೊಂದಿದೆ. ಕೆಂಪು ಬಣ್ಣದಿಂದ V ಮತ್ತು W ಆಕರದ ನಕ್ಷೆಗಳನ್ನು ಒಂದೆಡೆ ಚಿತ್ರಿಸಲಾಗಿದೆ. ಅಖಂಡವಾದ ಚಿತ್ರದಲ್ಲಿ ಸಾಲಾಗಿ ಕೆಳಗೆ, ಮೇಲೆ ಕುಂಕುಮ ಬೊಟ್ಟಿನಂತೆ ವರ್ಣಲೇಪನ ಮಾಡಲಾಗಿದೆ. ಬಲೆಗೆ ಬಿದ್ದಿರುವ ಪ್ರಾಣಿಯನ್ನು ದೂರದಲ್ಲಿ ಮನುಷ್ಯ ನಿಂತು ವೀಕ್ಷಿಸುತ್ತಿರುವಂತೆ ಚಿತ್ರಿಸಲಾಗಿದೆ.

ಒಟ್ಟು ಚಿತ್ರದ ಆಶಯ ಪ್ರಾಣಿಗಳನ್ನು ಬಲೆಗೆ ಕೆಡಹಿ ಬೇಟೆಯಾಡಿ ಬೀಗುವ, ಸಂತೋಷಿಸುವ ಉದ್ದೇಶವಿದ್ದಂತಿದೆ. ಸುಂದರ ನಕ್ಷಾ ಮಾದರಿ ಪ್ರಾಣಿ ಬೇಟೆಗಾರ ಆದಿಮಾನವನನ್ನು ಒಟ್ಟಿಗೆ ತೋರಿಸುವ ಈ ಚಿತ್ರ ಬಲೆಗಳನ್ನು ಬಳಸಿಕೊಂಡು ಬೇಟೆಯಾಡಿದ್ದನ್ನು ನೈಜವಾಗಿ ಚಿತ್ರಿಸುವಂತಿದೆ. ಆದಿಮಾನವನ ನಿತ್ಯದ ಬದುಕು ಮೂಲತಃ ಬೇಟೆಯಾಧಾರಿತವಾಗಿದ್ದರೂ, ಚಿತ್ರಕಲೆ ಅವನ ಬದುಕಿನ ಅವಿಭಾಜ್ಯ ಅಂಗವಾಗಿತ್ತು ಎನ್ನುವಂತಿದೆ.

**ಕುಲ್ಹಳ್ಳಿ ಗೊಂಬಿಗುಡ್ಡದ ಶಿಲಾಶ್ರಯ ಚಿತ್ರಗಳು**

ಬಾಗಲಕೋಟೆ ಜಿಲ್ಲೆಯ ಆದಿಮಾನವನ ಶ್ರೀಮಂತ ನೆಲೆ ಕುಲ್ಹಳ್ಳಿ. ಇಲ್ಲಿ ಜನಜೀವನಕ್ಕೆ ಬೇಕಾಗುವ ಹವಾಮಾನ, ನೀರು, ಫಲವತ್ತಾದ ಭೂಮಿ ಇದರಿಂದಾಗಿ ಪ್ರಾಚೀನ ಕಾಲದಿಂದಲೂ ಮಾನವನು ಈ ಪುಟ್ಟ ಗುಡ್ಡಗಳಡಿ ವಾಸಿಸಿದ ಬಗ್ಗೆ ಪುರಾವೆಗಳಿವೆ. ಆದಾಗ್ಯೂ ಇಲ್ಲಿರುವ ಚಿತ್ರಗಳು ಪ್ರಾಗೈತಿಹಾಸಿಕ ಶಿಲಾಶ್ರಯ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಡಾ.ಅ.ಸುಂದರ ಅವರ ಪ್ರಕಾರ ಇದು ಯಾವ ಕಾಲದ್ದೆಂದು ಹೇಳಲು ಇದುವರೆಗೆ ನಿಚ್ಚಳವಾಗಿ ಸಾಧ್ಯವಾಗಿಲ್ಲ. ಜಮಖಂಡಿಯ ಖ್ಯಾತ ವೈದ್ಯ ಡಾ.ಎಚ್.ಜಿ. ದಡ್ಡಿ ಇವುಗಳ ರಕ್ಷಣೆಗೆ ಮಾಡಿದ ಮನವಿಯ ಲೇಖನಗಳನ್ನಾಧರಿಸಿ ಹೇಳುವುದಾದರೆ ಚಿತ್ರಗಳು ಸುಮಾರು ೨೦೦ರಿಂದ ೩೦೦ ವರ್ಷದ ಹಿಂದಿನವು ಆಗಿರಬಹುದೆಂದು ಹೇಳಬಹುದು.

ಈಗಿನ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಅಸಂಗಿ ಮತ್ತು ಕುಲ್ಹಳ್ಳಿ ಗ್ರಾಮಗಳ ನಡುವೆ ಒಂದು ಮೈಲು ಉದ್ದಳತೆಯ ಕರಿಕಲ್ಲಿನ ಗುಡ್ಡವಿದ್ದು, ಇದಕ್ಕೆ ಗೊಂಬಿಗುಡ್ಡ ಎಂದು ಕರೆಯುತ್ತಾರೆ. ಇಲ್ಲಿ ಪ್ರಾಚೀನ ಕಾಲದ ಜನರು ಕಲ್ಲಿನಲ್ಲಿ ಕೆತ್ತಿದ ಚಿತ್ರಗಳಿವೆ. ಈ ಸರಳ ಚಿತ್ರಗಳನ್ನು ಕಲ್ಲಿನ ಇಳಿಜಾರಿನ ಮೇಲೆ ಕೆತ್ತಿದ್ದು, ಅವು ಸುಮಾರು ೧/೮" ಆಳವಾಗಿವೆ ಈ ಚಿತ್ರಗಳಲ್ಲಿ ಕಾದಾಡುತ್ತಿರುವ ಗೂಳಿಗಳು, ಮನುಷ್ಯರು, ಒಂಟೆಗಳು, ಸವಾರರು, ಆನೆಗಳು, ಚಿಗರೆಗಳು, ಮಾನವನಿರ್ಮಿತ ವಸ್ತುಗಳು ಮತ್ತು ಪಲ್ಲಕ್ಕಿ ಹೊತ್ತವರ ಚಿತ್ರಗಳು ಕಾಣುತ್ತವೆ. ಈ ಚಿತ್ರಗಳಿಗೂ ಮತ್ತು ಬಳ್ಳಾರಿ ಸಮೀಪದ ಗುಪ್ಪಗಲ್ಲು ಗುಡ್ಡದಲ್ಲಿ ಕಾಣುವ ಚಿತ್ರಗಳಿಗೂ ಹೋಲಿಕೆ ಇರುವುದರಿಂದ ಇವು ಪ್ರಾಚೀನ(Pre-Historic) ಮಾನವನ ಕಾಲದ್ದು ಎಂದು ವಿದ್ವಾಂಸರಾದ ಶ್ರೀ ಆರ್.ಎಸ್. ಪಂಚಮುಖಿ ಅವರು ಅಭಿಪ್ರಾಯಪಡುತ್ತಾರೆ. ಇವು ಇತಿಹಾಸ ಪೂರ್ವದ ಚಿತ್ರಗಳಲ್ಲ ಎಂದು ವಾದಿಸುವವರಿಗೆ ಅವರು ಕೊಡುವ ಉತ್ತರ ಕಾಲಾನಂತರ ಅದೇ ಚಿತ್ರಗಳ ಜೊತೆಗೆ ಕೆಲವು ಹೊಸ ಚಿತ್ರಗಳು ಸೇರಿಕೊಂಡಿರಬಹುದು ಎಂದು ಅಬಿಪ್ರಾಯಪಡುತ್ತಾರೆ.

**ಗೊಂಬಿಗುಡ್ಡದ ಶಿಲಾಶ್ರಯ ಚಿತ್ರಗಳು**

**೧. ಆನೆಗಳು**

ಚಿತ್ರದಲ್ಲಿ ಆನೆಗಳು ದೊಡ್ಡಾನೆ, ಅದರ ಬೆನ್ನ ಮೇಲೆ ತೊಗಲಿನ ಹೊದಿಕೆ ಮೇಲೆ ಕುಳಿತಿರುವ ಚಿಕ್ಕ ಮನುಷ್ಯ ಆನೆಯ ಮುಂದೆ ಮೇಲೆ ವರ್ತುಲಾಕಾರದಲ್ಲಿ ಕೈ ಮೇಲೆ ಮಾಡಿದ ಮನುಷ್ಯ ಅಕಾರದಲ್ಲಿ ಆನೆಯಷ್ಟೇ ಎತ್ತರವಾಗಿದ್ದಾನೆ. ಆನೆ ಹೊರಟಿರುವ ದೃಶ್ಯ ಮುಂಭಾಗದಲ್ಲಾದರೆ ಸ್ವಲ್ಪ ದೂರದಲ್ಲಿರುವ ಇನ್ನೊಂದು ಆನೆ ಚಿಕ್ಕದಾಗಿ ಚಿತ್ರಿಸಲ್ಪಟ್ಟಿದೆ. ಚಿತ್ರದ ತಂತ್ರ ಹಾಗೂ ದೂರದ, ಸಮೀಪದ ದೊಡ್ಡ

ಮತ್ತು ಚಿಕ್ಕ ಚಿತ್ರ, ಒಂದೇ ತಟದಲ್ಲಿ ಸೃಷ್ಟಿಯಾಗಿರುವುದು ಆನೆಯ ಬೆನ್ನಮೇಲೆ ಚೌಕಡಿ ವಿನ್ಯಾಸವಿರುವ ಬಟ್ಟೆಯನ್ನು ಹಾಕಿ ಮೇಲೆ ಮನುಷ್ಯ ಕುಳಿತಿರುವ ದೃಶ್ಯ ಅಷ್ಟು ಹಳೆಯದೆನಿಸಲಾರದು.

**೨. ಎತ್ತು ಮತ್ತು ಮನುಷ್ಯ**

ಈ ಚಿತ್ರದಲ್ಲಿ ಮನುಷ್ಯನೊಬ್ಬ ಡಾಲು ಮತ್ತು ಖಡ್ಗವನ್ನು ಎತ್ತಿ ಹಿಡಿದಿದ್ದಾನೆ. ಎತ್ತಿ ಹಿಡಿದ ಖಡ್ಗದ ವಿನ್ಯಾಸವು ದುಂಡಗೆ ಅರ್ಧಚಂದ್ರಾಕೃತಿಯದಾಗಿದೆ. ಕೈಯಲ್ಲಿ ಹಿಡಿದ ಡಾಲು ಅದನ್ನು ಎದುರಾಳಿಗೆ ತೋರಿಸಿದ ರೀತಿ ವೀಕ್ಷಿಸಿದರೆ ಇದೂ ಕೂಡ ಅಷ್ಟು ಪ್ರಾಚೀನ ಎನಿಸಲಾರದು. ಅಲ್ಲದೇ ಈ ಚಿತ್ರದ ಮುಂದೆ ಎತ್ತು ಒಂದನ್ನು ಕೆತ್ತಲಾಗಿದೆ. ಈ ವಿನ್ಯಾಸ ನೇರವಾದ ದಪ್ಪ ಗೆರೆಯೊಂದಕ್ಕೆ ನಾಲ್ಕು ಕಾಲುಗಳ ಗೀರನ್ನು ಹಾಕಿ ಬಾಲಕ್ಕೊಂದು ಬಾಗಿರುವ ರೇಖೆಯನ್ನು ಹಾಕಿ ಇಣಿಗೆ ದುಂಡನೆಯ ವಿನ್ಯಾಸ ಮುಖ ಮತ್ತು ಕೋಡು ಎಲ್ಲವನ್ನೂ ಸರಳ ರೇಖೆಯಲ್ಲಿಯೇ ಕೆತ್ತಿದ್ದು, ಪ್ರಾಚೀನವೆನಿಸುತ್ತದೆ. ಇಲ್ಲಿ ಎರಡೂ ಚಿತ್ರಗಳು ಬೇರೆ ಬೇರೆ ಕಾಲದವೆಂದು ಹೇಳಬಹುದು.

**೩. ಒಂಟೆಗಳು**

ಚಿತ್ರದಲ್ಲಿ ಮೂರು ಒಂಟೆಗಳಿದ್ದು, ಒಂಟೆ ಎನ್ನುವುದಕ್ಕೆ ಬೆನ್ನನ್ನು ಎತ್ತರಕ್ಕೆ ಬಾಗಿಸಿ ಮುಖವನ್ನು ಉದ್ದಕ್ಕೆ ಕೆತ್ತಿ ವಿನ್ಯಾಸಗೊಳಿಸಲಾಗಿದೆ. ಎತ್ತರವಾದ ಕಾಲುಗಳ ನಿಲುವನ್ನು ವೀಕ್ಷಿಸಿದರೆ ಒಂಟೆ ಎನ್ನುವುದು ಸ್ಪಷ್ಟವಾಗುತ್ತದೆ. ಇಲ್ಲಿಯೂ ಕೂಡ ಒಂದು ಒಂಟೆ ದೊಡ್ಡದಾಗಿ ಹಿಂದಿನ ಒಂಟೆ ಚಿಕ್ಕದಾಗಿ ದೊಡ್ಡ ಒಂಟೆಯ ಎದುರಿಗೆ ಇನ್ನೊಂದು ದೊಡ್ಡ ಒಂಟೆ ಒಂದರ ಹಿಂದೆ ಒಂದು ನಿಂತಿರುವುದು ಗೋಚರವಾಗುತ್ತದೆ. ಮುಂದಿನ ಎರಡೂ ಒಂಟೆಗಳು ಸಮಾಕಾರದಲ್ಲಿ ಇದ್ದು, ಹಿಂದಿನ ಒಂಟೆ ಚಿಕ್ಕದಾಗಿರುವುದು ಯಥಾದರ್ಶನ ಹಿಂದುಮುಂದಿನ ಕಲ್ಪನೆ ಉಂಟುಮಾಡುವ ಈ ಚಿತ್ರಗಳು ಅಷ್ಟು ಪ್ರಾಚೀನ ಎನಿಸಲಾರವು.

**೪. ಪಲ್ಲಕ್ಕಿ ಹೊತ್ತ ಮನುಷ್ಯ**

ಈ ಚಿತ್ರದಲ್ಲಿ ಇಂದಿಗೂ ದೇವಸ್ಥಾನಗಳಲ್ಲಿ ಬಳಸುವ ಮೇಲೆ ಬಾಗಿದ ಹೊದಿಕೆ ಮನುಷ್ಯ ಹೊತ್ತುಕೊಳ್ಳಲು ಅನುಕೂಲವಾಗುವಂತೆ ಅದಕ್ಕೆ ಉದ್ದನೆಯ ಕಟ್ಟಿಗೆ ಒಳಗಡೆ ದೇವರು ಅಥವಾ ರಾಜ, ರಾಣಿಯರನ್ನು ಕುಳ್ಳಿರಿಸಿಕೊಂಡು ಹೊರಟಿರಬಹುದೆಂದು ಭಾಸವಾಗುವ ಚಿತ್ರ ಪ್ರಾಗೈತಿಹಾಸಿಕ ಅಲ್ಲವೆಂದು ಸ್ಪಷ್ಟವಾಗಿ ಹೇಳಬಹುದು. ಪಲ್ಲಕ್ಕಿಯ ಕಲ್ಪನೆ ತೀರಾ ಇತ್ತೀಚಿನದು. ಹಾಗೆಯೇ ಮೆರವಣಿಗೆ ಹೊರಟಿರುವಂತೆ ಮುಂದೆ ಇಬ್ಬರು ವ್ಯಕ್ತಿಗಳು ಬಾಗಿದ ಮತ್ತು ಎತ್ತರದ ನಂದೀ ಕೋಲಿನಂಥಹ ವಸ್ತುಗಳನ್ನು ಹಿಡಿದುಕೊಂಡು ಹೊರಟಿರುವಂತೆ ಕಾಣುತ್ತದೆ. ಈ ಚಿತ್ರಗಳಲ್ಲಿ ಪ್ರಾಗೈತಿಹಾಸಿಕ ಅಂಶಗಳು ಕಾಣದಿರುವುದು, ಈ ಚಿತ್ರಗಳಿಗೆ ಸಂರಕ್ಷಣೆ ಇಲ್ಲದರಿಂದಾಗಿ ಅಧ್ಯಯನಕ್ಕೆ ಸ್ಪಷ್ಟವಾದ ನಿಲುವು ಸಿಗದೇ ಹೋಗುತ್ತದೆ.

**೫. ಕಮಲಗಳು ಮತ್ತು ಗಡಿಯಾರದಾಕೃತಿ**

ಚಿತ್ರದಲ್ಲಿ ಗಡಿಯಾರದ ಎಲ್ಲಾ ಅಂಶಗಳು ಗೋಚರವಾಗುವುದರಿಂದ ಇದನ್ನು ಪ್ರಾಚೀನ ಎನ್ನುವುದಕ್ಕೆ ಸಾಧ್ಯವಿಲ್ಲ. ಗಡಿಯಾರ ದುಂಡನೆಯ ಮೂಲಭಾಗವನ್ನು ಹೊಂದಿ ವೇಳೆಗಾಗಿ ಮುಳ್ಳುಗಳ ಪರಿಕಲ್ಪನೆ

ನೀಡಲಾಗಿದ್ದು, ಕೆಳಗೆ ಅಲ್ಲಾಡುವ ಲಂಬಕ ಗಂಟೆಯನ್ನು ಬಿಂಬಿಸಲಾಗಿದೆ. ಗೋಡೆಗೆ ತೂಗುಹಾಕುವ ಮೇಲ್ಭಾಗವನ್ನೂ ಸೂಚಿಸಲಾಗಿದೆ. ಹಾಗೆಯೇ ಇಲ್ಲಿನ ಕಮಲದ ಹೂವಿನ ಪರಿಕಲ್ಪನೆಯನ್ನೂ ಪ್ರಾಚೀನ ಎನ್ನಲು ಆಗದು. ಇಂದಿನ ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳು ಚಿತ್ರಿಸಿದ ಹಾಗೆ ಸಾಲಾಗಿ ೩ ಕಮಲದ ಹೂವುಗಳನ್ನು ಕೆಳದೇಟು ಸಮೇತ ಕೊರೆಯಲಾಗಿದೆ.

**೬. ಆನೆ ಮತ್ತು ಎತ್ತು**

ಚಿತ್ರದಲ್ಲಿ ಆನೆ ಮತ್ತು ಎತ್ತುಗಳು ವಿಮುಖವಾಗಿ ಚಲಿಸುತ್ತಿದ್ದು, ಆನೆಯ ಬೆನ್ನಮೇಲೆ ಚೌಕಾಕಾರದ ಅಂಬಾರಿಯಂತಹ ವಸ್ತು ಗೋಚರಿಸುತ್ತದೆ. ಅಂಬಾರಿಯ ಕಲ್ಪನೆ ಇತ್ತೀಚಿನದು. ಆನೆಯ ಜೊತೆಗೆ ಎತ್ತು ಕೂಡಾ ಇದೆ. ಮುಂಭಾಗದಲ್ಲಿ ಎತ್ತಿನ ಹಿಂದೆಂದೆ ನಡೆದಿರುವ ಅಂಬಾರಿ ಇಲ್ಲದ ಇನ್ನೊಂದು ಆನೆಯನ್ನು ಚಿತ್ರಿಸಲಾಗಿದೆ. ಇವೆಲ್ಲಾ ಕಾರಣಗಳಿಗಾಗಿ ಈ ಚಿತ್ರಗಳನ್ನು ಇಂಥಹುದೇ ಕಾಲದ್ದೆಂದು ಹೇಳಲು ಸಾಧ್ಯವಾಗುವುದಿಲ್ಲ.

**೭. ಎತ್ತನ್ನು ಎಳೆದೊಯ್ಯುತ್ತಿರುವ ಮಾನವರು**

ಚಿತ್ರದಲ್ಲಿ ಮೇಲೆ ವರ್ತುಳಾಕಾರವಾಗಿ ಕೈ ಎತ್ತಿದ ಮನುಷ್ಯ ತನ್ನ ಹಿಂದೆ ಎತ್ತೊಂದನ್ನು ಹಗ್ಗದಿಂದ ಕಟ್ಟಿ ಎಳೆದೊಯ್ಯುತ್ತಿರುವಂತೆ ಚಿತ್ರಿಸಲಾಗಿದೆ. ಅದರ ಹಿಂದೆ ಇನ್ನೊಂದು ಎತ್ತು ಇದ್ದು ಅದನ್ನು ಹಿಂದೆ ಮನುಷ್ಯರು ಹೊಡೆದುಕೊಂಡು ಹೋಗುತ್ತಿರುವಂತೆ ಚಿತ್ರಿಸಲಾಗಿದೆ. ಇದನ್ನು ಕೂಡ ಪ್ರಾಚೀನ ಎನ್ನುವುದಕ್ಕೆ ಸಾಧ್ಯವಾಗುವುದಿಲ್ಲ.

**೮. ಎತ್ತು**

ಚಿತ್ರದಲ್ಲಿ ಎತ್ತನ್ನು ಕೋಲೆಬಸವ ಅಥವಾ ದೈವತ್ವದಿಂದ ನೋಡುವ ನಂದಿಯಂತೆ ಚಿತ್ರಿಸಲಾಗಿದೆ. ಕಣ್ಣು ಮತ್ತು ಮೂಗು ದಾರಗಳ ಕಲ್ಪನೆ ತೀರಾ ಇತ್ತೀಚಿನದು. ಕಾಲುಗಳನ್ನು ನೇರವಾಗಿ ಸರಳರೇಖೆಗಳಂತೆ ಚಿತ್ರಿಸಿ ಕೋಡುಗಳನ್ನು ಮುಂದೆ ಬಾಗಿಸಲಾಗಿದೆ. ಕಿಲಾರಿ ಎತ್ತು ಎಂಬ ಜಾತಿ ಕಲ್ಪನೆ ಬಂದಾಗ ಈ ಚಿತ್ರವನ್ನು ರಚಿಸಿರಬಹುದು. ಎತ್ತರವಾದ ಇನಿ ಲಿಂಗದಾಕಾರದಲ್ಲಿ ಚಿತ್ರಿತಗೊಂಡು ಜೂಲನ್ನು ಹಾಕಿದಂತೆ ಕಾಲಿನ ರೇಖೆಗಳನ್ನೇ ಮುಂದುವರಿಸಲಾಗಿದೆ. ನೆಲಕ್ಕೆ ಹತ್ತುವಷ್ಟು ಉದ್ದವಾದ ಬಾಲವನ್ನು ಚಿತ್ರಿಸಲಾಗಿದೆ. ಮನುಷ್ಯಾಕೃತಿಯೊಂದನ್ನು ಚಿಕ್ಕದಾಗಿ ಹಿಂಭಾಗದಲ್ಲಿ ರಚಿಸಲಾಗಿದೆ.

**೯. ದೊಡ್ಡ ಗಾತ್ರದ ಆನೆ**

ಚಿತ್ರದಲ್ಲಿ ಒಂಟಿ ಆನೆಯನ್ನು ಚಿತ್ರಿಸಿದ್ದು ನಾಲ್ಕೂ ಕಾಲುಗಳು ತೀರ ಹತ್ತಿರಹತ್ತಿರವಾಗಿ ರಚಿಸಲಾಗಿದೆ. ಸೊಂಡಿಯನ್ನು ಕಾಲುಗಳಿಗಿಂತ ಉದ್ದವಾಗಿ ರಚಿಸಿ ಪುನರ್ ಮಡಿಸಲಾಗಿದೆ. ತಲೆಯ ಮೇಲ್ಭಾಗದಲ್ಲಿ ವಸ್ತುವೊಂದನ್ನು ಇರಿಸಿ ಏನನ್ನೋ ಹೊತ್ತುವಯ್ಯುತ್ತಿರುವ ಆನೆಯಂತೆ ಚಿತ್ರಿಸಲಾಗಿದೆ. ಹಿಂಭಾಗದ ಚಿತ್ರ ಅಗೋಚರವಾಗಿದೆ.

### ೧೦. ಸ್ಥಾವರಲಿಂಗ ಮತ್ತು ಸೂರ್ಯಚಂದ್ರ

ಈ ಚಿತ್ರದಲ್ಲಿ ಪುರಾಣಗಳ ಪರಿಕಲ್ಪನೆ ದೇವರು ಈಶ್ವರ, ಸ್ಥಾವರಲಿಂಗ, ದುಂಡನೆಯ ಸೂರ್ಯ, ಅರ್ಧಚಂದ್ರಾಕೃತಿಯ ಚಂದ್ರ ಇವೆಲ್ಲವೂ ವೀರಗಲ್ಲು ಮತ್ತು ಮಹಾಸತಿಗಲ್ಲುಗಳಲ್ಲಿನಂತೆ ರಚನೆಗೊಂಡಿವೆ.

### ೧೧. ಸ್ಥಾವರಲಿಂಗ

ಚಿತ್ರದಲ್ಲಿ ಸ್ಥಾವರಲಿಂಗದ ಕಲ್ಪನೆ ಇಂಗ್ಲಿಷ್ X ಆಕಾರದಲ್ಲಿದೆ. ಮೇಲೆ, ಕೆಳಗೆ ಸರಳ ರೇಖೆಯೊಂದಿಗೆ ಕೂಡಿಸಿ ಮೇಲೊಂದು ಬೋರಲಾದ ಅರ್ಧಚಂದ್ರಾಕೃತಿಯಲ್ಲಿ ಲಿಂಗವನ್ನು ರಚಿಸಿದ್ದು, ಕೊನೆಯಲ್ಲಿ ದಾರವನ್ನು ಇಳಿಬಿಟ್ಟಂತೆ ವಿನ್ಯಾಸಗೊಳಿಸಲಾಗಿದೆ. ಮಧ್ಯಭಾಗದಲ್ಲೂ ಹಾಗೂ ಕೆಳ ಭಾಗದಲ್ಲೂ ಗಂಟು ಹಾಕಿದಂತೆ ಅಖಂಡ ರೇಖೆಯೊಂದಿಗೆ ಈ ಚಿತ್ರ ರಚಿತವಾಗಿದೆ. ಬಹುತೇಕ ಗುಡ್ಡದ ಓರೆಗಳಲ್ಲಿ ದನ ಕಾಯುವ ಹುಡುಗರು ಈ ಚಿತ್ರವನ್ನು ಕೊರೆದಿರಬಹುದೆಂದು ಅಂದಾಜಿಸಬಹುದು.

### ೧೨. ಕಮಲಗಳು

ಚಿತ್ರದಲ್ಲಿ ಎರಡು ಜೋಡಿ ಕಮಲಗಳು ಒಂದು ದೊಡ್ಡದು ಇನ್ನೊಂದು ಚಿಕ್ಕದು ಜಾಗ ಹೊಂದಾಣಿಕೆಯಾದಷ್ಟು ಕಮಲದ ಪರಿಕಲ್ಪಗಳನ್ನು ನೀಡಿದ್ದಾರೆ. ಎಸಳುಗಳು ಒಂದಕ್ಕೊಂದು ಸಂಬಂಧವಿಲ್ಲದಂತೆ ಒಂದರ ಕೆಳಗೊಂದರಂತೆ ಜೋಡಣೆಯಾಗಿವೆ. ಈ ಯಾವ ಚಿತ್ರವೂ ಆದಿಮಾನವನ ರಚನೆಯೆಂಬಂತೆ ಭಾಸವಾಗುವುದಿಲ್ಲ.

### ಹುಲಿಘಡಿಯ ಶಿಲಾಶ್ರಯ ಚಿತ್ರಗಳು

ಪ್ರಸ್ತುತ ಅಧ್ಯಯನವು ಅಂತಿಮ ಹಂತದಲ್ಲಿದ್ದಾಗ ಆವಿಷ್ಕಾರಗೊಂಡ "ಇತಿಹಾಸ ಪ್ರಸಿದ್ಧ ಐಹೊಳೆ, ಪಟ್ಟದಕಲ್ಲು, ಮಾರ್ಗ ಮಧ್ಯದಲ್ಲಿ ಉಪನಾಳ ಗ್ರಾಮದ ಪೂರ್ವ ದಿಕ್ಕಿನಲ್ಲಿ ಬೃಹದಾಕಾರದ ಕಲ್ಲುಘಡಿ ಬೆಟ್ಟದಲ್ಲಿ ಹುಲಿಘಡಿ ಎಂಬ ನೆಲೆಯಲ್ಲಿ ಉಪನಾಳ ಗ್ರಾಮದಿಂದ ಎರಡು ಕಿ.ಮೀ. ದೂರದಲ್ಲಿ ಗುಡ್ಡದ ಐದನೂರು ಮೀಟರ್ ಉದ್ದದಲ್ಲಿ ಹತ್ತಾರು ಗವಿಗಳು ಪತ್ತೆಯಾಗಿವೆ." ಕಮತಗಿಯ ಹುಚ್ಚೇಶ್ವರ ಬಿ.ಇಡಿ. ಕಾಲೇಜಿನ ಇತಿಹಾಸ ಉಪನ್ಯಾಸಕ, ಪ್ರವಾಸಿ ಮಾರ್ಗದರ್ಶಕ ಪರಶುರಾಮ ಗೋಡಿ ಅವರು ಪತ್ತೆ ಹಚ್ಚಿದ್ದಾರೆ.[೯] ರೇಖಾ ಚಿತ್ರಗಳಿರುವ ಈ ಗವಿಗಳು ನರಿ, ತೋಳ, ಮುಳ್ಳುಹಂದಿ ಮತ್ತಿತರ ಪ್ರಾಣಿಗಳ ವಾಸಸ್ಥಳವಾಗಿದೆ. ಸಣ್ಣ ಹಾಗೂ ಮಧ್ಯಮ ಪ್ರಮಾಣದಲ್ಲಿರುವ ವರ್ಣಚಿತ್ರಗಳು ಕೊರೆದ, ಗೀರಿದ, ಕುಟ್ಟಿದ ಚಿತ್ರಗಳು ಇವೆ. ಆಕೃತಿ, ದೇಹದ ಪ್ರಮಾಣಬದ್ಧತೆ, ಭಂಗಿ ಮೊದಲಾದವುಗಳಿಂದ ಕೂಡಿದ ಈ ಚಿತ್ರಗಳು ಆಯಾ ಕಾಲದ ಸೌಂದರ್ಯಪ್ರಜ್ಞೆ ಕಲ್ಪನೆ ಹಾಗೂ ಕುಶಲತೆಗೆ ಸಾಕ್ಷಿಯಾಗಿವೆ. ಕ್ರಿ.ಶ. ೨ನೇ ಶತಮಾನದಾಗಿರಬಹುದೆಂದು ಮೇಲಿನ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅಡಗಲ್, ಕುಟುಕನಕೇರಿ, ಸಿಡಿಲಫಡಿ ಮೊದಲಾದ ಶಿಲಾಶ್ರಯದ ಚಿತ್ರಗಳ ಕಾಲಮಾನ ಇದಕ್ಕೂ ಸರಿಯಾಗಿರಬಹುದೆಂದು ಅಭಿಪ್ರಾಯಪಡುತ್ತಾರೆ.

---

೯. ಪ್ರಕಾಶ ಗುಳೇದಗುಡ್ಡ, 'ವರ್ಣಚಿತ್ರಗಳ ಪ್ರಾಚೀನ ಗವಿಗಳು ಪತ್ತೆ', ೨೮.೫.೨೦೧೩, ಪ್ರಜಾವಾಣಿ, ಪು.೧.

### ii. ಹುಲಿಘಡಿಯ ಶಿಲಾಶ್ರಯ ಚಿತ್ರ ರಚನೆಯ ತಂತ್ರ-ವಿಧಾನಗಳು

ಚಿತ್ರಗಳು ಕಲ್ಲಿನಿಂದ ಕಲ್ಲಿಗೆ ಕುಟ್ಟಿದ ಕೆಲವು ಆಕೃತಿಗಳು ಬಂಡೆಗಳ ಮೇಲಾದರೆ ಇನ್ನು ಕೆಲವು ಕೆಂಪು ಮಿಶ್ರಿತ ಕಪ್ಪು ಬಣ್ಣದ ಚಿತ್ರಗಳಾಗಿವೆ. ಇವುಗಳನ್ನು ಕುಂಚ ಇಲ್ಲವೇ ಬೆರಳುಗಳಿಂದ ಚಿತ್ರಿಸಲಾಗಿದೆ. ಸಂಕೇತಗಳು, ಹನುಮಂತನ ಚಿತ್ರಗಳು ಸುಣ್ಣದಂತಹ ವಸ್ತುವಿನಿಂದ ಬಿಳಿ ವರ್ಣದಲ್ಲಿ ಚಿತ್ರಿಸಲ್ಪಟ್ಟಿವೆ.

### iii. ಹುಲಿಘಡಿಯ ಶಿಲಾಶ್ರಯ ಚಿತ್ರಗಳ ವಸ್ತುವಿಷಯ

#### ೧. ಕತ್ತಿ ಗುರಾಣಿ ಹಿಡಿದ ಮನುಷ್ಯ

ಬಿಳಿ ಬಣ್ಣದ ಮನುಷ್ಯಾಕೃತಿಯೊಂದು ಸ್ಪಷ್ಟವಾಗಿ ಎಡಗೈಯಲ್ಲಿ ಖಡ್ಗ, ಬಲಗೈಯಲ್ಲಿ ಗುರಾಣಿಯನ್ನು ಹಿಡಿದು ಯುದ್ಧಕ್ಕಾಗಿ ಮುನ್ನುಗ್ಗುತ್ತಿರುವಂತೆ ಚಿತ್ರಿಸಲಾಗಿದೆ. ಇದು ಕೂಡ ಪ್ರಾಗೈತಿಹಾಸಿಕ ಎನ್ನುವುದಕ್ಕೆ ಸಾಧ್ಯವಾಗುವುದಿಲ್ಲ. ಕತ್ತಿ ಮತ್ತು ಗುರಾಣಿಗಳ ಕಲ್ಪನೆ ತೀರಾ ಆಧುನಿಕ ಎನಿಸುತ್ತದೆ. ಎದುರಿಗೆ ಇನ್ನೊಂದು ದೊಡ್ಡ ಆಕೃತಿಯ ಮನುಷ್ಯ ಕೈಯಲ್ಲಿ ಯಾವುದೇ ಆಯುಧವಿಲ್ಲದೆ ಓಡಿ ಬರುತ್ತಿರುವಂತೆ ಗೋಚರಿಸುತ್ತದೆ. ಸುತ್ತಲೂ ಅದರ ಮೇಲೆ ಅದಕ್ಕಿಂತ ಆಧುನಿಕ ಎನಿಸುವ ಕೆಂಪು ಬಣ್ಣದ ಸಂಕೇತಗಳು ಕುಂಚದ ಝಲಕುಗಳು ಗೋಚರಿಸುತ್ತವೆ. ಒಟ್ಟಿನಲ್ಲಿ ತೆಳುಗೆಂಪು ಬಣ್ಣದ ಕಲ್ಲಿನ ಮೇಲೆ ಸುಣ್ಣದಿಂದ ಬರೆದ ಚಿತ್ರ ಇದಾಗಿದೆ.

#### ೨. ನವಿಲು

ಕಪ್ಪು ಮಿಶ್ರಿತ ಕಂದುವರ್ಣದ ಕಲ್ಲಿನ ಮೇಲೆ ಕುಟ್ಟಿದ ಚಿತ್ರ ಈಗ ಲಭ್ಯವಾಗಿವೆ. ಉದ್ದನೆಯ ಕತ್ತು, ದೇಹ, ಕೊನೆಯಲ್ಲಿ ಪುಚ್ಚಗಳು ಚಿಕ್ಕವಾದ್ದರಿಂದ ಇದು ಹೆಣ್ಣು ನವಿಲಾಗಿದೆ. ಸರಿಯಾದ ಸ್ಥಳದಲ್ಲಿ ಶಿಷ್ಟರ ರಚನೆಯಂತೆ ಚಿತ್ರಿತವಾದ ಈ ಕೃತಿಯು ಬಹಳ ಹಿಂದಿನದು ಎನಿಸುವುದಿಲ್ಲ. ಚುಂಚವು ಕಾಣುವುದಿಲ್ಲ. ಪಕ್ಷಿಗಳ ಗುಂಪಿನೊಂದಿಗೆ ನವಿಲು ಗೋಚರಿಸುತ್ತದೆ. ಶಾಸ್ತ್ರಬದ್ಧವಾದ ಶರೀರ ಪರಿಕಲ್ಪನೆ ಆದಿಮಾನವನಿಗೆ ಇರಲಿಲ್ಲ ಎಂಬುದನ್ನು ಗಮನದಲ್ಲಿಟ್ಟು ವಿಶ್ಲೇಷಿಸುವುದಾದರೆ ಈ ಚಿತ್ರವು ಸುಮಾರು ೫೦೦ ವರ್ಷದಿಂದೀಚೆಗೆ ಇರಬಹುದು. ನಿಚ್ಚಳವಾದ ಕಾಲಮಾನ, ವಸ್ತುವಿಷಯಗಳ ಅಧ್ಯಯನ ಅಷ್ಟುಬೇಗ ಸ್ಪಷ್ಟವಾಗುವುದಿಲ್ಲ.

#### ೩. ಪಕ್ಷಿಗಳ ಗುಂಪು

ಹೆಚ್ಚು ಕಡುಕಪ್ಪು ಬಣ್ಣದ ಕಲ್ಲಿನ ಕುಟ್ಟಿ ಕೊರೆದ ಚಿತ್ರದಲ್ಲಿ ೫ ಪಕ್ಷಿಗಳು ಸುತ್ತಲೂ ಕುಳಿತು ಏನನ್ನೋ ವೀಕ್ಷಿಸುತ್ತಿರುವಂತೆ ತೋರುತ್ತದೆ. ಬಿಳಿ ಬಣ್ಣದ ಪರಿಕಲ್ಪನೆಯಾದ್ದರಿಂದ ಹಕ್ಕಿಗಳು ಕುಳಿತಿರುವಂತೆ ತೋರುತ್ತದೆ. ಒಂದನೊಂದು ಕತ್ತು ತಿರುಗಿಸಿ ನೋಡುತ್ತಿರುವಂತೆ ಕಾಣುತ್ತವೆ. ಕಲ್ಲುಬಂಡೆಯ ಮೇಲೆ ನಿಜವಾದ ಪಕ್ಷಿಗಳು ಕುಳಿತಿರುವಂತೆ ತೋರುವಂತೆ ಕಲ್ಲು ಅಥವಾ ಆಯುಧದಿಂದ ಕುಟ್ಟಿದ ಚಿತ್ರ ರಚಿಸಲಾಗಿದೆ.

#### ೪. ಪತಂಗ ಮತ್ತು ಸಂಕೇತಗಳು

ಪತಂಗದ ಚಿತ್ರ ಇರುವುದು ತೀರಾ ಆಧುನಿಕ ಎನಿಸುತ್ತದೆ. ಇನ್ನೂ ಚೌಕಾಕಾರದ ಸಂಕೇತಗಳು ಚಕ್ಕ ಮನೆಯಂತೆ ತೋರುತ್ತವೆ. ಅಧಿಕ ಗೀರುಗಳು, ಕಣ್ಣುಗಳು, ಇಂಗ್ಲಿಷ್ I ಆಕಾರದ ಕುಂಚದಿಂದ ಬರೆದ

ಚಿತ್ರಗಳು ಇವಾಗಿವೆ. ಪ್ರಮುಖವಾಗಿ ಗಮನಿಸುವ ಅಂಶವೆಂದರೆ ಬಿಳಿಯ ಬಣ್ಣದ ಪ್ರಾಗೈತಿಹಾಸಿಕ ರೇಖಾ ಚಿತ್ರಗಳಿದ್ದೂ ಅವುಗಳ ಮೇಲೆ ಪತಂಗವನ್ನು ಚಿತ್ರಿಸಲಾಗಿದೆ. ಹೀಗಾಗಿ ಆಧುನಿಕ ಸಂದರ್ಭದ ದನಗಾಯಿ ಹುಡುಗರು ಇತ್ತೀಚೆಗೆ ಆದಿಮಾನವನ ಮನುಷ್ಯಾಕೃತಿ ರೇಖಾಚಿತ್ರದ ಮೇಲೆ ಪತಂಗವನ್ನು ಚಿತ್ರಿಸಿದ್ದು ಇಲ್ಲಿ ಗಮನಿಸಬಹುದು. ಇದೇ ರೀತಿ ಉಳಿದ ಸಂಕೇತಗಳು ಆಧುನಿಕ ಕುಂಚದಿಂದ ಬರೆದಿರುವವಾದ್ದರಿಂದ ಪ್ರಾಗೈತಿಹಾಸಿಕ ಚಿತ್ರಗಳು ಎನ್ನಲು ಸಾಧ್ಯವಾಗುವುದಿಲ್ಲ.

**೫. ಮನುಷ್ಯ ಮತ್ತು ಹನುಮಂತ**

ಚಿತ್ರದ ಎಡಬದಿಯಲ್ಲಿ ಮನುಷ್ಯನೊಬ್ಬ ಎಡಗೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು, ಕಾಲುಗಳನ್ನು ಅಗಲ ಮಾಡಿಕೊಂಡು ಆರ್ಭಟಿಸುತ್ತಿರುವಂತೆ ಚಿತ್ರಿಸಲಾಗಿದೆ. ಈ ಮನುಷ್ಯಾಕೃತಿಗಳು ಮಾತ್ರ ಸ್ವಲ್ಪ ಪ್ರಾಗೈತಿಹಾಸಿಕ ಎನಿಸುತ್ತಿವೆಯಾದರೂ, ಜೊತೆಯಲ್ಲಿರುವ ಆಧುನಿಕ ಚಿತ್ರದಿಂದಾಗಿ ಇದನ್ನು ಪ್ರಾಗೈತಿಹಾಸಿಕ ಎನ್ನಲು ಸಾಧ್ಯವಾಗುವುದಿಲ್ಲ.

ಬಿಳಿ ಬಣ್ಣದ ಸ್ಪಷ್ಟವಾದ ಹನುಮಂತನ ಚಿತ್ರ ಎರಡೂ ಕಾಲುಗಳನ್ನು ಅಗಲ ಮಾಡಿಕೊಂಡು ಒಂದು ಬಲಗೈ ಮೇಲೆತ್ತಿ, ಎಡಗೈಯನ್ನು ಟೊಂಕದ ಮೇಲೆ ಇರಿಸಿಕೊಂಡಿದ್ದಾನೆ. ದುಂಡನೆಯ ಮುಖ ಬಾಲವು ಇತ್ತೀಚೆಗೆ ಎಲ್ಲಾ ದೇವಸ್ಥಾನಗಳಲ್ಲಿರುವ ಆಂಜನೇಯನ ಶಿಲ್ಪದಂತೆ ಬಾಲವು ತಲೆಯ ಮೇಲಿಂದ ಸುತ್ತು ಹಾಕಿಕೊಂಡು ವರ್ತುಲಾಕಾರವಾಗಿ ಒಂದು ಕೊನೆಯನ್ನು ತಲುಪುತ್ತದೆ. ಅಲ್ಲಿ ಬಾಲದ ಚುಂಗವು ಮುಖದಷ್ಟು ದೊಡ್ಡದಾಗಿ, ವರ್ತುಲಾಕಾರವಾಗಿ ಇರುತ್ತದೆ. ಹೀಗೆ ತೀರಾ ಆಧುನಿಕ ಎನಿಸುವ ಈ ಹನುಮಂತನ ಚಿತ್ರವು ಪ್ರಾಗೈತಿಹಾಸಿಕ ಎನ್ನಲು ಸಾಧ್ಯವಾಗುವುದಿಲ್ಲ.

**೬. ಎತ್ತು**

ಮುಂದೆ ಕೋಡು ಮಾಡಿದ ಜಿಗಿಯುವ ಸ್ಥಿತಿಯಲ್ಲಿರುವ ಈ ಚಿತ್ರವು ನಾಲ್ಕೂ ಕಾಲುಗಳನ್ನು ಒಳಗೆ ತೆಗೆದುಕೊಂಡು ಬಾಲವನ್ನು ಹಿಂದೆ ಚಾಚಿ, ಇನಿಯನ್ನು ಉಬ್ಬಿಸಿ, ಮೇಲ್ನೋಟದಲ್ಲಿ ಹೊರಟಿರುವಂತೆ ಕಾಣುತ್ತದೆ. ತಿಳುಕಂದು ಬಣ್ಣದ ಕಲ್ಲಿನ ಮೇಲೆ ಸುಣ್ಣದಂತಹ ವಸ್ತುವಿನಿಂದ ರಚಿಸಿದ್ದಾಗಿದೆ. ಹಿಂದಿನ ಕಲ್ಲೂ ಹೆಚ್ಚು ಬಿಳಿದಾದ್ದರಿಂದ ಬಿಳಿಯ ಅಂಶಗಳು ಎದ್ದು ಕಾಣುವುದಿಲ್ಲ.

**iv. ಶಿಲಾಶ್ರಯ ಚಿತ್ರಗಳ ವಿಶೇಷತೆ**

* ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಕಲೆಯಲ್ಲಿ ಆದಿಮಾನವನ ಚಿತ್ರದ ಮುಖ್ಯ ವಸ್ತುವಿಷಯಗಳು ಮಾನವ, ಪ್ರಾಣಿ ಮತ್ತು ಬೇಟೆ. ಆದಿಮಾನವ ಕೇವಲ ನಾಲ್ಕೈದು ರೇಖೆಗಳನ್ನು ಬಳಸಿಕೊಂಡು ಮಾನವ ಹಾಗೂ ಆಯಾ ಪ್ರಾಣಿಗಳ ನೈಜ ರೂಪವನ್ನು ನಿರೂಪಿಸಿರುವುದು ಗಮನಾರ್ಹವಾಗಿದೆ.

* ಆದಿಮಾನವನ ಮುಖ್ಯ ವಸ್ತುವಿಷಯವಾದ ಬೇಟೆಯ ಚಿತ್ರಗಳನ್ನು ಒಂದು ಸೀಮಿತ ಸ್ಥಳಾವಕಾಶದಲ್ಲಿ, ಸ್ಪಷ್ಟವಾಗಿ ಅರ್ಥವಾಗುವಂತೆ ಸಂಯೋಜನೆಗೊಳಿಸಿದ ಪರಿ ಅದ್ಭುತವಾದದ್ದು.

* ಜಿಲ್ಲೆಯ ಬಾದಾಮಿ ಹಾಗೂ ಐಹೊಳೆ ಪರಿಸರದಲ್ಲಿರುವ ಶಿಲಾಶ್ರಯ ಚಿತ್ರಗಳು ವರ್ಣ ಚಿತ್ರಗಳಾಗಿದ್ದು, ಜಮಖಂಡಿ ತಾಲ್ಲೂಕಿನ ಗೊಂಬಿಗುಡ್ಡ ಹಾಗೂ ಐಹೊಳೆ ಸಮೀಪದ ಹುಲಿಘಡಿಯಲ್ಲಿರುವ ಶಿಲಾಶ್ರಯ ಚಿತ್ರಗಳು ಮಾತ್ರ ಕೊರೆದ ಚಿತ್ರಗಳಾಗಿವೆ.

* ಆದಿಮಾನವನಿಗೆ ಪ್ರಾಣಿ, ಬೇಟೆ, ಮನುಷ್ಯನನ್ನು ಬಿಟ್ಟು ಬೇರಾವ ವಸ್ತುಗಳ ಬಗೆಗೂ ಸಣ್ಣ ಕಲ್ಪನೆಯೂ ಇರಲು ಸಾಧ್ಯವಿಲ್ಲವೆಂಬುದಕ್ಕೆ ಕರ್ನಾಟಕದ ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಗಳು ಸಾಕ್ಷಿ ಒದಗಿಸುತ್ತವೆ. ಆದರೆ ಗೊಂಬಿ ಗುಡ್ಡದಲ್ಲಿ ರಚನೆಗೊಂಡ ಕಮಲ, ಅಂಬಾರಿ, ಈಶ್ವರಲಿಂಗ, ಸೂರ್ಯ, ಚಂದ್ರ, ಡೋಲಿ, ಗಡಿಯಾರದಾಕೃತಿಗಳು ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಗಳೆ? ಎಂಬ ಪ್ರಶ್ನೆ ಗಟ್ಟಿಯಾಗುತ್ತದೆ. ಕಾರಣ ಈ ಕುರಿತ ಹೆಚ್ಚಿನ ಅಧ್ಯಯನ ಜರುಗಬೇಕಿರುವುದು ಅವಶ್ಯವಾಗಿದೆ.





ಮನುಷ್ಯರ ಚಿತ್ರಗಳು

೧) ಕುಣಿಯುತ್ತಿರುವ ಮನುಷ್ಯ



ಬೇಟೆಯ ಚಿತ್ರಗಳು

೧) ಬೇಟೆಯಾಡುವ ಮನುಷ್ಯ



೨) ಬೇಟೆಗಾಗಿ ಸಮೂಹ ತಂತ್ರ



ಗೊಂಬಿಗುಡ್ಡದ ಪ್ರಾಚೀನ ಚಿತ್ರಗಳು

೧) ಆನೆಗಳು



೩) ಒಂಟೆಗಳು



೪) ಪಲ್ಲಕ್ಕಿಹೊತ್ತ ಮನುಷ್ಯರು



೫) ಕಮಲಗಳು ಮತ್ತು ಗಡಿಯಾರದ ಆಕೃತಿ



೬) ಆನೆ ಮತ್ತು ಎತ್ತು



೭) ಎತ್ತನ್ನು ಎಳೆದೊಯುತ್ತಿರುವ ಮಾನವರು



೧೦) ಸ್ಥಾವರಲಿಂಗ ಮತ್ತು ಸೂರ್ಯ ಚಂದ್ರ



೧೧) ಸ್ಥಾವರ ಲಿಂಗ



ಹುಲಿಘಡಿ ಭಿತ್ತಿ ಚಿತ್ರಗಳು

೧) ಕತ್ತಿ ಗುರಾಣಿ ಹಿಡಿದ ಮನುಷ್ಯ



೩) ಪಕ್ಷಿಗಳ ಗುಂಪು



೫) ಮನುಷ್ಯ ಮತ್ತು ಹನುಮಂತ



ಅಧ್ಯಾಯ ಮೂರು

# ಬಾಗಲಕೋಟೆ ಜಿಲ್ಲೆಯ ಭಿತ್ತಿಮಾಧ್ಯಮ ಚಿತ್ರಕಲೆ

ಅ. ಗುಹಾಭಿತ್ತಿ

ಆ. ಗೃಹಭಿತ್ತಿ(ಮನೆ, ಮಠ ಇತ್ಯಾದಿ)

# ಬಾಗಲಕೋಟೆ ಜಿಲ್ಲೆಯ ಭಿತ್ತಿಮಾಧ್ಯಮ ಚಿತ್ರಕಲೆ

ಭಿತ್ತಿ ಚಿತ್ರಕಲೆ ಎಂದರೆ ಗೋಡೆಗಳಲ್ಲಿ, ಮೇಲ್ಛಾವಣಿಗಳಲ್ಲಿ ವರ್ಣದಿಂದ ಉಬ್ಬು ಇಲ್ಲವೆ ತಗ್ಗು ಅಥವಾ ಸಮತಟ್ಟಾದ ಅಲ್ಲದೇ ಮೋಜಾಯಿಕ್‌ನಂತಹ ಚಿತ್ರಗಳಿಂದ ಅಲಂಕರಿಸುವ ವಿಧಾನವಾಗಿದೆ.

ಭಿತ್ತಿ ಚಿತ್ರವನ್ನು ಆಂಗ್ಲಭಾಷೆಯಲ್ಲಿ Mural Paintings ಎಂದು ಕರೆಯುತ್ತಾರೆ. Mural ಎಂಬ ಶಬ್ದವು ಲ್ಯಾಟಿನ್ ಭಾಷೆಯ Murusದಿಂದ ಬಂದುದಾಗಿದೆ. Murus ಎಂದರೆ ಗೋಡೆ, ವಾಲ್ ಎಂದರ್ಥ. ಹೀಗೆ ಕನ್ನಡ ಜಾನಪದ ವಿಶ್ವಕೋಶವು ಭಿತ್ತಿ ಚಿತ್ರವೆಂದರೆ ಗೋಡೆಯ ಮೇಲೆ ಬರೆದ ಚಿತ್ರವೆಂದು ಹೇಳುತ್ತದೆ. ಜೊತೆಗೆ ಭಿತ್ತಿ ಎನ್ನುವುದಕ್ಕೆ ಗೋಡೆ, ಕುಡ್ಯ, ಮೂಲ, ತಳ, ಹಿನ್ನೆಲೆ ಚಿತ್ರಗಳನ್ನು ಬರೆಯುವ ಮೂಲಾಧಾರಗಳಾದ ಬಟ್ಟೆ, ಗೋಡೆ ಮೊದಲಾದ ಸಾಧನಗಳು ಎಂಬ ಅರ್ಥವನ್ನು ಕೊಟ್ಟಿದೆ. ಕ್ಯಾಂಬ್ರಿಡ್ಜ್ ವಿಶ್ವಕೋಶವು ಗೋಡೆಯ ಮೇಲೆ ಬಣ್ಣದಿಂದ ಬರೆದ ಚಿತ್ರ ಮತ್ತು ಕೆತ್ತಿ, ಕೊರೆದು, ಅಂಟಿಸಿ ಹೀಗೆ ಯಾವುದೇ ವಿಧಾನದಿಂದ ಗೋಡೆಯ ಮೇಲೆ ರೂಪಿಸಿದ ಚಿತ್ರಗಳು Mural ವ್ಯಾಪ್ತಿಯಲ್ಲಿ ಬರುತ್ತವೆ ಎಂದು ತಿಳಿಸುತ್ತದೆ. ಒಟ್ಟಾರೆ ಭಿತ್ತಿ ಚಿತ್ರ ಎಂಬುದರ ಅರ್ಥವನ್ನು ಹೀಗೆ ವಿವರಿಸಬಹುದು.

ಕೆಲವು ಸಾಹಿತ್ಯ ಕೃತಿಗಳಲ್ಲಿಯೂ ಭಿತ್ತಿ ಚಿತ್ರಗಳ ಬಗ್ಗೆ ಸಾಂದರ್ಭಿಕ ವಿವರಗಳಿರುವುದನ್ನು ಕಾಣಬಹುದು. ಉದಾಹರಣೆಗೆ: "ಭಿತ್ತಿ ಇಲ್ಲದೇ ಬರೆಯಬಹುದೇ ಚಿತ್ತಾರವ, ಭಿತ್ತಿಯೊಂದಿಲ್ಲದಿರೆ ಚಿತ್ರವೆಂತಿರಲಹುದು, ಚಿತ್ರವಿಲ್ಲದೆ ಭಿತ್ತಿ ಸೊಗಸಹುದೆಂತು" ಎಂಬ ಸಾಲುಗಳು ಭಿತ್ತಿ ಮತ್ತು ಭಿತ್ತಿ ಚಿತ್ರದ ಬಗೆಗೆ ತಿಳಿಸುತ್ತವೆ. ಹಾಗೆಯೇ ಈ ಸಾಲುಗಳು ಚಿತ್ರ ಬರೆಯಲು ಭಿತ್ತಿ ಅವಶ್ಯಕತೆಗಳನ್ನು ತಿಳಿಸಿಕೊಡುತ್ತದೆ.

ಈ ಭಿತ್ತಿ ಮಾಧ್ಯಮದ ಚಿತ್ರಕಲೆಯನ್ನು ಅವುಗಳು ರಚನೆಗೊಂಡ ಕಾಲವನ್ನು ಲಕ್ಷಿಸಿ, ಐತಿಹಾಸಿಕ ಭಿತ್ತಿ ಚಿತ್ರಗಳನ್ನು 'ಗುಹಾಭಿತ್ತಿ' ಚಿತ್ರಕಲೆಯಾಗಿ ಹಾಗೂ ಅರ್ವಾಚೀನ ಸಂದರ್ಭದಲ್ಲಿ ರಚನೆಗೊಂಡ ಭಿತ್ತಿ ಚಿತ್ರಗಳನ್ನು 'ಗೃಹಭಿತ್ತಿ' ಚಿತ್ರಕಲೆಯಾಗಿ ವಿಭಜಿಸಿಕೊಂಡು ಅಧ್ಯಯನ ನಡೆಸಲಾಗಿದೆ. ಗೃಹಭಿತ್ತಿ ಚಿತ್ರಕಲೆಯಲ್ಲಿ ಮನೆ, ಮಠ, ಸಂಗ್ರಹಾಲಯ ಹಾಗೂ ಅರಮನೆಗಳಲ್ಲಿ ಚಿತ್ರಿತಗೊಂಡ ಅರ್ವಾಚೀನ ಭಿತ್ತಿ ಚಿತ್ರಗಳ ಕುರಿತು ವಿವರಿಸಲಾಗಿದೆ.

### ಅ. ಗುಹಾಭಿತ್ತಿ ಚಿತ್ರಕಲೆ

ಜಿಲ್ಲೆಯ ಶಿಲಾಶ್ರಯ ತಾಣಗಳಲ್ಲಿ ರಚನೆಗೊಂಡ ಚಿತ್ರಗಳೆಲ್ಲವೂ ಪ್ರಾಗೈತಿಹಾಸಿಕ ಕಾಲದ ಚಿತ್ರಗಳಾಗಿವೆ. ಇನ್ನು ಜಿಲ್ಲೆಯ ಸ್ವಾಭಾವಿಕ ಹಾಗೂ ಮಾನವನಿರ್ಮಿತ ಗುಹೆಗಳಲ್ಲಿ ರಚನೆಗೊಂಡ ಚಿತ್ರಗಳೆಲ್ಲವೂ ಐತಿಹಾಸಿಕ ಕಾಲಕ್ಕೆ ಸೇರಿದವುಗಳಾಗಿವೆ. ಜಿಲ್ಲೆಯಲ್ಲಿ ಹಲವಾರು ಪ್ರಾಗೈತಿಹಾಸಿಕ ಭಿತ್ತಿ ಚಿತ್ರಗಳು ನೈಸರ್ಗಿಕವಾದ ಶಿಲಾಶ್ರಯ ತಾಣಗಳಲ್ಲಿ ರಚಿತವಾಗಿವೆ. ಯಾವ ರೀತಿಯ ರೀತಿರಿವಾಜು, ನಿಯಮಗಳನ್ನು ಇಟ್ಟುಕೊಳ್ಳದೆಯೇ ಆದಿಮಾನವನು ತನಗನ್ನಿಸಿದ ಚಿತ್ರಗಳನ್ನು ರಚಿಸಿ, ತನ್ನ ಭಾವನೆಗಳನ್ನು ವ್ಯಕ್ತಪಡಿಸಿದ್ದಾನೆ. ಹೀಗೆ ಈ ಆದಿಮಾನವ ಒಂದೆಡೆ ನೆಲೆನಿಂತು, ನಾಗರಿಕತೆಯ ಕಡೆಗೆ ಮುಖಮಾಡಿದಾಗ, ಕೇವಲ ಜೀವನಾವಶ್ಯಕತೆಗಳಲ್ಲಿ ಮಾತ್ರವಲ್ಲದೇ, ಕಲೆ ಮತ್ತು ಸಂಸ್ಕೃತಿಗಳಲ್ಲಿಯೂ ಅಪಾರ ಉನ್ನತಿಯನ್ನು ಸಾಧಿಸಿದನು. ಹೀಗೆ ಪ್ರಾಗೈತಿಹಾಸಿಕ ಕಾಲದಿಂದ, ಐತಿಹಾಸಿಕ ಕಾಲಕ್ಕೆ ಮಾನವ ತಲುಪುವುದರಲ್ಲಿ ಆತನ ಜೀವನ ಶೈಲಿಯಲ್ಲಿ ಸಾಕಷ್ಟು ಅಭಿವೃದ್ಧಿಯಾಗಿತ್ತು. ತನ್ನ ನಿತ್ಯದ ಅವಶ್ಯಕತೆಗಳ ಜೊತೆಗೆ ಚಿತ್ರಕಲೆ, ಸಾಹಿತ್ಯ, ಸಂಗೀತ, ಶಿಲ್ಪಕಲೆಗಳಲ್ಲಿ ಪ್ರಾವೀಣ್ಯತೆಯನ್ನು ಸಾಧಿಸಿದ. ಐತಿಹಾಸಿಕ ಚಿತ್ರಕಲೆಯಲ್ಲಿಯೂ ಸಹ ಮಾನವನ ಮೂಲ ಭಾವನೆಗಳೇ ಚಿತ್ರಿತವಾಗಿದ್ದರೂ ಸಹ, ಚಿತ್ರರಚನೆಯ ಮಾಧ್ಯಮ, ಬಳಸುವ ಪರಿಕರಗಳು, ಚಿತ್ರಾಕೃತಿಗಳ ಪ್ರಮಾಣಬದ್ಧ ಅಳತೆ ಅವುಗಳ ಸಂಯೋಜನೆ ಹೀಗೆ ಹತ್ತುಹಲವು ವಿಷಯಗಳಲ್ಲಿ ಗುಣಾತ್ಮಕ ಬದಲಾವಣೆಗಳೊಂದಿಗೆ ಚಿತ್ರಕಲೆಯಲ್ಲಿ ಪ್ರಾವಿಣ್ಯತೆಯನ್ನು ಸಾಧಿಸಿದ. ಹೀಗೆ ಜಗತ್ತಿನೆಲ್ಲೆಡೆಯೂ ಸಹ ಒಂದು ಶಿಸ್ತುಬದ್ಧವಾದ, ಗುಣಮಟ್ಟದ ಕಲಾಕೃತಿಗಳು ಐತಿಹಾಸಿಕ ಕಾಲದಲ್ಲಿ ರಚನೆಯಾದವು.

ಬಾಗಲಕೋಟೆ ಜಿಲ್ಲೆಯು "ಚಾಲುಕ್ಯರ ನಾಡು" ಎಂದೇ ಪ್ರಸಿದ್ಧಿ ಪಡೆದಿದೆ. ಚಾಲುಕ್ಯರ ರಾಜಧಾನಿ ಬಾದಾಮಿಯಾಗಿತ್ತು. ಆ ಕಾರಣದಿಂದಾಗಿ ಬಾದಾಮಿ ಚಾಲುಕ್ಯರು ಎಂದೇ ಇವರು ಪ್ರಸಿದ್ಧಿ ಪಡೆದಿದ್ದಾರೆ. ಬಾದಾಮಿಯ ಚಾಲುಕ್ಯರು ಕ್ರಿ.ಶ. ಸುಮಾರು ೫೦೦ರಿಂದ ೭೫೭ರವರೆಗೆ ರಾಜ್ಯವನ್ನಾಳಿದರು.[೧೦] ಇಮ್ಮಡಿ ಪುಲಕೇಶಿ, ಚಾಲುಕ್ಯರ ಪ್ರಸಿದ್ಧ ದೊರೆ. ಇವರು ಕಲೆ ಮತ್ತು ಸಂಸ್ಕೃತಿಯ ಪೋಷಕರಾಗಿದ್ದರು. ಹಾಗಾಗಿ ಚಾಲುಕ್ಯರ ಕಾಲದಲ್ಲಿ ಬಾದಾಮಿ ಹಾಗೂ ಸುತ್ತಮುತ್ತಲಿನ ನೆಲೆಗಳಲ್ಲಿ ಹಲವಾರು ಭಿತ್ತಿ ಚಿತ್ರಗಳು ರಚನೆಗೊಂಡಿವೆ.

#### i. ಚಿತ್ರದ ನೆಲೆಗಳು

ಜಿಲ್ಲೆಯನ್ನಾಳಿದ ಚಾಲುಕ್ಯರ ರಾಜಧಾನಿ ಬಾದಾಮಿಯಾಗಿದ್ದರಿಂದ ಬಾದಾಮಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ಹೆಚ್ಚು ಗುಹಾಭಿತ್ತಿ ಚಿತ್ರಗಳನ್ನು ಕಾಣಬಹುದಾಗಿದೆ. ಚಾಲುಕ್ಯರ ಕಾಲದ ಆರಂಭಿಕ ಭಿತ್ತಿ ಚಿತ್ರಗಳನ್ನು ಬಾದಾಮಿ ಪರಿಸರದ ಸ್ವಾಭಾವಿಕ ಗುಹೆಗಳಲ್ಲಿ, ಶಿಲಾಶ್ರಯಗಳಲ್ಲಿ ಕಾಣಬಹುದಾಗಿದೆ. ಬಾದಾಮಿಯ ಉತ್ತರಕೋಟೆ, ಕುಟಕನಕೇರಿಯ ಶಿಲಾಶ್ರಯಗಳಲ್ಲಿ ಮಾಲಗಿತ್ತಿ ಶಿವಾಲಯದ ಮುಂದಿರುವ

---

೧೦. ಅಶೋಕ ಟಿ ಅಕ್ಕಿ, ಕಲಾಚರಿತ್ರೆ, ಪು. ೧೦೮.

ಬತೇರಿಯ ಕೆಳಗಿನ ಗುಹೆಯಲ್ಲಿ ಚಾಲುಕ್ಯರ ಆರಂಭಿಕ ಭಿತ್ತಿ ಚಿತ್ರಗಳನ್ನು ಕಾಣಬಹುದು. ಜೊತೆಗೆ ಮಾನವನಿರ್ಮಿತ ಗುಹೆಯಾದ ಮೇಣ ಬಸಿದಿಯ ೩ನೇ ವೈಷ್ಣವ ಗುಹೆಯಲ್ಲಿ ಭಿತ್ತಿ ಚಿತ್ರಗಳನ್ನು ಕಾಣಬಹುದಾಗಿದೆ. ಹಾಗೆಯೇ ಚಾಲುಕ್ಯರ ವ್ಯಾಪ್ತಿಯಲ್ಲಿಯೇ ಬರುವ, ಇಂದಿನ ಹುನಗುಂದ ತಾಲ್ಲೂಕಿನ ಐಹೊಳೆಯ ಮಾನವನಿರ್ಮಿತ ರಾವಣಫಡಿ ಗುಹಾಲಯದಲ್ಲಿಯೂ ಭಿತ್ತಿ ಚಿತ್ರಗಳನ್ನು ಕಾಣಬಹುದಾಗಿದೆ.

**ii. ಚಿತ್ರ ರಚನೆಯ ತಂತ್ರ-ವಿಧಾನಗಳು**

ಜಿಲ್ಲೆಯ ಚಾಲುಕ್ಯರ ಕಾಲದ ಆರಂಭಿಕ ಚಿತ್ರಗಳು ಸ್ವಾಭಾವಿಕ ಗುಹೆಗಳು, ಶಿಲಾಶ್ರಯಗಳಲ್ಲಿ ರಚಿತವಾಗಿವೆ. ಇವುಗಳ ನಂತರದಲ್ಲಿ ರಚನೆಗೊಂಡಿರುವ ಚಿತ್ರಗಳನ್ನು ಮಾನವ ಕೊರೆದು ನಿರ್ಮಿಸಿದ ಗುಹೆಗಳ ಗೋಡೆಗಳ ಮೇಲೆ ಚಿತ್ರಿಸಲಾಗಿದೆ. ಸ್ವಾಭಾವಿಕ ಗುಹೆಯಲ್ಲಿ ರಚಿಸಲಾದ ಚಿತ್ರಗಳ ಹಿನ್ನೆಲೆಗೆ ದಪ್ಪವಾದ ಭಿತ್ತಿಯ ಪದರು ನಿರ್ಮಿಸದೇ ಜಿಗಟು ಮಣ್ಣಿನ ತೆಳುವಾದ ಪದರವನ್ನು ಲೇಪಿಸಿ, ಅದರ ಮೇಲೆ ಹಳದಿವರ್ಣದ ಲೇಪನ ಮಾಡಲಾಗಿದೆ. ಹಳದಿ ಲೇಪನದ ಮೇಲೆ ಕೇವಲ ಕೆಂಪುವರ್ಣ ಚಿತ್ರಗಳನ್ನು ರಚಿಸಿದ್ದಾರೆ. ಈ ಪ್ರಾರಂಭಿಕ ಹಂತದ ಚಿತ್ರಗಳಲ್ಲಿ ಚಿತ್ರಗಳ ರಚನೆಗೆ ಕೇವಲ ಒಂದೇ ಒಂದು ಬಣ್ಣವನ್ನು ಬಳಸಲಾಗಿದ್ದು, ಇದು ಚಾಲುಕ್ಯರ ಪ್ರಾರಂಭಿಕ ಚಿತ್ರಗಳು ಎನ್ನುವುದಕ್ಕೆ ಪುಷ್ಠಿ ನೀಡುತ್ತದೆ. ಹೆಚ್ಚಾಗಿ ಕೆಂಪುವರ್ಣದಿಂದ ಹೊರರೇಖೆಗಳಿರುವ ಚಿತ್ರಗಳಿವೆ. ಕೇವಲ ಒಂದು ಚಿತ್ರದಲ್ಲಿ ಮಾತ್ರ ಚಿತ್ರಗಳಿಗೆ ಚಪ್ಪಟೆ ವರ್ಣಲೇಪನ ಮಾಡಿ ಅದಕ್ಕೆ ಕಪ್ಪುಬಣ್ಣದ ಹೊರರೇಖೆ ಎಳೆದಿರುವುದು ಕಂಡುಬರುತ್ತದೆ.

ಮಾನವನಿರ್ಮಿತ ಗುಹೆಗಳಲ್ಲಿರುವ ಗೋಡೆಗಳು ಅಥವಾ ಮೇಲ್ಛಾವಣಿಗಳು ಸಮತಟ್ಟಾದ ಮೇಲ್ಮೈಯನ್ನು ಹೊಂದಿರುವುದರಿಂದ ಭಿತ್ತಿ ಲೇಪನಕ್ಕೆ ಹೆಚ್ಚು ಅನುಕೂಲಕರವಾಗಿವೆ. ರಾವಣಫಡಿ ಹಾಗೂ ವೈಷ್ಣವ ಗುಹೆಗಳಲ್ಲಿ ೦.೨ ಮಿ.ಮೀ. ದಪ್ಪವಾದ ಭಿತ್ತಿಯನ್ನು ಲೇಪಿಸಿ ಅದರ ಮೇಲೆ ಚಿತ್ರಗಳನ್ನು ರಚಿಸಲಾಗಿದೆ. ಈ ಗುಹೆಗಳ ಛತ್ತು ಹಾಗೂ ಮೇಲ್ಛಾವಣಿಗಳಲ್ಲಿ ಭಿತ್ತಿ ಚಿತ್ರಗಳನ್ನು ರಚಿಸಲಾಗಿದ್ದು, ರಾಜದರ್ಬಾರ ಹಾಗೂ ಯುದ್ಧಕ್ಕೆ ಸಂಬಂಧಿಸಿದ ಚಿತ್ರಗಳನ್ನು ರಚಿಸಲಾಗಿದೆ. ಆರಂಭಿಕ ಹಂತದಲ್ಲಿ ಬಳಕೆಯಾದ ಕೆಂಪು ಹಾಗೂ ಹಳದಿ ವರ್ಣಗಳ ಜೊತೆಗೆ ನೀಲಿ, ಹಸಿರು, ಕಪ್ಪುವರ್ಣಗಳು ಬಳಕೆಯಾಗಿರುವುದು ಗಮನಾರ್ಹ. ಚಿತ್ರಗಳಲ್ಲಿಯ ಆಕೃತಿಗಳಿಗೆ ಚಪ್ಪಟೆವರ್ಣ ಲೇಪನ ಮಾಡಿದ್ದು ಅತ್ಯಂತ ಸೂಕ್ಷ್ಮವಾದ ಹೊರರೇಖೆಗಳನ್ನು ಎಳೆಯಲಾಗಿದೆ. ಮಾತ್ರವಲ್ಲದೇ ಮೊಟ್ಟಮೊದಲು ಚಿತ್ರಗಳಿಗೆ ಸುತ್ತಲೂ ಹೂಬಳ್ಳಿಗಳ ನಕ್ಷೆಗಳನ್ನು ಎಳೆದಿರುವುದು ವಿಶೇಷ.

ಗುಹಾಭಿತ್ತಿ ಚಿತ್ರಕಲೆಯನ್ನು ಅಧ್ಯಯನದ ದೃಷ್ಟಿಯಿಂದ: ೧. ಸ್ವಾಭಾವಿಕ ಗುಹೆಗಳಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆ, ೨. ಮಾನವನಿರ್ಮಿತ ಗುಹೆಗಳಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆ ಎಂದು ೨ ವಿಭಾಗಗಳಾಗಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ.

### iii. ಚಿತ್ರಗಳ ವಸ್ತು ವಿಷಯ

#### ಸ್ವಾಭಾವಿಕ ಗುಹೆಗಳಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆ

ನೈಸರ್ಗಿಕವಾಗಿ ನಿರ್ಮಿತವಾದ ಶಿಲಾಗುಹೆ, ಶಿಲಾಶ್ರಯಗಳನ್ನು ಇಲ್ಲಿ ಸ್ವಾಭಾವಿಕ ಗುಹೆಗಳೆಂದು ಪರಿಗಣಿಸಿದೆ. ಪುರಾತನ ಭಿತ್ತಿಚಿತ್ರಗಳ ನೆಲೆಗಳಾದ ಸ್ವಾಭಾವಿಕ ಗುಹೆಗಳು, ಶಿಷ್ಟ ಪರಂಪರೆಯ ಐತಿಹಾಸಿಕ ಕಾಲದ ಆರಂಭಿಕ ಭಿತ್ತಿಚಿತ್ರಗಳೂ ಇಲ್ಲಿಯೇ ರಚನೆಯಾಗಿವೆ. ಅಂತೆಯೇ ಕರ್ನಾಟಕದ ಬಾದಾಮಿ, ಮಾಸ್ಕಿ, ಯಾದಗಿರಿಗಳಲ್ಲಿಯೂ ಐತಿಹಾಸಿಕ ಚಿತ್ರಗಳನ್ನು ಕಾಣಬಹುದು. ಚಾಲುಕ್ಯರ ಆರಂಭಿಕ ಹಂತದ ಭಿತ್ತಿಚಿತ್ರಗಳನ್ನು ಜಿಲ್ಲೆಯ ಬಾದಾಮಿಯ ಪರಿಸರದ ಸ್ವಾಭಾವಿಕ ಗುಹೆಗಳಲ್ಲಿ ರಚಿಸಲಾಗಿದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

#### ೧. ಗಣ್ಯಸ್ತ್ರೀ ಮತ್ತು ಮಹಿಳೆಯರು

ಬಾದಾಮಿಯ ಉತ್ತರಬೆಟ್ಟದಲ್ಲಿ 'ಸಾಬರಘಡಿ' ಎಂದು ಕರೆಯಲಾಗುವ ಸ್ಥಳದಿಂದ ಪೂರ್ವಕ್ಕೆ ಸ್ವಲ್ಪ ದೂರದಲ್ಲಿ ಎತ್ತರವಾದ ಬೃಹತ್ ಶಿಲೆಯೊಂದರ ಮೇಲೆ ಇತಿಹಾಸ ಕಾಲದ ಭಿತ್ತಿ ಚಿತ್ರಗಳಿದ್ದು, ಇವನ್ನು ಅ.ಸುಂದರ ಅವರು ಶೋಧಿಸಿದ್ದಾರೆ. ಈ ಚಿತ್ರದಲ್ಲಿ ಮಹಿಳೆಯರ ಆಕೃತಿಗಳು ಚಿತ್ರಿತಗೊಂಡಿವೆ. ಗಣ್ಯಸ್ತ್ರೀಯಂತೆ ಕಾಣುವ ಮಹಿಳೆ ಮಧ್ಯದಲ್ಲಿ ಕುಳಿತಿದ್ದು, ಅವಳ ಬಲಬದಿಗೆ ಇಬ್ಬರು ಸ್ತ್ರೀಯರು ನಿಂತಿದ್ದಾರೆ. ಇನ್ನೂ ಮೂವರು ಸ್ತ್ರೀಯರು ಕಮಲಪುಷ್ಪ ಹಿಡಿದುಕೊಂಡು ಗಣ್ಯಸ್ತ್ರೀಯ ಎದುರುಗಡೆಯಲ್ಲಿ ನಿಂತಿದ್ದಾರೆ. ಇಲ್ಲಿ ಕಮಲಪುಷ್ಪ ಹಿಡಿದು ಗಣ್ಯಸ್ತ್ರೀ ಎದುರಿಗೆ ನಿಂತ ಮಹಿಳೆಯರು ಆಕೆಯ ಸಖಿಯರಂತೆ ಕಂಡುಬರುತ್ತಾರೆ. ಅವಳ ಬಲಬದಿಗೆ ನಿಂತ ಇಬ್ಬರು ಮಹಿಳೆಯರು ಆಕೆಯ ಪಾರಿಚಾರಿಕೆಯರು ಎನ್ನಬಹುದು. ಇಲ್ಲಿನ ಆಕೃತಿಗಳಲ್ಲಿನ ಕೈಬೆರಳುಗಳು ಪ್ರಮಾಣ ಮೀರಿ ದೊಡ್ಡದಾಗಿವೆ. ಹೀಗೆಯೇ ರಾಣಿಯ ಪರಿಚಾರಿಕೆ ಮತ್ತು ಸಖಿಯರಿಂದ ಸೇವೆ ಪಡೆಯುತ್ತಿರುವ ಚಿತ್ರವನ್ನು ಬಾದಾಮಿಯ ೩ನೇ ವೈಷ್ಣವ ಗುಹೆಯಲ್ಲಿಯೂ ಕಾಣಬಹುದಾಗಿದೆ. ಆದರೆ ಈ ಚಿತ್ರವು ಬಹುಶಃ ಬಾದಾಮಿಯ ವೈಷ್ಣವ ಗುಹೆಯ ವರ್ಣಚಿತ್ರಗಳಿಗಿಂತ ಮೊದಲಿನವಾಗಿವೆ.[೧೧] ಚಿತ್ರಗಳ ಶೈಲಿ, ಭಿತ್ತಿಸಿದ್ಧತಾ ವಿಧಾನ ಇವುಗಳನ್ನು ನೋಡಿದಾಗ ಇವು ಚಾಲುಕ್ಯರ ಪ್ರಾರಂಭಿಕ ಭಿತ್ತಿಚಿತ್ರಗಳು ಎನ್ನಬಹುದು.

#### ೨. ಕಮಲಪುಷ್ಪ ಹಿಡಿದ ಗಣ್ಯಸ್ತ್ರೀ

ಬಾದಾಮಿಯ ಉತ್ತರ ಬೆಟ್ಟದಲ್ಲಿ "ಸಾಬರಘಡಿ" ಎಂದು ಕರೆಯಲಾಗುವ ಸ್ಥಳದಿಂದ ಪೂರ್ವಕ್ಕೆ ಸ್ವಲ್ಪ ದೂರದಲ್ಲಿರುವ ಬೃಹತ್ ಶಿಲೆಯಲ್ಲಿ ರಚಿತವಾಗಿರುವ, ಗಣ್ಯಸ್ತ್ರೀ ಹಾಗೂ ಮಹಿಳೆಯರ ಚಿತ್ರದ ಪಕ್ಕದಲ್ಲಿಯೇ ಚಿತ್ರವನ್ನು ರಚಿಸಲಾಗಿದೆ. ಡಾ. ಶಿಲಾಕಾಂತ ಪತ್ತಾರ ಅವರು ಅದೇ ಶೈಲಿಯಲ್ಲಿರುವ ಪೂರ್ವ ಚಿತ್ರವನ್ನು ಪತ್ತೆ ಮಾಡಿದ್ದು, ಇದೂ ಕೂಡಾ ಕೈಯಲ್ಲಿ ಕಮಲಪುಷ್ಪ ಹಿಡಿದ ಗಣ್ಯಸ್ತ್ರೀಯದ್ದಾಗಿದೆ.[೧೨]

---

೧೧. ಅ. ಸುಂದರ, ಚಾಲುಕ್ಯಶ್ರೀ, ವಿಶಿಷ್ಟ ವರ್ಣ ಚಿತ್ರಕಲೆಯ ಆಗರ, ಬಾದಾಮಿ, ಪು. ೧೧೮.

೧೨. ಶಿಲಾಕಾಂತ ಪತ್ತಾರ್, ಇತಿಹಾಸ ದರ್ಶನ(ಸಂಪುಟ ೧೩), ಮತ್ತೆರಡು ಚಾಲುಕ್ಯ ವರ್ಣಚಿತ್ರಗಳ ಶೋಧ, ಪು. ೧೧೭-೧೧೯.

ಇದೂ ಕೂಡ ಒಂದು ಸಂಯೋಜನ ಚಿತ್ರವಾಗಿದ್ದು, ಸ್ತ್ರೀಚಿತ್ರ ಮಾತ್ರ ಉಳಿದುಕೊಂಡಿದೆ. ಇಲ್ಲಿಯ ಗಣ್ಯಸ್ತ್ರೀ ಹಿಡಿದ ಕಮಲಪುಷ್ಪ ಆಕೆಯ ಮುಖಕ್ಕಿಂತ ದೊಡ್ಡದಾಗಿದೆ. ಕಿವಿಯಲ್ಲಿ ನೇತಾಡುತ್ತಿರುವ ಕುಂಡಲಗಳು ಕಿವಿಗಿಂತ ದೊಡ್ಡದಾಗಿದೆ. ಕೊರಳಲ್ಲಿ ದುಂಡಾದ ಸರವಿದ್ದು, ನಡುವಿನ ಪಟ್ಟಿಯು ಬಾದಾಮಿ ಶಿಲ್ಪಗಳನ್ನು ಹೋಲುತ್ತದೆ. ಈ ಸ್ತ್ರೀಯ ಕೈಬೆರಳುಗಳು ಹಿಂದಿನ ಗಣ್ಯಸ್ತ್ರೀಯರಂತೆ ಪ್ರಮಾಣ ಮೀರಿ ಉದ್ದವಾಗಿದ್ದು, ಇವೆರಡೂ ಚಿತ್ರಗಳನ್ನು ಒಬ್ಬನೇ ಕಲಾವಿದ ರಚಿಸಿರಬಹುದಾಗಿದೆ.

**೩. ಕಾದಾಡುತ್ತಿರುವ ಸೈನಿಕರು**

ಮಾಲಗಿತ್ತಿ ಶಿವಾಲಯದ ಮುಂದಿರುವ ಕೋಟೆಯ ಬತೇರಿಯ ಕೆಳಭಾಗದಲ್ಲಿ ಬೃಹತ್ತಾದ ಕಲ್ಲುಬಂಡೆಯೊಂದಿದ್ದು, ಅದರ ಕೆಳಭಾಗದ ಒಳಮೈ ಸ್ವಾಭಾವಿಕ ಗುಹೆಯಂತೆ ಕಾಣುತ್ತಿದ್ದು, ಅಲ್ಲಿಯ ಬಂಡೆಯ ಮೇಲೆ ವರ್ಣಚಿತ್ರಗಳನ್ನು ರಚಿಸಲಾಗಿದೆ. ಹಿನ್ನೆಲೆಯ ಹಳದಿವರ್ಣದ ಮೇಲೆ ಕೆಂಪುವರ್ಣದಿಂದ ಸೈನಿಕರ ಚಿತ್ರಗಳನ್ನು ರಚಿಸಲಾಗಿದ್ದು, ಇವರ ಕೈಯಲ್ಲಿ ಖಡ್ಗ ಗುರಾಣಿಗಳನ್ನು ಹಿಡಿದು ಕಾದಾಡುತ್ತಿದ್ದಾರೆ. ಹಿಂದಿನ ಎರಡೂ ಚಿತ್ರಗಳಲ್ಲಿ ಬಳಸಲಾಗಿರುವ ತಂತ್ರ ವಿಧಾನಗಳನ್ನೇ ಇಲ್ಲಿಯೂ ಬಳಸಲಾಗಿದೆ.

**೪. ಸೈನಿಕರು**

ಬಾದಾಮಿಯಿಂದ ಗುಳೇದಗುಡ್ಡಕ್ಕೆ ಹೋಗುವ ದಾರಿಯಲ್ಲಿರುವ ಕುಟಕನಕೇರಿಯಲ್ಲಿ ಬೃಹತ್ ಬಂಡೆಯ ಶಿಲಾಶ್ರಯದಲ್ಲಿ ಈ ಚಿತ್ರವಿದೆ. ಡಾ.ಎಸ್.ಸಿ. ಪಾಟೀಲ ಹಾಗೂ ಅವರ ಸ್ನೇಹಿತರು ಈ ಐತಿಹಾಸಿಕ ಚಿತ್ರವನ್ನು ಪತ್ತೆ ಮಾಡಿದ್ದು, ಯುದ್ಧ ಸೈನಿಕರ ಚಿತ್ರವಾಗಿದೆ. ಕೈಯಲ್ಲಿ ಖಡ್ಗ, ಗುರಾಣಿಗಳನ್ನು ಹಿಡಿದ ನಾಲ್ಕು ಜನ ಸೈನಿಕರು ಪರಸ್ಪರ ಕಾದಾಡುತ್ತಿದ್ದಾರೆ. ನಾಲ್ಕು ಜನರಲ್ಲಿ ಇಬ್ಬರು ಬಲಗಡೆಗೆ, ಇಬ್ಬರು ಎಡಗಡೆಗೆ ನಿಂತು ಅಕ್ರಮಿಸುತ್ತಿರುವಂತೆ ಚಿತ್ರಿಸಲಾಗಿದೆ. ಬಲಗಡೆ ಇರುವ ಇಬ್ಬರೂ ಸೈನಿಕರ ಚಿತ್ರಗಳು ಅಸ್ಪಷ್ಟವಾಗಿವೆ. ಎಡಗಡೆಯ ವ್ಯಕ್ತಿಗಳ ರೂಪಗಳು ಸ್ಪಷ್ಟವಾಗಿದ್ದು, ಪ್ರಮಾಣಬದ್ಧವಾಗಿವೆ. ಎಲ್ಲಾ ವ್ಯಕ್ತಿಗಳ ತಲೆಯ ಮೇಲೂ ತುರುವಿನಂತಹ ಶಿರಸ್ತ್ರಾಣವಿದೆ. ಕೆಂಪು ಬಣ್ಣದಿಂದ ಚಪ್ಪಟೆಯಾಗಿ ವರ್ಣಲೇಪನ ಮಾಡಿದ್ದು, ಕಪ್ಪುಬಣ್ಣದ ಹೊರರೇಖೆಯನ್ನು ಎಳೆಯಲಾಗಿದೆ. ಮಾಲಗಿತ್ತಿ ಶಿವಾಲಯದ ಹತ್ತಿರದಲ್ಲಿ ರಚಿಸಲಾದ ಸೈನಿಕರ ಚಿತ್ರವನ್ನೇ ಹೋಲುತ್ತಿದ್ದರೂ ಸಹ, ಇಲ್ಲಿಯ ವರ್ಣಲೇಪನ ಹಿಂದಿನವುಗಳಿಗಿಂತ ಭಿನ್ನವಾಗಿವೆ.

ಹೀಗೆ ಚಾಲುಕ್ಯರ ಕಾಲದ ಆರಂಭಿಕ ಹಂತದ ಈ ನಾಲ್ಕೂ ಭಿತ್ತಿ ಚಿತ್ರಗಳಲ್ಲಿಯೂ ಸಹ ಹಿನ್ನೆಲೆಯನ್ನು ತೆಳುವಾದ ಹಳದಿ ಭಿತ್ತಿಯ ಮೇಲೆ ಕೆಂಪುವರ್ಣದಿಂದ ಚಿತ್ರಗಳನ್ನು ರಚಿಸಲಾಗಿದೆ. ಭಿತ್ತಿ ಸಿದ್ಧತೆಯಲ್ಲಿ ವಿಷ್ಣು ಗುಹಾಲಯದ ಭಿತ್ತಿ ದಪ್ಪವಾಗಿದ್ದರೆ, ಇದು ತೆಳುವಾದ ಜಿಗುಟು ಮಣ್ಣಿನ ಲೇಪನವಾಗಿದೆ. ಚಿತ್ರಗಳ ರೇಖಾಲಾಲಿತ್ಯವು ವೈಷ್ಣವ ಗುಹೆಯಲ್ಲಿ ಪ್ರಬುದ್ಧವಾಗಿದ್ದರೆ, ಇಲ್ಲಿ ಪ್ರಾರಂಭಿಕ ಹಂತದಲ್ಲಿ ವೈಷ್ಣವ ಗುಹೆಯ ಚಿತ್ರಗಳು ಬಹುವರ್ಣದಲ್ಲಿದ್ದರೆ ಇದು ಕೇವಲ ಕೆಂಪು ಬಣ್ಣದ ಹೊರರೇಖೆಯಲ್ಲಿ ಮಾತ್ರ ರಚನೆಯಾಗಿವೆ. ಈ ಎಲ್ಲಾ ಅಂಶಗಳೂ ಕೂಡಾ ಚಿತ್ರಗಳ ಆರಂಭಿಕ ಹಂತವನ್ನು ತೋರಿಸುತ್ತಿದ್ದು, ಇವು ವೈಷ್ಣವ ಗುಹೆಯ ಚಿತ್ರಗಳಿಗಿಂತ ಮೊದಲಿನವು ಎನ್ನುವುದಕ್ಕೆ ಪೂರಕ ಸಂಗತಿಗಳನ್ನು ಒದಗಿಸಿಕೊಡುತ್ತವೆ.

**ಮಾನವನಿರ್ಮಿತ ಗುಹೆಗಳಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆ**

ಏಕಶಿಲೆಯಲ್ಲಿ ಕೊರೆದು ನಿರ್ಮಿಸಿದ ಗುಹೆಗಳನ್ನು ಮಾನವನಿರ್ಮಿತ ಗುಹೆಗಳೆಂದು ಇಲ್ಲಿ ಪರಿಗಣಿಸಿದೆ. ಭಾರತದಂತೆ ಚೀನಾ, ಜಪಾನ್, ಬರ್ಮಾ, ಶ್ರೀಲಂಕಾ, ಅಪಘಾನಿಸ್ತಾನ, ತುರ್ಕಸ್ತಾನ ಮೊದಲಾದ ದೇಶಗಳಲ್ಲಿ ಶಿಷ್ಟ ಪರಂಪರೆಯ ಭಿತ್ತಿ ಚಿತ್ರಕಲೆಯ ಮೊದಲ ನಿದರ್ಶನಗಳು ಮಾನವ ನಿರ್ಮಿತ ಕೊರೆದ ಗುಹೆಗಳಲ್ಲೇ ಕಂಡುಬಂದಿವೆ.

ಇತಿಹಾಸ ಪ್ರಾರಂಭ ಕಾಲಕ್ಕೆ ಬಂದಂತೆ ಚಿತ್ರರಚನಾ ವಿಧಿವಿಧಾನಗಳಲ್ಲಿ ಶಾಸ್ತ್ರೀಯ ಪದ್ಧತಿಗಳು ಬೆಳೆದುಬಂದಂತೆ ಚಿತ್ರರಚನೆಗಾಗಿ ನೆಲೆಗಳನ್ನು ಆಯ್ದುಕೊಳ್ಳುವ ಕ್ರಮದಲ್ಲಿ ಬದಲಾವಣೆ ಉಂಟಾಯಿತು ಎನ್ನಬಹುದು. ಈ ಮೊದಲು ಸ್ವಾಭಾವಿಕವಾಗಿರುವ ಶಿಲಾಗುಹೆಗಳು ಮತ್ತು ಶಿಲಾಶ್ರಯ ತಾಣಗಳನ್ನು ಚಿತ್ರರಚನೆಗಾಗಿ ಬಳಸಿಕೊಳ್ಳುತ್ತಿದ್ದರೆ ಈ ಹಂತದಲ್ಲಿ ಬೃಹತ್ ಬಂಡೆಗಳನ್ನು ಅಥವಾ ಏಕಶಿಲಾ ಬೆಟ್ಟಗಳನ್ನು ಕೊರೆದು ಗುಹೆಗಳಾಗಿ ಮಾರ್ಪಡಿಸಿಕೊಂಡು ಅವುಗಳಲ್ಲಿ ಚಿತ್ರರಚನೆಯನ್ನು ಪ್ರಾರಂಭಿಸಿದರು. ಈ ಸಮಯಕ್ಕೆ ರಾಜವಂಶಗಳು ಧಾರ್ಮಿಕ ಪಂಗಡಗಳು ಹುಟ್ಟಿಕೊಂಡಿದ್ದು, ತಾವು ಅನುಸರಿಸುತ್ತಿದ್ದ ಧರ್ಮಪ್ರಚಾರಾರ್ಥವಾಗಿ ಭಿತ್ತಿಚಿತ್ರಕಲೆಯನ್ನು ಬಳಸಿಕೊಂಡರು. ಅದಕ್ಕಾಗಿ ಅವರು ಇಂತಹ ಕಲ್ಲಿನಲ್ಲಿ ಕೊರೆದ ಗುಹೆಗಳನ್ನು ಆಯ್ದುಕೊಂಡರು.

ಬೌದ್ಧರು ಚೈತ್ಯ ವಿಹಾರಗಳಾಗಿಯೂ, ಹಿಂದೂಗಳು ದೇವಾಲಯಗಳಾಗಿಯೂ, ಜೈನರು ಬಸದಿಗಳಾಗಿಯೂ ಇಂತಹ ಕೊರೆದ ಗುಹೆಗಳನ್ನು ನಿರ್ಮಿಸಿ ಅವುಗಳಲ್ಲಿ ಚಿತ್ರ ಬರೆಸಿದರು. ಈ ಕಾಲಕ್ಕಾಗಲೇ ಭಿತ್ತಿ ಚಿತ್ರರಚನಾ ಪ್ರಕ್ರಿಯೆಯಲ್ಲಿ ಆಧಾರಕ್ಕೆ(ಬಂಡೆಗೆ) ಮಿಶ್ರಣ ಲೇಪಿಸಿ ಅದರ ಮೇಲೆ ಚಿತ್ರ ರಚಿಸುವ ವಿಧಾನ ಬೆಳೆದುಬಂದಿತ್ತು ಎಂಬುದು ಅನೇಕ ಪ್ರಾಚೀನ ಕೊರೆದ ಗುಹಾ ಚಿತ್ರಗಳನ್ನು ನೋಡಿ ಹೇಳಬಹುದಾಗಿದೆ. ಅದಾಗಲೇ ಧಾರ್ಮಿಕ ಸ್ವರೂಪವನ್ನು ಪಡೆದುಕೊಂಡಿದ್ದ ಭಿತ್ತಿ ಚಿತ್ರಕಲೆ, ಧಾರ್ಮಿಕ ಚಟುವಟಿಕೆಯ ಸ್ಥಾನಗಳಾಗಿದ್ದ ಇಂತಹ ಗುಹಾಲಯಗಳಲ್ಲೇ ಪ್ರಮುಖವಾಗಿ ರಚನೆಗೊಳ್ಳತೊಡಗಿದ್ದು ಕಂಡುಬರುತ್ತದೆ. ಇಂಥ ಹಲವು ಕಾರಣಗಳಿಂದಾಗಿ ಬಂಡೆಯಲ್ಲಿ ಕೊರೆದ ಗುಹೆಗಳಲ್ಲಿ ಭಿತ್ತಿ ಚಿತ್ರರಚನೆ ಹೆಚ್ಚು ಒಲವು ಗಳಿಸಿಕೊಂಡಿತು. ಬಂಡೆಯಲ್ಲಿ ಕೊರೆದ ಗುಹಾಲಯಗಳಲ್ಲಿ ರಚನೆಯಾದ ಪ್ರಾಚೀನ ಭಿತ್ತಿಚಿತ್ರಗಳು ಪ್ರಪಂಚದ ಅನೇಕ ಕಡೆಗಳಲ್ಲಿ ಕಂಡುಬಂದಿವೆ.

ಭಾರತದ ಅಜಂತಾ, ಎಲ್ಲೋರಾ, ಸಿತ್ತನಿವಾಸಲ್, ಎಲಿಫೆಂಟಾ, ಬಾಘ್ ಮುಂತಾದ ಕಡೆಗಳಲ್ಲಿ ಕಲ್ಲಿನಲ್ಲಿ ಕೊರೆದ ಗುಹಾಲಯಗಳಲ್ಲಿ ಭಿತ್ತಿ ಚಿತ್ರಗಳು ಕಂಡುಬಂದಿವೆ. ಭಾರತದಲ್ಲಿ ಶಾಸ್ತ್ರೀಯ ವಿಧಾನದ (ಶಿಷ್ಟಪರಂಪರೆಯ) ಅತ್ಯಂತ ಪ್ರಾಚೀನ ಭಿತ್ತಿಚಿತ್ರಗಳು ಕೊರೆದ ಗುಹೆಗಳಲ್ಲೇ ಕಂಡುಬಂದಿವೆ. ಕ್ರಿ.ಪೂ. ೨ನೇ ಶತಮಾನದಷ್ಟು ಪೂರ್ವದಲ್ಲೇ ಅಜಂತಾದಲ್ಲಿನ ಕೊರೆದ ಗುಹೆಗಳಲ್ಲಿ ಚಿತ್ರರಚನೆ ನಡೆಯುತ್ತಿತ್ತೆಂದು ವಿದ್ವಾಂಸರು ತರ್ಕಿಸಿದ್ದಾರೆ.

ಹಾಗೆಯೇ ಕರ್ನಾಟಕದಲ್ಲೂ ಶಾಸ್ತ್ರೀಯ ವಿಧಾನದ(ಶಿಷ್ಟಪರಂಪರೆಯ) ಭಿತ್ತಿ ಚಿತ್ರಗಳು ಬಾದಾಮಿ ಮತ್ತು ಐಹೊಳೆಯ ಕೊರೆದ ಗುಹೆಗಳಲ್ಲಿ ಕಂಡುಬಂದಿವೆ. ಚಾಲುಕ್ಯರ ಕಾಲದಲ್ಲಿ ಈ ಶಿಲಾಗುಹೆಗಳನ್ನು

ಕೊರೆದು ಅದರಲ್ಲಿ ಚಿತ್ರ ರಚಿಸಲಾಗಿದೆ. ಬಾದಾಮಿಯ ವೈಷ್ಣವ ಗುಹೆಯಲ್ಲಿ ಅಲ್ಪಸ್ವಲ್ಪ ಚಿತ್ರಗಳು ಉಳಿದಿದ್ದರೆ ಐಹೊಳೆಯ ರಾವಣಫಡಿ ಗುಹೆಯ ಚಿತ್ರಗಳು ಸಂಪೂರ್ಣ ಅಳಿಸಿಹೋಗಿ ಬಣ್ಣದ ಲೇಪನದ ಕುರುಹುಗಳನ್ನು ಮಾತ್ರ ಊಹಿಸಬಹುದಾಗಿದೆ.

ಐಹೊಳೆಯ ರಾವಣಫಡಿ ಗುಹಾಲಯ, ಬಾದಾಮಿಯ ವೈಷ್ಣವ ಗುಹಾಲಯ, ಉತ್ತರ ಕರ್ನಾಟಕದ ಕೊರೆದ ಗುಹಾಲಯದಲ್ಲಿ ಕಂಡುಬರುವ ಭಿತ್ತಿಚಿತ್ರ ನೆಲೆಗಳು.

*** ಐಹೊಳೆಯ ರಾವಣಫಡಿ ಗುಹಾಲಯ**

ಬಾದಾಮಿಯ ಉತ್ತರ ಬೆಟ್ಟದಲ್ಲಿ ಶಿಲಾಶ್ರಯ ವರ್ಣಚಿತ್ರಗಳ ರಚನೆಯ ಮುಂದುವರಿಕೆಯಾಗಿ ಮತ್ತು ಮಾಲಗಿತ್ತಿ ಶಿವಾಲಯದ ಮುಂದಿನ ಬತೇರಿಯ ಕೆಳಗಿರುವ ಶಿಲಾಶ್ರಯ ವರ್ಣಚಿತ್ರದ ಪರಿಷ್ಕೃತ ರೂಪವಾಗಿ ಐಹೊಳೆಯ ರಾವಣಫಡಿ ಗುಹಾಲಯದಲ್ಲಿ ಭಿತ್ತಿ ಚಿತ್ರಗಳು ಕಂಡುಬರುತ್ತವೆ. ರಾವಣಫಡಿಯ ಗುಹೆಯು ಕ್ರಿ.ಶ. ೬ನೇ ಶತಮಾನದ ಮಧ್ಯಕಾಲದಲ್ಲಿ ರಚನೆಯಾಗಿ ಭಿತ್ತಿ ಚಿತ್ರಗಳೂ ಅದೇ ಸಮಯದಲ್ಲಿ ಬರೆಸಲ್ಪಟ್ಟವು ಎನ್ನುವ ಮಾತು ನಿಜವೆನಿಸುತ್ತದೆ. ಹಾಗಾದಾಗ ಇವು ಬಾದಾಮಿಯ ವೈಷ್ಣವ ಗುಹೆಯ ಭಿತ್ತಿ ಚಿತ್ರಗಳಿಗಿಂತ ಸುಮಾರು ೨೫ರಿಂದ ೩೫ ವರ್ಷಗಳಷ್ಟು ಪುರಾತನವಾದವುಗಳೆಂದು ಹೇಳಬಹುದು. ಅಂದರೆ ಕೆರೋಲ್ ರ‍್ಯಾಡ್‌ಕ್ಲಿಪ್ ಅವರ ಅಭಿಪ್ರಾಯದಂತೆ ಈ ಗುಹಾಲಯ ಕ್ರಿ.ಶ. ೫೪೫-೫೫ರಲ್ಲಿ ರಚನೆಯಾಗಿದ್ದು, ಚಿತ್ರಗಳೂ ಅದೇ ವೇಳೆಯಲ್ಲಿ ರಚಿಸಿರುವ ಸಾಧ್ಯತೆಗಳಿವೆ.

**೧. ರಾವಣಫಡಿ ಗುಹಾ ಚಿತ್ರ**

ರಾವಣಫಡಿ ಗುಹೆಯ ಭತ್ತಿನಲ್ಲಿ ಚಿತ್ರಗಳಿದ್ದು, ೦.೮೧ ಮೀಟರ್ x ೨.೧ ಮೀಟರ್ ವಿಸ್ತೀರ್ಣದಲ್ಲಿ ಚಿತ್ರಗಳು ರಚನೆಯಾಗಿದ್ದಂತೆ ಕಂಡುಬರುತ್ತದೆ. ಆದರೆ ಚಿತ್ರಗಳು ಬಹುಪಾಲು ಹಾಳಾಗಿವೆ. ಚಿತ್ರದಲ್ಲಿ ಅಸ್ಪಷ್ಟವಾಗಿ ಕಂಡುಬರುವ ವ್ಯಕ್ತಿಗಳು ಯುದ್ಧನಿರತ ಸೈನಿಕರು ಎನ್ನುವುದನ್ನು ಶೀಲಾಕಾಂತ ಪತ್ತಾರ ಅವರು ಸರಿಯಾಗಿ ಗುರುತಿಸಿದ್ದಾರೆ. ಮೇಲ್ಭಾವಣಿಯ ಬಲಭಾಗದಲ್ಲಿ ಸೈನಿಕನೊಬ್ಬ ಯುದ್ಧನಿರತನಾಗಿದ್ದು, ಆತನ ಮೇಲ್ಭಾಗದಲ್ಲಿ ಮತ್ತೊಬ್ಬ ಯೋಧ ಈಟಿಯನ್ನು ಹಿಡಿದು ತಿವಿಯುತ್ತಿರುವಂತೆ ತೋರುತ್ತದೆ. ಎಡಭಾಗದಲ್ಲಿ ಇನ್ನೊಬ್ಬ ವ್ಯಕ್ತಿ ಲೋಹಜಾಲಕವನ್ನು ಧರಿಸಿ ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ಮಧ್ಯದಲ್ಲಿ ವ್ಯಕ್ತಿಯ ಚಡ್ಡಿಯಂತಹ ಅಧೋವಸ್ತ್ರ ಧರಿಸಿದ್ದು ಅದಕ್ಕೆ ವಸ್ತ್ರವನ್ನು ಕಟಿಬಂಧವಾಗಿ ಬಿಗಿದುಕೊಂಡಿದ್ದಾನೆ. ಮೇಲ್ಭಾಗದಲ್ಲಿ ಎದೆಯ ಭಾಗಕ್ಕೆ ಕುಪ್ಪುಸದಂತಹ ಕವಚ ತೊಟ್ಟಿದ್ದು ಬಹುಶಃ ಇದು ಕಬ್ಬಿಣದ್ದಾಗಿರಬಹುದು.

ಯೋಧನ ವಸ್ತ್ರಗಳು ಕೆಂಪುಮಿಶ್ರಿತ ಕಂದುಬಣ್ಣದಲ್ಲಿದ್ದು, ಮೈಬಣ್ಣ ನಸುಹಳದಿಯಾಗಿದೆ. ಚಿತ್ರಗಳ ಮೂಲವರ್ಣ ವೈವಿಧ್ಯವು ಕಾಲಾಂತರದಲ್ಲಿ ಬೇರೆಯಾಗಿರುವ ಸಾಧ್ಯತೆಯೂ ಇದೆ. ಎಡಗಡೆಗೆ ಇರುವ ಯೋಧನ ಮೈಬಣ್ಣವು ದಟ್ಟ ನೀಲಿವರ್ಣದಲ್ಲಿದೆ. ರಾವಣಫಡಿಯ ಭಿತ್ತಿ ಚಿತ್ರಗಳು ಮೊದಲನೇ ಪುಲಕೇಶಿಯ ಕಾಲದಲ್ಲಿ ರಚಿಸಿವೆ ಎಂದು ಅಲ್ಲಿರುವ ಒಂದು ಶಾಸನದ ಆಧಾರದಿಂದ ಊಹಿಸಲಾಗಿದೆ.

ಈ ಊಹೆಗೆ ಇನ್ನಷ್ಟು ಗಟ್ಟಿ ಆಧಾರಗಳು ಬೇಕೆನಿಸುತ್ತದೆ. ಇಲ್ಲಿ ಚಿತ್ರಗಳನ್ನು ಒಂದು ಸಂಯೋಜನಾ ಕೃತಿ ಎಂದು ಪರಿಗಣಿಸಿ ಸುತ್ತಲೂ ಹೂವಿನ ನಕ್ಷೆಯ ಅಂಚನ್ನು ಹಾಕಿರುವುದು ಗಮನಾರ್ಹ ಅಂಶವಾಗಿದೆ. ಅಲ್ಲದೇ ಇಲ್ಲಿ ಮೊದಲಿನ ಕೆಂಪು ಹಳದಿವರ್ಣಗಳ ಜೊತೆಗೆ ನೀಲಿ, ಹಸಿರುಗಳು ಹೆಚ್ಚಾಗಿ ಬಳಕೆಗೊಂಡಿವೆ.

*** ಬಾದಾಮಿಯ ವೈಷ್ಣವ ಗುಹಾಲಯ**

ಕ್ರಿ.ಶ. ೫೭೮ರಲ್ಲಿ ಮಂಗಳೇಶನ ಕಾಲದಲ್ಲಿ ರಚನೆಯಾದ ಬಾದಾಮಿಯ ವೈಷ್ಣವ ಗುಹೆಯ ಭಿತ್ತಿ ಚಿತ್ರಗಳನ್ನು ಕುರಿತಾಗಿ ಹಲವರು ಅಧ್ಯಯನ ಮಾಡಿದ್ದಾರೆ. ಇವುಗಳ ಬಗೆಗೆ ವಿವರವಾಗಿ ಮೊದಲು ಬರೆದವರು ಸ್ಟೆಲ್ಲಾಕ್ರಾಮ್ರಿಷ್ ಎಂಬ ಪಾಶ್ಚಾತ್ಯ ಮಹಿಳೆ. ಚಿತ್ರದ ವರ್ಣಗಾರಿಕೆ, ವಸ್ತು ವಿಷಯಗಳನ್ನು ಕುರಿತಂತೆ ವಿವರಗಳನ್ನು ನೀಡಿದ್ದಾಳೆ. ಇದಲ್ಲದೇ ಕ್ರಿ.ಶ. ೧೮೧೮ರಲ್ಲಿಯೇ ಈ ಚಿತ್ರಗಳ ವಿಷಯವಾಗಿ 'ಥಾಮಸ್ ಮನ್ರೋ' ಹೇಳಿದ್ದನ್ನು ಕ್ರಿ.ಶ. ೧೮೫೦ರಲ್ಲಿ ಜಾನ್‌ವಿಲ್ಸನ್ ಉಲ್ಲೇಖಿಸುತ್ತಾರೆ. ಮತ್ತೆ ಕ್ರಿ.ಶ. ೧೮೭೪ರಲ್ಲಿ ಜೇಮ್ಸ್ ಬರ್ಜಸ್ ಅವರು ಇವುಗಳನ್ನು ಪರಿವೀಕ್ಷಣೆ ಮಾಡಿ ವರದಿಯೊಂದನ್ನು ನೀಡುತ್ತಾರೆ. ಅದರಲ್ಲಿ ಇಲ್ಲಿಯ ಚಿತ್ರಗಳ ವಿಷಯ, ಅವುಗಳು ಹಾಳಾದ ಸ್ಥಿತಿ, ಅಲ್ಲಿನ ಶಿಲ್ಪಗಳಿಗೆ ಬಣ್ಣ ಲೇಪಿಸಿರುವುದು ತಿಳಿಸಿದ್ದಾರೆ. ನಂತರ ೧೯೫೯ರಲ್ಲಿ ಸಿ. ಶಿವರಾಮಮೂರ್ತಿಯವರು ವೈಷ್ಣವ ಗುಹೆಯ ಈ ಚಿತ್ರಗಳ ಬಗೆಗೆ ವಿವರವಾಗಿ ಬರೆದಿದ್ದು, ಚಿತ್ರಗಳ ವಸ್ತುವಿಷಯ, ಬಣ್ಣಗಾರಿಕೆಯನ್ನು ಕುರಿತಂತೆ ಮಾಹಿತಿ ನೀಡುತ್ತಾರೆ. ಕ್ರಿ.ಶ. ೧೯೬೬ರಲ್ಲಿ ಪ್ರಕಟವಾದ ಬಿಜಾಪುರ ಜಿಲ್ಲಾ ಗ್ಯಾಜೆಟಿಯರ್‌ದಲ್ಲಿ ಈ ವೈಷ್ಣವ ಗುಹೆಯಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದ ಚಿತ್ರಗಳಿವೆ. ಶಿವಪಾರ್ವತಿಯ ಚಿತ್ರ ಇಲ್ಲಿ ಸುಂದರವಾಗಿದೆ ಎಂದು ಹೇಳಿದೆ. ಆದರೆ ಇಲ್ಲಿ ಚಿತ್ರದ ವಸ್ತುವಿಷಯ, ವರ್ಣಗಾರಿಕೆ, ಚಿತ್ರಶೈಲಿಗಳ ಕುರಿತಾಗಿ ಚರ್ಚಿಸಿದ್ದು, ಇವು ಅಜಂತಾದಂತೆ ಉತ್ತಮ ಮಟ್ಟದವುಗಳಲ್ಲ ಎಂದು ಹೇಳುತ್ತಾರೆ. ಕ್ರಿ.ಶ. ೧೯೭೮ರಲ್ಲಿ ಎಮ್.ಎಸ್. ನಾಗರಾಜರಾವ್ ಅವರು ಈ ಚಿತ್ರಗಳ ಬಗ್ಗೆ ಬರೆಯುತ್ತ ಒಂದು ಕಾಲದಲ್ಲಿ ಇಡೀ ಗುಹೆ ವರ್ಣಚಿತ್ರಗಳಿಂದ ಮತ್ತು ವರ್ಣದಿಂದ ಅಲಂಕರಿಸಲ್ಪಟ್ಟಿತ್ತು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಕ್ರಿ.ಶ. ೧೯೮೨ರಲ್ಲಿ ಚಾಲುಕ್ಯ ಶ್ರೀಯಲ್ಲಿ ಲೇಖನ ಬರೆದ ಡಾ.ಅ. ಸುಂದರ ಅವರು ಈ ಚಿತ್ರಗಳ ವಸ್ತು ವಿಷಯಗಳ ಬಗೆಗೆ ಗಮನ ಸೆಳೆಯುತ್ತಾರೆ. ಡಾ.ಸಿಂದಗಿ ರಾಜಶೇಖರ ಅವರು ಚಾಲುಕ್ಯರ ಕಲೆ ಮತ್ತು ವಾಸ್ತುಶಿಲ್ಪ ಕುರಿತು ಹೇಳುವಾಗ ಈ ಚಿತ್ರಗಳ ಬಗೆಗೆ ವಿವರಣೆ ಕೊಡುತ್ತಾರೆ. ಆಮೇಲೆ ಡಾ.ಎಸ್.ಸಿ. ಪಾಟೀಲ ಅವರು ಜನಪದ ಭಿತ್ತಿಚಿತ್ರ ಕಲೆಯ ಬಗೆಗೆ ಅಧ್ಯಯನ ಮಾಡುವಾಗ ಇವುಗಳನ್ನು ಸಾಂದರ್ಭಿಕವಾಗಿ ನೋಡಿದ್ದಾರೆ. ಡಾ.ಅ.ಲ. ನರಸಿಂಹನ್ ಅವರು ಈ ಚಿತ್ರಗಳನ್ನು ತಮ್ಮ ಅಧ್ಯಯನದಲ್ಲಿ ಹೆಸರಿಸಿದ್ದಾರೆ. ಇತ್ತೀಚೆಗೆ ಡಾ.ಶಿಲಾಕಾಂತ ಪತ್ತಾರ ಅವರು ವೈಷ್ಣವ ಗುಹೆಯ ಈ ಚಿತ್ರಗಳನ್ನು ಕುರಿತಂತೆ ಮತ್ತೊಮ್ಮೆ ಚರ್ಚೆಗೊಳಪಡಿಸಿದ್ದಾರೆ. ಇವುಗಳಲ್ಲದೇ ಸಾಮಾನ್ಯವಾಗಿ ಭಾರತ ಮತ್ತು ಕರ್ನಾಟಕ ಪ್ರಾಚೀನ ಚಿತ್ರ ಪರಂಪರೆಯನ್ನು ಹೇಳುವ ಪ್ರತಿಯೊಬ್ಬರೂ ವೈಷ್ಣವ ಗುಹೆಯ ಈ ಚಿತ್ರಗಳನ್ನು ಸಹಜವಾಗಿ ಪ್ರಸ್ತಾಪಿಸುತ್ತ ಬಂದಿದ್ದಾರೆ. ವರ್ಣಚಿತ್ರಗಳನ್ನು ರಚಿಸಲಾಗಿರುವ ಗುಹೆಯ ಗರ್ಭಗುಡಿ, ಮಂಟಪ ಮತ್ತು

ಮೊಗಸಾಲೆಗಳನ್ನು ಹೊಂದಿದೆ. ಮಂಟಪದ ಹಿಂದಣ ಗೋಡೆಯನ್ನು ಕೊರೆದು ಗರ್ಭಗೃಹ ನಿರ್ಮಿಸಲಾಗಿದೆ. ಗುಹೆಯ ಮುಂಭಾಗದಲ್ಲಿ ಕಂಬ ಮತ್ತು ಅರ್ಧ ಕಂಬಗಳನ್ನು ಕೆತ್ತಲಾಗಿದೆ. ಗುಹೆಯ ಮೇಲ್ಛಾವಣಿಯ ಹೊರಚಾಚಿದ ಬಾಗುಭಾಗದಲ್ಲಿ ಭಿತ್ತಿ ಚಿತ್ರಗಳು ಕಂಡುಬಂದಿವೆ. ಆದರೆ ಇಂದು ಭಿತ್ತಿ ಚಿತ್ರಗಳು ಇಲ್ಲಿ ಉಳಿದಿಲ್ಲ, ಗುರುತಿಸಲಾಗದಂತೆ ನಾಶವಾಗಿಹೋಗಿವೆ. ಅವುಗಳನ್ನು ಪ್ರತಿ ಮಾಡಿಟ್ಟ ಅಹಿವಾಸಿ ತಂಡದವರು ಮತ್ತು ಶ್ರೀ ಮಿಣಜಿಗಿಯವರ ಪ್ರತಿ ಕೃತಿಗಳಿಂದ ಅವುಗಳ ಬಗ್ಗೆ ತಿಳಿಯಬಹುದು. ಧಾರವಾಡದ ಇತಿಹಾಸ ಸಂಶೋಧನಾ ಸಂಸ್ಥೆಯಲ್ಲಿ ಮಿಣಜಿಗಿಯವರು ಪ್ರತಿ ಮಾಡಿಟ್ಟ ಕೃತಿಗಳು ಮತ್ತು ಧಾರವಾಡದ ಶ್ರೀನಗರದಲ್ಲಿರುವ ಶಿಲ್ಪ ಡಿ.ಎಚ್. ಕುಲಕರ್ಣಿಯವರ ವೈಯಕ್ತಿಕ ಸಂಗ್ರಹದಲ್ಲಿ ಈ ಪ್ರತಿ ಕೃತಿಗಳು ಈಗ ಸಿಗುತ್ತವೆ.

ಬಾದಾಮಿಯ ೩ನೇ ಗುಹೆಯ ಮೇಲ್ಛಾವಣಿಯ ಚಾಚು ಭಾಗದಲ್ಲಿ ಮಾತ್ರ ವರ್ಣಚಿತ್ರಗಳು ಕಂಡುಬಂದಿದ್ದು, ಮಂಗಳೇಶನ ಕಾಲದಲ್ಲಿ ಈ ಇಡೀ ಗುಹೆಯನ್ನು ವರ್ಣದಿಂದ ಮತ್ತು ವರ್ಣ ಚಿತ್ರಗಳಿಂದ ಅಲಂಕರಿಸಲಾಗಿತ್ತು ಎಂದು ಸಿ. ಶಿವರಾಮ ಮೂರ್ತಿಯವರು ಅಭಿಪ್ರಾಯಪಡುತ್ತಾರೆ. ಬಾದಾಮಿಯ ಚಿತ್ರಗಳು ಹಿಂದೂ ಸಂಪ್ರದಾಯಕ್ಕೆ ಸಂಬಂಧಪಟ್ಟಂತೆ ಇದುವರೆಗೆ ಕಂಡುಬಂದ ಅತೀ ಪುರಾತನ ಭಿತ್ತಿ ಚಿತ್ರಗಳಾಗಿವೆ. ಚಿತ್ರಗಳು ಇಲ್ಲಿ ಉದ್ದವಾದ ಪಟ್ಟಿಕೆಯಲ್ಲಿ ರಚನೆಯಾಗಿವೆ. ಈ ಚಿತ್ರಗಳನ್ನು ಕೆಳಗಿನಂತೆ ವಿವರಿಸಲಾಗಿದೆ.

**೨. ಅರಮನೆಯ ದೃಶ್ಯ**

ಈ ಚಿತ್ರದಲ್ಲಿ ಮಧ್ಯಭಾಗದಲ್ಲಿರುವ ವ್ಯಕ್ತಿಯ ಸುಂದರವಾದ ಆಸನದ ಮೇಲೆ ಕುಳಿತಿದ್ದಾನಲ್ಲದೇ ತನ್ನ ಎರಡೂ ಕಾಲುಗಳನ್ನು ಸಣ್ಣದಾದ ಆಸನದ ಮೇಲೆ ಇಟ್ಟಿದ್ದಾನೆ. ಈತನ ಮುಖವು ನಾಶವಾಗಿದ್ದು, ಕಿರೀಟವು ಸುಂದರವಾಗಿ ಕಾಣುತ್ತದೆ. ಈ ಮುಖ್ಯ ವ್ಯಕ್ತಿಯು ತನ್ನ ಎದುರಿನಲ್ಲಿ ನಡೆಯುತ್ತಿರುವ ನೃತ್ಯ ಸಂಗೀತ ಕಾರ್ಯಕ್ರಮವನ್ನು ತದೇಕ ಚಿತ್ತದಿಂದ ವೀಕ್ಷಿಸುತ್ತಿರುವಂತಿದೆ. ಈ ನೃತ್ಯ ಸಂಗೀತ ಕಾರ್ಯಕ್ರಮವನ್ನು ಮೇಲಿನ ಬಾಲ್ಕನಿಯಲ್ಲಿ ನಿಂತು ಹಲವಾರು ಜನರು ವೀಕ್ಷಿಸುತ್ತಿದ್ದಾರೆ. ಮಧ್ಯದ ಆಸನದ ವ್ಯಕ್ತಿಯು ಕೊರಳಲ್ಲಿ ಹಾರ ಪದಕಗಳನ್ನು ಧರಿಸಿದ್ದು, ಯಜ್ಞೋಪವಿತ ಇರುವುದು.

ರಾಜನಂತೆ ಕಾಣುವ ಈ ವ್ಯಕ್ತಿಯ ಪಾದದ ಬಳಿಯಲ್ಲಿ ಹಲವಾರು ಗಣ್ಯವ್ಯಕ್ತಿಗಳು ಕುಳಿತಿದ್ದಾರೆ. ಈತನ ಸುತ್ತ ಅನೇಕ ಸೇವಕರು, ಪರಿಚಾರಕರು, ಛತ್ರಚಾಮರ ಹಿಡಿದವರು ನೆರೆದಿದ್ದಾರೆ. ಎಡಬದಿಗೆ ವಾದ್ಯವೃಂದದವರಿದ್ದು, ಅಲ್ಲಿ ಒಬ್ಬಳು ಸ್ತ್ರೀ ಮತ್ತು ಒಬ್ಬ ಪುರುಷ ನೃತ್ಯ ಮಾಡುತ್ತಿದ್ದಾರೆ. ಈ ಚಿತ್ರದಲ್ಲಿಯೇ ಒಂದು ಬದಿಗೆ ರಾಜ ಪರಿವಾರದವರು ನೃತ್ಯ ವೀಕ್ಷಿಸಲು ಕಂಬಗಳನ್ನು ಹೊಂದಿದ ಮಂಟಪದಲ್ಲಿ ತೆಳು ಪರದೆಯೊಂದನ್ನು ಕಟ್ಟಿ ಮರೆಮಾಡಲಾಗಿದೆ. ಇದು ಇಂದ್ರನ ವೈಜಯಂತ ಅರಮನೆಯಲ್ಲಿನ ದೃಶ್ಯವಾಗಿರಬಹುದು. ಆ ನೃತ್ಯವು ಭರತ ಅಥವಾ ತಂಡು ಮತ್ತು ಊರ್ವಶಿಯರ ನಾಟ್ಯವಾಗಿರಬಹುದು ಎಂದು ಹೇಳಲಾಗಿದೆ. ಇಲ್ಲಿ ವಿದ್ವಾಂಸರ ಅಭಿಪ್ರಾಯಗಳನ್ನು ಕ್ರೊಡೀಕರಿಸಿ

ಶೀಲಾಕಾಂತ ಪತ್ತಾರ ಅವರು ಇದು ರಾಜನ ಆಸ್ಥಾನದ ದೃಶ್ಯವಾಗಿದೆ ಎಂದು ಹೇಳಿರುವರು. ಈ ಚಿತ್ರದ ಮೂಲಕ ಆಗಿನ ಕಾಲದ ರಾಜ ದರ್ಬಾರದಲ್ಲಿನ ದೃಶ್ಯ, ನೃತ್ಯ, ಸಂಗೀತದ ಪರಿಯನ್ನು ತಿಳಿದುಕೊಳ್ಳಲು ಈ ಚಿತ್ರ ಸಹಕಾರಿಯಾಗಿದೆ. ರಾಜನ ಆಸ್ಥಾನದಲ್ಲಿ ನಡೆಯುತ್ತಿದ್ದ ನೃತ್ಯ, ಸಂಗೀತ ಕಾರ್ಯಕ್ರಮಗಳ ಆಗಿನ ಒಂದು ಹೊಳಹನ್ನು ಇಲ್ಲಿ ಕಾಣಬಹುದು. ಸಂಪ್ರದಾಯಬದ್ಧವಾಗಿ ಅದುವರೆಗೆ ನಡೆದುಕೊಂಡು ಬಂದ ಚಿತ್ರಣ ಪದ್ಧತಿಯಲ್ಲಿ ಕೆಲವು ಮಾರ್ಪಾಡುಗಳೊಂದಿಗೆ ನವ್ಯತೆಯ ಕಡೆಗೆ ಮೊದಲು ಹೊರಳಿದವರು ಚಾಲುಕ್ಯರ ಕಾಲದ ಕಲಾವಿದರು. ಈ ಹಿಂದೆ ಬರೀ ದೇವರ ಚಿತ್ರಗಳು ದೈವಾಂಶ ಸಂಭೂತ ಬುದ್ಧ ಭಗವಾನ್ ಅವರಂತಹ ದೈವಿ ಸಂಬಂಧೀ ಚಿತ್ರಗಳನ್ನು ಹೆಚ್ಚಾಗಿ ರಚಿಸುವ ಪರಂಪರೆ ರೂಢಿಯಲ್ಲಿತ್ತು. ಆದರೆ ಚಾಲುಕ್ಯರ ಕಾಲಕ್ಕೆ ದೇವತೆಗಳ ಚಿತ್ರಗಳ ಬದಲಿಗೆ ರಾಜರ ಆಸ್ಥಾನದ ಚಿತ್ರಗಳನ್ನು ರಚಿಸುವ ಪ್ರವೃತ್ತಿಯೂ ಬೆಳೆಯಿತು. ಅಜಂತಾದಲ್ಲಿಯೇ ಎರಡನೇ ಪುಲಕೇಶಿಯ ಆಸ್ಥಾನದ ದೃಶ್ಯವನ್ನು ರಚಿಸಿದ್ದು ಕಾಣಬಹುದು. ಆದುದರಿಂದ ಇಂದ್ರ, ಶಿವ ಮುಂತಾದ ದೇವರುಗಳ ಸಭೆಯ ಚಿತ್ರವಿದಾಗಿರದೇ ಸಮಕಾಲೀನವಾದ ಅಥವಾ ತಮ್ಮ ವಂಶದ ರಾಜನೊಬ್ಬನ ಆಸ್ಥಾನ ದೃಶ್ಯವಿದಾಗಿರಬಹುದು ಎಂಬುದು ಹೆಚ್ಚು ಸಮಂಜಸವೆನಿಸುತ್ತದೆ.

### ೩. ರಾಜನ ಒಡ್ಡೋಲಗ

ಈ ಚಿತ್ರವು ರಾಜನೊಬ್ಬನ ಒಡ್ಡೋಲಗವಾಗಿದ್ದು, ರಾಜ ಮತ್ತು ರಾಣಿ ಜೊತೆಯಾಗಿ ಸುಂದರವಾದ ಆಸನಗಳಲ್ಲಿ ಕುಳಿತಿದ್ದಾರೆ. ಮುಂದುಗಡೆ ಪರಿವಾರದವರು, ಸೇವಕ, ಸೇವಕಿಯರು ತಮ್ಮ ಸೇವಾ ಕಾರ್ಯದಲ್ಲಿ ನಿರತರಾಗಿದ್ದಾರೆ. ಹಿಂದುಗಡೆ ಎತ್ತರದಲ್ಲಿ ಇಂದ್ರನು ಕಾಣಿಸಿಕೊಂಡು ದೊರೆಯನ್ನು ಹರಸುತ್ತಿರುವಂತೆ ಚಿತ್ರಿತವಾಗಿದೆ. ಇಲ್ಲಿ ಚಿತ್ರಿತವಾದ ರಾಜನು ಸುಖಾಸೀನನಾಗಿ ಕುಳಿತಿದ್ದು ಬಲಗಾಲು ಚಿಕ್ಕ ಪೀಠ ಒಂದರ ಮೇಲೆ ಇಡಲಾಗಿದೆ. ಎಡಗಾಲನ್ನು ಮೇಲೆತ್ತಿ ಎಡಗೈಯನ್ನು ಮೊಣಕಾಲಮೇಲೆ ಇಳಿಬಿಟ್ಟುಕೊಂಡಿದ್ದಾನೆ. ಒಟ್ಟು ಭಂಗಿ ಗಂಭೀರತೆಯಿಂದ ಸುಖಾಸೀನನಾಗಿ ಕುಳಿತಿದ್ದನ್ನು ತೋರುವುದು. ಬಲಗೈ ಮೇಲೆ ಯಜ್ಞೋಪವೀತ ತೂಗುತ್ತಿದೆ. ತಲೆಯ ಮೇಲೆ ಉದ್ದನೆಯ ಕಿರೀಟ ಧರಿಸಿದ್ದಾನೆ. ಈ ರಾಜನ ಬಲಗಡೆಗೆ ಕೆಳಭಾಗದಲ್ಲಿ ನೆಲದ ಮೇಲೆ ಅನೇಕ ಜನ ಕುಳಿತಿದ್ದಾರೆ. ರಾಜನ ಎಡಭಾಗದಲ್ಲಿ ರಾಣಿಯು ಮತ್ತೊಂದು ಆಸನದಲ್ಲಿ ಕುಳಿತಿದ್ದು, ಪರಿಚಾರಿಕೆಯರು ಅವಳ ಸೇವೆಯಲ್ಲಿ ತೊಡಗಿದ್ದಾರೆ. ಒಬ್ಬಳು ಪಾದಗಳನ್ನು ಅಲಂಕರಿಸುತ್ತಿದ್ದರೆ, ಇನ್ನೊಬ್ಬಳು ಲೇಪನ ಕಾರ್ಯದಲ್ಲಿ ಸಹಾಯ ಮಾಡುತ್ತಿದ್ದಾಳೆ. ರಾಣಿಯು ಕುಳಿತ ಪೀಠವು ಆಸನಕ್ಕಿಂತ ಕೆಳಭಾಗದಲ್ಲಿದೆ. ರಾಣಿಯು ಎಡಗೈಯನ್ನು ಮಡಚಿದ ಎಡಕಾಲಿನ ತೊಡೆಯ ಮೇಲೆ ಇಟ್ಟು ಬಲಗೈಯನ್ನು ಹಿಂದಕ್ಕೆ ಚಾಚಿ ಅದರ ಮೇಲೆ ಭಾರಹಾಕಿ ಕುಳಿತಿದ್ದಾಳೆ. ಕಿವಿಯಲ್ಲಿ ಪತ್ರಕುಂಡಲ ಧರಿಸಿರುವ ಇವಳ ಹಣೆಯಲ್ಲಿ ಮುಂಗುರುಳು ಆಡುತ್ತಿದ್ದು, ತೆಳುವಾದ ವಸ್ತ್ರವನ್ನು ತೊಡೆಗೆ ಅಂಟಿಕೊಂಡಂತೆ ಧರಿಸಿದ್ದಾಳೆ. ಚಿತ್ರದಲ್ಲಿನ ವಾಸ್ತುವಿನ್ಯಾಸ ಅರಮನೆಯ ಒಳಕೋಟೆಯೊಂದರ ದೃಶ್ಯವನ್ನು ಸೂಚಿಸುತ್ತದೆ. ಈ ದೃಶ್ಯದಲ್ಲಿರುವ ಸೇನಾಪತಿಗಳು ಅಥವಾ ಕಾವಲು ಭಟರಲ್ಲಿ ಒಬ್ಬ ಗೌರವವರ್ಣದವನು ಇನ್ನೊಬ್ಬ ಶ್ಯಾಮಲ ವರ್ಣದವನಿದ್ದಾನೆ. ಮತ್ತಿಬ್ಬರು ನೀಲಿ, ಹಸಿರು ವರ್ಣದವರಾಗಿದ್ದಾರೆ. ಈ ಚಿತ್ರವು

ರಾಜ ವೈಭವವನ್ನು ತೋರಿಸುವ ಚಿತ್ರವಾಗಿದ್ದು, ಇದರಲ್ಲಿ ಚಿತ್ರಿಸಿರುವ ರಾಜ, ರಾಣಿಯರು ಕೀರ್ತಿವರ್ಮ ಆತನ ರಾಣಿ ಮತ್ತು ಅವರ ಪರಿವಾರದವರಾಗಿದ್ದಾರೆ ಎಂದು ಶಿವರಾಮ ಮೂರ್ತಿಯವರು ತರ್ಕಿಸುತ್ತಾರೆ.

**೪. ಗಂಧರ್ವ ದಂಪತಿ**

ಇಲ್ಲಿನ ಎರಡೂ ಚಿತ್ರಗಳು ವಿದ್ಯಾಧರ ದಂಪತಿಗಳವಾಗಿದ್ದು, ಒಂದು ಚಿತ್ರದಲ್ಲಿ ಒಬ್ಬರು ಇನ್ನೊಬ್ಬರ ಕೊರಳು ಅಪ್ಪಿ ಹಿಡಿದು ಹಾರುತ್ತಿದ್ದರೆ, ಇನ್ನೊಂದರಲ್ಲಿ ವಿದ್ಯಾಧರನೊಬ್ಬನು ವೀಣೆಯನ್ನು ನುಡಿಸುತ್ತಿದ್ದಾನೆ. ಇದರಲ್ಲಿ ಗಂಡಸರ ಮೈಬಣ್ಣವನ್ನು ಕಪ್ಪು ಮಿಶ್ರಿತ ಬಿಳಿವರ್ಣದಲ್ಲಿ ಚಿತ್ರಿಸಿದ್ದರೆ ಸ್ತ್ರೀಯರನ್ನು ಹಸಿರು, ನೀಲಿ ವರ್ಣಗಳಿಂದ ಚಿತ್ರಿಸಿದೆ.

ಬಾದಾಮಿಯ ವೈಷ್ಣವ ಗುಹೆಯ ಭಿತ್ತಿಚಿತ್ರಗಳು ಉತ್ತಮ ಸಂಯೋಜನಾ ಕೃತಿಗಳಾಗಿವೆ. ಹಿಂದಿನ ಪ್ರಾರಂಭಿಕ ಕೃತಿಗಳಾದ ಉತ್ತರಬೆಟ್ಟದ ಶಿಲಾಶ್ರಯ ಚಿತ್ರಗಳು, ರಾವಣಫಡಿಯ ಗುಹಾಚಿತ್ರಗಳಿಗಿಂತ ಇಲ್ಲಿನ ಕೃತಿಗಳಲ್ಲಿ ಯೋಜನಾಬದ್ಧ ಸಂಯೋಜನೆ ಕಂಡುಬರುವುದು. ರಾಜನು ನೃತ್ಯ ವೀಕ್ಷಿಸುತ್ತಿರುವ ದೃಶ್ಯದಲ್ಲಿ ನೃತ್ಯಗಾರರು ಎದುರಿನಲ್ಲಿ ನಾಟ್ಯವಾಡುತ್ತಿದ್ದಿರೆ, ಕೆಳಗಡೆ ನೆಲದ ಮೇಲೆ ಕೆಲವು ವ್ಯಕ್ತಿಗಳು ಕುಳಿತುಕೊಂಡಿದ್ದಾರೆ. ರಾಜನ ಹಿಂದುಗಡೆ ಮತ್ತಷ್ಟು ವ್ಯಕ್ತಿಗಳು ಸಾಲಾಗಿ ನಿಂತಿದ್ದು ಅದರಲ್ಲಿ ಪರಿಚಾರಕರು, ಪ್ರೇಕ್ಷಕರು ಇದ್ದಾರೆ. ಬಲಮೂಲೆಯಲ್ಲಿ ವಾದ್ಯಗಾರರಿದ್ದರೆ ಮೇಲಿನ ಮಹಡಿಯ ಬಾಲ್ಕಾನಿಯಿಂದ ರಾಜಪರಿವಾರದ ಸ್ತ್ರೀಯರು ನೃತ್ಯ ವೀಕ್ಷಿಸುತ್ತಿದ್ದಾರೆ. ಹೀಗೆ ಹಲವು ವ್ಯಕ್ತಿಗಳಿಂದ ತುಂಬಿದ ಈ ಚಿತ್ರವು ಒಂದು ಜನ ಸಮೂಹದಂತೆ ಕಂಡುಬಂದರೂ ಕಲಾವಿದನು ಚಿತ್ರ ಸಂಯೋಜನೆಗೊಳಿಸುವಲ್ಲಿ ತೋರಿದ ಚಾಣಾಕ್ಷತೆಯಿಂದ ಇಡೀ ಚಿತ್ರ ಒಂದು ವಿಷಯಕ್ಕೆ ಸಂಬಂಧಿಸಿದ ಕೃತಿಯಾಗಿ ನಮ್ಮನ್ನು ಸೆಳೆಯುವಲ್ಲಿ ಸಫಲವಾಗಿದೆ. ಅದೇ ರೀತಿಯಾಗಿ ಪಕ್ಕದಲ್ಲಿರುವ ಇನ್ನೊಂದು ರಾಜದರ್ಬಾರದ ದೃಶ್ಯದಲ್ಲಿಯೂ ರಾಜ, ರಾಣಿ, ಪರಿವಾರದವರು, ಸೇವಕಿಯರು ಹೀಗೆ ಅನೇಕ ಜನ ಅವರವರ ಕೆಲಸದಲ್ಲಿ ತೊಡಗಿಕೊಂಡಿದ್ದರೂ ಇಡೀ ಚಿತ್ರಕೃತಿಯನ್ನು ಒಂದು ಸೂತ್ರದಲ್ಲಿ ಬಂಧಿಸುವಲ್ಲಿ ಕಲಾವಿದನ ಸಂಯೋಜನಾ ಚತುರತೆ ಹೊರಹೊಮ್ಮಿದೆ.

ಮುಖ್ಯ ಚಿತ್ರವನ್ನು ದೊಡ್ಡದಾಗಿಯೂ ಉಳಿದ ಚಿತ್ರಗಳನ್ನು ಚಿಕ್ಕದಾಗಿಯೂ ಇಲ್ಲಿ ರಚಿಸಿದ್ದು, ಶಿಲ್ಪಶಾಸ್ತ್ರಗಳ ನಿರ್ದೇಶನ ಅನುಸರಿಸಿದಂತೆ ಇದೆ. ಬಾದಾಮಿಯ ವೈಷ್ಣವಗುಹೆಯ ಚಿತ್ರಗಳಲ್ಲಿ ಗಮನಾರ್ಹ ಅಂಶವೆಂದರೆ ಚಾಲುಕ್ಯರ ಈ ಹಿಂದಿನ ಚಿತ್ರಗಳಲ್ಲಿ ಸ್ಥಾನ ನಿರ್ದೇಶನವಿರದೇ ಇದ್ದುದು. ಆದರೆ ಇಲ್ಲಿ ಅರಮನೆಯ ಒಳಾಂಗಣವನ್ನು ಭವ್ಯವಾಗಿ ಸಂಯೋಜಿಸಿರುವುದಾಗಿದೆ. ಕಂಬಗಳು, ಕಮಾನುಗಳು, ಕ್ಲಿಪ್‌ಗೆ ಅಳವಡಿಸಿದ ಪರದೆಗಳು, ಮಹಡಿಯ ಬಾಲ್ಕನಿಗಳು, ಕಿಟಕಿ, ಬಾಗಿಲುಗಳು, ಅದಕ್ಕೆ ಅಳವಡಿಸಿದ ಕದಗಳು, ಸಿಂಹಾಸನ ಮತ್ತು ಇತರ ಪೀಠಗಳು ಆ ಕಾಲದ ಅರಮನೆಯ ಒಳಾಂಗಣ ದೃಶ್ಯವನ್ನು ನಮಗೆ ತಿಳಿಸಿಕೊಡುತ್ತವೆ. ಚಾಲುಕ್ಯ ಕಲಾವಿದರು ಇಲ್ಲಿ ಬರೀ ಆಕೃತಿಗಳ ಸಂಯೋಜನೆ ಮತ್ತು ಸ್ಥಳ ಹೊಂದಾಣಿಕೆಗೆ ಮಹತ್ವ ಕೊಟ್ಟಿರದೇ ವರ್ಣ ಸಂಯೋಜನೆಯಲ್ಲಿಯೂ ನೈಜವಾದ ಮೈಬಣ್ಣವನ್ನು ಬಳಸಿರುವುದು ವರ್ಣಸಂಯೋಜನೆಯ ಸಾಮರಸ್ಯ ಕಾಯ್ದುಕೊಳ್ಳುವ ಪ್ರಯತ್ನವೇ ಆಗಿದೆ ಎನ್ನಬಹುದು. ಹಾಗೆ ಎಡಭಾಗ,

ಬಲಭಾಗ, ಮೇಲ್ಭಾಗ, ಕೆಳಭಾಗ ಹೀಗೆ ಚಿತ್ರದ ನಾಲ್ಕೂ ನಿಟ್ಟಿನ ವರ್ಣ ಲೇಪನದಲ್ಲಿ ಸಂಯೋಜನಾ ಬದ್ಧತೆ ಕಂಡುಬರುವುದು.

**iv. ಗುಹಾಭಿತ್ತಿ ಚಿತ್ರದ ವಿಶೇಷ ಅಂಶಗಳು**

* ಇಲ್ಲಿಯ ಚಿತ್ರಗಳಲ್ಲಿ ಆಕೃತಿಗಳು ನೀಳವಾಗಿದ್ದು, ಕೆನ್ನೆ, ಗಲ್ಲ, ತುಟಿ, ಸ್ತನ, ಕಣ್ಣುಗಳನ್ನು, ಉತ್ಪ್ರೇಕ್ಷಿಸಿ ತೋರಿಸಲಾಗಿದೆ.

* ಮುಖಗಳ ಆಕಾರದಲ್ಲಿ ದುಂಡು ಹಾಗೂ ಅಂಡಾಕಾರಗಳು ಪ್ರಧಾನವಾಗಿವೆ.

* ಒಂದೇ ವರ್ಣದ ಎರಡು ಮೂರು ಛಾಯೆಗಳನ್ನು ಬಳಸಿದ್ದು, ಹೆಚ್ಚು ಕಂಡುಬರುವುದಿಲ್ಲ, ಬದಲಾಗಿ ಪ್ರತಿ ಭಾಗಕ್ಕೂ ಬೇರೆ ಬೇರೆ ವರ್ಣ ಬಳಸಲಾಗಿದೆ.

* ದಪ್ಪನಾದ ಹೊರ ರೇಖೆಗಳನ್ನು ಚಿತ್ರಕ್ಕೆ ಎಳೆಯಲಾಗಿಲ್ಲ, ಅತ್ಯಂತ ಸೂಕ್ಷ್ಮವಾದ ಬಾಹ್ಯರೇಖೆಗಳೇ ಚಿತ್ರಗಳ ಒಟ್ಟು ರೂಪವನ್ನು ತೋರಿಸುತ್ತವೆ.

* ಮನುಷ್ಯ ಚಿತ್ರಗಳಲ್ಲಿ ಆಕೃತಿಗಳಿಗೆ ವಾಸ್ತವಿಕ ಮೈಬಣ್ಣವನ್ನು ಲೇಪಿಸದೇ ನೀಲಿ, ಹಸಿರು, ಕಂದು ಹಾಗೂ ತಿಳಿ ಕೆಂಪು ವರ್ಣಗಳನ್ನು ಲೇಪಿಸಿ ಚಿತ್ರದ ಒಟ್ಟು ವರ್ಣ ಸಾಮರಸ್ಯವನ್ನು ಉಜ್ವಲಗೊಳಿಸಲಾಗಿದೆ.

* ಸಮೂಹ ಚಿತ್ರಗಳಲ್ಲಿ ಆಕೃತಿಗಳ ಒಟ್ಟು ಸಂಯೋಜನೆಯು(Composition) ಅಜಂತಾಗಿಂತ ಭಿನ್ನವಾದ ಮಾರ್ಗ ಅನುಸರಿಸಿದ್ದನ್ನು ಕಾಣಬಹುದು.

* ಬಾದಾಮಿಯ ಚಿತ್ರಗಳು ಆಗಲೇ ರೂಢಿ ಸ್ಥಾಪಿಸಿದ್ದ ಸಂಪ್ರದಾಯಬದ್ಧ ಚಿತ್ರಗಳ ಗುಣ ವಿಶೇಷಗಳನ್ನು ನಿರಾಕರಿಸಿ ಹೊಸ ಸಾಧ್ಯತೆಗಳ ಕಡೆಗೆ ತುಡಿಯುತ್ತಿರುವ ಕಲಾವಿದನ ಮನಃಸ್ಥಿತಿಯನ್ನು ತೋರ್ಪಡಿಸುತ್ತವೆ.

* ಸೂಕ್ಷ್ಮವಾದ ಹೊರರೇಖೆಗಳು, ಚಪ್ಪಟೆ ವರ್ಣಲೇಪನ, ಶೈಲೀಕೃತ ಅಂಗಾಂಗಗಳ ರಚನೆಯನ್ನು ಇಲ್ಲಿ ಕಾಣಬಹುದು.

ಮಾನವ ನಿರ್ಮಿತ ಗುಹೆಗಳಲ್ಲಿ ರಚನೆಯಾಗಿರುವ ಭಿತ್ತಿ ಚಿತ್ರಗಳಲ್ಲಿ ತಾಂತ್ರಿಕ ದೃಷ್ಟಿಯಿಂದ ಗಮನಾರ್ಹ ಅಂಗಗಳೆಂದರೆ ಹಿಂದೆ ನೋಡಿದ ಸ್ವಾಭಾವಿಕ ಗುಹೆಗಳಲ್ಲಿ ತೆಳುವಾದ ಹಿನ್ನೆಲೆ ಲೇಪನದ ಮೇಲೆ ಚಿತ್ರಗಳನ್ನು ರಚಿಸಿದ್ದರೆ, ಇಲ್ಲಿ ದಪ್ಪನಾದ ಭಿತ್ತಿಯ ಪದರು ಲೇಪಿಸಿ ಚಿತ್ರ ರಚಿಸಲಾಗಿದೆ. ಸ್ವಾಭಾವಿಕ ಗುಹೆಯಲ್ಲಿ ಹಳದಿ ಮತ್ತು ಕೆಂಪು ಅಪರೂಪವಾಗಿ ಬಿಳಿ ವರ್ಣಗಳು ಬಳಕೆಯಾಗಿದ್ದರೆ, ಕೊರೆದ ಗುಹಾಲಯಗಳಲ್ಲಿ ಹಳದಿ, ಕೆಂಪುವರ್ಣದ ಜೊತೆ ನೀಲಿ, ಹಸಿರು, ಕಪ್ಪು, ಬಿಳಿ ಹೀಗೆ ವಿವಿಧ ವರ್ಣಗಳು ಬಳಕೆಯಾಗಿವೆ. ಸ್ವಾಭಾವಿಕ ಗುಹೆಗಳಲ್ಲಿ ಆಕೃತಿಗಳನ್ನು ಮಾತ್ರ ರಚಿಸಿದ್ದು, ಹಿನ್ನೆಲೆ, ಮುನ್ನಲೆಯಲ್ಲಿ ಬರುವ ದೃಶ್ಯ ಸಂಯೋಜನೆ ಹಾಗೂ ವಸ್ತುಗಳನ್ನು ಚಿತ್ರಿಸಿಲ್ಲ. ಮಾನವನಿರ್ಮಿತ ಗುಹೆಗಳಲ್ಲಿ ಆಕೃತಿಗಳ

ಉತ್ತಮ ಸಂಯೋಜನೆ ಇದೆಯಲ್ಲದೇ ಹಿನ್ನೆಲೆ, ಮುನ್ನಲೆಯಲ್ಲಿ ಪೂರಕವಾದ ದೃಶ್ಯ ಸಂಯೋಜನೆ ಮತ್ತು ವಸ್ತುಗಳು ಚಿತ್ರಿಸಿವೆ. ಅಜಂತಾದಲ್ಲಿ ಕೊರೆದ ಗುಹಾಲಯಗಳಲ್ಲಿ ರಚನೆಯಾದ ಚಿತ್ರಗಳಲ್ಲಿ ಉತ್ತಮ ಹಿನ್ನೆಲೆ ದೃಶ್ಯದ ಸಂಯೋಜನೆ ಕಂಡುಬರುವಂತೆಯೇ ಬಾದಾಮಿ ವೈಷ್ಣವ ಗುಹೆಯಲ್ಲಿನ ಚಿತ್ರಗಳಲ್ಲಿ ಅತ್ಯಂತ ಚಾಣಾಕ್ಷತನದಿಂದ ಸಂಯೋಜನೆಗೊಳಿಸಿದ ಅರಮನೆಯ ಒಳಾಂಗಣ ದೃಶ್ಯಗಳಿವೆ. ವರ್ಣವಿನ್ಯಾಸ, ರೇಖಾಲಾಲಿತ್ಯ ಚಿತ್ರಗಳ ಹಾವಭಾವ, ನಿಲುವು ಭಂಗಿಗಳು, ಪ್ರಮಾಣಬದ್ಧತೆಗಳಂತಹ ವಿವರಗಳು ಕೊರೆದ ಗುಹಾಲಯಗಳಲ್ಲಿನ ಚಿತ್ರಗಳಲ್ಲಿ ಕಂಡುಬಂದರೆ ಹಿಂದಿನ ಸ್ವಾಭಾವಿಕ ಗುಹೆಗಳ ಚಿತ್ರಗಳಲ್ಲಿ ಇವು ಗೌಣವಾಗಿವೆ.





ಸ್ವಾಭಾವಿಕ ಗುಹೆಯ ಭಿತ್ತಿ ಚಿತ್ರಗಳು

೧) ಗಣ್ಯಸ್ತ್ರೀ ಮತ್ತು ಸಖಿಯರು



೨) ಕಮಲಪುಷ್ಪ ಹಿಡಿದ ಗಣ್ಯಸ್ತ್ರೀ



ಮಾನವ ನಿರ್ಮಿತ ಗುಹಾ ಚಿತ್ರಗಳು

೧) ರಾವಣಫಡಿ ಗುಹಾ ಚಿತ್ರ



ಬಾದಾಮಿಯ ವೈಷ್ಣವ ಗುಹಾಲತಯದ ಚಿತ್ರಗಳು

೨) ಅರಮನೆ ದೃಶ್ಯ



೩) ರಾಜನ ಒಡ್ಡೋಲಗ

**ಬ. ಗೃಹಭಿತ್ತಿ ಚಿತ್ರಕಲೆ(ಮನೆ, ಮಠ ಇತ್ಯಾದಿ)**

*** ನೆಲೆಗಳು**

ಮಾನವ ಪ್ರಾಗೈತಿಹಾಸಿಕದಿಂದ ಐತಿಹಾಸಿಕ ಕಾಲಕ್ಕೆ ಬರುವುದರೊಳಗಾಗಿಯೇ ತನ್ನ ಕಲೆಯಲ್ಲಿ ಶಾಸ್ತ್ರೀಯತೆಯನ್ನು ರೂಢಿಸಿಕೊಂಡು ಸಾಕಷ್ಟು ಉನ್ನತಿಯನ್ನು ಸಾಧಿಸಿರುವುದನ್ನು ಕಾಣುತ್ತೇವೆ. ಹಾಗೆಯೇ ಈ ಶಿಷ್ಟ ಪರಂಪರೆಯನ್ನು ಇನ್ನಷ್ಟು ಸುಧಾರಿಸಿಕೊಳ್ಳುತ್ತಾ ಚಿತ್ರರಚನೆಯ ವಿಷಯಗಳು ರಚನಾಶೈಲಿ ಹಾಗೂ ಮಾಧ್ಯಮಗಳಲ್ಲಿ ಕಾಲದಿಂದ ಕಾಲಕ್ಕೆ ಸಾಕಷ್ಟು ಶ್ರೇಷ್ಠತೆಯನ್ನು ಸಾಧಿಸುತ್ತಲೇ ಬಂದಿದ್ದಾನೆ. ಸ್ವಾಭಾವಿಕ ಗುಹೆ, ಮಾನವನಿರ್ಮಿತ ಗುಹೆ, ಶಿಲಾಶ್ರಯಗಳಿಗೆ ಮಾತ್ರ ಸೀಮಿತವಾಗಿದ್ದ ಭಿತ್ತಿ ಚಿತ್ರಕಲೆ, ಮುಂದುವರೆದು ಮನೆ, ಮಠ, ಅರಮನೆ, ದೇವಾಲಯ, ಮಸೀದಿ, ಚರ್ಚ್‌ಗಳಲ್ಲಿ ರಚನೆಯಾದವು. ಈ ತಾಣಗಳಲ್ಲಿ ರಚನೆಗೊಂಡ ಚಿತ್ರಗಳೇ ಗೃಹಭಿತ್ತಿ ಚಿತ್ರಗಳು. ಈ ಗೃಹಭಿತ್ತಿ ಚಿತ್ರಕಲೆಯಲ್ಲಿ ರಚನೆಗೊಂಡ ಚಿತ್ರಗಳೆಲ್ಲವೂ ಸುಮಾರು ೨೦೦ರಿಂದ ೨೫೦ ವರ್ಷಗಳಿಂದೀಚಿನಿಂದ ಇಂದಿನವರೆಗೂ ರಚನೆಗೊಂಡಂತಹ ಚಿತ್ರಗಳಾಗಿವೆ. ಅವುಗಳಲ್ಲಿ ಕೆಲವು ಮಾತ್ರ ಉಳಿದಿವೆ. ಕೆಲವು ಅಳಿವಿನ ಅಂಚಿನಲ್ಲಿವೆ. ಕೆಲವು ಸಂಪೂರ್ಣ ನಾಶವಾಗಿವೆ. ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಗೃಹಭಿತ್ತಿ ಚಿತ್ರ ನೆಲೆಗಳಾದ ಗುಳೇದಗುಡ್ಡದ ಹೊಸಮನಿಗೌಡರ ಮನೆ, ಮಹಲಿಂಗೇಶ್ವರಮಠ, ಜಮಖಂಡಿ ಅರಮನೆಯ ಜೊತೆಗೆ ಜನಪದರಿಂದ ರಚಿತವಾಗುವ ಬೆಳದಿಂಗಳ ಚಿತ್ರಗಳು, ಗರಡಿಮನೆ ಭಿತ್ತಿ ಚಿತ್ರಗಳು ಕೂಡ ಭಿತ್ತಿ ವ್ಯಾಪ್ತಿಯಲ್ಲಿ ಬರುವುದರಿಂದ ಅವುಗಳನ್ನೂ ಇಲ್ಲಿ ವಿವರಿಸಲಾಗಿದೆ. ಹಾಗೆಯೇ ತೀರಾ ಇತ್ತೀಚೆಗೆ ನಿರ್ಮಾಣಗೊಂಡ ಬಾಗಲಕೋಟೆಯ ಮುಳುಗಡೆ ವಸ್ತುಸಂಗ್ರಹಾಲಯದವರೆಗೂ, ಅಲ್ಲಿ ವಿವಿಧ ಮಾಧ್ಯಮಗಳಿಂದ ರಚಿತಗೊಂಡ ಭಿತ್ತಿ ಚಿತ್ರಗಳವರೆಗೂ ಅಭ್ಯಸಿಸಿ ವಿವರಿಸಲಾಗಿದೆ.

**೧. ಗುಳೇದ ಗುಡ್ಡದ ಹೊಸಮನಿಗೌಡರ ಮನೆ**

ಗುಳೇದ ಗುಡ್ಡವು ಬಾದಾಮಿ ತಾಲ್ಲೂಕಿಗೆ ಸೇರಿದ ಒಂದು ಹೋಬಳಿ ಪಟ್ಟಣ. ಜಿಲ್ಲಾ ಸ್ಥಳದಿಂದ ಸುಮಾರು ೨೫ ಕಿ.ಮೀ. ದೂರದಲ್ಲಿದ್ದು, ಈ ಊರಿನ ಶಂಕ್ರಪ್ಪ, ನಾಗಣ್ಣೆಪ್ಪ, ಹೊಸಮನಿಗೌಡರ ಹಳೆಯ ಕಾಲದ ಮನೆಯಲ್ಲಿ ಈ ಭಿತ್ತಿ ಚಿತ್ರಗಳಿವೆ.[೧೩] ಈ ಊರಿನ ಭಿತ್ತಿ ಚಿತ್ರಗಳ ಬಗ್ಗೆ ಮೊದಲು ಗಮನ ಸೆಳೆದವರೆಂದರೆ ಅಲ್ಲಿನ ಹಿಂದಿ ಪ್ರೌಢಶಾಲೆಯ ಚಿತ್ರಕಲಾ ಶಿಕ್ಷಕರಾದ ಮಹಾದೇವ ಜಗತಾಪ್ ಎಂಬುವರು. ನಂತರ ಅವರೇ ವಾರ ಪತ್ರಿಕೆ, ದಿನ ಪತ್ರಿಕೆಗಳಲ್ಲಿ ಚಿತ್ರಗಳನ್ನು ಕುರಿತು ಲೇಖನಗಳನ್ನೂ ಬರೆದರು. ಆಮೇಲೆ ಡಾ.ಎಸ್.ಸಿ. ಪಾಟೀಲ್ ಅವರು ತಮ್ಮ ಸಂಶೋಧನಾ ಗ್ರಂಥದಲ್ಲಿ ಇವುಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಅಲ್ಲದೆ ಕರ್ನಾಟಕದ ಲಲಿತಕಲಾ ಅಕಾಡೆಮಿಯವರು ಇವುಗಳನ್ನು ವೀಡಿಯೋ ಚಿತ್ರೀಕರಣ ಮಾಡಿರುವುದಲ್ಲದೇ ೧೯೯೪ರಲ್ಲಿ "ಕಲಾಕೋಶ" ಎಂಬ ಗ್ರಂಥದಲ್ಲಿ ಇವುಗಳ ಬಗೆಗೆ ಚಿಕ್ಕಚಿಕ್ಕ ಮಾಹಿತಿಯನ್ನೂ ಇನ್ನೋರ್ವ ಭಿತ್ತಿ ಚಿತ್ರ ತಜ್ಞ ಡಾ.ಅ.ಲ. ನರಸಿಂಹನ್ ಅವರು ಒದಗಿಸಿದ್ದಾರೆ.

---

೧೩. ಮಹಾದೇವ ಜಗತಾಪ್, ಕರ್ನಾಟಕ ಜನಪದ ಚಿತ್ತಾರಗಳು ಹಾಗೂ ಶಿಲ್ಪಗಳು, ಪು. ೧.

**ಕಾಲ:** ಚಿತ್ರಗಳಿರುವ ಮನೆಯು ಸುಮಾರು ೨೦೦ ವರ್ಷಗಳಷ್ಟು ಹಳೆಯದಾಗಿದೆ. ಆ ಮನೆಯ ನಿರ್ಮಾಣದ ನಂತರ ಸಮಯದಲ್ಲಿಯೇ ಚಿತ್ರಗಳನ್ನು ಬರೆಸಲಾಗಿದೆ ಎಂದು ಆ ಮನೆಯ ಈಗಿನ ಗೃಹಸ್ಥರಾದ ಹೊಸಮನಿಯವರು ಹೇಳುತ್ತಾರೆ. ಬಹುಶಃ ನರಗುಂದದ ಚಿತ್ರಗಳ ರಚನೆಯಾದ ನಂತರ ೫ರಿಂದ ೧೦ ವರ್ಷಗಳ ಅವಧಿಯಲ್ಲಿ ಇವು ರಚನೆಯಾಗಿರಬೇಕೆಂದೆನಿಸುತ್ತದೆ. ಕಾರಣ ಮನೆಯು ನಿರ್ಮಾಣವಾಗಿ ೧೭೫ ವರ್ಷಗಳಿಗಿಂತ ಕಡಿಮೆಯಾಗಿಲ್ಲ ಎಂದು ಸ್ಥಳೀಯರು ಮತ್ತು ಆ ಮನೆಯ ಗೃಹಸ್ಥರು ಹೇಳುತ್ತಾರೆ. ಮನೆಯ ರಚನಾ ವಿಧಾನ, ಶೈಲಿ ನೋಡಿದರೆ ಸುಮಾರು ೨೦೦ ವರ್ಷಗಳು ಸಂದಿರಬಹುದೆಂದು ಸಹಜವಾಗಿ ಹೇಳಬಹುದು. ಚಿತ್ರಗಳು ಬಹಳ ಕಾಲದಿಂದ ಇವೆ ಎಂದು ಹೇಳುತ್ತಾರೆ. ಈ ಚಿತ್ರಗಳಿರುವ ಮನೆಯು ಒಂದು ಪ್ರತ್ಯೇಕವಾದ ಚಿತ್ರಶಾಲೆಯೇ ಆಗಿದ್ದಂತೆ ತೋರುತ್ತದೆ. ಹಿಂದಿನ ದಿನಗಳಲ್ಲಿ ಅಲ್ಲಿರುವ ಒಂದು ಅಲಂಕಾರಿಕ ಮಾಡ(ಗೂಡು) ನೋಡಿದರೆ ಪ್ರತಿವರ್ಷ ಗಣಪತಿಯನ್ನು ಕೂಡ್ರಿಸಿದ ಸಂದರ್ಭದಲ್ಲಿ ಜನರು ತಂಡೋಪ ತಂಡವಾಗಿ ಬರುತ್ತಿದ್ದರೆಂದು ಅಲ್ಲಿನ ಹಿರಿಯರು ಹೇಳುತ್ತಾರೆ. ಉಳಿದ ದಿನದಲ್ಲಿಯೂ ಅದನ್ನೊಂದು ಚಿತ್ರ ಪ್ರದರ್ಶನ ಶಾಲೆಯಾಗಿಯೇ ಪರಿಗಣಿಸುತ್ತಿದ್ದ ಜನರು ಅಲ್ಲಿಗೆ ಭೇಟಿ ಕೊಡುತ್ತಿದ್ದುದು ವಾಡಿಕೆಯಾಗಿತ್ತು. ಚಿತ್ರಗಳಿರುವ ಮೇಲ್ಮಹಡಿಯ ಕೋಣೆಯ ಗಾತ್ರ ೧೩x೨೮ ಅಡಿಯಿದೆ. ಇದಕ್ಕೆ ಪೂರ್ವ ದಿಕ್ಕಿನಲ್ಲಿ ಸುಂದರವಾದ ಸಾಲಾಗಿರುವ ಕಿಟಕಿಗಳಿದ್ದು, ಅವುಗಳಿಂದ ಬೆಳಕು ಚಿತ್ರಗಳ ಮೇಲೆ ಬೀಳುತ್ತಿತ್ತು. ಇದೊಂದು ಪೂರ್ವಯೋಜಿತ ಕಟ್ಟಡವಾಗಿದ್ದು, ಈ ಕೋಣೆಯನ್ನು ಪ್ರವೇಶಿಸಲು ಪಶ್ಚಿಮಕ್ಕೆ ಚಿಕ್ಕದಾದ ಬಾಗಿಲಿದ್ದು, ನಾಲ್ಕೂ ಗೋಡೆಗಳಲ್ಲಿ ಚಿತ್ರಗಳಿದ್ದವು. ಈಗ ೧೦ ವರ್ಷಗಳ ಹಿಂದೆ ಡಾ.ಯಾದಪ್ಪ ಪರದೇಶಿ ಅವರು ಸಂಶೋಧಿಸುವ ಕಾಲದಲ್ಲಿ ಕೇವಲ ಒಂದು ಕಡೆಗೆ ಅಂದರೆ ಪಶ್ಚಿಮದ ಗೋಡೆಯಲ್ಲಿ ಮಾತ್ರ ಚಿತ್ರಗಳಿದ್ದವು. ಆಗಲೇ ಹೆಚ್ಚು ಪ್ರಮಾಣದಲ್ಲಿ ನಾಶವಾಗಿ ಹೋಗಿದ್ದು, ಅಲ್ಲಲ್ಲಿ ಮೂರ್‍ನಾಲ್ಕು ಚಿತ್ರಗಳು ಉಳಿದುಕೊಂಡಿವೆ. ಚಿತ್ರಗಳಿಗೆ ಯಾವ ರಕ್ಷಣೆಯೂ ಇಲ್ಲದೆ ಹಳೆಯ ವಸ್ತುಗಳನ್ನು ತುಂಬುವ ಸಂಗ್ರಹ ಕೋಣೆಯಾಗಿ ಬಳಸುತ್ತಿದ್ದರು. ಇದೀಗ ಚಿತ್ರಗಳಿರುವ ಸಂಪೂರ್ಣ ಮನೆಯನ್ನು ಜೀರ್ಣೋದ್ಧಾರದ ನೆಪದಲ್ಲಿ ಕೆಡಹಿ ನೂತನ ಮನೆ ನಿರ್ಮಿಸಲಾಗಿದೆ. ಅಲ್ಲಿನ ಮಹದೇವ ಜಗತಾಪ ಅವರ ಬಳಿಯಲ್ಲಿ ಸಂಗ್ರಹಿತವಾಗಿರುವ ಅಲ್ಪಸ್ವಲ್ಪ ಅಳಿವಿನಂಚಿನಲ್ಲಿರುವ ಚಿತ್ರಗಳನ್ನು ಪಡೆದು ವಸ್ತುವಿಷಯ ವಿಮರ್ಶೆಗೆ ಒಳಪಡಿಸಲಾಗಿದೆ.

ದೊಡ್ಡ ಚೌಕದಲ್ಲಿ ನಿರ್ದಿಷ್ಟವಾಗಿ ಸ್ಥಳವಿಂಗಡಣೆ ಮಾಡದೇ ಚದುರಿದಂತೆ ಚಿತ್ರಗಳನ್ನು ರಚಿಸಿದ್ದು, ಇದರಲ್ಲಿ ಧಾರ್ಮಿಕ ಚಿತ್ರಗಳು, ಸಾಮಾಜಿಕ ಚಿತ್ರಗಳು, ಹೋಬಳಿ ನಕ್ಷೆಗಳು ಅಲ್ಲಲ್ಲಿ ರಚಿಸಿವೆ. ದೊಡ್ಡ ಚೌಕದ ಈ ಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಮತ್ತೆ ಈ ಕೆಳಗಿನಂತೆ ವಿಂಗಡಿಸಬಹುದು.

*** ಚಿತ್ರದ ವಸ್ತುವಿಷಯ**

**೧. ನವಿಲಿನ ಮೇಲೆ ಸರಸ್ವತಿ**

ಇಲ್ಲಿನ ಮೇಲ್ಭಾಗದ ಗೋಡೆಯಲ್ಲಿ ನವಿಲಿನ ಮೇಲೆ ಕುಳಿತ ಸರಸ್ವತಿಯ ಚಿತ್ರವೊಂದು ಇನ್ನೂ ಸ್ವಲ್ಪಮಟ್ಟಿಗೆ ಉಳಿದುಕೊಂಡಿದೆ. ಆದರೂ ನವಿಲಿನ ಮುಖ, ಸರಸ್ವತಿಯ ದೇಹದ ಕೆಲವು ಭಾಗಗಳಲ್ಲಿ ಬಣ್ಣ ಉದುರಿಹೋಗಿದೆ. ಈ ಚಿತ್ರದಲ್ಲಿ ಸರಸ್ವತಿಯು ಕಾಲುಗಳನ್ನು ಎಡಬಲಗಳಲ್ಲಿ ಇಳಿಬಿಟ್ಟುಕೊಂಡು

ನವಿಲಿನ ಮೇಲೆ ಕುಳಿತಿದ್ದಾಳೆ. ನಾಲ್ಕು ಕೈಗಳನ್ನು ಹೊಂದಿದ ಸರಸ್ವತಿ ದೇವಿಯು ವೀಣೆಯನ್ನೂ ಹಿಡಿದಿದ್ದಾಳೆ. ದಟ್ಟ ಕೆಂಪು ವರ್ಣದ ಸೀರೆ ಉಟ್ಟು, ತೆಳುಕೆಂಪು ವರ್ಣದ ಕುಪ್ಪಸ ತೊಟ್ಟಿದ್ದಾಳೆ. ಕುಪ್ಪಸದಲ್ಲಿ ದಟ್ಟ ಕೆಂಪು ವರ್ಣದ ಚುಕ್ಕೆಗಳಿವೆ. ಕೈಗಳಲ್ಲಿ ಹಸಿರು ಬಳೆಗಳನ್ನು ಹಣೆಯಲ್ಲಿ ದುಂಡಾದ ಕುಂಕುಮ ಚಿತ್ರಿಸಲಾಗಿದೆ. ಸಿಲಿಂಡರಾಕಾರದ ಮೇಲೆ ಚೂಪಾಗಿರುವ ವಿಜಯನಗರ ಶೈಲಿಯ ಕಿರೀಟವಿದ್ದು, ಬುಜಕೀರ್ತಿಯಿಂದ ಮೊಣಕಾಲವರೆಗೆ ಇಳಿಬಿದ್ದ ಉದ್ದವಾದ ಆಭರಣವಿದೆ.

ನವಿಲು ಸರಸ್ವತಿ ಚಿತ್ರಕ್ಕಿಂತ ೫-೬ ಪಟ್ಟು ದೊಡ್ಡದಾಗಿದೆ. ಸರಸ್ವತಿಯ ದೇಹವು ನವಿಲಿನ ಮುಖದಷ್ಟು ಮಾತ್ರವಿದೆ. ಆಕೆಯ ಕೈಕಾಲುಗಳು, ನವಿಲಿನ ಕಾಲಿನ ಉಗುರಿನಷ್ಟು ಮಾತ್ರ ದಪ್ಪವಿವೆ. ಹೀಗೆ ಎಲ್ಲಾ ದೃಷ್ಟಿಯಿಂದಲೂ ಬೃಹತ್ತಾದ ನವಿಲು ಸರಸ್ವತಿಯನ್ನು ಹೊತ್ತುಕೊಂಡು ಹಾರುವುದು ಇಲ್ಲಿ ಸಹಜವೆನಿಸುತ್ತದೆ. ನವಿಲಿಗೂ ಕೊರಳಲ್ಲಿ ಆಭರಣಗಳಿವೆ. ಈ ಚಿತ್ರದ ಸುತ್ತಮುತ್ತ ಅಲ್ಲಲ್ಲಿ ಕೆಂಪು ಹೂಗಳು, ಹಸಿರು ಎಲೆಗಳನ್ನು ರಚಿಸಲಾಗಿದೆ. ಚಿತ್ರದ ಹಿನ್ನೆಲೆ ತೆಳು ಹಳದಿ ವರ್ಣದ್ದಾಗಿದೆ.

**೨. ಆಂಜನೇಯ ರಾಕ್ಷಸನನ್ನು ಸಂಹರಿಸುತ್ತಿರುವುದು**

ಮೇಲ್ಭಾಗದ ಗೋಡೆಯಲ್ಲಿ ಆಂಜನೇಯನು ರಾಕ್ಷಸನನ್ನು ಕೊಲ್ಲುತ್ತಿರುವ ದೃಶ್ಯವು ಆಕರ್ಷಕವಾಗಿದೆ. ಹನುಮಂತನು ತನ್ನ ಎಡಗೈಯಲ್ಲಿ ರಾಕ್ಷಸನ ತಲೆಯ ಜುಟ್ಟವನ್ನು ಹಿಡಿದು ಮೇಲಕ್ಕೆ ಎತ್ತಿ ಕೆಳಕ್ಕೆ ಕುಕ್ಕಿದ್ದಾನೆ. ಕೆಳಕ್ಕೆ ಬಿದ್ದ ರಾಕ್ಷಸನ ಎದೆಗೆ ತನ್ನ ಬಲಗಾಲಿನಿಂದ ಪ್ರಹಾರ ಮಾಡುತ್ತಿದ್ದಾನೆ. ಹನುಮಂತನ ಕೈಯಲ್ಲಿ ಯಾವುದೇ ಆಯುಧಗಳು ಇರದೇ ಬರೀ ಬಲಗೈಯ ಮುಷ್ಟಿ ಆಘಾತಗಳಿಂದಲೇ ರಾಕ್ಷಸನನ್ನು ನೆಲಕ್ಕೊರಗುವಂತೆ ಮಾಡಿದ್ದಾನೆ. ರಾಕ್ಷಸನು ಕೈಗಳಲ್ಲಿ ಖಡ್ಗ ಢಾಲುಗಳನ್ನು ಹಿಡಿದುಕೊಂಡಿದ್ದರೂ ಪ್ರಯೋಜನವಾಗಿಲ್ಲ. ಆಂಜನೇಯನ ಪ್ರಹಾರದಿಂದ ಮುದುಡಿಕೊಂಡು ಬಿದ್ದಿದ್ದಾನೆ. ರಾಕ್ಷಸನ ಕಣ್ಣುಗಳು ಕೋಲಾಕಾರವಾಗಿದ್ದು ಕೆಂಡದುಂಡೆಗಳಂತೆ ಹೊಳೆಯುತ್ತಿವೆ. ಕಂದು ಮೈಬಣ್ಣ ಹೊಂದಿದ ರಾಕ್ಷಸನು ಕೋರೆ ಹಲ್ಲುಗಳನ್ನು ಹೊಂದಿ ಭೀಕರವಾಗಿ ಕಾಣುತ್ತಿದ್ದಾನೆ. ಆಂಜನೇಯನು ತೆಳು ನೀಲವರ್ಣದವನಾಗಿದ್ದು ಕೆಂಪು ಚಡ್ಡಿ ಧರಿಸಿದಂತೆ ಚಿತ್ರಿಸಲಾಗಿದೆ. ಆತನ ಮುಖದ ಉಬ್ಬಿದ ಮುಂಭಾಗವೂ ಕೆಂಪಾಗಿದೆ. ಈತನಿಗೂ ಕೂಡಾ ಭುಜಕೀರ್ತಿಯಿಂದ ಇಳಿಬಿದ್ದ ಉದ್ದವಾದ ಆಭರಣ ಚಿತ್ರಿಸಿದೆ. ಆಂಜನೇಯನು ಪ್ರಹಾರ ಮಾಡುತ್ತಿರುವ ಭಂಗಿಯು ಆಕರ್ಷಕವಾಗಿದ್ದು, ಚಲನಶೀಲವಾಗಿದೆ. ಹೊರರೇಖೆಗಳು ಅತ್ಯಂತ ಶಕ್ತಿಯುತವಾಗಿದ್ದು, ಕೆಂಪು ಮಿಶ್ರಿತ ಕಪ್ಪು ವರ್ಣದಲ್ಲಿವೆ. ಚಿತ್ರದ ಸುತ್ತಲೂ ಅಲ್ಲಲ್ಲಿ ಕೆಂಪು ವರ್ಣದ ದೊಡ್ಡ ಹೂಗಳಿವೆ. ಆಂಜನೇಯನ ಕಿರೀಟವು ಭಿನ್ನವಾಗಿದ್ದು, ವಿಜಯನಗರ ಶೈಲಿಯ ಕೊಳವೆಯಾಕಾರ ಹೋಲುವುದಿಲ್ಲ.

**೩. ಕಾಳಿಂಗಮರ್ಧನ**

ಇಲ್ಲಿನ ಮತ್ತೊಂದು ಮಹತ್ವದ ಚಿತ್ರ ಕಾಳಿಂಗಮರ್ದನ ಕೃಷ್ಣನ ಚಿತ್ರವಾಗಿದೆ. ಈ ಚಿತ್ರವನ್ನು ಅಲಂಕೃತ ಕಮಾನೊಂದರೊಳಗೆ ತೆಳುಹಳದಿ ವರ್ಣದ ಹಿನ್ನೆಲೆಯಲ್ಲಿ ರಚಿಸಿದೆ. ಚಿತ್ರಕ್ಕಾಗಿ ರಚಿಸಿರುವ ಕಮಾನು ಹಸಿರು ವರ್ಣದಲ್ಲಿದ್ದು ಅದರ ಮೇಲೆ ಹಳದಿ, ಕೆಂಪು ವರ್ಣದಿಂದ ಹೂಬಳ್ಳಿ ನಕ್ಷೆ ರಚಿಸಲಾಗಿದೆ.

ವಿನ್ಯಾಸವು ಈ ಚಿತ್ರದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇಲ್ಲಿಯೂ ಸಹಿತ ಲಕ್ಷ್ಮೀಯ ಎಡ, ಬಲಭಾಗದಲ್ಲಿ ಒಂದೇ ತೆರನಾಗಿರುವ ಆಕರ್ಷಕ ಆನೆಗಳನ್ನು ಚಿತ್ರಿಸಲಾಗಿದೆ. ಅಲಂಕೃತವಾದ ಸುಳುವಿನಿಂದ ಕೂಡಿದ ವಸ್ತ್ರವನ್ನು ಹೊದ್ದುಕೊಂಡಿರುವ ಆನೆಗಳು ತಮ್ಮ ಮುಂಗಾಲುಗಳನ್ನು ಮೇಲಕ್ಕೆತ್ತಿ ದೇವಿಗೆ ಗೌರವ ಸಲ್ಲಿಸುತ್ತಿವೆ. ಸೊಂಡಿಲಿನಲ್ಲಿರುವ ಕೆಂಪು ಕಮಲದ ಹೂವುಗಳು ಅವುಗಳ ಗಂಭೀರತೆಗೆ ಮೆರಗು ತಂದಿವೆ. ಆನೆಗಳು ನಿಂತಿರುವ ಕೆಳಭಾಗದ ಕಟ್ಟೆ ಆಕರ್ಷಕವಾದ ಮೆಟ್ಟಿಲುಗಳ ನೆರಳು ಬೆಳಕಿನ ವಿನ್ಯಾಸ ನೋಡುಗರನ್ನು ಚಕಿತಗೊಳಿಸುತ್ತದೆ. ಚಿತ್ರದ ಸುತ್ತಲೂ ರಚಿಸಲಾಗಿರುವ ಅಲಂಕಾರಿಕ ಪ್ರಭಾವಳಿಯೂ ತಿಳಿ ಕೆಂಪು ಬಣ್ಣದಿಂದ ಲೇಪನಗೊಂಡಿದ್ದು, ಅದರ ಮೇಲೆ ದಟ್ಟ ಕಂದು ಬಣ್ಣದ ನಕ್ಷೆಯ ಸುಳುವುಗಳನ್ನು ರಚಿಸಲಾಗಿದೆ. ಇಲ್ಲಿನ ಚಿತ್ರಗಳಲ್ಲಿಯೇ ಹೆಚ್ಚು ಕಲಾತ್ಮಕವಾದ ಈ ಚಿತ್ರವು ಎರಡನೇ ಕ್ಷೇತ್ರಕಾರ್ಯದ ಸಮಯಕ್ಕೆ ನಾಶವಾಗಿ ಹೋಗಿತ್ತು, ಹಾಗಾಗಿ ಅದರ ನಾಶವಾದ ಭಾಗದ ಚಿತ್ರವನ್ನು ಮಾತ್ರ ಇಲ್ಲಿ ಕೊಡಲು ಸಾಧ್ಯವಾಗಿದೆ.

ಹೀಗೆ ದೇವಾನುದೇವತೆಗಳ ಭಿತ್ತಿ ಚಿತ್ರಗಳ ಜೊತೆಗೆ ಇಡೀ ಅರಮನೆಯ ಎಲ್ಲಾ ಗೋಡೆಗಳು, ಅರಮನೆಯ ಆವರಣದಲ್ಲಿರುವ ಗಣಪತಿ ದೇವಾಲಯ, ತ್ರಿಪುರ ಸುಂದರಿ ದೇವಾಲಯ, ಪಾರ್ವತಿ ದೇವಾಲಯಗಳಲ್ಲೂ ನಕ್ಷಾ ಭಿತ್ತಿ ಚಿತ್ರಗಳನ್ನು ಸೌಂದರ್ಯಾತ್ಮಕವಾಗಿ ಚಿತ್ರಿಸಲಾಗಿದೆ. ನಕ್ಷಾವಿನ್ಯಾಸದ ಈ ಮಾದರಿಯನ್ನು ಗೋಡೆಗಳ ಅಲಂಕಾರಕ್ಕಾಗಿ ಒಟ್ಟು ಹೊರನೋಟದ ಸೌಂದರ್ಯ ವೃದ್ಧಿಗಾಗಿ ರಚಿಸಲಾಗಿದೆ. ಆದರೆ ಈ ನಕ್ಷಾ ಚಿತ್ರಗಳು ಸಂಪೂರ್ಣವಾಗಿ ನಶಿಸಿ ಹೋಗಿದ್ದು, ಅಲ್ಲಿ ಚಿತ್ರಗಳಿರುವ ಕುರುಹುಗಳು ಮಾತ್ರ ಕಾಣಸಿಗುತ್ತವೆ.

**ಅರಮನೆ ಗೋಡೆ ಮೇಲಿನ ನಕ್ಷಾಚಿತ್ರಗಳು**

ಅರಮನೆಯ ಗೋಡೆಯ ಮೇಲೆ ನೆಲದಿಂದ ಸುಮಾರು ೨ ಫೂಟ್‌ಗಳ ಅಂತರದಷ್ಟು ಬಣ್ಣದ ಪಟ್ಟಿಗಳನ್ನು ರಚಿಸಿ ಅವುಗಳಲ್ಲಿ ನಕ್ಷೆಯ ಮಾದರಿಗಳನ್ನು ರಚಿಸಲಾಗಿದೆ. ಎಲ್ಲಕ್ಕಿಂತ ಕೆಳಭಾಗದಲ್ಲಿ ನೀಲಿ ಬಣ್ಣದ ಪಟ್ಟಿ ರಚಿಸಿ ಅದರ ಮೇಲೆ ದಟ್ಟ ಹಳದಿ ಬಣ್ಣದ ಪಟ್ಟಿ, ಅದರ ಮೇಲೆ ತಿಳಿ ಹಳದಿ, ಅದರ ಮೇಲೆ ಕೆಂಪು ಬಣ್ಣದ ಪಟ್ಟಿಯನ್ನು ರಚಿಸಲಾಗಿದೆ. ಹೀಗೆ ನಾಲ್ಕು ಬಣ್ಣದ ಪಟ್ಟಿಗಳನ್ನು ರಚಿಸಿ ಅವುಗಳಲ್ಲಿ ನಕ್ಷೆಯ ಮಾದರಿಗಳನ್ನು ಗೋಡೆಯ ಸುತ್ತಲೂ ರಚಿಸಲಾಗಿದ್ದು, ಎರಡೂ ಕಡೆಯಲ್ಲಿ ಮಾತ್ರ ಮಸುಕಾದ ವಿನ್ಯಾಸದಲ್ಲಿ ಕಾಣಸಿಗುತ್ತವೆ. ಉಳಿದೆಡೆಗಳಲ್ಲಿ ನಾಶವಾಗಿವೆ.

ಈ ನಕ್ಷೆಗಳನ್ನು ಟೆಂಪರಾ ವಿಧಾನದ ಹುಡಿ ಬಣ್ಣಗಳನ್ನೇ ಮರದ ಅಂಟಿನಲ್ಲಿ ಕಲಸಿ ಚಿತ್ರಕ್ಕೆ ಬಳಸಲಾಗಿರುವುದರಿಂದ ಈ ಚಿತ್ರಗಳು ಬೇಗನೆ ನಾಶವಾಗಿರಬಹುದು.

**ಗಣಪತಿ ದೇವಾಲಯದ ಚಿತ್ರಗಳು**

ಇಲ್ಲಿಯೂ ಕೂಡ ಬಣ್ಣದ ಪಟ್ಟಿಯ ವಿನ್ಯಾಸಗಳು ಮತ್ತು ಸುಳುವಿನ ವಿನ್ಯಾಸದ ರಚನೆಯನ್ನು ದೇವಾಲಯದ ಪ್ರತೀ ಗೋಡೆ, ಬಾಗಿಲುಗಳು, ಕಿಟಕಿಗಳು, ಮಾಡುಗಳ ಸುತ್ತಲೂ ಅಲ್ಲದೇ ಮೇಲ್ಛಾವಣಿ ಹಾಗೂ ಕಟ್ಟಡದ ಹೊರಭಾಗದಲ್ಲಿ ಬಣ್ಣದ ಪಟ್ಟಿಕೆಗಳನ್ನು ಬರೆದು ಚಿತ್ರಿಸಲಾಗಿದೆ. ಕೆಳಭಾಗದಲ್ಲಿ ರಚಿಸಿದ

ಚಿತ್ರವಿನ್ಯಾಸಗಳು ನಾಶವಾಗಿದ್ದು, ಅದರ ಕುರುಹುಗಳು ಮಾತ್ರ ಕಾಣಸಿಗುತ್ತವೆ. ಕೆಲವು ಭಾಗಗಳಲ್ಲಿ ಸಂಪೂರ್ಣ ವಿನ್ಯಾಸಗಳು ಕಂಡುಬರುತ್ತದೆ.

**ತ್ರಿಪುರ ಸುಂದರಿ ದೇವಾಲಯದ ಚಿತ್ರಗಳು**

ಈ ದೇವಾಲಯವು ಸಂಪೂರ್ಣವಾಗಿ ಜೀರ್ಣಾವಸ್ಥೆ ತಲುಪಿದ್ದು, ಒಳಗಿನ ಚಿತ್ರಗಳೂ ಸಹಿತ ನಶಿಸಿವೆ. ದೇವಾಲಯದ ಒಳಭಾಗದ ನಾಲ್ಕೂ ಗೋಡೆಗಳನ್ನು ಚಿತ್ರಗಳಿಂದ ತುಂಬಿಸಲಾಗಿದ್ದು, ಈಗ ಅಲ್ಲಲ್ಲಿ ಬಣ್ಣದ ಲೇಪನ ಅಸ್ಪಷ್ಟವಾಗಿ ಮಾತ್ರ ಉಳಿದುಕೊಂಡಿವೆ. ಕೆಲವು ಕಡೆ ಗೋಡೆಗೆ ಲೇಪಿಸಿದ ಭಿತ್ತಿಯ ಪದರವೂ ಕಳಚಿ ಬಿದ್ದಿದ್ದು, ಮತ್ತೆ ಕೆಲವು ಕಡೆಗೆ ಬಣ್ಣ ಅಳಿಸಿ ಹೋಗಿವೆ. ಇಲ್ಲಿಯ ಕೆಲವು ಅಸ್ಪಷ್ಟ ಆಕಾರಗಳನ್ನು ನೋಡಿದಾಗ ದೇವಿಯ ವಿವಿಧ ಅವತಾರಗಳು, ಚಾಮರ ಬೀಸುತ್ತಿರುವ ಸೇವಕಿಯರು, ಗಿರಿಜಾ ಕಲ್ಯಾಣ, ಹೂ, ಬಳ್ಳಿ ನಕ್ಷೆಯ ಚಿತ್ರಗಳೂ ರಚನೆಗೊಂಡಿರಬಹುದು. ಇಲ್ಲಿನ ಚಿತ್ರಗಳನ್ನು ಕೆಂಪು ಬಣ್ಣದ ಹಿನ್ನೆಲೆಯ ಮೇಲೆ ರಚಿಸಲಾಗಿದ್ದು, ದಟ್ಟ ಕೆಂಪು ಬಣ್ಣವು ಗೋಡೆಯ ಮೇಲೆ ಇನ್ನೂ ಉಳಿದುಕೊಂಡಿದೆ. ದೇವಾಲಯದ ಒಳಭಾಗದ ಗೋಡೆಗಳು ಮಾತ್ರವಲ್ಲದೆ ಅಲ್ಲಿರುವ ಮಾಡುಗಳು, ಕಮಾನುಗಳು, ಬಾಗಿಲಿನ ಅಂಚುಗಳಿಗೆ ಹಾಗೆ ಗೋಡೆಯ ಪ್ರತೀ ಮೂಲೆಗೂ ಹಳದಿ ಮತ್ತು ನೀಲಿ ಪಟ್ಟಿಗಳನ್ನು ಎಳೆಯಲಾಗಿದೆ. ಈ ಚಿತ್ರಗಳ ಕುರುಹುಗಳನ್ನು ಗಮನಿಸಿದಾಗ ಈ ಹಿಂದೆ ವಿವರಿಸಲಾಗಿರುವ ಖಜಾನೆ ಕೊಠಡಿಯ ಚಿತ್ರಗಳಿಗಿಂತ ಈ ಚಿತ್ರಗಳು ಪ್ರಾಚೀನವಾಗಿದ್ದು, ಉನ್ನತಮಟ್ಟದಲ್ಲಿದ್ದವು ಎಂಬುದು ತಿಳಿಯುತ್ತದೆ.

**ಪಾರ್ವತಿ ದೇವಾಲಯದ ಚಿತ್ರಗಳು**

ತ್ರಿಪುರ ಸುಂದರಿ ದೇವಾಲಯದ ಪಕ್ಕದಲ್ಲಿಯೇ ಇರುವ ಈ ದೇವಾಲಯವು ವಿನ್ಯಾಸದಲ್ಲಿ ತ್ರಿಪುರ ಸುಂದರಿ ದೇವಾಲಯವನ್ನು ಹೋಲುತ್ತದೆ. ಈ ದೇವಾಲಯದ ಒಳಭಾಗದ ನಾಲ್ಕೂ ಗೋಡೆಗಳಲ್ಲಿ ಚಿತ್ರಗಳಿದ್ದು, ಅವು ಸಂಪೂರ್ಣವಾಗಿ ಅಳಿದಿವೆ. ಈ ದೇವಾಲಯದ ಒಳ ಭಾಗದ ಗೋಡೆಯನ್ನೆಲ್ಲಾ ಕೆತ್ತಿ ಹಾಳು ಮಾಡಲಾಗಿದೆ. ಆದರೆ ದೇವಾಲಯದ ಹೊರ ಭಾಗದ ನಾಲ್ಕೂ ಬದಿಯ ಗೋಡೆಗೆ ಬಣ್ಣದ ಲೇಪನ ಮತ್ತು ವರ್ಣಪಟ್ಟಿಕೆಗಳನ್ನು ರಚಿಸಲಾಗಿದ್ದು, ಈಗಲೂ ಕಾಣಸಿಗುತ್ತವೆ.

ಪ್ರಸ್ತುತ ಅರಮನೆ ಸ್ಥಿತಿಗತಿಗಳು ಅರಮನೆ ಎನ್ನುವ ಸ್ಥಿತಿಯಲ್ಲಿಲ್ಲ. ವಂಶಸ್ಥರು ಮಹಾರಾಷ್ಟ್ರದ ಪೂನಾ ನಗರದಲ್ಲಿ ವಾಸಿಸುತ್ತಿದ್ದು, ಸದ್ಯ ಅರಮನೆ ಹಾಲಿನ ಡೈರಿ, ಕೃಷ್ಣಾತೀರ ರೈತ ಮಕ್ಕಳ ವಸತಿ ಶಾಲೆ ಮುಂತಾದ ಸಂಸ್ಥೆಗಳಿಂದ ತುಂಬಿದೆ. ಅಲ್ಲಲ್ಲಿ ಕಾವಲುಗಾರರಿಲ್ಲದೆ, ದನಕರುಗಳನ್ನು ಮೇಯಿಸುವವರು, ಹೊರಭಾಗದ ನಕ್ಷೆ ಹಾಗೂ ಚಿತ್ರಗಳನ್ನು ಕೆತ್ತಿ ಹಾಳು ಮಾಡಿದ್ದಾರೆ. ರಂಗಮಂದಿರ, ರಾಣಿ ನಿವಾಸ, ವಿಶ್ರಾಂತಿ ಗೃಹ ಮುಂತಾದೆಡೆ ಹಳದಿ ಮತ್ತು ನೀಲಿ ಬಣ್ಣಗಳನ್ನು ಅತೀ ಹೆಚ್ಚು ಪ್ರಮಾಣದಲ್ಲಿ ಬಳಸಿದ ಸಾಮಾನ್ಯ ದರ್ಜೆಯ ಚಿತ್ರಗಳಿವೆ. ಚಿತ್ರಗಳು ಎಲ್ಲಿಯೂ ಹೊಸತನವನ್ನು ಹೇಳುವುದಿಲ್ಲ. ಗಣಪತಿ ಮತ್ತು ಲಕ್ಷ್ಮಿ ಎಂದರೆ ಪ್ರಚಲಿತ ಕ್ಯಾಲೆಂಡ್‌ರಗಳಲ್ಲಿ ರಾರಾಜಿಸುವ ಚಿತ್ರಗಳ ಪ್ರತಿಕೃತಿಯೇ ವಿನಃ ಗುಳೇದಗುಡ್ಡದ

ಭಿತ್ತಿಗಳ ಮೇಲಿನ, ನವಿಲಿನ ಮೇಲಿನ ಸರಸ್ವತಿಯಂತೆ ಎಲ್ಲಿಯೂ ದಾಖಲಾಗದ ಚಿತ್ರಗಳಂತಿಲ್ಲ. ಕಾರಣ ಅನಕ್ಷರಸ್ಥ ರಾಜಾಶ್ರಯದ ಕಲಾವಿದರು ಸಣ್ಣಪುಟ್ಟ ಹಳ್ಳಿಗಳಿಂದ ಬಂದು ತಮ್ಮ ಬುದ್ಧಿಮಟ್ಟಕ್ಕೆ ಎಟುಕಿದಷ್ಟು ಇದ್ದಕ್ಕಿದ್ದಂತೆ ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. ನಕ್ಷಾ ಚಿತ್ರಗಳಲ್ಲೂ ಹೆಚ್ಚು ವಿಶೇಷತೆ ಕಾಣುವುದಿಲ್ಲ.

ಅರಮನೆಯ ಹೊರಗೋಡೆಗಳಲ್ಲದೆ, ಒಳಗೋಡೆಗಳೂ ಚಿತ್ರಗಳನ್ನು ಕಳೆದುಕೊಂಡು ಹೊಗೆ ಸುತ್ತಿದ ಕಲ್ಪನೆಯನ್ನು ಕೊಡುವಂತೆ ಎಲ್ಲವೂ ಅಸ್ಪಷ್ಟವಾಗಿ ಕಾಣುತ್ತವೆ. ಮಾರ್ಬಲ್ ಶಿಲ್ಪಗಳು ಕಬ್ಬಿಣದಿಂದ ತಯಾರಿಸಿದ ರಾಜರ ಮುದ್ರಾಸಂಕೇತಗಳು ಮಾತ್ರ ಇಂದಿಗೂ ನಶಿಸದೇ ಮೂಲಸ್ವರೂಪವನ್ನು ಉಳಿಸಿಕೊಂಡಿವೆ.

**ಜಮಖಂಡಿ ಅರಮನೆಯ ಭಿತ್ತಿ ಚಿತ್ರಗಳ ವಿಶೇಷತೆ**

* ಪುಟ್ಟ ಪುಟ್ಟ ಮಾಡುಗಳಲ್ಲಿ ಚಿತ್ರರಚನೆ ಮಾಡಿದ್ದು ಪೂರ್ಣವಾಗಿ, ಪ್ರಮಾಣಬದ್ಧವಾಗಿ ರಚಿಸಿರುವುದು ಲಕ್ಷಾರ್ಹವಾಗಿದೆ.

* ಎರಡೂ ಲಕ್ಷ್ಮಿ ಚಿತ್ರಗಳಲ್ಲಿ ರಚಿಸಲಾಗಿರುವ ಆನೆಗಳನ್ನು ಬಿಳಿ ವರ್ಣದಿಂದ ಚಿತ್ರಿಸಿರುವುದು ವಿಶೇಷ.

* ಈ ಲಕ್ಷ್ಮಿ ಚಿತ್ರಗಳಲ್ಲಿ ರಚನಾ ಶೈಲಿ ಒಂದೇ ಆಗಿದ್ದರೂ ಕಮಲ ಹಾಗೂ ಲಕ್ಷ್ಮಿಯ ವೇಷಭೂಷಣದ ವರ್ಣಗಳನ್ನು ಮಾತ್ರ ಬದಲಿಸಲಾಗಿದೆ.

* ಒಟ್ಟು ಚಿತ್ರಗಳು ಸಾಮಾನ್ಯ ಶೈಲಿಯಲ್ಲಿ ರಚನೆಗೊಂಡಿದ್ದು, ಅಂತಹ ಪ್ರೌಢತೆ ಹಾಗೂ ವಿಶೇಷತೆಗಳು ಕಂಡುಬರುವುದಿಲ್ಲ.





೨) ಜಯ ಮತ್ತು ವಿಜಯ

## ೪. ಬೆಳದಿಂಗಳ ಭಿತ್ತಿ ಚಿತ್ರಕಲೆ

ಈ ಹಿಂದೆ ವಿವರಿಸಲಾದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಚಿತ್ರಕಲೆಯ ಮೂಲಸ್ವರೂಪ ಸೂಚಿಸುತ್ತವೆ. ಈ ಚಿತ್ರಗಳೂ ಜನಪದ ಚಿತ್ರಗಳಾಗಿದ್ದು, ಭಿತ್ತಿಯನ್ನು ಆಧಾರವಾಗಿ ಬಳಸಿಕೊಂಡು ಚಿತ್ರ ಬಿಡಿಸುವುದಾಗಿದೆ. ಯಾವ ನಿಯಮಗಳನ್ನು ಇಟ್ಟುಕೊಳ್ಳದೇ ರಚಿಸಿದ ಜನಪದ ಚಿತ್ರಕಲೆ ಪ್ರಕೃತಿಯೊಂದಿಗೇ ಜನಪದರೊಂದಿಗೆ ಬೆಳೆದು ಬಂದುದಾಗಿದೆ. ಹಗಲು, ರಾತ್ರಿ, ಮೋಡ, ಮಳೆ, ಗುಡುಗು, ಸಿಡಿಲು, ಸೂರ್ಯ, ಚಂದ್ರ, ನಕ್ಷತ್ರ ಇತ್ಯಾದಿಗಳು ಜನಪದರ ಮೇಲೆ ಹಲವಾರು ರೀತಿಯ ಪ್ರಭಾವವನ್ನು ಬೀರಿವೆ. ವ್ಯಕ್ತಿಯು ಇವುಗಳ ಬಗೆಗೆ  ದೈವೀ ಭಾವನೆಯನ್ನು ಹೊಂದಿ ಹಬ್ಬ, ಪೂಜೆ, ಪುನಸ್ಕಾರಗಳಂತಹ ಆಚರಣೆಗಳು ಬೆಳೆದವು.[೧೫]

ಇಂತಹ ಆಚರಣೆ ಅಥವಾ ಪೂಜೆಗಳಲ್ಲಿ ಚಂದ್ರಪೂಜೆ ಅಥವಾ ಬೆಳದಿಂಗಳ ಪೂಜೆಯೂ ಒಂದು. ಈ ಪೂಜೆಯ ಜೊತೆಗೆ ಚಿತ್ರಕಲೆ ಅದರ ಅವಿಭಾಜ್ಯ ಅಂಗವಾಗಿ ಬೆಳೆದುಬಂದಿದೆ. ಭಾರತೀಯರಲ್ಲಿ ಚಂದ್ರನನ್ನು ಆರಾಧಿಸುವ ಪರಂಪರೆ ಬಹಳ ಹಿಂದಿನಿಂದಲೇ ನಡೆದುಬಂದಿದೆ. ಈ ಆರಾಧನೆಯನ್ನು ಬೆಳದಿಂಗಳು ಬರೆಯುವುದು, ಬೆಳ್ದಂಗಳ ಹೊಯ್ಯುವುದು, ಬೆಳದಿಂಗಳ ಕರೆದುಕೊಳ್ಳುವುದು, ಚಂದ್ರಾಮನ ಪೂಜೆ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಅಲ್ಲಿ ರಚನೆಯಾಗುವಂತಹ ಚಿತ್ರವಿನ್ಯಾಸಗಳಲ್ಲೂ ಪ್ರಾದೇಶಿಕ ಭಿನ್ನತೆಗಳಿವೆ.

ಹೀಗೆ ಎಲ್ಲಾ ಜನಪದೀಯ ಲಕ್ಷಣಗಳನ್ನು ಹೊಂದಿರುವ ಈ ಬೆಳದಿಂಗಳ ಚಿತ್ರಕಲೆಯನ್ನು, ಗೋಡೆಯ ಮೇಲೆ ಸಗಣಿ, ಕೆಮ್ಮಣ್ಣಿನ ಪದರ ಲೇಪಿಸಿ, ಅದರ ಮೇಲೆ ಸುಣ್ಣದ ನೀರಿನಿಂದ ಚಿತ್ರವನ್ನು ಬರೆಯುತ್ತಾರೆ. ಇದು ಕೂಡಾ ಜನಪದರ ಭಿತ್ತಿ ಚಿತ್ರಕಲೆ.

ಕರ್ನಾಟಕದಲ್ಲಿ ಭಾರತ ಹುಣ್ಣಿಮೆ ಅಥವಾ ಗುಡಿಹುಣ್ಣಿಮೆಯ ಸಂದರ್ಭದಲ್ಲಿ ಚಂದ್ರನ ಆರಾಧನೆ ಮಾಡಲಾಗುತ್ತದೆ. ಈ ಭಾರತ ಹುಣ್ಣಿಮೆಯು ಇನ್ನೂ ಐದು ದಿನ ಇದೆ ಎನ್ನುವಾಗ ಈ ಆಚರಣೆಯು ಪ್ರಾರಂಭವಾಗಿ ಹುಣ್ಣಿಮೆ ದಿನ ಕೊನೆಗೊಳ್ಳುತ್ತದೆ. ಮೊದಲಿನ ನಾಲ್ಕು ದಿನ ರಾತ್ರಿ ಹೊತ್ತಿನಲ್ಲಿ ವಿವಿಧ ರೀತಿಯ ಚಿತ್ರವಿನ್ಯಾಸಗಳನ್ನು ಸುಣ್ಣದಿಂದ ಬರೆದು, ಪೂಜಿಸಿದರೆ ಐದನೆಯ ಅಂದರೆ ಹುಣ್ಣಿಮೆಯ ದಿನ ಹಗಲು ಹೊತ್ತಿನಲ್ಲಿ ಸುಣ್ಣ ಇಲ್ಲವೆ ಕೆಮ್ಮಣ್ಣಿನಿಂದ ಚಿತ್ರ ಬರೆದು ಪೂಜಿಸುತ್ತಾರೆ.

### i. ನೆಲೆಗಳು

ಹಿಂದಿನ ದಿನಗಳಲ್ಲಿ ಜಿಲ್ಲೆಯಾದ್ಯಂತೆ ಬೆಳದಿಂಗಳ ಚಿತ್ರಗಳನ್ನು ಕಾಣಬಹುದಾಗಿದ್ದರೂ, ಪ್ರಸಕ್ತ ದಿನಗಳಲ್ಲಿ ಗುಳೇದಗುಡ್ಡದಲ್ಲಿ ಮಾತ್ರ ಬೆಳದಿಂಗಳ ಚಿತ್ರಕಲೆಯನ್ನು ಇಂದಿಗೂ ಮುಂದುವರೆಸಿರುವುದು ವಿಶೇಷ. ಹಾಗಾಗಿ ಗುಳೇದಗುಡ್ಡವು ಬೆಳದಿಂಗಳ ಚಿತ್ರಕಲೆಯ ಜಿಲ್ಲೆಯ ಏಕೈಕ ನೆಲೆಯಾಗಿದೆ.

---

೧೫. ಅಗ್ರಹಾರ ಕೃಷ್ಣಮೂರ್ತಿ, ಬೆಳದಿಂಗಪ್ಪನ ಪೂಜೆ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

## ii. ಬೆಳದಿಂಗಳ ಚಿತ್ರರಚನೆಯ ತಂತ್ರವಿಧಾನಗಳು

ಹೆಚ್ಚಾಗಿ ಮನೆಯ ಮುಂಬಾಗಿಲಿನ ಗೋಡೆಗಳ ಮೇಲೆ ಈ ಬೆಳದಿಂಗಳ ಚಿತ್ರಗಳನ್ನು ಬರೆಯಲಾಗುತ್ತದೆ. ಕೆಲವು ಕಡೆಗಳಲ್ಲಿ, ಮನೆಯಲ್ಲಿ ಕುಳಿತುಕೊಳ್ಳಲು ಬಳಸುತ್ತಿದ್ದ ಮರದ ಮಣೆಯ ಮೇಲೂ ಬೆಳದಿಂಗಳ ಚಿತ್ರಗಳನ್ನು ಬರೆಯಲಾಗುತ್ತದೆ. ನೈಸರ್ಗಿಕವಾಗಿ ದೊರೆಯುವ ಎರಡೇ ಎರಡು ಬಣ್ಣಗಳನ್ನು ಮಾತ್ರ ಬಳಸಲಾಗುತ್ತದೆ. ಕೆಂಪುಮಣ್ಣು ಮತ್ತು ಸುಣ್ಣದ ಮುಖಾಂತರ ಚಿತ್ರಗಳನ್ನು ರಚಿಸಲಾಗುತ್ತದೆ. ಕೆಂಪುಮಣ್ಣಿನಿಂದ ಕೆಂಪು ಹಿನ್ನೆಲೆಯನ್ನು ತಯಾರಿಸಿಕೊಂಡು ಅದರ ಮೇಲೆ ಬಿಳಿಸುಣ್ಣದಿಂದ ಚಿತ್ರ ರಚಿಸಲಾಗುತ್ತದೆ ಅಥವಾ ಬಿಳಿಸುಣ್ಣದ ಹಿನ್ನೆಲೆಯ ಮೇಲೆ ಕೆಂಪುಮಣ್ಣಿನ ಬಿಂದುಗಳ ಚಿತ್ತಾರ ಬಿಡಿಸಲಾಗುತ್ತದೆ. ಹಲವೆಡೆ ಸೆಗಣಿಯನ್ನು ಸಾರಿಸಿ ಅದರ ಮೇಲೂ ಚಿತ್ತಾರಗಳನ್ನು ಬರೆಯಲಾಗುತ್ತದೆ.

ಚಿತ್ತಾರಗಳನ್ನು ಬರೆಯಲು ದೀಪದ ಕಡ್ಡಿ, ತೊಗರಿಕಡ್ಡಿ, ಪುಂಡಿಕಡ್ಡಿ, ತೆಳುವಾದ ದಂಟನ್ನು ಬಳಸಲಾಗುತ್ತದೆ. ಕೆಲವರು ಕೈಬೆರಳಿನಿಂದಲೇ ಚಿತ್ರಿಸುತ್ತಾರೆ. ಬಣ್ಣಗಳನ್ನು ಕಲಿಸಿಕೊಳ್ಳಲು ಮಣ್ಣಿನ ಪಾತ್ರೆ ಇಲ್ಲವೇ ತೆಂಗಿನ ಚಿಪ್ಪುಗಳನ್ನು ಬಳಸಿಕೊಳ್ಳಲಾಗುತ್ತದೆ. ಇವುಗಳ ಜೊತೆಗೆ ತಮಗೆ ಬೇಕಾದ ಆಕಾರಗಳನ್ನು ರಚಿಸಲು, ಕತ್ತರಿಸಿದ ರಟ್ಟುಗಳು, ವಿವಿಧ ಗಿಡಗಳ ಎಲೆಗಳು, ದಾರಗಳನ್ನು ಬಳಸಿಕೊಳ್ಳಲಾಗುತ್ತದೆ. ಹಾಗೆ ಸೂರ್ಯ, ತೇರಿನ ಗಾಲಿಗಳನ್ನು ದುಂಡಾಗಿ ರಚಿಸಲು ತಟ್ಟೆಗಳನ್ನು ಬಳಸಿಕೊಳ್ಳಲಾಗುತ್ತದೆ.

### ಬೆಳದಿಂಗಳ ಚಿತ್ರರಚನಾ ವಿಧಾನ

“ಭರತ ಹುಣ್ಣಿಮೆಯ ನಾಲ್ಕು ದಿನ ಮುಂಚಿತವಾಗಿಯೇ ಬೆಳದಿಂಗಳ ಚಿತ್ರರಚನೆಯ ಕಾರ್ಯ ಆರಂಭವಾಗುತ್ತದೆ. ಆದರೆ ಈ ನಾಲ್ಕೂ ದಿನಗಳ ಚಿತ್ರಗಳು ಅವತ್ತಿನ ದಿನ ಮಾತ್ರ ನೋಡಲು ಸಿಗುತ್ತವೆ. ಮರುದಿನ ಇವುಗಳನ್ನು ಅಳಿಸಿ ಮತ್ತೆ ಅದರ ಮೇಲೆ ಸಾರಿಸಿ ಮರುದಿನದ ಹೊಸ ಚಿತ್ರದ ರಚನೆ ನಡೆಯುತ್ತದೆ. ಆದರೆ ಐದನೇ ದಿನದ ಚಿತ್ರ ಮಾತ್ರ ದಸರಾ, ದೀಪಾವಳಿ ಹಬ್ಬಗಳವರೆಗೂ ನೋಡಲು ಸಿಗುತ್ತದೆ.

ಮೊದಲನೇ ದಿನ: ಸೂರ್ಯ, ಚಂದ್ರರ ಚಿತ್ರವನ್ನು ಮಾತ್ರ ಬಿಡಿಸುತ್ತಾರೆ. ಬೆರಳುಗಳನ್ನು ಸುಣ್ಣದಲ್ಲಿ ಅದ್ದಿ ಆ ಸುಣ್ಣದ ಬಿಂದುಗಳನ್ನು ಕೆಂಪು ಹಿನ್ನೆಲೆಯ ಮೇಲೆ ಇಡುತ್ತಾ ಸೂರ್ಯ ಹಾಗೂ ಅರ್ಧಚಂದ್ರನನ್ನು ಚಿತ್ರಿಸುತ್ತಾರೆ.

ಎರಡನೇ ದಿನ: ಸೂರ್ಯ, ಚಂದ್ರರ ಜೊತೆಗೆ ಹಾವುಗಳ ಚಿತ್ರವನ್ನು ರಚಿಸುತ್ತಾರೆ. ಸೂರ್ಯನನ್ನು ದುಂಡಾಗಿ ಚಿತ್ರಿಸಲು ಊಟದ ತಟ್ಟೆಯನ್ನು ಗೋಡೆಯ ಮೇಲೆ ಹಿಡಿದು ಅದರ ಸುತ್ತಲೂ ಸುಣ್ಣದ ಬೊಟ್ಟುಗಳನ್ನಿಟ್ಟು ಪೂರ್ಣಗೊಳಿಸುತ್ತಾರೆ. ಅಂಕುಡೊಂಕಾದ ರೇಖೆಯಿಂದ ನಾಲಿಗೆಯನ್ನು ಹೊರ ಚಾಚಿದ ನಾಗರ ಹಾವನ್ನು ಚಿತ್ರಿಸುತ್ತಾರೆ.

ಮೂರನೇ ದಿನ: ರಾಮನ ತೊಟ್ಟಿಲು ಎನ್ನುವ ಚೌಕಾಕಾರದ ಆಕೃತಿಯನ್ನು ರಚಿಸುತ್ತಾರೆ. ಇಲ್ಲಿಯೂ ಕೂಡ ಬೆರಳುಗಳ ಮೂಲಕ ಸುಣ್ಣದ, ಕೆಮ್ಮಣ್ಣಿನ ಬೊಟ್ಟುಗಳನ್ನಿಡುತ್ತಾ ಚಿತ್ರರಚನೆ ಮಾಡುತ್ತಾರೆ.

ನಾಲ್ಕನೇ ದಿನ: ಹೂವು, ಎಲೆ, ಬಳ್ಳಿಗಳ ಚಿತ್ರವನ್ನು ರಚಿಸಲಾಗುವುದು, ಇದಕ್ಕಾಗಿ ಬೇರೆ ಬೇರೆ ಗಿಡದ ಎಲೆಗಳನ್ನು ಬಳಸಿಕೊಳ್ಳಲಾಗುತ್ತಿದೆ. ಎಲೆಯನ್ನಿಟ್ಟು ಅದರ ಸುತ್ತಲೂ ಹೊರ ರೇಖೆಯಾಗಿ ಸುಣ್ಣದ ಚುಕ್ಕೆಗಳನ್ನು ಇಡುತ್ತಾರೆ. ನಂತರ ಈ ಎಲೆಗಳನ್ನು ಬಳ್ಳಿಯಂತೆ ಹೊಂದಿಸಿ ಒಂದರಿಂದ ೫ ಇಲ್ಲವೇ ೭ ಸಾಲುಗಳಲ್ಲಿ ಚಿತ್ರಿಸುವರು.

ಐದನೇ ದಿನ: ಮಧ್ಯದಲ್ಲಿ ದೊಡ್ಡದಾದ ತೇರನ್ನು ರಚಿಸಲಾಗುತ್ತದೆ. ಜೋಳದ ದಂಟನ್ನು ಬಳಸಿ, ಆ ದಂಟಿನ ಎರಡೂ ಬದಿಗೆ ಸುಣ್ಣದ ಬೊಟ್ಟುಗಳನ್ನು ಮೂಡಿಸಿ ಸುಂದರ ಸಮಾಂತರ ಸಾಲುಗಳಿಂದ ತೇರನ್ನು ರಚಿಸುತ್ತಾರೆ. ಆ ತೇರಿನ ಕಳಸವನ್ನು ಅಂದವಾಗಿ ಚಿತ್ರಿಸುವ ಸಲುವಾಗಿ ಬಸರಿ ಗಿಡದ ಎಲೆಯನ್ನು ಸಹಾಯಕ್ಕಾಗಿ ಬಳಸಿ ಅದನ್ನು ಗೋಡೆಯ ಮೇಲೆ ಹಿಡಿದು ಅದರ ಪಕ್ಕದಲ್ಲಿ ಸುಣ್ಣದ ಬೊಟ್ಟುಗಳನ್ನಿಟ್ಟು ಚಿತ್ರಿಸಲಾಗುತ್ತದೆ. ತೇರಿನ ಗಾಲಿಗಳನ್ನು ರಚಿಸಲು ಬಟ್ಟಲುಗಳನ್ನು ಉಪಯೋಗಿಸಲಾಗುತ್ತದೆ. ಈ ತೇರಿನ ಮೇಲ್ಗಡೆ ಸೂರ್ಯ, ಚಂದ್ರರನ್ನು ಅಕ್ಕಪಕ್ಕದಲ್ಲಿ ಹಾವು, ಚೇಳು, ಬಸವ, ವಾದ್ಯಮೇಳವನ್ನು ಚಿತ್ರಿಸಲಾಗಿರುತ್ತದೆ."[೧೬]

### iii. ಚಿತ್ರದ ವಸ್ತುವಿಷಯ

#### ೧. ಅಲಂಕೃತ ತೇರು

ಇಲ್ಲಿ ಲಭ್ಯವಿರುವ ಚಿತ್ರ ೨೦೧೨ರ ಭರತ ಹುಣ್ಣಿಮೆಯದಾಗಿದೆ. ಚಿತ್ರದಲ್ಲಿ ಸೂರ್ಯ, ಚಂದ್ರ ಮೇಲ್ಭಾಗದಲ್ಲಿದ್ದರೆ, ಸೂರ್ಯನಿಗೆ ದುಂಡಾಕಾರದಲ್ಲಿ ಪೂರ್ಣವರ್ಣವನ್ನು ತುಂಬಲಾಗಿದೆ. ಚಂದ್ರನಿಗೆ ಅರ್ಧಚಂದ್ರಾಕೃತಿಯಲ್ಲಿ ರೇಖಾಚಿತ್ರ ರಚಿಸಲಾಗಿದೆ. ಅದಾದ ನಂತರ ದಪ್ಪನೆಯ ಆಕಾರದಲ್ಲಿ ಎದ್ದು ಕಾಣುವಂತೆ ಮತ್ತೆರಡು ಸೂರ್ಯನ ಚಿತ್ರಗಳನ್ನು ಅವನ ಛಾಯೆ ಸಮೇತ ರಚಿಸಲಾಗಿದೆ. ಮುಖ್ಯ ಸ್ಥಳದಲ್ಲಿ ತೇರನ್ನು ರಚಿಸಿ ಮೇಲ್ಭಾಗದಲ್ಲಿ ಎಲೆಗಳ ಆಕಾರದಲ್ಲಿ ಅಲಂಕಾರಗೊಳಿಸಲಾಗಿದೆ. ಚಿತ್ರವು ಶೇಕಡಾ ೮೦ರಷ್ಟು ಚುಕ್ಕೆ ಚಿತ್ರವಾಗಿದ್ದು, ಬೆರಳಿನಿಂದ ಚುಕ್ಕೆಗಳನ್ನಿಟ್ಟು ರಚಿಸಲಾಗುತ್ತದೆ. ತೇರಿನ ಎಡಬಲಗಳಲ್ಲಿ ಕೈ ಮೇಲೆ ಮಾಡಿದ ಮನುಷ್ಯಾಕೃತಿಗಳಿದ್ದು, ಕೆಳಗಡೆ ಪಾದಗಳನ್ನು ರಚಿಸಲಾಗಿದೆ. ಚಿತ್ರದ ಕೊನೆಯ ಬದಿಯಲ್ಲಿ ಎರಡೂ ಕಡೆ ಉದ್ದನೆಯ ಹಾವುಗಳನ್ನು ರಚಿಸಿ ಕಲಾತ್ಮಕ ಆಕಾರ ನೀಡಲಾಗಿದೆ.

ಸ್ಥಳ ಹೊಂದಾಣಿಕೆ, ಸಂಯೋಜನೆ, ದಪ್ಪತೆಳುಗಳ ಕಲ್ಪನೆ, ಒಂದೇ ವರ್ಣವಿದ್ದರೂ ಸಮತೋಲನೆ ಕಾಯ್ದುಕೊಂಡ ಚಿತ್ರ ಅಲ್ಲಲ್ಲಿ ದಪ್ಪನೆಯ ಸ್ವಸ್ತಿಕ್‌ನ್ನು ರಚಿಸಿ ಅಂಚಿಗೆ ಯಾವ ರೇಖೆಗಳಿಲ್ಲದೆ, ಭಿತ್ತಿಯನ್ನು ಸ್ವತಂತ್ರವಾಗಿ ಬಿಡಲಾಗಿದೆ. ಭಕ್ತಿ, ಭಾವ ಹೊರಸೂಸುವ, ಜನರನ್ನು ಆಕರ್ಷಿಸುವ ಈ ಚಿತ್ರಗಳು ಚಿಂತನೆಗೂ

---

೧೬. ಆನಂದ ಕೆ. ಪೂಜಾರ, ಬೆಳದಿಂಗಳ ಚಿತ್ರಕಲೆ, ಪು. ೧೫-೧೬.

ಎಡೆಮಾಡಿಕೊಡುತ್ತದೆ. ಸಂಶೋಧಕರು, ವಿದ್ವಾಂಸರು ಈ ಜನಪದ ಕಲೆಯನ್ನು ಛಾಯಾಚಿತ್ರ ತೆಗೆದಿಟ್ಟುಕೊಳ್ಳು ವಷ್ಟು ಪರಿಪೂರ್ಣವಾದ ಚಿತ್ರ ಇದಾಗಿದೆ ಎನ್ನಬಹುದು.

**೨. ಲಿಂಗಾಕಾರದ ಅಲಂಕೃತ ತೇರು**

ಸುಮಾರು ೧೦ ವರ್ಷಗಳ ಹಿಂದೆ ರಚಿಸಿದ್ದ ಈ ಚಿತ್ರವು ಶ್ರೀ ಮಹಾದೇವ ಜಗತಾಪ್ ಸಂಗ್ರಹದಿಂದ ಪಡೆಯಲಾಗಿದೆ. ಇಲ್ಲಿ ಶಿವ ಲಿಂಗವನ್ನು ತೇರಿನಂತೆ ಧ್ವಜಗಳಿಂದ ಅಲಂಕೃತಗೊಳಿಸಿ ಲಿಂಗವೆನ್ನುವುದಕ್ಕೆ ಮೂರು ಬೆರಳು ವಿಭೂತಿಯನ್ನು ಮಧ್ಯದಲ್ಲಿ ಕುಂಕುಮವನ್ನು ಬರೆದಿದ್ದು, ತಲೆಯ ಮೇಲೆ ಹೂವಿನಾಕಾರದ ಚಿತ್ರ ಇದ್ದು, ಅದಕ್ಕೆ ಮೂರು ದಳಗಳ ಪತ್ರಿಯನ್ನು ರಚಿಸಲಾಗಿದೆ. ಇಲ್ಲಿಯೂ ಸೂರ್ಯ, ಚಂದ್ರ ಇದ್ದು ಸೂರ್ಯನಿಗೆ ಕಣ್ಣು, ಮೂಗುಗಳನ್ನು ಬರೆಯಲಾಗಿದೆ. ಲಿಂಗದ ಕೆಳಗೆ ಗದ್ದುಗೆಯಾಕಾರದ ವರ್ತುಳಗಳ ಅಲಂಕಾರವಿದೆ. ಜೊತೆಯಲ್ಲಿ, ಇನ್ನೊಂದು ಚೌಕಾಕಾರದ ಮೆಟ್ಟಿಲುಗಳಂತಿರುವ ಅರ್ಧ ತೇರನ್ನು ರಚಿಸಿ ಅದಕ್ಕೂ ಧ್ವಜಗಳನ್ನು ಹಾಕಲಾಗಿದೆ. ಬಲಮೂಲೆಯಲ್ಲಿ ಬಾಲವನ್ನು ಸುತ್ತರಿಸಿಕೊಂಡ ಚೇಳನ್ನು ರಚಿಸಿದ್ದು ವಿಶೇಷತೆ. ಇಲ್ಲಿಯೂ ಕೂಡ ಸಂಯೋಜನೆಗಾಗಿ ತಿಳಿದೊ, ತಿಳಿಯದೋ 'ಓಂ'ನ್ನು ರಚಿಸಿ ವಿಭೂತಿಗೆ ಸಮತೋಲನ ನೀಡಲಾಗಿದೆ.

ಪುರಾತನ ಕಾಲದಿಂದಲೂ ಬೆಳೆದು ಬಂದಿರುವ ಈ ಬೆಳದಿಂಗಳ ಚಿತ್ರಕಲೆ ಇಂದು ಅಳಿವಿನ ಅಂಚಿನಲ್ಲಿದೆ. ಬಾಗಲಕೋಟೆ ಜಿಲ್ಲೆಯ ಗುಳೇದಗುಡ್ಡ ನಗರದಲ್ಲಿ ಮಾತ್ರ ಇವತ್ತಿಗೂ ಈ ಕಲೆಯನ್ನು ಕಾಣಬಹುದಾಗಿದೆ. ಅದೂ ಗುಳೇದಗುಡ್ಡ ನಗರದ, ಮರಬದಮಠ, ಬನ್ನಿ, ತಿಪ್ಪಾ, ಹಬೀಬ, ಶೀಲವಂತರ ಮುಂತಾದ ಕೆಲವರ ಮನೆಗಳಲ್ಲಿ ಇಂದಿಗೂ ಕೂಡಾ ಭರತ ಹುಣ್ಣಿಮೆಯ ಬೆಳದಿಂಗಳ ಹೊಯ್ಯುವ ಆಚರಣೆ ನಡೆಯುತ್ತಿದೆ. ಐದು ದಿನಗಳವರೆಗೆ ಅದ್ದೂರಿಯಾಗಿ, ನಡೆಯುತ್ತಿದ್ದ ಈ ಆಚರಣೆ, ಇಂದು ಕಾಟಾಚಾರಕ್ಕೆ ಎಂಬಂತೆ ಕೇವಲ ಒಂದು ದಿನಕ್ಕೆ ಮಾತ್ರ ಬಂದುನಿಂತಿದೆ.

**iv. ಬೆಳದಿಂಗಳ ಚಿತ್ರಗಳ ವಿಶೇಷತೆ**

* ಕೆಲವೆಡೆಗಳಲ್ಲಿ ಬಿಳಿ ವರ್ಣದ ಹಿನ್ನೆಲೆಯ ಮೇಲೆ ಕೆಂಪು ವರ್ಣದಿಂದ ಚಿತ್ರ ರಚನೆ ಮಾಡುತ್ತಾರಾದರೂ, ಜಿಲ್ಲೆಯಲ್ಲಿ ಮಾತ್ರ ಕೆಂಪು ವರ್ಣದ ಹಿನ್ನೆಲೆಯ ಮೇಲೆ ಬಿಳಿ ವರ್ಣದಿಂದ ಚಿತ್ರರಚನೆ ಮಾಡುತ್ತಾರೆ.

* ಕೆಂಪು ವರ್ಣದ ಮೇಲೆ ಬಿಳಿ ಸುಣ್ಣದಿಂದ ಬೊಟ್ಟು(ಚುಕ್ಕಿ)ಗಳನ್ನಿಡುತ್ತ ಚಿತ್ರ ರಚನೆಗೈಯುವುದು ಜಿಲ್ಲೆಯ ವಿಶೇಷ. ಹಲವೆಡೆಗಳಲ್ಲಿ ರೇಖೆಯ ಮೂಲಕ ಬೆಳದಿಂಗಳ ಚಿತ್ರ ರಚನೆ ಮಾಡಲಾಗುತ್ತದೆ.

* ಹಾವು, ಚೇಳು, ಸೂರ್ಯ, ಚಂದ್ರ, ಹೆಜ್ಜೆಗುರುತು, ಸ್ವಸ್ತಿಕ್, ತೇರು ಇವೇ ಮುಂತಾದ ವಸ್ತುವಿಷಯಗಳನ್ನು ಹೊಂದಿರುವ ಬೆಳದಿಂಗಳ ಚಿತ್ರಕಲೆ, ಒಂದೇ ರೀತಿಯ ರಚನಾಶೈಲಿಯನ್ನು ಹೊಂದಿದ್ದು, ಒಬ್ಬೊಬ್ಬ ಕಲಾವಿದರು ಚಿತ್ರರಚನೆ ಮಾಡುವಲ್ಲಿ ಅಲ್ಪಸ್ವಲ್ಪ ಭಿನ್ನತೆಯನ್ನು ಕಾಣಬಹುದಾಗಿದೆ.



ಬೆಳದಿಂಗಳ ಚಿತ್ರ ರಚಿಸುತ್ತಿರುವ ಗುಳೇದಗುಡ್ಡದ ಶಾವಂತ್ರವ್ವ ಮರಬದಮಠ



ಬೆಳೆದಿಂಗಳ ಭಿತ್ತಿ ಚಿತ್ರಗಳು ೧) ಅಲಂಕೃತ ತೇರು



೨) ಲಿಂಗಾಕಾರದ ಅಲಂಕೃತ ತೇರು

## ೫. ಗರಡಿಮನೆಯ ಭಿತ್ತಿ ಚಿತ್ರಗಳು

ಬೆಳದಿಂಗಳ ಚಿತ್ರಗಳಂತೆ ಇವು ಕೂಡ ಜನಪದರಿಂದ ಜನಪದ ಶೈಲಿಯಲ್ಲಿ ರಚಿತಗೊಂಡ ಚಿತ್ರಗಳಾಗಿವೆ. ಗರಡಿ ಎಂದರೆ- ಕುಸ್ತಿಯಂತಹ ಅಂಗಸಾಧನೆಗಳಿಗಾಗಿ ಗೊತ್ತಾದ ಸ್ಥಳ. ಈ ಸ್ಥಳವಿರುವ ಮನೆಯೇ “ಗರಡಿಮನೆ”.[೧೭] ಉತ್ತರ ಭಾರತದ ಕಡೆಗಳಲ್ಲಿ ಬಯಲಲ್ಲಿಯೇ ಕುಸ್ತಿ ಅಭ್ಯಾಸ ನಡೆಸುತ್ತಾರೆ. ಆದರೆ ದಕ್ಷಿಣ ಭಾರತದಲ್ಲಿ ಮಾತ್ರವೇ ಗರಡಿ ಮನೆಗಳನ್ನು ಕಾಣಬಹುದು. ಈ ಗರಡಿಮನೆಗಳನ್ನು ಹಲವು ಉದ್ದೇಶಗಳಿಂದ ವಿಶಿಷ್ಟ ರೀತಿಯಲ್ಲಿ ವಿನ್ಯಾಸಗೊಳಿಸಲಾಗಿರುತ್ತದೆ. ಈ ಗರಡಿಮನೆಗೆ ಒಂದು ಬಾಗಿಲನ್ನು ಬಿಟ್ಟರೆ ಒಂದು ಪುಟ್ಟ ಕಿಟಕಿ ಮಾತ್ರವೇ ಇರುತ್ತದೆ. ಹೆಚ್ಚು ಗಾಳಿ, ಬೆಳಕು ಪ್ರವಹಿಸದಂತೆ ಗರಡಿಮನೆಗಳನ್ನು ನಿರ್ಮಿಸಲಾಗಿರುತ್ತದೆ. ಹೀಗೆ ಬೃಹತ್ ಗರಡಿ ಮನೆಯ ಹೊರಗೋಡೆಯು ವಿಶಾಲವಾಗಿ ಇರುವುದರಿಂದ ಅಲ್ಲಿ ಚಿತ್ರ ರಚನೆಗಳು ಕಂಡುಬರುತ್ತವೆ. ದುಷ್ಟ ಶಕ್ತಿಗಳ ಸಂಹಾರ ಮಾಡಲು ಹಾಗೂ ಶಕ್ತಿ ಸಂಪಾದಿಸುವ ಕುಸ್ತಿ ಕಲೆಯನ್ನು ಪ್ರದರ್ಶಿಸುವ ಸಂಕೇತಗಳಾಗಿ ಇಲ್ಲಿ ಚಿತ್ರಗಳನ್ನು ರಚಿಸಲಾಗಿರುತ್ತದೆ. ಬಹಳ ಹಿಂದಿನಿಂದಲೂ ಗರಡಿಮನೆಗಳ ಮೇಲೆ ಚಿತ್ರ ರಚನೆಯ ಕಾರ್ಯ ನಡೆಯುತ್ತಲೇ ಬಂದಿದ್ದರೂ, ಕಾಲ ಕಾಲಕ್ಕೆ ಅಲ್ಪಸ್ವಲ್ಪ ಬದಲಾವಣೆಗಳನ್ನು ಕಾಣಬಹುದಾಗಿದೆ. ಕುಸ್ತಿಯಂತಹ ಜನಪದ ಆಟಗಳು ಮರೆಯಾಗುತ್ತಿರುವ ಇಂದಿನ ಕಾಲದಲ್ಲಿ ಗರಡಿಮನೆಗಳೂ ಕೂಡ ಅಳಿವಿನ ಅಂಚಿನಲ್ಲಿರುವುದ ರಿಂದ ಅಲ್ಲಿಯ ಚಿತ್ರಗಳನ್ನು ಸಂಗ್ರಹಿಸಿ ಪ್ರಸ್ತುತಪಡಿಸಲಾಗಿದೆ.

### i. ಗರಡಿಮನೆಯ ನೆಲೆಗಳು

ದಕ್ಷಿಣ ಭಾರತದಲ್ಲಿ ಗರಡಿಮನೆಗಳನ್ನು ಹೆಚ್ಚಾಗಿ ಕಾಣಬಹುದಾಗಿದ್ದು, ಕರ್ನಾಟಕದಲ್ಲೂ ಸಹ ಹೆಚ್ಚಿನ ಸಂಖ್ಯೆಯ ಗರಡಿಮನೆಗಳಿವೆ. ಇನ್ನು ಜಿಲ್ಲೆಯೂ ಸಹ ಅಪಾರ ಸಂಖ್ಯೆಯ ಗರಡಿಮನೆಗಳನ್ನು ಹೊಂದಿದ್ದ ಬಗೆಗೆ ದಾಖಲೆಗಳು ದೊರೆಯುತ್ತವೆ. ಆದರೆ ಆಧುನಿಕತೆಯ ಭರದಲ್ಲಿ ಗರಡಿಮನೆಗಳು ಇಲ್ಲವಾಗುತ್ತಿವೆ. ಈ ಸಂದರ್ಭದಲ್ಲಿ ಜಿಲ್ಲೆಯಲ್ಲಿ ಉಳಿದುಕೊಂಡಿರುವ ಗರಡಿಮನೆಗಳ ನೆಲೆಗಳು ಇಂತಿವೆ.

ಜಿಲ್ಲೆಯ ಬಾದಾಮಿ ತಾಲ್ಲೂಕಿನ ಪರೂತಿ ಹಾಗೂ ಬಾದಾಮಿಗಳಲ್ಲಿ ಗರಡಿಮನೆಗಳ ನೆಲೆಗಳನ್ನು ಕಾಣಬಹುದು. ಅಂತೆ ತನ್ನದೇ ಆದ ಸಾಂಸ್ಕೃತಿಕ ನೆಲೆಗಟ್ಟನ್ನು ಹೊಂದಿರುವ ಗುಳೇದಗುಡ್ಡದಲ್ಲಿ ಕಂಠಿಪೇಟೆಯ ಗರಡಿಮನೆ, ಶಿವಪ್ಪಯ್ಯನ ಗರಡಿಮನೆ, ಹೊಸ ಗರಡಿಮನೆ, ಹೊಸಪೇಟೆಯಲ್ಲಿರುವ ಸಾಲೇಶ್ವರ ಗರಡಿಮನೆಗಳೆಂಬ ೪ ಗರಡಿಮನೆಗಳಿವೆ. ಅವುಗಳಲ್ಲಿ ಕಂಠಿಪೇಟೆಯ ಗರಡಿಮನೆಯಲ್ಲಿ ತೈಲ ಚಿತ್ರಗಳಿರುವುದು ವಿಶೇಷ.

ಬಾಗಲಕೋಟೆ ತಾಲ್ಲೂಕಿನ ಶಿರೂರ ಮತ್ತು ಬಾಗಲಕೋಟೆಯಲ್ಲಿ ಗರಡಿಮನೆಗಳಿವೆ. ಜಮಖಂಡಿ ತಾಲ್ಲೂಕಿನ ಸಾವಳಗಿ, ತೇರದಾಳ, ಚಿಕ್ಕಪಡಸಲಗಿ, ಬನಹಟ್ಟಿ ಮತ್ತು ಜಮಖಂಡಿಯಲ್ಲಿ ಗರಡಿಮನೆಗಳ ನೆಲೆಗಳಿವೆ. ಮುಧೋಳ ತಾಲ್ಲೂಕಿನ ಮಹಲಿಂಗಪುರ, ಲೋಕಾಪುರ ಮತ್ತು ಮುಧೋಳಗಳಲ್ಲಿ

---

೧೭. ಬಿ.ಎಸ್. ಗದ್ದಗಿಮಠ, ಜನಪದ ವಿಶ್ವಕೋಶ, ‘ಗರಡಿ’, ಪು. ೪೨೫-೪೨೬.

ಗರಡಿಮನೆಗಳನ್ನು ಕಾಣಬಹುದು. ಜೊತೆಗೆ ಹುನಗುಂದ ತಾಲ್ಲೂಕಿನ ಅಮೀನಗಡ ಮತ್ತು ಇಲಕಲ್ಲದಲ್ಲಿ ಗರಡಿಮನೆಗಳಿವೆ.

**ii. ಗರಡಿಮನೆ ಚಿತ್ರರಚನೆಯ ತಂತ್ರ-ವಿಧಾನಗಳು**

ವಿಶಾಲವಾದ ಹೊರಗೋಡೆಯನ್ನು ಹೊಂದಿರುವ ಗರಡಿಮನೆಗಳಲ್ಲಿ ದುಷ್ಟಶಕ್ತಿ ನಿವಾರಣೆಗಾಗಿ ಚಿತ್ರರಚನೆಯನ್ನು ಮಾಡುತ್ತಾ ಬಂದಿರುವುದು ವಿಶೇಷ. ಹಿಂದಿನ ದಿನಗಳಲ್ಲಿ ಸುಣ್ಣದ ಗೋಡೆಯ ಮೇಲೆ ಹುರಿಮಂಜಿನಿಂದ ಕುಸ್ತಿಯಾಡುತ್ತಿರುವ ಪೈಲ್ವಾನರು, ಹನುಮಂತ, ಟಿಪ್ಪುಸುಲ್ತಾನನ ಸಾಹಸದ ವಿಷಯಗಳನ್ನು ಚಿತ್ರಿಸಲಾಗುತ್ತಿತ್ತು. ಕಾಲಾಂತರದಲ್ಲಿ ಇವೇ ಮೊದಲಾದ ಚಿತ್ರಗಳನ್ನು ತೈಲ ವರ್ಣದಲ್ಲಿ ಚಿತ್ರಿಸುತ್ತಾ ಬಂದಿರುವುದು ಗಮನಾರ್ಹ. ಇಲ್ಲಿಯ ಒಟ್ಟು ಚಿತ್ರಗಳನ್ನು ಗಮನಿಸಿದಾಗ ಇವು ಜನಪದ ಕಲಾವಿದರಿಂದ ರಚಿಸಲ್ಪಟ್ಟವು ಎಂಬುದು ಸ್ಪಷ್ಟವಾಗುತ್ತದೆ. ಕಾರಣ ಇಲ್ಲಿಯ ಚಿತ್ರಗಳಲ್ಲಿ ಆ ಮಟ್ಟದ ಪ್ರೌಢತೆ ಕಂಡುಬರುವುದಿಲ್ಲ.

ಚಿತ್ರ ರಚನೆಗಾಗಿ ಯಾವುದೇ ವಿಶೇಷ ತಯಾರಿಯನ್ನು ಮಾಡಿಕೊಂಡಿರದೇ, ಇರುವ ಸುಣ್ಣದ ಗೋಡೆಯ ಮೇಲೆ ತೈಲ ವರ್ಣಗಳಿಂದ ತಮಗೆ ತಿಳಿದ ರೀತಿಯಲ್ಲಿ ಗಾಢ ವರ್ಣಗಳನ್ನು ಬಳಸಿ ಚಿತ್ರ ರಚಿಸಿರುವುದು ಕಂಡುಬರುತ್ತದೆ. ಇದಲ್ಲದೇ ಕೆಲವು ಗರಡಿಮನೆಗಳಲ್ಲಿ ಮಾಸಿಹೋದ ಹಿಂದಿನ ಚಿತ್ರಗಳ ಮೇಲೆಯೇ ಹೊಸದಾಗಿ ಇತ್ತೀಚಿನ ಸ್ಥಳೀಯ ಕಲಾವಿದರಿಂದ ಚಿತ್ರ ರಚಿಸಿರುವುದನ್ನು ಕಾಣಬಹುದಾಗಿದೆ. ಹನುಮಂತ, ಪೈಲ್ವಾನರ ಚಿತ್ರಗಳನ್ನು ಸಾಮಾನ್ಯವಾಗಿ ಎಲ್ಲಾ ಗರಡಿಮನೆಗಳ ಮೇಲೂ ಕಾಣುವುದರಿಂದ ಇವು ಗರಡಿಮನೆಯ ಸಂಕೇತಗಳಂತೆ ಬಿಂಬಿತವಾಗಿವೆ.

**iii. ಚಿತ್ರದ ವಸ್ತುವಿಷಯ**

**೧. ದ್ವಾರದ ಅಲಂಕಾರ**

ಗುಳೇದಗುಡ್ಡದ ಬಳಿಯ ಪರೂತಿಯ ಗರಡಿಮನೆಯಲ್ಲಿ ಅಕ್ಕಪಕ್ಕದ ಚಿತ್ರಗಳ ಜೊತೆಗೆ ಒಳ ಪ್ರವೇಶಿಸುವ ಚಿಕ್ಕ ಬಾಗಿಲು ಅದರ ಬದಿಯಲ್ಲಿ ಹಂಸವನ್ನು ಹೋಲುವ ಎದುರುಬದುರು ಎರಡೂ ಕಡೆಗೆ ನಕ್ಷಾ ಚಿತ್ರವನ್ನು ರಚಿಸಲಾಗಿದೆ. ಬಾಗಿಲಿನ ಮೇಲೆ ಚಿಕ್ಕದೊಂದು ಮೋಡವಿದ್ದು, ಬಿಳಿ ಬಣ್ಣದಿಂದ ಅಲಂಕರಿಸಿ ಕಪ್ಪು ಹೊರ ರೇಖೆಗಳನ್ನು ಹಾಕಲಾಗಿದೆ. ಅದರ ಮೇಲೆ ಎಲ್ಲಾ ಗರಡಿಮನೆಗಳ ಮೇಲಿರುವಂತೆ ಸ್ಥಾಪನೆಗೊಂಡ ಇಸವಿಯನ್ನು ೧೯೮೦ ಇಸ್ವಿ ಎಂದು ಬರೆಯಲಾಗಿದೆ. ಅದರ ಮೇಲೆ ಕೇಸರಿ, ಬಿಳಿ, ಹಸಿರಿನಿಂದ ಮುಂದೆ ಹಾಯ್ದು ಕಲ್ಲುಗಳ ಸಾಲನ್ನು ಅಲಂಕರಿಸಲಾಗಿದೆ. ಅದಾದ ನಂತರ ಐದು ಭಾಗಗಳನ್ನು ವಿಂಗಡಿಸಿ ಮಧ್ಯದ ದೊಡ್ಡ ಭಾಗದಲ್ಲಿ ಹೂ ಕುಂಡವನ್ನಿಟ್ಟು ಅದರಿಂದ ಎಲ್ಲಾ ದಿಕ್ಕಿನಲ್ಲಿ ಬಳ್ಳಿ ಪಸರಿಸಿ ಹೂ ಬಿಟ್ಟಿದೆ. ಅದರ ನಂತರದ ಎರಡೂ ಕಡೆ ನಾಲ್ಕು ದಳಗಳ ಹೂವನ್ನು ಕೆಂಪು ಬಣ್ಣದಲ್ಲಿ ರಚಿಸಲಾಗಿದೆ. ಕೊನೆ ಎರಡು ಭಾಗದಲ್ಲಿ ಹಳದಿ ಬಣ್ಣದ ಐದು ದಳದ ಹೂವನ್ನು ರಚಿಸಲಾಗಿದೆ. ಹಿನ್ನೆಲೆ ವಿನ್ಯಾಸವು ತೆಳುನೀಲಿ ಬಣ್ಣದ್ದಾಗಿದ್ದೆ.

೨. ಹನುಮಂತ

ಜಿಲ್ಲೆಯ ಗರಡಿ ಮನೆಯ ಚಿತ್ರಗಳಲ್ಲಿ ಸಾಮಾನ್ಯವಾಗಿ ಶಕ್ತಿ, ಸಾಮರ್ಥ್ಯ ಮತ್ತು ಶರೀರ ಸಂಪತ್ತಿನ ಆರಾಧ್ಯ ದೈವವಾದ ಬ್ರಹ್ಮಚಾರಿ ಹನುಮಂತನ ಚಿತ್ರ ಎಲ್ಲಾ ಕಡೆಗೂ ರಚಿತಗೊಂಡಿದೆ. ಜಿಲ್ಲೆಯ ಬಾದಾಮಿ ತಾಲ್ಲೂಕಿನ ಗುಳೇದಗುಡ್ಡದ ಬಳಿ ಇರುವ ಪರೂತಿ ಎಂಬ ಪುಟ್ಟ ಗ್ರಾಮದಲ್ಲಿ ಶತಮಾನಗಳಿಂದ ಗರಡಿಮನೆ ಇದ್ದು, ಅದು ಈಗ ಆಧುನಿಕ ಸ್ವರೂಪವನ್ನು ಪಡೆದುಕೊಂಡಿದೆ. ಹೊಸ ಗೋಡೆಗಳಿಂದ ಅಲಂಕೃತವಾದ ಗರಡಿಮನೆ ಬಾಗಿಲ ಬಲಬದಿಗೆ ಹನುಮಂತನ ಚಿತ್ರ ಇದ್ದು, ಕೈಯಲ್ಲಿ ಗಧೆಯನ್ನು ಹಿಡಿದು ಶರೀರದ ಎಲ್ಲಾ ಭಾಗಗಳನ್ನು ಶಕ್ತಿಯಿಂದ ಉಬ್ಬಿಸಿ ಬೆಟ್ಟವನ್ನು ಎತ್ತಿ ಹಿಡಿದ ಚಿತ್ರ ಇದಾಗಿದೆ. ಆಧುನಿಕ ಸಂದರ್ಭಗಳಲ್ಲಿ ರಚಿತಗೊಂಡ ಕ್ಯಾಲೆಂಡರ್‌ನ ಪ್ರತಿಕೃತಿಯಾಗಿದ್ದು ಗ್ರಾಮೀಣ ಪ್ರದೇಶದ ಕಲಾವಿದರಿಂದ ರಚಿತವಾಗಿದೆ. ಕಿರೀಟಧಾರಿ ಹನುಮಂತ ಚಡ್ಡಿ ಧರಿಸಿ, ಕೊರಳಲ್ಲಿ ಆಭರಣ, ಮುಂಗೈ ಮತ್ತು ರಟ್ಟೆಗಳಿಗೆ ಕೈಕಟ್ಟುಗಳನ್ನು ಧರಿಸಿ ಶಕ್ತಿ ಪ್ರದರ್ಶಕನಾಗಿ ನಿಂತಿದ್ದಾನೆ. ಗರಡಿಮನೆ ಶಕ್ತಿ ಪ್ರದರ್ಶನದ ಕೇಂದ್ರವಾಗಿದ್ದು, ಇಲ್ಲಿ ಹನುಮಂತನ ಚಿತ್ರ ಇರಲೇ ಬೇಕು. ಅದರಂತೆ ಇಲ್ಲಿನ ಚಿತ್ರ ಅಂತಹ ಮಹತ್ವವೇನೂ ಇಲ್ಲದಿದ್ದರೂ, ನೈಜವಾದ ಕಲಾಕೃತಿಯಂತೂ ಆಗಿದೆ.

೩. ಕುಸ್ತಿ

ಇದು ಕೂಡ ಎಲ್ಲಾ ಗರಡಿಮನೆಗಳಲ್ಲಿ ಸರ್ವೇಸಾಮಾನ್ಯ ಇದು ಗರಡಿಮನೆ ಎಂಬುದು ಗೊತ್ತಿಲ್ಲದವರಿಗೂ ಇಲ್ಲಿ ನಡೆಯುವ ಕ್ರಿಯೆ ಕುಸ್ತಿ ಎಂಬುದು ಸೂಚ್ಯವಾಗಿ ತೋರುವಂತೆ ಚಿತ್ರಿತವಾಗಿವೆ. ಸದರಿ ಚಿತ್ರದಲ್ಲಿ ಇಬ್ಬರು ಪೈಲ್ವಾನರು ಕೈಕೈ ಹಿಡಿದು ಕುಸ್ತಿಗೆ ಸನ್ನದ್ಧರಾಗಿರುವಂತೆ ಚಿತ್ರಿಸಲಾಗಿದೆ. ಚಡ್ಡಿಯೊಂದನ್ನು ಬಿಟ್ಟು ಉಳಿದ ಮೈಯೆಲ್ಲಾ ಬರಿದಾಗಿದೆ. ಕುಸ್ತಿಗಾಗಿಯೇ ಇರುವ ಹನುಮಂತನ ಚಡ್ಡಿ ಎಂದೇ ಕರೆಯಲ್ಪಡುವ ಈ ಚಡ್ಡಿಗಳನ್ನು ಧರಿಸುವುದು ಅಥವಾ ಬಟ್ಟೆಯಿಂದ ಲಂಗೋಟೆಯನ್ನು ಹಾಕಿಕೊಳ್ಳುವುದು ವಾಡಿಕೆ. ಆಧುನಿಕ ಕುಸ್ತಿಪಟುಗಳು ಲಂಗೋಟೆಯನ್ನು ಬಿಟ್ಟುಬಿಟ್ಟಿದ್ದಾರೆ. ಈಗ ಬಣ್ಣಬಣ್ಣದ ಚಡ್ಡಿಗಳನ್ನು ಧರಿಸುತ್ತಾರೆ. ಇಬ್ಬರ ಮೈಗಳು ಒಂದೇ ಬಣ್ಣದ್ದಾಗಿರದೆ ಅಲ್ಪಸ್ವಲ್ಪ ಮೈಬಣ್ಣದಲ್ಲಿ ವ್ಯತ್ಯಾಸ ಮಾಡಿಕೊಂಡು ಬರಿ ಮೈಯಿಂದ ಇಬ್ಬರೂ ಬೇರೆ ಬೇರೆ ಕಲ್ಪನೆ ಬರುವಂತೆ ಚಿತ್ರಿಸಲಾಗಿದೆ.

೪. ಬಸವನ ಗರಡಿ, ಬಾದಾಮಿ- ಹನುಮಂತ ಮತ್ತು ಕುಸ್ತಿ

ಬಾಗಲಕೋಟೆ ಜಿಲ್ಲೆಯ ಗರಡಿ ಮನೆಯ ಚಿತ್ರಗಳಲ್ಲಿ ಸಾಮಾನ್ಯವಾಗಿ ಶಕ್ತಿ, ಸಾಮರ್ಥ್ಯ ಮತ್ತು ಶರೀರ ಸಂಪತ್ತಿನ ಆರಾಧ್ಯ ದೈವವಾದ ಬ್ರಹ್ಮಚಾರಿ ಹನುಮಂತನ ಚಿತ್ರ ಎಲ್ಲಾ ಕಡೆಗೂ ರಚಿತಗೊಂಡಿದೆ. ಜಿಲ್ಲೆಯ ಬಾದಾಮಿ ಅದು ಈಗ ಆಧುನಿಕ ಸ್ವರೂಪವನ್ನು ಪಡೆದುಕೊಂಡಿದೆ. ಹೊಸ ಗೋಡೆಗಳಿಂದ ಅಲಂಕೃತವಾದ ಗರಡಿಮನೆ ಬಾಗಿಲ ಬಲಬದಿಗೆ ಹನುಮಂತನ ಚಿತ್ರ ಇದ್ದು, ಕೈಯಲ್ಲಿ ಗಧೆಯನ್ನು ಹಿಡಿದು ಶರೀರದ ಎಲ್ಲಾ ಭಾಗಗಳನ್ನು ಶಕ್ತಿಯಿಂದ ಉಬ್ಬಿಸಿ ಬೆಟ್ಟವನ್ನು ಎತ್ತಿ ಹಿಡಿದ ಚಿತ್ರ ಇದಾಗಿದೆ. ಆಧುನಿಕ ಸಂದರ್ಭಗಳಲ್ಲಿ ರಚಿತಗೊಂಡ ಕ್ಯಾಲೆಂಡರ್‌ನ ಪ್ರತಿಕೃತಿಯಾಗಿದ್ದು ಗ್ರಾಮೀಣ ಪ್ರದೇಶದ

ಕಲಾವಿದರಿಂದ ರಚಿತವಾಗಿದೆ. ಕಿರೀಟಧಾರಿ ಹನುಮಂತ ಚಡ್ಡಿ ಧರಿಸಿ, ಕೊರಳಲ್ಲಿ ಆಭರಣ, ಮುಂಗೈ ಮತ್ತು ರಟ್ಟೆಗಳಿಗೆ ಕೈಕಟ್ಟುಗಳನ್ನು ಧರಿಸಿ ಶಕ್ತಿ ಪ್ರದರ್ಶಕನಾಗಿ ನಿಂತಿದ್ದಾನೆ. ಗರಡಿಮನೆ ಶಕ್ತಿ ಪ್ರದರ್ಶನದ ಕೇಂದ್ರವಾಗಿದ್ದು, ಇಲ್ಲಿ ಹನುಮಂತನ ಚಿತ್ರ ಇರಲೇ ಬೇಕು. ಅದರಂತೆ ಇಲ್ಲಿನ ಚಿತ್ರ ಅಂತಹ ಮಹತ್ವವೇನೂ ಇಲ್ಲದಿದ್ದರೂ, ನೈಜವಾದ ಕಲಾಕೃತಿಯಂತೂ ಆಗಿದೆ. ಇದು ಕೂಡ ಎಲ್ಲಾ ಗರಡಿಮನೆಗಳಲ್ಲಿ ಸರ್ವೇಸಾಮಾನ್ಯ ಇದು ಗರಡಿಮನೆ ಎಂಬುದು ಗೊತ್ತಿಲ್ಲದವರಿಗೂ ಇಲ್ಲಿ ನಡೆಯುವ ಕ್ರಿಯೆ ಕುಸ್ತಿ ಎಂಬುದು ಸೂಚ್ಯವಾಗಿ ತೋರುವಂತೆ ಚಿತ್ರಿತವಾಗಿವೆ. ಸದರಿ ಚಿತ್ರದಲ್ಲಿ ಇಬ್ಬರು ಪೈಲ್ವಾನರು ಕೈಕೈ ಹಿಡಿದು ಕುಸ್ತಿಗೆ ಸನ್ನದ್ಧರಾಗಿರುವಂತೆ ಚಿತ್ರಿಸಲಾಗಿದೆ. ಚಡ್ಡಿಯೊಂದನ್ನು ಬಿಟ್ಟು ಉಳಿದ ಮೈಯೆಲ್ಲಾ ಬರಿದಾಗಿದೆ. ಕುಸ್ತಿಗಾಗಿಯೇ ಇರುವ ಹನುಮಂತನ ಚಡ್ಡಿ ಎಂದೇ ಕರೆಯಲ್ಪಡುವ ಈ ಚಡ್ಡಿಗಳನ್ನು ಧರಿಸುವುದು ಅಥವಾ ಬಟ್ಟೆಯಿಂದ ಲಂಗೋಟೆಯನ್ನು ಹಾಕಿಕೊಳ್ಳುವುದು ವಾಡಿಕೆ. ಆಧುನಿಕ ಕುಸ್ತಿಪಟುಗಳು ಲಂಗೋಟೆಯನ್ನು ಬಿಟ್ಟುಬಿಟ್ಟಿದ್ದಾರೆ. ಈಗ ಬಣ್ಣಬಣ್ಣದ ಚಡ್ಡಿಗಳನ್ನು ಧರಿಸುತ್ತಾರೆ. ಇಬ್ಬರ ಮೈಗಳು ಒಂದೇ ಬಣ್ಣದ್ದಾಗಿರದೆ ಅಲ್ಪಸ್ವಲ್ಪ ಮೈಬಣ್ಣದಲ್ಲಿ ವ್ಯತ್ಯಾಸ ಮಾಡಿಕೊಂಡು ಬರಿ ಮೈಯಿಂದ ಇಬ್ಬರೂ ಬೇರೆ ಬೇರೆ ಕಲ್ಪನೆ ಬರುವಂತೆ ಚಿತ್ರಿಸಲಾಗಿದೆ. ಒಂದೇ ಎದುರು ಗೋಡೆಯ ಮೇಲೆ ಆಚೆಈಚೆ ಚಿತ್ರಗಳಿವೆ. ಸದರಿ ಗರಡಿಮನೆಯು ೧೯೪೪ರಲ್ಲಿ ಸ್ಥಾಪನೆಯಾಗಿದೆ.

**೫. ಪುರಂದರದಾಸರು**

ಸಾಮಾನ್ಯವಾಗಿ ಗರಡಿಮನೆಗಳಲ್ಲಿ ಹಿಂದಿನ ವಿವರಣೆಗಳಂತೆ ಹನುಮಂತ ಪೈಲ್ವಾನರ ಚಿತ್ರಗಳಿರುವಂತೆ ಇಲ್ಲಿ ಕಲಾವಿದರು ಬಾದಾಮಿಯ ಕಿಲ್ಲಾ ಓಣಿಯ ಗರಡಿಮನೆಯ ಮೇಲೆ ಪುರಂದರದಾಸರ ಚಿತ್ರವನ್ನು ಚಿತ್ರಿಸಿದ್ದಾರೆ. ನೀಟಾದ ಬಿಳಿಯ ಧೋತ್ರ, ಕೆಂಪು ಬಣ್ಣದ ಪಟಕ, ಹಿಂದೆ ಬಿಟ್ಟ ಶಮನ, ಕೊರಳಲ್ಲಿ ತುಳಸಿ ಮಾಲೆ, ಭಿಕ್ಷಾ ಜೋಳಿಗೆ, ಕೆಳಮುಖವಾದ ಬಲಗೈಯಲ್ಲಿ ವೀಣೆಯ ತಂತಿ ನುಡಿಸುತ್ತಿರುವಂತೆ ಎಡಗೈಯನ್ನು ಮೇಲೆ ಮಾಡಿ ತಾಳವನ್ನು ಬಾರಿಸುತ್ತಿರುವಂತೆ ಚಿತ್ರಿಸಲಾಗಿದೆ. ದಾಸರು ಭಜನೆ ಮಾಡುತ್ತಾ ಕುಣಿಯುತ್ತಿರುವ ಚಿತ್ರ ಇದಾಗಿದೆ. ಊರ ದಾರಿ ಹಿಂಬದಿಯಲ್ಲಿ ದೇವಸ್ಥಾನ, ಅಲ್ಲಲ್ಲಿ ಹಸಿರು ಮರಗಳಿಂದ ತುಂಬಿ ಅಂದವಾದ ಸಂಯೋಜನೆ ಇದಾಗಿದೆ.

**೬. ಸಂತ ತುಕಾರಾಮ**

ಇಲ್ಲಿಯೂ ಕೂಡ ಯಾವುದೇ ಶಕ್ತಿದೇವತೆ, ಶಕ್ತಿ ಪ್ರದರ್ಶನದ ಚಿತ್ರವಿರದೆ ಸಂತ ತುಕಾರಾಮರ ಚಿತ್ರವನ್ನು ರಚಿಸಲಾಗಿದೆ. ಬಗಲುಗಸಿಯ ಬಿಳಿ ಅಂಗಿ, ಬಲಗೈಯಲ್ಲಿ ತಂಬೂರಿ, ಪದ್ಮಾಸನದಲ್ಲಿ ಕುಳಿತ ಸಂತರು, ಎಡಗೈ ಎತ್ತಿ ತಾಳ ಹಿಡಿದಿದ್ದಾರೆ. ಅಂದವಾದ ಕಮಾನಿನಲ್ಲಿ ಬಿಳಿ ಪೇಟ ಸುತ್ತಿಸಿ ಚಿತ್ರಿಸಲಾಗಿದೆ. ಒಟ್ಟು ಬಿಳಿ ಬಣ್ಣವು ಎದ್ದು ಕಾಣುವ ಹಿನ್ನೆಲೆ ವಿನ್ಯಾಸದಲ್ಲಿ ಕಡುನೀಲಿ ಬಣ್ಣವನ್ನು ಬಳಸಲಾಗಿದೆ.

**೭. ಸಂತ ಜ್ಞಾನದೇವ**

ಇಲ್ಲಿಯೂ ಕೂಡ ಯಾವುದೇ ಶಕ್ತಿದೇವತೆ, ಶಕ್ತಿ ಪ್ರದರ್ಶನದ ಚಿತ್ರವಿರದೆ ಸಂತ ಜ್ಞಾನದೇವನ ಚಿತ್ರವನ್ನು ರಚಿಸಲಾಗಿದೆ. ಬರಿಮೈಯಲ್ಲಿ ಕೈಕಟ್ಟಿ ಕುಳಿತ ಸಂತರು ಅಂದವಾದ ಕಮಾನಿನಲ್ಲಿ ಕೆಂಪು ಪೇಟ

ಸುತ್ತಿಸಿ ಚಿತ್ರಿಸಲಾಗಿದೆ. ಒಟ್ಟು ಕೆಂಪು ಬಣ್ಣವು ಎದ್ದು ಕಾಣುವ ಹಿನ್ನೆಲೆ ವಿನ್ಯಾಸದಲ್ಲಿ ಕಡುನೀಲಿ ಬಣ್ಣವನ್ನು ಬಳಸಲಾಗಿದೆ.

**೮. ಹನುಮಂತ**

ವೀರಾಂಜನೇಯನ ಚಿತ್ರವನ್ನು ಗರಡಿಮನೆಯಲ್ಲಿ ಚಿತ್ರಿಸುವುದಕ್ಕೆ ಕಾರಣವೇ ಅವನ ಮೈಕಾಂತಿ. ಶಕ್ತಿಯುತ ಸದೃಢ ಕಾಯವನ್ನು ಮಾಂಸಖಂಡಗಳನ್ನು ಸಮರ್ಥವಾಗಿ ಎದ್ದು ತೋರುವಂತೆ ಚಿತ್ರಿಸಲಾಗಿದೆ. ಬಲಗೈಯಲ್ಲಿ ಗದೆಯನ್ನು ಹಿಡಿದು ನೆಲಕ್ಕೂರಿದ ಚಿತ್ರ ಎಡಗೈಯಲ್ಲಿ ಏನನ್ನೂ ಹಿಡಿದಿಲ್ಲ. ನೀಲಿ ವರ್ಣದ ಆಕಾಶ, ದೂರದಲ್ಲಿ ಗುಡ್ಡಗಳ ಸಾಲು, ಮುನ್ನೆಲೆ ವಿನ್ಯಾಸದಲ್ಲಿ ಕಪ್ಪು ಇತ್ಯಾದಿ ಬಣ್ಣಗಳಿಂದ ಅಲಂಕೃತಗೊಳಿಸಲಾಗಿದೆ.

**೯. ಆದಿಶೇಷ, ಕುದುರೆ ಮತ್ತು ಕುಸ್ತಿ**

ಇಲಕಲ್ಲಿನ ಕುಂಬಾರ ಓಣಿಯ ನಂತರ ಮಾರ್ಕಂಡೇಶ್ವರ ಗುಡಿ ಹತ್ತಿರದ ಗರಡಿಮನೆಯ ಮೇಲೆ ಇರುವ ಚಿತ್ರದಲ್ಲಿ ಆದಿಶೇಷ ದೊಡ್ಡದಾಗಿ ಮಧ್ಯದಲ್ಲಿ ಕುಳಿತುಕೊಂಡಿದ್ದಾನೆ. ಗರುಡ, ಹನುಮಂತ, ರಾಮ, ಲಕ್ಷ್ಮಣ, ಬ್ರಹ್ಮ, ಶಿವ ಎಲ್ಲರೂ ಸುತ್ತಲೂ ನಿಂತುಕೊಂಡಿದ್ದಾರೆ. ನಂತರದಲ್ಲಿ ನಾರದ ಮತ್ತು ತುಂಬುರ ನಿಂತುಕೊಂಡಿದ್ದಾರೆ. ನೀಲಿ ಬಣ್ಣದ ನೀರಿನಲ್ಲಿ ಆದಿಶೇಷನ ಮೇಲೆ ವಿಷ್ಣು ಕುಳಿತುಕೊಂಡಿದ್ದಾನೆ. ಗರಡಿಮನೆ ಬಾಗಿಲಿನ ಮೇಲೆ ಮುಸ್ಲಿಂ ಸಂಪ್ರದಾಯದ ಕುದುರೆ ಅದಕ್ಕೊಂದು ಜೂಲ, ಹಸ್ತ, ಹಿಂದಿನಿಂದ ಛತ್ರಯಾಕಾರದ ನೆರಳು ಪಡೆಯಲು ಇರುವ ಸಾಧನ ಒಂದು ಮುಂದಿನ ಬಲಗಾಲನ್ನು ಮೇಲೆತ್ತಿದ ಕುದುರೆ ಇಡೀ ಗೋಡೆಗೆ ಅಲಂಕೃತವಾಗಿದೆ. ಇದು ಕೂಡ ಎಲ್ಲಾ ಗರಡಿಮನೆಗಳಲ್ಲಿ ಸರ್ವೇಸಾಮಾನ್ಯ ಇದು ಗರಡಿಮನೆ ಎಂಬುದು ಗೊತ್ತಿಲ್ಲದವರಿಗೂ ಇಲ್ಲಿ ನಡೆಯುವ ಕ್ರಿಯೆ ಕುಸ್ತಿ ಎಂಬುದು ಸೂಚ್ಯವಾಗಿ ತೋರುವಂತೆ ಚಿತ್ರಿತವಾಗಿವೆ. ಸದರಿ ಚಿತ್ರದಲ್ಲಿ ಇಬ್ಬರು ಪೈಲ್ವಾನರು ಕೈಕೈ ಹಿಡಿದು ಕುಸ್ತಿಗೆ ಸನ್ನದ್ಧರಾಗಿರುವಂತೆ ಚಿತ್ರಿಸಲಾಗಿದೆ. ಚಡ್ಡಿಯೊಂದನ್ನು ಬಿಟ್ಟು ಉಳಿದ ಮೈಯೆಲ್ಲಾ ಬರಿದಾಗಿದೆ. ಕುಸ್ತಿಗಾಗಿಯೇ ಇರುವ ಹನುಮಂತನ ಚಡ್ಡಿ ಎಂದೇ ಕರೆಯಲ್ಪಡುವ ಈ ಚಡ್ಡಿಗಳನ್ನು ಧರಿಸುವುದು ಅಥವಾ ಬಟ್ಟೆಯಿಂದ ಲಂಗೋಟೆಯನ್ನು ಹಾಕಿಕೊಳ್ಳುವುದು ವಾಡಿಕೆ. ಆಧುನಿಕ ಕುಸ್ತಿಪಟುಗಳು ಲಂಗೋಟೆಯನ್ನು ಬಿಟ್ಟುಬಿಟ್ಟಿದ್ದಾರೆ. ಈಗ ಬಣ್ಣಬಣ್ಣದ ಚಡ್ಡಿಗಳನ್ನು ಧರಿಸುತ್ತಾರೆ. ಇಬ್ಬರ ಮೈಗಳು ಒಂದೇ ಬಣ್ಣದ್ದಾಗಿರದೆ ಅಲ್ಪಸ್ವಲ್ಪ ಮೈಬಣ್ಣದಲ್ಲಿ ವ್ಯತ್ಯಾಸ ಮಾಡಿಕೊಂಡು ಬರಿ ಮೈಯಿಂದ ಇಬ್ಬರೂ ಬೇರೆ ಬೇರೆ ಕಲ್ಪನೆ ಬರುವಂತೆ ಚಿತ್ರಿಸಲಾಗಿದೆ.

**೧೦. ಟಿಪ್ಪುಸುಲ್ತಾನ**

ಶಿರೂರಿನ ಈ ಗರಡಿಮನೆಯು ೧೯೮೩ರಲ್ಲಿ ಸ್ಥಾಪನೆಗೊಂಡಿದೆ. ಮುಖ್ಯ ದ್ವಾರದ ಬಲಬದಿಯಲ್ಲಿ ಟಿಪ್ಪು ಸುಲ್ತಾನನು ಹುಲಿಯನ್ನು ಹಿಡಿದು ಬಾಯಿ ತೆರೆದ ದೃಶ್ಯ ಚಿತ್ರಿಸಲಾಗಿದೆ. ಇಲ್ಲಿಯೂ ಕೂಡ ಶಕ್ತಿ, ಸಾಮರ್ಥ್ಯದ ಸಂಕೇತವಾಗಿ ಧೈರ್ಯಶಾಲಿ ಟಿಪ್ಪುವಿನ ಚಿತ್ರವನ್ನು ಬರೆಯಲಾಗಿದೆ. ಉದ್ದ ಉಗುರುಗಳುಳ್ಳ

ಹುಲಿ ಮುಂದಿನ ಎರಡೂ ಕಾಲುಗಳನ್ನು ಮೇಲೆತ್ತಿ ನಿಂತಿದೆ. ಬಾಯಲ್ಲಿ ಕೈಯಿಟ್ಟ ಟಿಪ್ಪುಸುಲ್ತಾನ ಅದರ ಹಲ್ಲುಗಳನ್ನು ಮುರಿಯುತ್ತಿರುವಂತೆ ಚಿತ್ರಿಸಲಾಗಿದೆ. ಆಕಾಶ, ನಿಸರ್ಗದಲ್ಲಿ ಟಿಪ್ಪುವಿನ ಹಿಂಬಾಲಕರು ಕುದುರೆಗಳನ್ನು ಏರಿ ಬರುತ್ತಿರುವುದು ದಾರಿ, ನೀರು, ಗಿಡ, ಮರ ಮುಂತಾಗಿ ಚಿತ್ರಿಸಲಾಗಿದೆ. ಜೊತೆಗೆ ಸುಂದರವಾದ ಹೂಕುಂಡವನ್ನು ರಚಿಸಲಾಗಿದೆ.

**೧೧. ಪೈಲ್ವಾನರು ಮತ್ತು ಹನುಮಂತ**

ಶಿರೂರಿನ ಗರಡಿಮನೆಗಳಲ್ಲಿ ಸರ್ವೇಸಾಮಾನ್ಯ ಇದು ಗರಡಿಮನೆ ಎಂಬುದು ಗೊತ್ತಿಲ್ಲದವರಿಗೂ ಇಲ್ಲಿ ನಡೆಯುವ ಕ್ರಿಯೆ ಕುಸ್ತಿ ಎಂಬುದು ಸೂಚ್ಯವಾಗಿ ತೋರುವಂತೆ ಚಿತ್ರಿತವಾಗಿವೆ. ಸದರಿ ಚಿತ್ರದಲ್ಲಿ ಇಬ್ಬರು ಪೈಲ್ವಾನರು ಕೈಕೈ ಹಿಡಿದು ಕುಸ್ತಿಗೆ ಸನ್ನದ್ಧರಾಗಿರುವಂತೆ ಚಿತ್ರಿಸಲಾಗಿದೆ. ಚಡ್ಡಿಯೊಂದನ್ನು ಬಿಟ್ಟು ಉಳಿದ ಮೈಯೆಲ್ಲಾ ಬರಿದಾಗಿದೆ. ಕುಸ್ತಿಗಾಗಿಯೇ ಇರುವ ಹನುಮಂತನ ಚಡ್ಡಿ ಎಂದೇ ಕರೆಯಲ್ಪಡುವ ಈ ಚಡ್ಡಿಗಳನ್ನು ಧರಿಸುವುದು ಅಥವಾ ಬಟ್ಟೆಯಿಂದ ಲಂಗೋಟೆಯನ್ನು ಹಾಕಿಕೊಳ್ಳುವುದು ವಾಡಿಕೆ. ಆಧುನಿಕ ಕುಸ್ತಿಪಟುಗಳು ಲಂಗೋಟೆಯನ್ನು ಬಿಟ್ಟುಬಿಟ್ಟಿದ್ದಾರೆ. ಈಗ ಬಣ್ಣಬಣ್ಣದ ಚಡ್ಡಿಗಳನ್ನು ಧರಿಸುತ್ತಾರೆ. ಇಬ್ಬರ ಮೈಗಳು ಒಂದೇ ಬಣ್ಣದ್ದಾಗಿರದೆ ಅಲ್ಪಸ್ವಲ್ಪ ಮೈಬಣ್ಣದಲ್ಲಿ ವ್ಯತ್ಯಾಸ ಮಾಡಿಕೊಂಡು ಬರಿ ಮೈಯಿಂದ ಇಬ್ಬರೂ ಬೇರೆ ಬೇರೆ ಕಲ್ಪನೆ ಬರುವಂತೆ ಚಿತ್ರಿಸಲಾಗಿದೆ. ಮೇಲೆ ಆಕಾಶದಲ್ಲಿ ಎಡಗೈಯಲ್ಲಿ ಬೆಟ್ಟವನ್ನು ಹಿಡಿದು, ಬಲಗೈಯಲ್ಲಿ ಗದೆಯನ್ನು ಹಿಡಿದು ಹಾರುತ್ತಿರುವ ಹನುಮಂತನನ್ನು ಚಿತ್ರಿಸಲಾಗಿದೆ.

**೧೨. ಪೈಲ್ವಾನರು**

ಶಿರೂರಿನ ಗರಡಿಮನೆಗಳಲ್ಲಿ ಸದರಿ ಚಿತ್ರದಲ್ಲಿ ಇಬ್ಬರು ಪೈಲ್ವಾನರು ಕೈಕೈ ಹಿಡಿದು ಕುಸ್ತಿಗೆ ಸನ್ನದ್ಧರಾಗಿರುವಂತೆ ಚಿತ್ರಿಸಲಾಗಿದೆ. ಚಡ್ಡಿಯೊಂದನ್ನು ಬಿಟ್ಟು ಉಳಿದ ಮೈಯೆಲ್ಲಾ ಬರಿದಾಗಿದೆ. ಕುಸ್ತಿಗಾಗಿಯೇ ಇರುವ ಹನುಮಂತನ ಚಡ್ಡಿ ಎಂದೇ ಕರೆಯಲ್ಪಡುವ ಈ ಚಡ್ಡಿಗಳನ್ನು ಧರಿಸುವುದು ಅಥವಾ ಬಟ್ಟೆಯಿಂದ ಲಂಗೋಟೆಯನ್ನು ಹಾಕಿಕೊಳ್ಳುವುದು ವಾಡಿಕೆ. ಆಧುನಿಕ ಕುಸ್ತಿಪಟುಗಳು ಲಂಗೋಟೆಯನ್ನು ಬಿಟ್ಟುಬಿಟ್ಟಿದ್ದಾರೆ. ಈಗ ಬಣ್ಣಬಣ್ಣದ ಚಡ್ಡಿಗಳನ್ನು ಧರಿಸುತ್ತಾರೆ. ಇಬ್ಬರ ಮೈಗಳು ಒಂದೇ ಬಣ್ಣದ್ದಾಗಿದ್ದು ಅಲ್ಪಸ್ವಲ್ಪ ವ್ಯತ್ಯಾಸ ಮಾಡಿಕೊಂಡು ಬರಿ ಮೈಯಿಂದ ಇಬ್ಬರೂ ಬೇರೆ ಬೇರೆ ಕಲ್ಪನೆ ಬರುವಂತೆ ಚಿತ್ರಿಸಲಾಗಿದೆ.

**೧೩. ಟಿಪ್ಪುಸುಲ್ತಾನ**

ಶಿರೂರಿನ ಈ ಗರಡಿಮನೆಯಲ್ಲಿ ಮುಖ್ಯ ದ್ವಾರದ ಬಲಬದಿಯಲ್ಲಿ ಟಿಪ್ಪು ಸುಲ್ತಾನನು ಹುಲಿಯನ್ನು ಹಿಡಿದು ಬಾಯಿ ತೆರೆದ ದೃಶ್ಯ ಚಿತ್ರಿಸಲಾಗಿದೆ. ಇಲ್ಲಿಯೂ ಕೂಡ ಶಕ್ತಿ, ಸಾಮರ್ಥ್ಯದ ಸಂಕೇತವಾಗಿ ಧೈರ್ಯಶಾಲಿ ಟಿಪ್ಪುವಿನ ಚಿತ್ರವನ್ನು ಬರೆಯಲಾಗಿದೆ. ಉದ್ದ ಉಗುರುಗಳುಳ್ಳ ಹುಲಿ ಮುಂದಿನ ಎರಡೂ ಕಾಲುಗಳನ್ನು ಮೇಲೆತ್ತಿ ನಿಂತಿದೆ. ಬಾಯಲ್ಲಿ ಕೈಯಿಟ್ಟ ಟಿಪ್ಪುಸುಲ್ತಾನ ಅದರ ಹಲ್ಲುಗಳನ್ನು

ಮುರಿಯುತ್ತಿರುವಂತೆ ಚಿತ್ರಿಸಲಾಗಿದೆ. ಟಿಪ್ಪುವಿನ ಚಿತ್ರದ ಮೇಲೆ ಚೌಕಾಕಾರದ ಫಲಕದಂತಿರುವ ಸ್ಥಳದಲ್ಲಿ ಆನೆಯನ್ನು ಚಿತ್ರಿಸಲಾಗಿದೆ. ಇದು ಕೂಡ ಬಲವಾದ ಶಕ್ತಿ, ಸಾಮರ್ಥ್ಯದ ಸಂಕೇತವಾಗಿದೆ.

**iv. ಗರಡಿಮನೆ ಭಿತ್ತಿ ಚಿತ್ರಗಳ ವಿಶೇಷತೆ**

* ಹನುಮಂತನ ಚಿತ್ರ ವಿಶೇಷವಾಗಿದ್ದು, ಇಲ್ಲಿ ಕುಸ್ತಿಪಟುಗಳು ಬ್ರಹ್ಮಚಾರಿಗಳು ಆಗಿರದಿದ್ದರೂ ಅಪ್ಪಟ ಹನುಮಂತನ ಭಕ್ತರಂತೂ ಆಗಿರುತ್ತಾರೆ.

* ದೇಹ ಆರೋಗ್ಯವಂತವಾಗಿರಲು ಪೂರ್ವಜರು ಹಾಕಿಕೊಟ್ಟ ಅತ್ಯುತ್ತಮ ಕ್ರೀಡೆಗಳಲ್ಲಿ ಕುಸ್ತಿ ಪ್ರಥಮ ಸ್ಥಾನದಲ್ಲಿ ನಿಲ್ಲುತ್ತದೆ. ಇಲ್ಲಿ ಕೇವಲ ಮೈ ಬೆಳೆಸುವುದು ಮಾತ್ರವಲ್ಲದೆ ಡಾವ್‌ಪೇಚ್‌ಗಳನ್ನು ಕಲಿಯುತ್ತಾ ಎದುರಾಳಿಯನ್ನು ಸೆದೆಬಡಿಯುವ ತಂತ್ರಗಳು ಅಂದು ಬೇಕಾಗಿದ್ದವು. ಇಂದು ಈ ಕಾರ್ಯ ಅಷ್ಟಾಗಿ ನಡೆಯದಿದ್ದರೂ, ಹಳ್ಳಿಗಳಲ್ಲಿ ಇನ್ನೂ ಅಲ್ಲಲ್ಲಿ ಉಳಿದುಕೊಂಡಿದೆ.

* ಗರಡಿ ಮನೆಗಳ ಇತಿಹಾಸ ಒಂದೆಡೆಯಾದರೆ ಕುಸ್ತಿಯನ್ನು ಆಧುನಿಕ ಶೈಲಿಯಲ್ಲಿ ಬೆಳೆಸಲು ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಹುನ್ನೂರ, ಮಧುರಖಂಡಿ ಕೆನಾಲ್ ರಸ್ತೆಯಲ್ಲಿ ಅಂತರಾಷ್ಟ್ರೀಯ ಖ್ಯಾತ ಕುಸ್ತಿಪಟು ರತನ್‌ಮಠಪತಿಯವರು ಕೇಂದ್ರ ಸರ್ಕಾರದ ಹಾಗೂ ಸಾರ್ವಜನಿಕರ ಸಹಕಾರದಿಂದ ಮಡ್‌ರಸಲಿಂಗ್ ಮತ್ತು ಮ್ಯಾಟ್‌ರಸಲಿಂಗ್ ಎಂಬ ತಂತ್ರಗಳನ್ನು ಕಲಿಸಲು ಕುಸ್ತಿ ಶಾಲೆಯೊಂದನ್ನು ತೀರಾ ಆಧುನಿಕವಾಗಿ ಸೃಷ್ಟಿಸಿಕೊಂಡು ಮಕ್ಕಳನ್ನು ಹುರಿದುಂಬಿಸುತ್ತಾ ಕುಸ್ತಿಯನ್ನು ಕಲಿಸುತ್ತಾ ಇರುವುದು ಜಿಲ್ಲೆಯ ಹೆಮ್ಮೆ ಮತ್ತು ವಿಶೇಷತೆಯಾಗಿದೆ.






ಗರಡಿಮನೆ ಚಿತ್ರಗಳು    ೧) ದ್ವಾರದ ಅಲಂಕಾರ



೨) ಹನುಮಂತ



೪) ಹನುಮಂತ ಮತ್ತು ಕುಸ್ತಿ



೫) ಪುರಂದರ ದಾಸರು



೯) ಆದಿಶೇಷ, ಕುದುರೆ, ಮತ್ತು ಕುಸ್ತಿ




೧೦) ಟಿಪ್ಪು ಸುಲ್ತಾನ



೧೧) ಪೈಲ್ವಾನರು ಮತ್ತು ಹನುಮಂತ

## ೬. ಬಾಗಲಕೋಟೆಯ ಮುಳುಗಡೆ ವಸ್ತು ಸಂಗ್ರಹಾಲಯದ ಭಿತ್ತಿ ಚಿತ್ರಗಳು

ವಸ್ತು ಸಂಗ್ರಹಾಲಯದ ಒಳಹೊಕ್ಕರೆ ಮೊದಲಿಗೆ ಗೋಡೆಯ ಮೇಲೆ ಸಾಲಾಗಿ ಹೊಂದಿಸಿರುವ ಚಿತ್ರಗಳು ಹಬ್ಬಗಳಿಗೆ ಸಂಬಂಧಿಸಿದವುಗಳು ಮತ್ತು ಆಚರಣೆಯಲ್ಲಿ ಇರುವಂತಹ ಹಬ್ಬಗಳ ಭಿತ್ತಿ ಚಿತ್ರಗಳನ್ನು ನೋಡುತ್ತೇವೆ. ಮುಂದೆ ಹೋದರೆ ಬಾವಿಯಿಂದ ನೀರನ್ನು ಸೇದುತ್ತಿರುವ ಹೆಂಗಳೆಯರನ್ನು ಮತ್ತು ಬಟ್ಟೆಯನ್ನು ಒಗೆಯುತ್ತಿರುವ ಹೆಂಗಳೆಯರನ್ನು ಕಾಣಬಹುದು. ಸ್ವಲ್ಪ ಮುಂದೆ ಹೋದಂತೆ ಮನೆಯ ದೃಶ್ಯ ಹಾಗೂ ಮನೆಯ ಮುಂದೆ ನಾವು ನಾಯಿಯು ಮಕ್ಕಳೊಡನೆ ಆಟವಾಡುತ್ತಿರುವುದು ಕಾಣುತ್ತದೆ. ಹಾಗೆಯೇ ಮುಂದೆ ಹೋದರೆ ಹಸುವಿನ ಹಾಲು ಹಿಂಡುತ್ತಿರುವ ತಾಯಿ, ಮಗಳನ್ನು ನೋಡುತ್ತೇವೆ. ಇದರ ನಂತರ ನಾವು ಹೋದರೆ ನಾವು ಕೋಳಿಗಳನ್ನು ನೋಡಬಹುದು. ಇನ್ನೂ ಮುಂದೆ ಹೋಗಿ ನೋಡಿದರೆ ಅಲ್ಲಿ ಕುರಿಗಳನ್ನು ಮೇಯಿಸುತ್ತಿರುವ ಕುರುಬನನ್ನು ಮತ್ತು ಅವನ ಮಗನನ್ನು ನೋಡಬಹುದು. ಅದರ ಮುಂದೆ ಹೋದರೆ ನಮಗೆ ಹೊರಗಡೆಯಿಂದ ಕಾಣಸಿಗುವ ಕೋಲಾಟವನ್ನು ಆಡುತ್ತಿರುವ ಒಂದು ಹೆಂಗಳೆಯರ ಗುಂಪು ಹಾಗೂ ಇನ್ನೊಂದು ಕೋಲಾಟದ ಇನ್ನೊಂದು ವಯೋವೃದ್ಧರ ಗುಂಪು ನಮ್ಮ ಕಣ್ಮನ ಸೆಳೆಯುತ್ತವೆ. ನಾವು ಅಲ್ಲಿ ಹಳೆಯ ಕಾಲದ ಮನೆಗಳನ್ನು ನೋಡುವುದಲ್ಲದೆ ಮುಳುಗಡೆ ಪ್ರದೇಶದ ಮನೆಗಳನ್ನೂ ಕಾಣಬಹುದು. ಅಂದಿನ ಸಂದರ್ಭದಲ್ಲಿ ನವನಗರದಲ್ಲಿ ನಿರ್ಮಾಣವಾದಂತಹ ಕಟ್ಟಡಗಳನ್ನು ಇಲ್ಲಿ ನಾವು ಕಾಣಬಹುದು. ಮುಂದೆ ಹೋದರೆ ಸುತ್ತಮುತ್ತಲು ಬಿದ್ದು ಹಾಳಾಗಿ ಹೋಗಿರುವ ಮೂರ್ತಿಗಳನ್ನು ನೋಡಬಹುದು. ನಾವು ಈ ವೈಷ್ಣವ ಗ್ಯಾಲರಿಯಲ್ಲಿ ಖಂಡೋಬಾ, ದೀಪಲಕ್ಷ್ಮಿ, ಊದಬತ್ತಿ ತಟ್ಟೆ, ತಾಳ, ಚುಟುಕು, ಆರತಿ, ಪಾತ್ರೆ, ತೆಂಬುರ, ಹಿಂದೆ ಸೈನಿಕರು ಉಪಯೋಗಿಸುತ್ತಿದ್ದ ಆಯುಧಗಳನ್ನು ನಾವು ಇಲ್ಲಿ ಕಾಣಬಹುದು. ಭರ್ಚಿ, ಕಟಾರಿ, ತೊಗಲಿನ ಡಾಲು, ತೊಗಲಿನ ಹೊದಿಕೆ, ಚೂರಿ, ಗುರುಜು ಖಡ್ಗ, ಕಟ್ಟಿಗೆಯ ಚಾಕು ಇನ್ನೂ ಮುಂತಾದವುಗಳನ್ನು ನಾವು ನೋಡಬಹುದು. ಅಷ್ಟೇ ಅಲ್ಲ, ಬಹಳಷ್ಟು ಮೂರ್ತಿಗಳನ್ನೂ ನಾವು ಕಾಣಬಹುದು.

ವಸ್ತು ಸಂಗ್ರಹಾಲಯದಲ್ಲಿ ಶೈವ ಶಿಲ್ಪಕಲಾ ಗ್ಯಾಲರಿಯಿದ್ದು, ಗ್ಯಾಲರಿಯಲ್ಲಿ ಅನೇಕ ತರಹನಾದ ಶಿಲ್ಪಗಳನ್ನು ನೋಡಬಹುದು. ಅವುಗಳೆಂದರೆ ವೀರಭದ್ರ, ಗಣೇಶ, ಭೈರವ, ಭೈರವಿ, ಕಾಲಭೈರವ, ಗಾಜಿನಚಿತ್ರ, ಮಹಾಭಾರತದ ಪುಸ್ತಕ, ಅನುಭವಾಮೃತ, ಫಿಂಗಳು ಶಾಸ್ತ್ರ, ಮರಾಠಿ ದಾಖಲೆ, ಉಗುರಿನ ಚಿತ್ರ, ಜ್ಞಾನಸಿಂಧು, ಮಹಿಷಾಸುರ ಮರ್ಧಿನಿ, ಮುಸ್ಲಿಮರ ಸಮಾಧಿಯ ನಮೂನೆ, ಸನದ ಹಾಗೂ ಫಿರಮಾನ, ಆದಿಲ್‌ಶಾಹಿಯರ ಮೋದಿ ದಾಖಲೆ, ವ್ರಿದ್ದಿ ದೇವತೆ, ಶಿಲ್ಪಗಳನ್ನು ಇಲ್ಲಿ ಇಡಲಾಗಿದೆ. ಅಲ್ಲದೆ ಭಾರತದ ಪರಂಪರೆಯ ಆಯುಧಗಳಾದ ಪರಶು, ಚೂರಿ, ಕುಡುಗೋಲು, ಗದೆ, ಖಡ್ಗ, ಗೆಜ್ಜೆಯ ಕೋಲುಗಳನ್ನು ಮತ್ತು ಸಪ್ತ ಮಾತೃಕೆಯರ ಶಿಲ್ಪಗಳನ್ನೂ ನಾವು ನೋಡಬಹುದು.

ಆಲಮಟ್ಟಿ ಅಣೆಕಟ್ಟಿನ ಹಿನ್ನೀರಿನಲ್ಲಿ ಮುಳುಗಡೆಗೊಂಡ ಸಾಂಸ್ಕೃತಿಕ, ಧಾರ್ಮಿಕ ಆಚರಣೆಗಳನ್ನು ಯಥಾವತ್ತಾಗಿ ಜೀವಂತವಾಗಿಡಲು ಆ ಊರಿನ ಜನರ ಭಾವನೆಗಳನ್ನು, ಸಂಪ್ರದಾಯಗಳನ್ನು ಛಾಯಾ ಚಿತ್ರ ಹಾಗೂ ವರ್ಣಚಿತ್ರಗಳಲ್ಲಿ

ಕಲಾವಿದ ಶ್ರೀ ಟಿ.ವಿ. ಸೊಲಬಕ್ಕನವರ ಸ್ಥಳೀಯ ಕಲಾವಿದರು, ಮಹಿಳಾ ಕಲಾವಿದರು, ಕಲಾ ಶಿಕ್ಷಕರು, ವಿವಿಧ ಮಾಧ್ಯಮಗಳಲ್ಲಿ ರಚಿಸಿದ ಚಿತ್ರ ಕಲಾಕೃತಿಗಳ ಸಂಗ್ರಹ ಈ ಕಲಾಭವನದಲ್ಲಿದೆ. ನಮಗೆ ಪ್ರಸ್ತುತವಾದ ಭಿತ್ತಿ ಚಿತ್ರಗಳನ್ನು ಅರ್ವಾಚಿನ(ಆಧುನಿಕ) ಭಿತ್ತಿ ಚಿತ್ರಗಳೆಂದು ಪರಿಗಣಿಸಿ ವಿವರಿಸಲಾಗಿದೆ.

**೧. ಬಸವಜಯಂತಿ ಆಚರಣೆ**

ಈ ಚಿತ್ರವು ಸಂಪೂರ್ಣ ಕೆಂಪು ವರ್ಣದ ಭಿತ್ತಿಯ ಮೇಲೆ ಕಪ್ಪು, ಬಿಳುಪು ರೇಖಾ ಪ್ರಧಾನವಾಗಿ ರಚಿಸಿದ ಚಿತ್ರವಾಗಿದೆ. ಚಿತ್ರದ ಮಧ್ಯಭಾಗದಲ್ಲಿ ಜಾನಪದ ಸೊಗಡಿನ ಎತ್ತಿನ ಬಂಡಿಯಲ್ಲಿ ಮುಂಡಾಸು, ಗಾಂಧಿಟೋಪಿ, ಪಟಕ ಮೊದಲಾಗಿ ಹಳ್ಳಿಯ ಜನರ ವೇಷಭೂಷಣಗಳಿಂದ ಕೂಡಿದ ಅಪ್ಪಟ ದೇಶಿ ಜನರ ತಂಡವನ್ನು ಕಾಣಬಹುದು. ಎತ್ತುಗಳಿಗೆ ಕೋಡಿಗೆ ಬಣ್ಣ ಬೆನ್ನ ಮೇಲೆ ಶಿವಲಿಂಗದ ಚಿತ್ರವನ್ನು ಹೊಂದಿದ ಜೂಲ, ಕೊರಳಿಗೆ ಗೆಜ್ಜೆ ಕಟ್ಟಿದ ಬಂಡಿಯಲ್ಲಿ ಕುಳಿತ ಜನರು ಏನನ್ನೋ ಹೇಳುತ್ತಾ, ಜೈಕಾರ ಹಾಕುತ್ತಿರುವಂತೆ ಚಿತ್ರಿಸಲಾಗಿದೆ. ಅದೇ ರೀತಿ ಇನ್ನೂ ಕೆಲವು ಬಂಡಿಗಳು ಅಲಂಕೃತಗೊಂಡು ಸಾಲಾಗಿ ಬರುತ್ತಿವೆ. ಓಣಿಯಲ್ಲಿ ಜನ ನಿಂತು ನೋಡುತ್ತಿರುವ ದೃಶ್ಯ ಸಾಮಾನ್ಯವಾಗಿದೆ.

ಚಿತ್ರ ಕೇವಲ ಕಪ್ಪು ಮತ್ತು ಬಿಳಿ ಬಣ್ಣದಲ್ಲಿ ರಚಿತವಾಗಿದ್ದು, ನೈಜ ಪ್ರಮಾಣಬದ್ಧ ಚಿತ್ರ ಇದಾಗಿದೆ. ಸಂಪೂರ್ಣ ಸಂಯೋಜನಾ ಚಿತ್ರವಾಗಿದ್ದು, ಸ್ಥಳಾವಕಾಶವನ್ನು ಸಮರ್ಥವಾಗಿ ಬಳಸಿಕೊಳ್ಳಲಾಗಿದೆ. ಒಟ್ಟಿನಲ್ಲಿ ಬಸವಜಯಂತಿ ಆಚರಣೆ ಎತ್ತುಗಳ ಮೆರವಣಿಗೆ, ರೈತನ ಖುಷಿಗೆ ಕಾರಣವಾಗಿದ್ದು, ಎತ್ತಿಗೆ ಪ್ರಾಧಾನ್ಯತೆ ನೀಡುವ ಬಸವಜಯಂತಿ ಆಚರಣೆ ಚಿತ್ರ ಇದಾಗಿದೆ.

**೨. ಕಾರಹುಣ್ಣಿಮೆ ಆಚರಣೆ**

ಈ ಚಿತ್ರವು ಭಿತ್ತಿಯ ಮೇಲೆ ಫೆವಿಕಾಲಿನಲ್ಲಿ ಉಸುಕನ್ನು ಕಲಸಿ ಸಂಪೂರ್ಣ ಉಸುಕಿನ ಮಾಧ್ಯಮದಲ್ಲಿ ಉಬ್ಬುತಗ್ಗುಗಳಿಂದ ರಚಿಸಿ ಮೇಲೆ ವರ್ಣಲೇಪನ ಮಾಡಲಾಗಿದೆ. ಚಿತ್ರದಲ್ಲಿ ಕಾರಹುಣ್ಣಿಮೆ ದಿನ ಎತ್ತುಗಳನ್ನು ಸ್ಪರ್ಧೆಗೆ ಓಡಿಸಿ ಕರಿ, ಬಿಳಿ ಎತ್ತುಗಳ ಸ್ಪರ್ಧೆಯಲ್ಲಿ ಯಾವುದು ಮುಂದೆ ಬರುತ್ತದೆಯೋ ಅದರ ಆಧಾರದ ಮೇಲೆ ಹಿಂಗಾರು, ಮುಂಗಾರು ಬೆಳೆಗಳನ್ನು ಲೆಕ್ಕ ಹಾಕಿಕೊಳ್ಳುವ ರೈತರ ನಂಬಿಕೆಯನ್ನು ಆಧರಿಸಿದ ಚಿತ್ರ ಇದಾಗಿದೆ.

ಚಿತ್ರದಲ್ಲಿ ಬಿಳಿ ಎತ್ತು ಒಂದರ ಕೋಡಿಗೆ ಕೇಸರಿಬಣ್ಣ ಹಚ್ಚಿ, ವರ್ಣಮಯ ಜೂಲ ತೊಡಿಸಿ, ಮುಂಗಾಲುಗಳನ್ನು ಮುಂದೆ ಊರಿ, ಹಿಂಗಾಲುಗಳನ್ನು ಹಿಂದೆ ಎತ್ತರಕ್ಕೆ ಹಾರಿಸಿ ಬಾಲವನ್ನು ಇನ್ನೂ ಎತ್ತರಕ್ಕೆ  ಏರಿಸಿ ವೇಗವಾಗಿ ಓಡುತ್ತಿದೆ ಎಂದು ಭ್ರಮಿಸುವಂತೆ ಚಿತ್ರಿಸಿದ್ದಾರೆ. ಹಾಗೆ ಸಾಂಪ್ರದಾಯಿಕ, ಉಡುಗೆ-ತೊಡುಗೆ ತೊಟ್ಟ ಜನ ಎತ್ತುಗಳನ್ನು ಹುರಿದುಂಬಿಸುತ್ತಾ ಎತ್ತಿನ ಹಿಂದೆ ಓಡುತ್ತಿರುವ ಸನ್ನಿವೇಶ ಇದಾಗಿದೆ. ಈ ಎತ್ತು ಮತ್ತು ಜನರ ಹಿಂದೆ ಇನ್ನೂ ಹಲವಾರು ಎತ್ತುಗಳು ಮತ್ತು ಜನರು ಗುರಿ ಮುಟ್ಟಲು ನಾ ಮುಂದೆ ತಾ ಮುಂದೆ ಎಂಬ ಸ್ಪರ್ಧಾ ಮನೋಧರ್ಮದಿಂದ ಓಡುತ್ತಿರುವಂತೆ ಚಿತ್ರಿಸಲಾಗಿದೆ.

**೩. ಗುಳ್ಳವ್ವನ ಆಚರಣೆ**

ಉತ್ತರ ಕರ್ನಾಟಕದ ಅದೂ ಬಾಗಲಕೋಟೆ, ವಿಜಾಪುರ ಜಿಲ್ಲೆಗಳಲ್ಲಿ ಗುಳ್ಳವ್ವನ ಹಬ್ಬದ ಆಚರಣಾ ಸಂಪ್ರದಾಯವು ಇಂದಿಗೂ ನಡೆದುಬಂದ ಹಬ್ಬವಾಗಿದೆ. ಈ ಚಿತ್ರವು ಗಾಜಿನ ಚೂರುಗಳ ಮಾಧ್ಯಮದಿಂದ ರಚಿತಗೊಂಡಿದ್ದು, ಅತೀ ವಿಶೇಷವೆನಿಸುತ್ತದೆ. ಹಲವಾರು ತಿರುವುಗಳು ಮತ್ತು ನೈಜ ಆಕೃತಿಗಳಿರುವ ಈ ಚಿತ್ರದಲ್ಲಿ ಸೀರೆ, ಲಂಗ, ರವಿಕೆ ಮುಂತಾದವುಗಳಿಗೆ ಸಂಯೋಜನಾಬದ್ಧವಾಗಿ ಗಾಜಿನ ಚೂರುಗಳಿಂದಲೇ ವರ್ಣವಿನ್ಯಾಸ ಮಾಡಿರುವುದು ಕಲಾವಿದರ ನೈಪುಣ್ಯತೆಯನ್ನು ತೋರುತ್ತದೆ.

ಮನುಷ್ಯಾಕೃತಿಗಳನ್ನು ಹೊರತುಪಡಿಸಿ ಉಳಿದ ಸ್ಥಳದಲ್ಲಿ ಹಿಂದುಮುಂದಿನ ಕಲ್ಪನೆಗಳು ಬರುವಂತೆ ಕಟ್ಟೆ, ಮನೆಯ ಮುಂಭಾಗ, ಗುಳ್ಳವ್ವನ ಅಲಂಕಾರ, ಪೂಜಾ ವಿಧಿವಿಧಾನ ರಚಿಸಿದ್ದು, ನೆರಳು, ಬೆಳಕುಗಳ ಪರಿಕಲ್ಪನೆಯನ್ನು ಸಹ ಗಾಜು ಮಾಧ್ಯಮದಲ್ಲಿಯೇ ತೋರಿಸುವ ಅಪರೂಪದ ಚಿತ್ರರಚನೆ ಇದಾಗಿದೆ.

**೪. ಗೋಕುಲಾಷ್ಟಮಿ ಆಚರಣೆ**

ಈ ಚಿತ್ರವು ಬಾಲಕೃಷ್ಣನಿಗೆ ಹೆಸರಿಡುವ ಸನ್ನಿವೇಶವನ್ನು ಹೊಂದಿದ್ದು, ಬ್ರಾಹ್ಮಣ ಹೆಂಗಳೆಯರು ಕಚ್ಚೆ ಸೀರೆಗಳನ್ನುಟ್ಟು, ಸಾಂಪ್ರದಾಯಿಕ ಕಟ್ಟಿಗೆಯ ತೊಟ್ಟಿಲಲ್ಲಿ ಬಾಲಕೃಷ್ಣನನ್ನು ಹೆಸರಿಟ್ಟು ತೂಗುವ ಸನ್ನಿವೇಶ ಇದಾಗಿದೆ. ಬದಿಯಲ್ಲಿ ಹೆಣ್ಣುಮಗಳೊಬ್ಬಳು ನೆಲಕ್ಕೆ ಅಂಬೆಗಾಲಿಕ್ಕಿ ನಿಂತ ಕೃಷ್ಣನನ್ನು ಎತ್ತಿ ತೊಟ್ಟಿಲಲ್ಲಿ ಹಾಕುವಂತೆ ಕಾಣುತ್ತಿದೆ. ಹಿಂಬದಿಯಲ್ಲಿ ದೊಡ್ಡ ಮನೆಯ ಚಿತ್ರ ಅಲ್ಲಲ್ಲಿ ಮಾತನಾಡುತ್ತಾ, ಉಲ್ಲಾಸದಲ್ಲಿರುವ ಹೆಣ್ಣುಮಕ್ಕಳು, ಚಿಕ್ಕಮಕ್ಕಳು ಈ ಚಿತ್ರ ಸಂಯೋಜನೆಯಲ್ಲಿ ಇದ್ದಾರೆ. ಪ್ಲಾಸ್ಟಿಕ್‌ನ ಚೂರುಗಳಿಂದ ರಚಿತವಾದ ಈ ಚಿತ್ರ ವಿನೂತನ ಮಾದರಿದಾಗಿದೆ.

ಚಿತ್ರದಲ್ಲಿ ಉತ್ತರ ಕರ್ನಾಟಕದ ಸಾಂಪ್ರದಾಯಿಕ ಇಲಕಲ್ಲ ಸೀರೆ ಉಡುಗೆ, ಕಟ್ಟಿಗೆ ತೊಟ್ಟಿಲು, ಕಂಬದ ಮಾದರಿಗಳು, ಗೋಡೆಗೆ ಅಲಂಕೃತ ಪಟ್ಟಿಕೆ ಚಿತ್ರಗಳು, ನೆಲದ ಹಾಸು ಯಥಾದರ್ಶಕವಾಗಿ ಹಿಂದುಮುಂದಿನ ಪರಿಣಾಮವನ್ನು ನೀಡುತ್ತದೆ.

**೫. ನಾಗರಪಂಚಮಿ ಆಚರಣೆ**

ವಿಶಿಷ್ಟ ಹಾಗೂ ಜನರ ಬದುಕನ್ನು ನೊರೆಗೊಂಡ ಹಬ್ಬ ನಾಗರ ಪಂಚಮಿ ನಾಡಿಗೇ ದೊಡ್ಡದು. ಇದೇ ಈ ಚಿತ್ರರಚನೆಯ ಸಂದರ್ಭ. ಚಿತ್ರ ಸಂಯೋಜನೆಯಲ್ಲಿ ಹೊಂದಿ ಬೃಹತ್ತಾದ ಮರದ ಕೆಳಗೆ ನಾಗಪ್ಪನನ್ನು ಕುಳ್ಳರಿಸಿ ಹಾಲೆರೆಯುವ ದೃಶ್ಯವಿದೆ. ಚಿತ್ರದ ಮಾಧ್ಯಮ ಸೀರೆಯನ್ನು ನೇಯುವ ದಾರ ಆದ್ದರಿಂದ ಹೆಂಗಳೆಯರ ಸೀರೆಯ ಬಣ್ಣ ತುಂಬಾ ನೈಜವೆನಿಸುತ್ತದೆ. ತಲೆಯ ಮೇಲೆ ಸೆರಗು ಹೊತ್ತ ಮಹಿಳೆಯರು ನಾಗಪ್ಪನಿಗೆ ಮಕ್ಕಳು ಮರಿಗಳೊಂದಿಗೆ ಹಾಲು ಹೊಯ್ಯುವ ಈ ದೃಶ್ಯವನ್ನು ಸಣ್ಣ ಸಣ್ಣ ದಾರದ ಎಳೆಗಳಿಂದ ಚಿತ್ರಿಸಲಾಗಿದೆ.

ಬಣ್ಣ ಬಣ್ಣದ ದಾರಗಳಿದ್ದರೂ, ಚಿತ್ರದ ಸ್ಥಳಾವಕಾಶ, ಕೆಳಗಡೆ ನೆಲದ ಪರಿಣಾಮ, ಗಿಡದ ಎಲೆ ಮೊದಲಾದವನ್ನು ಸಮಾನ ವರ್ಣದಿಂದ ಚಿತ್ರಿಸಿದೆ. ನೀಲಾಕಾಶದ ಹಿನ್ನೆಲೆಯಿಂದಾಗಿ ಮಹಿಳೆಯರ ಮುಖ

ಮತ್ತು ವೇಷಭೂಷಣಗಳು ಸಮರ್ಪಕ ಅರ್ಥವನ್ನು ಪಡೆದಿವೆ. ದೂರದಲ್ಲಿ ಹೆಂಚಿನ ಮನೆಗಳನ್ನು ರಚಿಸಿ ಸೀರೆಯಲ್ಲಿರುವ ಬಣ್ಣಗಳು ಮರುಬಳಕೆಯಾಗಿ ಒಟ್ಟು ಚಿತ್ರ ವರ್ಣ ಸಂಯೋಜಿತವಾಗಿದೆ.

**೬. ಜೋಕುಮಾರನ ಆಚರಣೆ**

ಗಣಪತಿ ನಂತರ ಬರುವ ಜೋಕುಮಾರ ಆಚರಣೆ ಜಾನಪದರಲ್ಲಿ ತುಂಬಾ ವಿಶೇಷ. ಈ ಚಿತ್ರದಲ್ಲಿ ನೇರವಾಗಿ ಜೋಕುಮಾರನ ಬುಟ್ಟಿ ಹೊತ್ತು ತಂದ ಮಹಿಳೆಯ ಸೀರೆಯನ್ನು ನೇರವಾಗಿ ಇಲಕಲ್ಲ ಸೀರೆಯನ್ನೇ ಕತ್ತರಿಸಿ ಅಂಟಿಸಿದೆ. ಆ ಮೂಲಕ ನೈಜತೆಯನ್ನು ತರಲಾಗಿದೆ. ಇದರಂತೆ ಉಳಿದ ಎಂಟು ಹೆಂಗಳೆಯರ ಆಕೃತಿಗಳಲ್ಲೂ ಸೆರಗನ್ನು ನೇರವಾಗಿ ಕತ್ತರಿಸಿ, ಅಂಟಿಸಿ ಸೀರೆಯ ಅಂಚುಗಳನ್ನು ಕತ್ತರಿಸಿ, ಅಂಟಿಸಿ ವಿನೂತನವಾಗಿ ಚಿತ್ರವನ್ನು ರಚಿಸಲಾಗಿದೆ. ಇನ್ನು ಮಕ್ಕಳ ಚಿತ್ರಕ್ಕೆ ಲಂಗ ಮತ್ತು ರವಿಕೆಗಳನ್ನು ಕೂಡ ಬಟ್ಟೆಯನ್ನು ಅಂಟಿಸಿಯೇ ಮಾಡಲಾಗಿದೆ. ಹಿನ್ನೆಲೆಮುನ್ನೆಲೆಗಳ ವಿನ್ಯಾಸವನ್ನೂ ಬಟ್ಟೆಯ ತುಂಡುಗಳಿಂದಲೇ ರಚಿಸಿದ್ದು, ಒಂದು ವಿಶೇಷ.

ಜೋಕುಮಾರನ ಕಥೆ ಹೇಳುವ, ಹಾಡುವ, ಗುಣಗಾನ ಮಾಡುವ ಮಹಿಳೆಯರ ಮುಖದಲ್ಲಿ ಕಳೆ, ನಗು ಮೊದಲಾದವನ್ನು ನೈಜವಾಗಿ ಚಿತ್ರಿಸಿದೆ. ಬಟ್ಟೆ ಭಿತ್ತಿಯ ಆಧುನಿಕ ಚಿತ್ರ ಇದಾಗಿದೆ.

**೭. ಗಣೇಶನ ಆಚರಣೆ**

ಚಿತ್ರವು ಗಣಪತಿಯನ್ನು ತಲೆಯ ಮೇಲೆ ಹೊತ್ತು ಪೂಜೆಗೆ ತರುತ್ತಿರುವ ನಾಲ್ಕೈದು ಕುಟುಂಬಗಳ ಚಿತ್ರ ಇದಾಗಿದೆ. ಮನೆಯ ಮುಖ್ಯಸ್ಥರು ವಿವಿಧ ಭಂಗಿಗಳಲ್ಲಿ ಆಗಮಿಸುತ್ತಿರುವ ಚಿತ್ರ, ಜೊತೆಯಲ್ಲಿ ಊರ ಪ್ರಮುಖರು, ಪಟಾಕಿ ಹೊಡೆಯುವ ಮಕ್ಕಳು, ಕೈಮುಗಿದು ಹೊರಟ ಜನ ಸುಮಾರು ೩೦ ಜನರ ಗುಂಪು ಚಿತ್ರ ಇದಾಗಿದೆ.

ಈ ವರ್ಣಚಿತ್ರದಲ್ಲಿ ತೆಳ್ಳನೆ ರೇಖಾಚಿತ್ರಗಳನ್ನೆಳೆದು ಒಳಗಡೆ ತೆಳುವಾದ ಜಲವರ್ಣವನ್ನು ಲೇಪಿಸಲಾಗಿದೆ. ಮುಂಬದಿಯಲ್ಲಿ ನಿಸರ್ಗ ಅಂಶಗಳನ್ನು, ಹಿಂದೆ ಊರ ಹೊರಗಿನ್ನು ಚಿತ್ರಿಸಲು ದೂರದಲ್ಲಿ ಮನೆಗಳ ಸಮೂಹವನ್ನು ತೆಳು ತಾಂತ್ರಿಕತೆಯಿಂದ ರಚಿಸಿದ ಚಿತ್ರ ಇದಾಗಿದೆ.

**೮. ಕಾರ್ತಿಕಮಾಸ ಆಚರಣೆ**

ಚಿತ್ರವು ವರ್ಣಮಯವಾಗಿದ್ದು, ರಾತ್ರಿ ಹೊತ್ತಿನಲ್ಲಿ ದೇವಸ್ಥಾನವೊಂದರಲ್ಲಿ ದೀಪಗಳನ್ನು ಪಣತಿಗಳಲ್ಲಿ ಹಚ್ಚಿ ದೇವಸ್ಥಾನದ ವಿವಿಧ ಸ್ಥರಗಳಲ್ಲಿ ಇಡುವ ಸನ್ನಿವೇಶ ಇದಾಗಿದೆ. ಊರಲ್ಲಿ ಎಲ್ಲಾ ಜನಾಂಗದ ಜನ ಒಂದೇ ಕಡೆ ಸೇರಿ ಜಾತಿ, ಮತ ಪಂಥವಿಲ್ಲದೇ ಜ್ಯೋತಿಗಳನ್ನು ಬೆಳಗಿಸುವ ಕಾರ್ಯ ಬಿಂಬಿಸುವ ಚಿತ್ರ ಇದಾಗಿದೆ.

ಜನಪದರ ಹಲವಾರು ಸಾಂಪ್ರದಾಯಿಕ ಆಚರಣೆಗಳಲ್ಲಿ ಕೊನೆಯ ಮುಹೂರ್ತ ಈ ಕಾರ್ತಿಕಮಾಸವಾಗಿದೆ. ಸಾಂಪ್ರದಾಯಿಕ ಉಡುಗೆ-ತೊಡುಗೆಗಳಲ್ಲಿ ಅಲ್ಲಲ್ಲಿ ನಿಂತು, ಕುಳಿತು ದೀಪಗಳನ್ನು

ಬೆಳಗಿಸುತ್ತಿರುವ ಚಿತ್ರ ಸಂಯೋಜನಾಬದ್ಧವಾಗಿದ್ದು, ಮುಂಬದಿಯಲ್ಲಿ ಕತ್ತಲನ್ನು ಸೃಷ್ಟಿಸಿ ಅವರು ಹಚ್ಚಿದ ಪಣತೆಯ ಬೆಳಕಿನಲ್ಲಿ ಅವರೇ ಕಾಣುವಂತೆ ಚಿತ್ರಿಸಿದ ತಂತ್ರ ಇದರಲ್ಲಿ ಕಾಣಬಹುದು.

**೯. ವಿಜಯದಶಮಿ ಆಚರಣೆ**

ಜಿಲ್ಲೆಯ ಪ್ರಮುಖ ಹಬ್ಬಗಳಲ್ಲೊಂದು ಈ ವಿಜಯದಶಮಿ. ದಸರಾ ಆಚರಣೆ ಮೈಸೂರಿನಲ್ಲಿ ಅಂಬಾರಿಯ ಮೇಲಾದರೆ, ಇಲ್ಲಿ ಮನೆಮನೆಗೆ ತೆರಳಿ ಹಿರಿಯರು, ಕಿರಿಯರು ಬನ್ನಿ ತಪ್ಪಲವನ್ನು ಬಂಗಾರವೆಂದು ತಿಳಿದು ವಿನಿಮಯಿಸುತ್ತಾದ ಸಂಭ್ರಮ ಚಿತ್ರಿತವಾಗಿದೆ. ಹಿರಿಯರಿಗೆ ಕಿರಿಯರು ಕಾಲಿಗೆ ನಮಸ್ಕರಿಸುವ ಒಬ್ಬರಿಗೊಬ್ಬರು ಬಂಗಾರವನ್ನು ಕೈಯಲ್ಲಿ ಕೊಡುವ ಚಿತ್ರ ಇದಾಗಿದೆ.

ದೂರ ದೂರದಲ್ಲಿ ಮನುಷ್ಯಾಕೃತಿಗಳನ್ನು ಸೃಷ್ಟಿಸಿ ಬೇರೆ ಬೇರೆ ಮುಖಭಾವನೆಗಳನ್ನು ರಚಿಸಿ ಅಲ್ಲಲ್ಲಿ ಕಾರ್ಯಪ್ರವರ್ತರಾಗಿರುವಂತೆ ಮನೆಯ ಒಳಗೂ, ಹೊರಗೂ, ಬಯಲಲ್ಲೂ ಬಂಗಾರ ಕೊಡುವ ಕಾರ್ಯಕ್ರಮ ಸುಂದರವಾಗಿ ಚಿತ್ರಿತವಾಗಿದೆ. ಇದೂ ಕೂಡ ಸಂಜೆಯ ಕಾರ್ಯಕ್ರಮವಾದ್ದರಿಂದ ಮುಂಭಾಗದಲ್ಲಿ ಕತ್ತಲನ್ನು ತೋರಿಸಲು ಕಡುಗಪ್ಪು ವರ್ಣವನ್ನು ಬಳಸಲಾಗಿದೆ.

**೧೦. ಚರಗ ಚೆಲ್ಲುವ ಆಚರಣೆ**

ಜಿಲ್ಲೆಯ ರೈತರ ಸಾಂಪ್ರದಾಯಿಕ ಆಚರಣೆಗಳಲ್ಲಿ ಕೃಷಿಗೆ ಸಂಬಂಧಿಸಿದ ಆಚರಣೆ ಇದಾಗಿದ್ದು, ಇಲ್ಲಿ ಭರಪೂರ ಬೆಳೆಬಂದ ಕಾಲದಲ್ಲಿ ಮನೆಯಮಂದಿ ನೆರೆಮನೆಯವರನ್ನು ಕರೆದುಕೊಂಡು ಹೊಲಕ್ಕೆ ಹೋಗಿ ಹುಲ್ಲು ಹುಲ್ಲಿಗೆ ನಮಿಸಿ, ತೆಗೆದುಕೊಂಡು ಹೋದ ಅಡುಗೆಯ ಕೆಲ ಭಾಗವನ್ನು ಹೊಲದ ತುಂಬೆಲ್ಲಾ ಚೂರು ಚೂರಾಗಿ ಹಾಕಿ ಭೂದೇವಿಗೆ ನೈವೇದ್ಯ ನೀಡುವ ಆಚರಣೆ ಚಿತ್ರ ಇದಾಗಿದೆ.

ಹೊಲದಲ್ಲಿರುವ ದೊಡ್ಡ ಮರದ ಕೆಳಗೆ ಊಟಕ್ಕಾಗಿ ಕುಳಿತ ಜನರು ಹಿರಿಯ ಹೆಣ್ಣುಮಕ್ಕಳು ಗಂಡಸರಿಗೆ, ಮಕ್ಕಳಿಗೆ ಊಟ ನೀಡುವುದು, ನೀರು ಪಲ್ಲೆ ಪದಾರ್ಥ ಇತ್ಯಾದಿಗಳನ್ನು ತಂದುಕೊಡುವುದು, ಅಜ್ಜಿಯರ ಮಾತುಕತೆ, ಮಕ್ಕಳ ಓಡಾಟ, ಎತ್ತುಗಳ ವಿಶ್ರಾಂತಿ ಮುಂತಾದ ಸಡಗರದ ಕ್ರಿಯೆಗಳನ್ನು ಚಿತ್ರವು ಕೆಲವೇ ಕೆಲವು ಬಣ್ಣಗಳಲ್ಲಿ ತೋರಿಸಿದ ಉತ್ಕೃಷ್ಟ ಚಿತ್ರಾಕೃತಿ ಇದಾಗಿದೆ.

**೧೧. ಹೋಳಿಹಬ್ಬ ಆಚರಣೆ**

ಬಾಗಲಕೋಟೆ ಹೋಳಿಹಬ್ಬವೆಂದರೆ ದೇಶದಲ್ಲೇ ಪ್ರಸಿದ್ಧ ಮತ್ತು ಸತತವಾಗಿ ಐದು ದಿನಗಳವರೆಗೆ ಬಣ್ಣದೋಕುಳಿ ಆಡುವ ಏಷ್ಯಾ ಖಂಡದ ಏಕೈಕ ನಗರ. ಆಚರಣೆ ಆರಂಭದ ದಿನ ಊರ ಹಿರಿಯರು ಹಲಗೆ ಬಾರಿಸುವುದರೊಂದಿಗೆ ಉದ್ಘಾಟಿಸುತ್ತಾರೆ. ಚಿತ್ರದಲ್ಲಿ ಪ್ರಮುಖವಾಗಿ ಬಂಡಿಯಲ್ಲಿ ಬಣ್ಣದ ಬ್ಯಾರಲ್ಲುಗಳನ್ನು ತುಂಬಿ ಬಣ್ಣವನ್ನು ಎರಚುತ್ತಾ ಸಾಗುತ್ತಾರೆ. ಬಂಡಿ ತುಂಬಾ ಬಣ್ಣವೇ ಬಣ್ಣ ಅಂಗಳದ ತುಂಬ ಓಡಾಡುತ್ತಾ ಬಣ್ಣ ಹಚ್ಚಿಸಿಕೊಳ್ಳದವರನ್ನು ಹಿಡಿದು ನಿಲ್ಲಿಸಿ ಬಣ್ಣದಲ್ಲಿಯೇ ಅದ್ದಿ ತೆಗೆಯುವ ಸಂಪ್ರದಾಯ ಇಲ್ಲಿಯದಾಗಿದೆ.

ಓಣಿಯಲ್ಲಿ ಮೂರ್‍ನಾಲ್ಕು ಗುಂಪುಗಳು ಬೇರೆ ಬೇರೆ ಸ್ಥರಗಳಲ್ಲಿ ಬಣ್ಣದೋಕುಳಿ ಆಡುತ್ತಿರುವ ಸನ್ನಿವೇಶ ವರ್ಣಮಯವಾಗಿದೆ. ಓಣಿಯ ಚಿತ್ರ ನೆಲಕ್ಕೆ ಕೆಂಪು ಬಣ್ಣದಿಂದ ವಿನ್ಯಾಸಗೊಳಿಸಲಾಗಿದೆ.

### ೧೨. ಜಾತ್ರೆ

ಜಿಲ್ಲೆಯ ಪ್ರತೀ ಊರಿನಲ್ಲೂ ಅಲ್ಲಿಯ ಗ್ರಾಮದೇವತೆ, ಜಾತ್ರೆ ನಡದೇ ನಡೆಯುತ್ತದೆ. ಅದರಲ್ಲೂ ಒಂದೊಂದು ಊರಿನದು ಒಂದೊಂದು ವಿಶೇಷತೆ. ಒಂದು ಊರಲ್ಲಿ ತೇರು ಎಳೆದರೆ ಇನ್ನೊಂದು ಊರಲ್ಲಿ ಪಲ್ಲಕ್ಕಿ ಉತ್ಸವ, ಜನಜಾತ್ರೆ ಸೇರಿ ಆಚರಿಸುವ ಸಾಂಪ್ರದಾಯಿಕ ಚಿತ್ರ ಇದಾಗಿದೆ. ನೂರಾರು ಜನರ ಚಿಕ್ಕ ಚಿಕ್ಕ ಆಕೃತಿಗಳನ್ನು ರಚಿಸಿ ಜಾತ್ರೆಯ ಅಂಗಡಿಗಳಲ್ಲಿ ಸಾಮಗ್ರಿ ಖರೀದಿಸುವ ಚಿತ್ರ, ಮಾತುಕತೆ, ಕಲ್ಲುಗುಂಡು ಎತ್ತುವ, ಎತ್ತುಬಂಡಿಗಳ ರೇಸ್ ಸನ್ನಿವೇಶ ಸಾಮಾನ್ಯವಾಗಿ ಕಂಡುಬರುತ್ತವೆ.

ಜಾತ್ರೆ ಎಂದಾಗ ಸೇರಬಹುದಾದ ಜನಜಂಗುಳಿಯ ಇಂಚಿಂಚು ಸ್ಥಳಾವಕಾಶವನ್ನು ವ್ಯರ್ಥಗೊಳಿಸದೇ ಸಾವಿರಾರು ಜನರ ನೈಜ ಭಾವಚಿತ್ರದಂತೆ ಪ್ರತಿಯೊಂದಕ್ಕೂ ಸಮ ಪ್ರಮಾಣದ ಪ್ರಾತಿನಿಧ್ಯ ನೀಡಲಾಗಿದೆ.

### ೧೩. ಜಾತ್ರೆಯಲ್ಲಿ ಪುರಾಣ ಕೇಳುತ್ತಿರುವವರು

ಪ್ರತೀ ಜಾತ್ರೆಯ ಮೊದಲ ದಿನಗಳಲ್ಲಿ ೧೦-೧೫ ಹಾಗೂ ೩೦ ದಿನಗಳವರೆಗೆ ಪುರಾಣ-ಪ್ರವಚನ ನಡೆಸಿ, ಜಾತ್ರೆಯ ದಿನ ಅವುಗಳ ಮಹಾಮಂಗಲದೊಂದಿಗೆ ತೇರು, ಪಲ್ಲಕ್ಕಿ, ಉತ್ಸವಗಳು ನಡೆಯುವ ಸಂದರ್ಭ ಇದಾಗಿದೆ. ಜನ ಪುರಾಣ ಕೇಳಲು ಕುಳಿತಿರುವ ಅಥವಾ ಜಾತ್ರೆಯ ಕಾರ್ಯಕ್ರಮವನ್ನು ವೀಕ್ಷಿಸಲು ಕುಳಿತಿರುವ ಸಾವಿರಾರು ಜನರನ್ನು ಒಂದೇ ವೇದಿಕೆಯ ಮುಂದೆ ಪ್ರೇಕ್ಷಕರಂತೆ ಚಿತ್ರಿಸಲಾಗಿದೆ.

ಜಾತ್ರೆಯ ಬಣ್ಣಬಣ್ಣದ ಅಲಂಕಾರಿಕ ವೇಷಭೂಷಣಗಳು, ಜನರ ಹಾವಭಾವಗಳು ತದೇಕಚಿತ್ತರಾಗಿ ಕುಳಿತಿರುವ ರೀತಿ ಚಿತ್ರಿಸುವ ಸಾಮರ್ಥ್ಯವನ್ನಾದರಿಸುತ್ತದೆ. ಹಳ್ಳಿಯ ಸೊಗಡಿನ ಚಿತ್ರ ಈ ಚಿತ್ರದಲ್ಲಿನ ವೇಷಭೂಷಣಗಳು ಗಮನಾರ್ಹವಾಗಿವೆ. ಈ ಎಲ್ಲಾ ಚಿತ್ರರಚನೆಗಳು ಕರ್ನಾಟಕದ, ವಿಶೇಷವಾಗಿ ಉತ್ತರ ಕರ್ನಾಟಕದ ಸಾಂಸ್ಕೃತಿಕ ಬದುಕನ್ನು ಚಿತ್ರಿಸುತ್ತವೆ.

### ಬಾಗಲಕೋಟೆ ಮುಳುಗಡೆ ವಸ್ತುಸಂಗ್ರಹಾಲಯದ ಭಿತ್ತಿ ಚಿತ್ರಗಳ ವಿಶೇಷತೆ

* ಚಿತ್ರ ರಚನೆಯ ಪರಿಕರವಾಗಿ ಕೇವಲ ಬಣ್ಣವನ್ನು ಮಾತ್ರ ಬಳಸಿಕೊಳ್ಳದೆ, ಬಣ್ಣ ಗಾಜಿನ ಚೂರುಗಳು, ಬಣ್ಣದ ನೇಯ್ಗೆಯ ದಾರ, ಬಣ್ಣ ಬಣ್ಣದ ಬಟ್ಟೆಗಳು, ಸೀರೆಯ ಅಂಚುಗಳು, ಉಸುಕು ಮಾಧ್ಯಮಗಳನ್ನು ಬಳಸಿಕೊಂಡು ಭಿತ್ತಿ ಚಿತ್ರಗಳನ್ನು ರಚಿಸಿರುವುದು ವೈಶಿಷ್ಟ್ಯಪೂರ್ಣವಾಗಿದೆ.

* ಜಿಲ್ಲೆಯ ಭಿತ್ತಿ ಮಾಧ್ಯಮದ ಚಿತ್ರಗಳಲ್ಲಿ ಇಲ್ಲಿಯ ಚಿತ್ರಗಳಲ್ಲಿ ಮಾತ್ರ "ಮೊಸಾಯಿಕ್" ರೀತಿಯ ರಚನಾ ತಂತ್ರವನ್ನು ಬಳಸಿಕೊಳ್ಳಲಾಗಿದೆ.

* ಕಾರ ಹುಣ್ಣಿಮೆ, ಹೋಳಿ ಹುಣ್ಣಿಮೆ, ಜಾತ್ರೆ, ನಾಗರ ಪಂಚಮಿ ಇತ್ಯಾದಿ ಹಬ್ಬ, ಆಚರಣೆಗಳ ಚಿತ್ರಗಳನ್ನು ಹೆಚ್ಚು ನೈಜವಾಗಿರುವುದು ಅದ್ಭುತವಾಗಿದೆ. ನೈಜತೆಯನ್ನು ಮೂಡಿಸುವ ಚಿತ್ರಗಳು ರಚನೆಗೊಂಡ ಕಾರಣ ಚಿತ್ರಗಳು ಸಂಯೋಜನಾ ಉದ್ದೇಶದಿಂದಲೇ ನಿಯಮಗಳನ್ನು ಒಳಗೊಂಡಿಲ್ಲ.

* ಬಸವಜಯಂತಿ, ಗಣೇಶ ಚತುರ್ಥಿ, ಚರಗದ ಚಿತ್ರಗಳನ್ನು ಹೊರತುಪಡಿಸಿ ಉಳಿದೆಲ್ಲ ಹಬ್ಬಗಳ ಚಿತ್ರಗಳೂ ಪ್ರಖರ ಬಣ್ಣಗಳಿಂದ ವರ್ಣಮಯವಾಗಿ ಚಿತ್ರಿತಗೊಂಡಿವೆ.

* ಜಿಲ್ಲೆಯ ಸಾಂಸ್ಕೃತಿಕ ಸೊಗಡನ್ನು ಎತ್ತಿ ಹಿಡಿಯುವಂತಹ ಇಲಕಲ್ಲ ಸೀರೆ, ಧೋತ್ರ, ಲಂಗದಂತಹ ಸಾಂಪ್ರದಾಯಿಕ ಉಡುಗೆಗಳನ್ನು ಎಲ್ಲಾ ಚಿತ್ರಗಳಲ್ಲಿಯೂ ಚಿತ್ರಿಸಿರುವುದು ವಿಶೇಷ.





ಬಾಗಲಕೋಟೆ ವಸ್ತು ಸಂಗ್ರಹಾಲಯದಲ್ಲಿರುವ ಭಿತ್ತಿ ಚಿತ್ರಗಳು

೧) ಬಸವಜಯಂತಿ



೩) ಗುಳ್ಳವ್ವನ ಆಚರಣೆ



೪) ಗೋಕುಲಾಷ್ಟಮಿ ಆಚರಣೆ



೬) ಜೋಕುಮಾರನ ಆಚರಣೆ



೮) ಕಾರ್ತಿಕ ಮಾಸದ ಆಚರಣೆ



೧೦) ಚರಗ ಚೆಲ್ಲುವ ಆಚರಣೆ



೧೩) ಜಾತ್ರೆಯಲ್ಲಿ ಪುರಾಣ ಕೇಳುತ್ತಿರುವುದು



ಅಧ್ಯಾಯ ನಾಲ್ಕು

## ಬಾಗಲಕೋಟೆ ಜಿಲ್ಲೆಯ ಹಸ್ತಪ್ರತಿ ಮಾಧ್ಯಮ ಚಿತ್ರಕಲೆ

ಅ. ತಾಳೆಗರಿ

ಆ. ಫಲಕ

# ಬಾಗಲಕೋಟೆ ಜಿಲ್ಲೆಯ ಹಸ್ತಪ್ರತಿ ಮಾಧ್ಯಮ ಚಿತ್ರಕಲೆ

ಈ ಹಿಂದೆ ಚಿತ್ರಕಲೆಗಾಗಿ ಭಿತ್ತಿಯನ್ನು ವ್ಯಾಪಕವಾಗಿ ಬಳಸಿಕೊಂಡುದನ್ನು, ಆದಿಮಾನವನನ್ನು ಮೊದಲ್ಗೊಂಡು ನಮ್ಮ ಕಾಲದ ಶಿಷ್ಟರು, ಜನಪದರು ಚಿತ್ರ ರಚನೆಗಳಿಗೆ ಆಧಾರ ಸಾಮಗ್ರಿ ಅಥವಾ ಮಾಧ್ಯಮವಾಗಿ ಬಳಸಿಕೊಂಡುದನ್ನು ಗಮನಿಸಿದ್ದೇವೆ. ಪ್ರಸ್ತುತ ಅಧ್ಯಾಯದಲ್ಲಿ ಹಸ್ತಪ್ರತಿಯನ್ನು ಮಾಧ್ಯಮವಾಗಿ ಆಯ್ದುಕೊಂಡು, ತಾಳೆಗರಿ ಹಾಗೂ ಫಲಕಗಳ ಮೇಲಿನ ಚಿತ್ರಗಳನ್ನು ಅದರ ಭಾಗಗಳಾಗಿಸಿ, ಚಿತ್ರ ರಚನೆಯ ತಂತ್ರವಿಧಾನ, ವಸ್ತುವಿಷಯ, ವಿಶೇಷತೆಗಳ ಕುರಿತು ಸ್ಥೂಲವಾಗಿ ಅಭ್ಯಸಿಸಲಾಗಿದೆ.

**ಹಸ್ತಪ್ರತಿಗಳು**

ಅಕ್ಷರಗಳಿಗೂ ಮೂಲಚಿತ್ರಕಲೆ. ಆದಿಮಾನವನ ಚಿತ್ರ ಸಂಜ್ಞೆಗಳೇ ಮೌನ ಮಾತುಗಳಾದವು. ಆದಿಮಾನವನ ಭಾವಾಭಿವ್ಯಕ್ತಿಯಾದ ಚಿತ್ರಗಳೇ ಅಕ್ಷರಗಳ ಉಗಮಕ್ಕೆ ದಾರಿ ತೋರಿದವು. ಹೀಗೆ ಮಾನವನ ಸರ್ವಾಂಗೀಣ ವಿಕಾಸದೊಂದಿಗೆ ಭಾಷೆ ಹಾಗೂ ಬರವಣಿಗೆಯೂ ಬೆಳೆದುಬಂದಿತು. ಐತಿಹಾಸಿಕ ಕಾಲದಿಂದ ಬರವಣಿಗೆಯು ಅಧಿಕೃತ ಅಭಿವ್ಯಕ್ತಿಯಾಗುತ್ತ ಬಂದಿದೆ. ಅರಸನ ಆಜ್ಞೆಗಳನ್ನು ಶಾಸನಗಳ ಹೆಸರಿನಲ್ಲಿ ಕಲ್ಲಿನಲ್ಲಿ ಕೆತ್ತಲಾಗುತ್ತಿತ್ತು. ಪಂಡಿತರು, ಕವಿಗಳು, ಶಾಸ್ತ್ರಕಾರರು ತಮ್ಮ ರಚನೆಗಳನ್ನು ಗ್ರಂಥಗಳ ರೂಪದಲ್ಲಿ ಬರೆದಿಟ್ಟರು. ರಾಜ ಸಂದೇಶಗಳನ್ನು ಬರೆದು ಸಾಗಿಸಲು ಬಟ್ಟೆಗಳನ್ನು ಉಪಯೋಗಿಸಿಕೊಳ್ಳಲಾಗುತ್ತಿತ್ತು. ಕವಿಗಳು, ಶಾಸ್ತ್ರಕಾರರು ತಮ್ಮ ರಚನೆಗಳನ್ನು ಬರೆಯಲು ತಾಳೆಗರಿ ಅಥವಾ ಕಾಗದಗಳನ್ನು ಉಪಯೋಗಿಸಿಕೊಂಡರು. ಜ್ಯೋತಿಷಿಗಳು, ಮಾಂತ್ರಿಕರು, ತೆಳುವಾದ ತಾಮ್ರದ ತಗಡು ಅಥವಾ ಇತರ ಲೋಹಗಳ ಮೇಲೆ ಯಂತ್ರ ಬರೆಯುತ್ತಿದ್ದರು.

ಇಲ್ಲಿ "ಹಸ್ತಪ್ರತಿ" ಎಂಬ ಪದವೇ ಹೇಳುವಂತೆ ಹಸ್ತಗಳಿಂದ ರಚಿತವಾದ ಪ್ರತಿಗಳು. ಹಲವಾರು ವಿದ್ವಾಂಸರು ಹಸ್ತಪ್ರತಿ(Manuscript) ಎಂಬುದಕ್ಕೆ ತಮ್ಮದೇಯಾದ ವ್ಯಾಖ್ಯಾನಗಳನ್ನು ನೀಡಿದ್ದಾರೆ. "ಕನ್ನಡ ಹಸ್ತಪ್ರತಿ"ಗಳ ಕುರಿತ ಸಂಶೋಧನೆ ಮಾಡಿದ ಡಾ.ಬಿ.ಕೆ. ಹಿರೇಮಠರವರು- "ಭಾರವಲ್ಲದ ಲೇಖ್ಯ ವಸ್ತುವಿನ ಮೇಲೆ ಕೈಯಿಂದ ಬರೆದ ಜೀವನಾವಶ್ಯಕ ಜ್ಞಾನ ಪ್ರಧಾನವಾದ ಕೃತಿ ಮತ್ತು ಅದರ ಪ್ರತಿಕೃತಿಗಳೇ ಹಸ್ತಪ್ರತಿಗಳು" ಎಂದು ವ್ಯಾಖ್ಯಾನಿಸಿದ್ದಾರೆ. ಕಲ್ಲಿನಲ್ಲಿ ಕೆತ್ತಿದ ರಾಜಾಜ್ಞೆಗಳನ್ನು ಶಾಸನಗಳೆಂದು ಕರೆಯಲಾಗಿದ್ದು, ಭಾರವಲ್ಲದ ಲೇಖ್ಯ ವಸ್ತುಗಳಾದ ಕಾಗದ, ತಾಳೆಗರಿ, ತೆಳುಲೋಹ, ಬಟ್ಟೆಗಳ ಮೇಲೆ

ಹಸ್ತಗಳಿಂದ ರಚಿತವಾದ ಕವಿ ಪಂಡಿತರ ಜ್ಞಾನ ಭಂಡಾರವೇ ಹಸ್ತಪ್ರತಿಗಳಾಗಿವೆ. ಅಲ್ಲದೇ ಭಾರವಲ್ಲದ ವಸ್ತುಗಳ ಮೇಲೆ ರಚನೆಗೊಂಡಿದ್ದರಿಂದ ಇವುಗಳ ಸಂಚಲನ, ಸಂಪರ್ಕಕ್ಕೆ ಅನುಕೂಲವಾಯಿತು. ಬೇರೆ ಬೇರೆ ಭಾಷೆಯ ಜ್ಞಾನ ಸಂಪತ್ತನ್ನು, ಪಾಂಡಿತ್ಯವನ್ನು ಬಳಸಿಕೊಳ್ಳುವ ಇನ್ನೂ ಹೆಚ್ಚಿನ ಜ್ಞಾನಪೂರಕವಾದ ಹಸ್ತಪ್ರತಿ ಗ್ರಂಥಗಳನ್ನು ರಚಿಸಲು, ಸಂಗ್ರಹಿಸಲು ಸಹಕಾರಿಯಾಯಿತು. ಹಸ್ತಪ್ರತಿಗಳನ್ನು ಅವುಗಳ ಪ್ರತಿಕೃತಿಗಳನ್ನು ಮಾಡಿಸುತ್ತ ಬಂದಿರುವುದರಿಂದಲೇ ಜ್ಞಾನಾರ್ಜನೆಗೂ ನಮ್ಮ ಪರಿಸರ, ಇತಿಹಾಸ, ಸಂಸ್ಕೃತಿಗಳನ್ನು ಅರಿಯಲು ಸಹಾಯವಾಗಿದೆ.

ಕನ್ನಡದ ಆದಿಕವಿ ಪಂಪನ ಆದಿಪುರಾಣವೇ ಕನ್ನಡದ ಮೊದಲ ತಾಳೆಗರಿ ಹಸ್ತಪ್ರತಿ. ಇದಕ್ಕೆ ನಿರ್ದಿಷ್ಟ ದಾಖಲೆಗಳನ್ನು ಕೊಡುವುದು ಕಷ್ಟವಾದರೂ ಪಂಪನಿಗಿಂತ ಪೂರ್ವದಲ್ಲಿ ಕವಿಗಳಿರುವ ಬಗೆಗೆ ಮಾಹಿತಿ ಇಲ್ಲವಾದದ್ದರಿಂದ ಪಂಪನನ್ನೇ ಕನ್ನಡದ ಮೊದಲ ಕವಿಯಾಗಿ ಸ್ವೀಕರಿಸಿದ್ದೇವೆ. ಆ ಕಾರಣ ಇವನ "ಆದಿಪುರಾಣ" ಕೃತಿಯೇ ಮೊದಲ ಹಸ್ತಪ್ರತಿ ಎಂದು ಊಹಿಸಬಹುದಾಗಿದೆ. ಅಂತೆಯೇ ನಾಗವರ್ಮನ "ವರ್ಧಮಾನ ಪುರಾಣ" ೧೫೫೩ರಲ್ಲಿ ರಚಿತಗೊಂಡ ಈ ಕೃತಿ ಕಾಗದ ಹಸ್ತಪ್ರತಿಗಳಲ್ಲಿಯೇ ಅತ್ಯಂತ ಪುರಾತನದ್ದು ಎಂದು ಡಾ. ಬಿ.ಕೆ. ಹಿರೇಮಠ ಅವರು ತಮ್ಮ "ಕನ್ನಡ ಹಸ್ತಪ್ರತಿಗಳು" ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಇದನ್ನು ಗಮನಿಸಿದಾಗ ಕಾಗದ ಹಸ್ತಪ್ರತಿಗಳ ಪ್ರಾಚೀನತೆಯನ್ನು ೧೪-೧೫ನೇ ಶತಮಾನ ಎಂದುಕೊಳ್ಳಬಹುದಾಗಿದೆ. ಇಷ್ಟು ಪ್ರಾಚೀನತೆಯನ್ನು ಹೊಂದಿರುವ ಈ ಹಸ್ತಪ್ರತಿಗಳು ಇವುಗಳ ವಿಶೇಷತೆಯನ್ನು ಸಾರಿಹೇಳುತ್ತದೆ. ೧೯ನೇ ಶತಮಾನದವರೆಗೂ ರಚನೆಗೊಂಡಿರುವುದು ಯಂತ್ರಗಳ ಬಳಕೆಯ ಕಾಲವಾದ ಜನಸಾಮಾನ್ಯರು ಹಸ್ತಪ್ರತಿಯನ್ನು  ಆಡುಭಾಷೆಯಲ್ಲಿ ಓಲೆಕಟ್ಟು, ಹೊತಿಗಿ, ನೀಲಿ ಹೊತಿಗಿ ಎಂದು ಕರೆಯುತ್ತಿದ್ದರು. ಪುರಾಣ ಕಾವ್ಯಗಳು, ಕಥೆಗಳು, ಅಲಂಕಾರ ಗ್ರಂಥಗಳು, ಚಂಪೂ ಕಾವ್ಯಗಳು ರಗಳೆಗಳು, ವ್ಯಾಕರಣ ಗ್ರಂಥಗಳು, ವೈದ್ಯ, ಪಾಕ, ಜ್ಯೋತಿಷ್ಯಶಾಸ್ತ್ರಗಳು, ಕಾಮಶಾಸ್ತ್ರ, ನಾಟ್ಯಶಾಸ್ತ್ರಗಳು, ಗಣಿತಶಾಸ್ತ್ರ, ವಚನಗಳು ಇನ್ನೂ ಹಲವಾರು ಆಯಮಗಳಲ್ಲಿ ಕನ್ನಡದ ಹಸ್ತಪ್ರತಿಗಳು ರಚನೆಗೊಂಡಿವೆ. ಈ ಹಸ್ತಪ್ರತಿಗಳು ಕಾಲದುದ್ದಕ್ಕೂ ಪ್ರತಿಗೊಳ್ಳುತ್ತಾ, ಸಾಗುತ್ತಾ ಬಂದಿವೆ.

ಕನ್ನಡ ನಾಡಿನ ಶಾತವಾಹನ, ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟರು, ಹೊಯ್ಸಳ, ವಿಜಯನಗರ, ಮೈಸೂರು, ಕೆಳದಿ ಈ ಮುಂತಾದ ಅರಸು ಮನೆತನದವರು ಬೌದ್ಧ, ಜೈನ, ಶೈವ, ವೀರಶೈವ, ವೈಷ್ಣವ ಧರ್ಮಗಳಿಗೆ ಆಶ್ರಯ ಕೊಟ್ಟು ಹಸ್ತಪ್ರತಿಗಳ ಪೋಷಣೆ ಮತ್ತು ಅಭಿವೃದ್ಧಿಗಳಿಗೆ ಕಾರಣರಾಗಿದ್ದಾರೆ. ನಾಡಿನ ವಿವಿಧ ಧರ್ಮದ ಮಠಮಾನ್ಯಗಳು, ಕನ್ನಡ ನಾಡಿನ ಜನತೆ ಮತಪ್ರಚಾರ, ವಿದ್ಯಾಪ್ರಸಾರ, ಸ್ವ-ಪ್ರಯೋಜನ ಪರಹಿತಕ್ಕಾಗಿಯೂ ಹಸ್ತಪ್ರತಿಗಳ ನಿರ್ಮಾಣದ ಜೊತೆಗೆ ಪೋಷಣೆಯನ್ನು ಮಾಡುತ್ತ ಬಂದಿವೆ. ಹೀಗೆ ರಾಜಮನೆತನಗಳು, ಧರ್ಮಗಳು, ಜೊತೆಗೆ ಸಾಮಾನ್ಯರೂ ಕೂಡ ಹಸ್ತಪ್ರತಿಗಳ ನಿರ್ಮಾಣ, ಪ್ರಸಾರ ಹಾಗೂ ಪೋಷಣೆಯ ಕಾರ್ಯವನ್ನು ನಿರ್ವಹಿಸಿದ್ದಾರೆ.

ಹಸ್ತಪ್ರತಿಗಳ ನಿರ್ಮಾಣವು ಅಂದರೆ ಕಾವ್ಯ, ಶಾಸ್ತ್ರ ಮುಂತಾಗಿ ಯಾವುದೇ ಬರವಣಿಗೆಯನ್ನು ಯಾವ ವಸ್ತುವಿನ ಮೇಲೆ ಬರೆಯಲಾಗುತ್ತವೆಯೋ ಅದನ್ನು ಲೇಖ್ಯ ವಸ್ತು ಎನ್ನಲಾಗುತ್ತದೆ. ಇಲ್ಲಿ ತಾಳೆಗರಿ

ಮತ್ತು ಕಾಗದಗಳು ಲೇಖ್ಯ ವಸ್ತುಗಳಾಗಿವೆ. ಅಕ್ಷರಗಳನ್ನು ಮೂಡಿಸಲು ನೆರವಾಗುವಂತೆ ತಾಳೆಗರಿಗಳನ್ನು ಒಂದೇ ಅಳತೆಯಲ್ಲಿ ಕತ್ತರಿಸಿ, ಹದಗೊಳಿಸಲಾಗುತ್ತದೆ. ಅನಂತರ ಈ ಗರಿಗಳನ್ನು ಗ್ರಂಥಗಳಾಗಿಸಲು ಇವುಗಳ ಮೇಲೆ ರಂಧ್ರಗಳನ್ನು ಹಾಕಿ ಅದರಿಂದ ದಾರಗಳನ್ನು ತೂರಿಸಿ, ತಾಳೆಗರಿಗಳ ಕಟ್ಟುಗಳನ್ನು ತಯಾರಿಸಿಕೊಳ್ಳಲಾಗುತ್ತಿತ್ತು. ಇನ್ನು ಇದರ ಮೇಲೆ ಬರೆಯಲು, ತಾಮ್ರ, ಕಬ್ಬಿಣದಂತಹ ಲೋಹಗಳಿಂದ ರಚಿತವಾದ ಕಂಠಗಳನ್ನು ಬಳಸಿ, ಬರವಣಿಗೆಯನ್ನು ಮಾಡಲಾಗುತ್ತಿತ್ತು. ಅಂದರೆ ಈ ಕಂಠಗಳಿಂದ ತಾಳೆಗರಿಗಳ ಮೇಲೆ ಗೀರಿ, ಅಕ್ಷರಗಳನ್ನು ಮೂಡಿಸಲಾಗುತ್ತಿತ್ತು. ಇಲ್ಲವಾದಲ್ಲಿ ಕುಂಚ, ನವಿಲುಗರಿಗಳಂತಹ ವಸ್ತುಗಳನ್ನು ಬಳಸಿ, ಬಣ್ಣ ಅಥವಾ ಮಸಿಗಳಲ್ಲಿ ಅದ್ದಿ, ಅಕ್ಷರಗಳನ್ನು ಬರೆಯಲಾಗುತ್ತಿತ್ತು. ಕಂಠಗಳಿಂದ ಗೀರಿ ಬರೆದ ಅಕ್ಷರಗಳು ಸ್ಫುಟವಾಗಿ ಕಾಣಿಸಲು ಅದರಲ್ಲಿ ಕಪ್ಪನ್ನು ತುಂಬಲಾಗುತ್ತಿತ್ತು(ಕಪ್ಪು ಅಂದರೆ- ನೈಸರ್ಗಿಕವಾಗಿ ವಿವಿಧ ರೀತಿಗಳಿಂದ ತಯಾರಿಸಿಕೊಂಡ ಮಸಿ ಅಥವಾ ಕಾಡಿಗೆ). ಇದು ತಾಳೆಗರಿಗಳ ಮೇಲಿನ ರಚನೆಯಾದರೆ, ಇದರ ನಂತರದ್ದೇ ಕಾಗದ, ಕಾಗದಗಳಲ್ಲಿ ಮಸಿ/ವರ್ಣಗಳಿಂದ ಅಕ್ಷರಗಳನ್ನು ಲೇಖನಿ ಇಲ್ಲವೆ ಕುಂಚದಿಂದ ಬರೆಯಲಾಗಿದೆ.

ಒಂದು ಹಸ್ತಪ್ರತಿ ಪೂರ್ಣಗೊಳ್ಳಬೇಕಾದರೆ ಅಲ್ಲಿ ಹಲವಾರು ಜನರ ಪರಿಶ್ರಮವಿರುತ್ತಿತ್ತು. ಓಲೆಕಾರರು, ತಾಳೆಗರಿಗಳನ್ನು(ಓಲೆ) ಹದಗೊಳಿಸಿ ಒಂದೇ ಅಳತೆಗೆ ಸಮಗೊಳಿಸಿ ತಯಾರಿಸಿಕೊಡುತ್ತಿದ್ದರು. ಅಕ್ಕಸಾಲಿಗರು ಅಥವಾ ಲೋಹಕಾರರು ಕಂಟಗಳನ್ನು ತಯಾರಿಸಿಕೊಡುತ್ತಿದ್ದರು. ಕಂಟದ ತುದಿಯು ಮೊಳೆಯಂತೆ ಚೂಪಾಗಿಯೂ, ಹಿಡಿಕೆಯಾಗಿಯೂ, ಅತ್ಯಂತ ಕಲಾತ್ಮಕವಾಗಿಯೂ ಮಾಡಿಕೊಡುತ್ತಿದ್ದರು. ಇಲ್ಲಿ ಮುಖ್ಯ ಪಾತ್ರವೆಂದರೆ ಬರೆಪಕಾರರದ್ದು. ಬರಹವನ್ನು ಒಂದು ಕಲೆಯಾಗಿ ಅಭ್ಯಸಿಸಿ ಬರೆಪಗಾರಿಕೆ ಯನ್ನು ಮುಂದುವರಿಸಿದವರಿವರು. ಇಲ್ಲಿ ಕೆಲವು ಬಾರಿ ಸ್ವತಃ ಕವಿಗಳೇ ಹಸ್ತಪ್ರತಿಗಳನ್ನು ರಚಿಸಿದ್ದಾರೆ. ಹೀಗೆ ಕಂಠದಿಂದ ರಚಿತವಾದ ಅಕ್ಷರಗಳಿಗೆ ಲಿಪಿಕಾರರು ಕಪ್ಪನ್ನು ಲೇಪಿಸುತ್ತಿದ್ದರು. ನೈಸರ್ಗಿಕವಾಗಿ ಕಪ್ಪನ್ನು ತಯಾರಿಸಿಕೊಂಡು ಬೆಳ್ಳಿಕಡ್ಡಿಯಿಂದ ಜಾಗ್ರತವಾಗಿ ಅಕ್ಷರಗಳಲ್ಲಿ ಲೇಪಿಸುತ್ತಿದ್ದರು. ಕೊನೆಯಲ್ಲಿ ತಯಾರಾದ ಈ ಹಸ್ತಪ್ರತಿಯನ್ನು ಜಾಗೃತವಾಗಿ ಸಂರಕ್ಷಿಸಲು, ಈ ಹಸ್ತಪ್ರತಿ ಕಟ್ಟನ್ನು ಇಡುವ ಕಟ್ಟಿಗೆಯ ಫಲಕಗಳನ್ನು ಬಡಿಗರು ಸುಂದರವಾಗಿ ಅಚ್ಚುಕಟ್ಟಾಗಿ ತಯಾರಿಸಿಕೊಡುತ್ತಿದ್ದರು. ಇಲ್ಲಿ ಈ ಫಲಕಗಳು ಖಾಲಿ ಖಾಲಿ ಎನ್ನಿಸುತ್ತಿರುವಂತೆಯೇ, ಈ ಫಲಕಗಳ ಮೇಲೆ ಬಡಿಗರು ನಕ್ಷೆ ಇಲ್ಲವೆ ಚಿತ್ರಕಾರರು ಅಥವಾ ಆ ಗ್ರಂಥಕ್ಕೆ ಸಂಬಂಧಿಸಿದ ಚಿತ್ರಗಳನ್ನು ಚಿತ್ರಗಾರರಿಂದ ಚಿತ್ರಿಸಿ, ಹಸ್ತಪ್ರತಿಗಳ ಸೌಂದರ್ಯಕ್ಕೆ ಮೆರಗನ್ನು ನೀಡಲಾಗುತ್ತಿತ್ತು.

ಜ್ಞಾನಭಂಡಾರಗಳಾದ ಹಸ್ತಪ್ರತಿಗಳು, ಸಾಹಿತ್ಯರಚನೆಗೊಂದಿಗೆ ಚಿತ್ರರಚನೆಯನ್ನು ಮಾಡಿರುವುದು ಗಮನಾರ್ಹ ವಿಷಯ. ಕಲೆಯ ಮೂಲ ಉದ್ದೇಶವೇ ಸೌಂದರ್ಯೋಪಾಸನೆಯಾಗಿರುವುದರಿಂದ, ಬರವಣಿಗೆಯೇ ಮೂಲವಾಗಿದ್ದ ಹಸ್ತಪ್ರತಿಗಳಲ್ಲಿ, ಗ್ರಂಥಗಳ ಆರಂಭದಲ್ಲಿ ವಿವಿಧ ವಿನ್ಯಾಸದ ಶ್ರೀಕಾರ ಗಳನ್ನು ಹಾಕುವುದು, ಗ್ರಂಥಾಂತ್ಯದಲ್ಲಿ ಜಾಗ ಉಳಿದಿರುವಾಗ ಕೆಲವು ಅಲಂಕಾರಿಕ ನಕ್ಷಾ ಚಿತ್ರಗಳನ್ನು ಚಿಕ್ಕದಾಗಿ ರಚಿಸಿರುವುದನ್ನು ಕಾಣಬಹುದಾಗಿದೆ. ಅಲ್ಲದೆ ಗ್ರಂಥದಲ್ಲಿರುವ ವಿಷಯಕ್ಕೆ ಸಂಬಂಧಿಸಿದ

ಹಲವಾರು ಚಿತ್ರಗಳು ತಾಳೆಗರಿ ಇಲ್ಲವೆ ಕಾಗದದ ಮೇಲೆ ರಚನೆಯಾಗಿವೆ. ಹಾಗೆಯೇ ಹಸ್ತಪ್ರತಿಗಳ ರಕ್ಷಣೆಗಾಗಿ ಕಟ್ಟಿಗೆಯ ಫಲಕಗಳನ್ನು ಬಳಸಲಾಗುತ್ತಿದ್ದು ಆ ಫಲಕಗಳಲ್ಲಿಯೂ ಚಿತ್ರಕಾರನು ತನ್ನ ನೈಪುಣ್ಯತೆಯನ್ನು ತೋರಿಸುವಂತಹ ಅಲಂಕಾರಿಕ ವರ್ಣ ನಕ್ಷಾ ಚಿತ್ರಗಳು, ಗ್ರಂಥಗಳಿಗೆ ಸಂಬಂಧಿಸಿದ ವರ್ಣಚಿತ್ರಗಳನ್ನು ರಚಿಸಲಾಗಿದೆ. ಒಟ್ಟಿನಲ್ಲಿ ಅಗತ್ಯಕ್ಕನುಸಾರವಾಗಿ, ಸೌಂದರ್ಯಾಭಿವೃದ್ಧಿಗಾಗಿ ಹಸ್ತಪ್ರತಿಗಳಲ್ಲಿ ಚಿತ್ರರಚನೆಗಳನ್ನು ಮಾಡಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಆದರೂ ಒಟ್ಟು ಹಸ್ತಪ್ರತಿಗಳಲ್ಲಿ ಚಿತ್ರಗಳನ್ನೊಳಗೊಂಡ ಹಸ್ತಪ್ರತಿಗಳು ಅತಿ ವಿರಳವಾಗಿವೆ.

ಕನ್ನಡ ಸಾಹಿತ್ಯದೊಂದಿಗೆ ಹಲವು ಜ್ಞಾನ ಕ್ಷೇತ್ರಗಳ ಒಳಗೊಂಡಿರುವ ಈ ಹಸ್ತಪ್ರತಿಗಳು ಕನ್ನಡ ನಾಡಿನ ಮಹತ್ವದ ಆಸ್ತಿ. ಅನಾದಿ ಕಾಲದಿಂದ ಇಂದಿನವರೆಗೂ ಇವು ಹೊತ್ತು ತಂದಿರುವ ಜ್ಞಾನಸಂಪತ್ತು ಅವಿಸ್ಮರಣೀಯ. ಕನ್ನಡ ನಾಡಿನ ಜನತೆ ಬರಹಗಾರರಾಗಿ, ಪೋಷಕರಾಗಿ, ಕರ್ನಾಟಕವನ್ನು ಹಸ್ತಪ್ರತಿ ಭಂಡಾರವಾಗಿಸಿದ್ದಾರೆ.

**ಜಿಲ್ಲೆಯ ಹಸ್ತಪ್ರತಿ ನೆಲೆಗಳು**

ಇನ್ನು ಬಾಗಲಕೋಟೆ ಜಿಲ್ಲೆಗೆ ಬರುವುದಾದರೆ, ಕನ್ನಡ ಹಸ್ತಪ್ರತಿ ಭಂಡಾರಕ್ಕೆ ಜಿಲ್ಲೆಯ ಕೊಡುಗೆಯು ಅನನ್ಯವಾದದ್ದು. ಶಿವಯೋಗ ಮಂದಿರ, ಕೂಡಲಸಂಗಮ, ಚಿತ್ತರಗಿ, ಇಲಕಲ್, ಬಾಗಲಕೋಟೆಯ ಟೀಕಿನ ಮಠ, ಮುರನಾಳ, ಬಬಲಾದಿ, ಸೀತಿಮನಿಯಂಥಹ ಅವಧೂತ ಕ್ಷೇತ್ರಗಳು, ಜಮಖಂಡಿ, ತೇರದಾಳ, ಮಹಾಲಿಂಗಪೂರದಂತಹ ವೀರಶೈವಜಾಗೃತ ಕೇಂದ್ರಗಳು ಕನ್ನಡ ಹಸ್ತಪ್ರತಿಗಳು ಹುಟ್ಟುವಲ್ಲಿ ಲಿಪೀಕರಣಗೊಳ್ಳುವಲ್ಲಿ ಪೋಷಣೆ ಮತ್ತು ಪ್ರಸರಣಗೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸುತ್ತ ಬಂದಿವೆ. ಇತ್ತೀಚೆಗೆ ಮಾಚಕನೂರಿನಲ್ಲಿಯೂ ಹಲವಾರು ಹಸ್ತಪ್ರತಿಗಳು ದೊರೆತಿವೆ(ಜಿಲ್ಲೆಯಲ್ಲಿ ಸಣ್ಣಾಟ, ದೊಡ್ಡಾಟ, ಲಾವಣಿ, ಮಾಟ-ಮಂತ್ರ, ಆಯುರ್ವೇದ, ಶಿಲ್ಪಶಾಸ್ತ್ರದಂತಹ ಕೃತಿಗಳು ಹಾಗೂ ಕರ್ತೃಗಳು ಹೇರಳವಾಗಿ ಸಿಗುತ್ತಾರೆ).

ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಸಂಪನ್ಮೂಲ ಕೇಂದ್ರವು ೨೦೦೪ರಿಂದ ೨೦೦೭ರ ವರೆಗೆ ನಡೆಸಿದ ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ ಹಾಗೂ ದಾಖಲೀಕರಣ ಯೋಜನೆಯಡಿಯಲ್ಲಿ ಬಾಗಲಕೋಟೆ ಜಿಲ್ಲೆಯೊಂದರಲ್ಲಿ ४,೦೭೫ ಹಸ್ತಪ್ರತಿಗಳು ಲಭ್ಯವಾಗಿವೆ. ಇವು ಜಿಲ್ಲೆಯ ಹಲವು ಮಹತ್ವದ ಚಾರಿತ್ರಿಕ ಸಂಗತಿಗಳಿಗೆ ಹೊಸ ಸಾಕ್ಷಿಯಾಗಿವೆ. ಈ ಹಸ್ತಪ್ರತಿಗಳ ಸ್ಥೂಲ ಅಧ್ಯಾಯನಕ್ಕೊಳಪಡಿಸಲಾಗಿ, ಒಟ್ಟು ೨೮ ಜನ ಹಸ್ತಪ್ರತಿ ಲಿಪಿಕಾರರು ಹಾಗೂ ಪೋಷಕರು ದೊರೆಯುತ್ತಾರೆ. ಇಲ್ಲಿ ಜಿಲ್ಲೆಯಲ್ಲಿ ದೊರೆತ ಒಟ್ಟು ಹಸ್ತಪ್ರತಿಗಳ ಸಂಖ್ಯೆ, ಲಿಪಿಕಾರರು ಹಾಗೂ ಪೋಷಕರ ಸಂಖ್ಯೆಯನ್ನು ಗಮನಿಸಿದಾಗ ಒಂದು ವಿಷಯ ಸ್ಪಷ್ಟವಾಗುತ್ತದೆ. ಜಿಲ್ಲೆಯಲ್ಲಿ ನಡೆದ ಗ್ರಂಥಗಳ ರಚನೆ, ಜೀರ್ಣ ಹಸ್ತಪ್ರತಿಗಳ ಹೊಸ ಬರವಣಿಗೆ, ತಮ್ಮಲ್ಲಿ ಇಲ್ಲದಿರುವ ಕೃತಿಗಳ ಪ್ರತಿ ಮಾಡುವಿಕೆ, ಸ್ಥಳೀಯ ಕೃತಿ ಕರ್ತೃರ ಗ್ರಂಥಗಳನ್ನು ಪ್ರತಿಮಾಡಿಸಿ ಬೇರೆ ಗ್ರಂಥಾಲಯಗಳಿಗೆ ಕಳಿಸುವುದು, ಬೇರೆ ಪ್ರದೇಶಗಳಲ್ಲಿ ರಚಿತವಾಗಿರುವ ಹಸ್ತಪ್ರತಿಗಳನ್ನು ತಮ್ಮಲ್ಲಿಗೆ ತರಿಸಿಕೊಳ್ಳುವುದು ಇತ್ಯಾದಿಗಳ ಕಾರಣದಿಂದ ಜಿಲ್ಲೆಯಲ್ಲಿ ದೊರೆತ ಹಸ್ತಪ್ರತಿಗಳೆಲ್ಲವೂ ಇಲ್ಲಿಯೇ

ರಚಿತವಾದವು ಎಂದು ಹೇಳಲಾಗುವುದಿಲ್ಲ. ಇಲ್ಲಿ ರಚನೆಗೊಂಡ ಹಸ್ತಪ್ರತಿಗಳು ಬೇರೆಡೆಗಳಲ್ಲಿಯೂ ಸಂಗ್ರಹಿತವಾಗಿರುವ ಸಾಧ್ಯತೆ ಇರುವುದರಿಂದ, ಅಲ್ಲದೆ ನಡೆದಿರುವ ಹಸ್ತಪ್ರತಿಗಳ ಪೋಷಣೆಯ ಕಾರ್ಯದಿಂದ ಹಸ್ತಪ್ರತಿಗಳೆಲ್ಲವೂ ಒಂದೊಂದೆಡೆಗೆ ಪೋಷಣೆ ಪಡೆಯುತ್ತಿರುವ ಕಾರಣದಿಂದಾಗಿ ನಿರ್ದಿಷ್ಟ ಅಂಕಿ-ಅಂಶಗಳನ್ನು ಕೊಡುವುದು ಬಹು ಕಷ್ಟದ ಸಂಗತಿಯಾಗಿದೆ.

ತ್ರೈಲೋಕ್ಯ ಕೃತಿಯಲ್ಲಿ ಡಾ. ವೀರೇಶ ಬಡಿಗೇರ ಅವರು ಬರೆದ "ಬಾಗಲಕೋಟೆ ಜಿಲ್ಲೆಯ ಹಸ್ತಪ್ರತಿ ಲಿಪಿಕಾರರ ಮತ್ತು ಪೋಷಕರ ಪರಂಪರೆ" ಲೇಖನದಲ್ಲಿ ಜಿಲ್ಲೆಯ ೬ ತಾಲ್ಲೂಕುಗಳ ಲಿಪಿಕಾರರು ಹಾಗೂ ಪೋಷಕರ ಹೆಸರು ಹಾಗೂ ಕೃತಿಗಳ ವಿವರಗಳನ್ನು ತಾಲ್ಲೂಕುವಾರು ವಿವರಿಸಲಾಗಿದೆ.

"ಬಾಗಲಕೋಟೆ ತಾಲ್ಲೂಕಿನ ಬಸವಲಿಂಗಯ್ಯ "ಅನುಭವಶಿಖಾಮಣಿ" ಗ್ರಂಥವನ್ನು, ಶಿವರುದ್ರಯ್ಯನ "ಷಟಸ್ಥಲದ ವಚನಗಳು", ಸಿದ್ಧರಾಮನ "ಕಾಡಸಿದ್ಧೇಶ್ವರನ ವೀರಶೈವ ಷಟಸ್ಥಲ" ಎಂಬ ಕೃತಿಗಳನ್ನು ಲಿಪಿಗೊಳಿಸಿದ್ದಾರೆ. ಇದೇ ತಾಲ್ಲೂಕಿನ ಬಸವಲಿಂಗಪ್ಪ ರಾಚಪ್ಪ ಕಿಣಗಿ, ಸಿದ್ಧರಾಮನ(೧೧೬೦) ಷಟಸ್ಥಲದ ವಚನಗಳನ್ನು ಜಂಗಮಶೆಟ್ಟಿ "ಸುಗ್ರೀವ ವಿಜಯ", ಬಸವಲಿಂಗಪ್ಪ ಅಂಗಡಿ "ಚನ್ನಬಸವ ಪುರಾಣ"ವನ್ನು ಲಿಪಿಕಾರರಿಂದ ಬರೆಯಿಸಿದ ಪೋಷಕರಾಗಿದ್ದಾರೆ.

ಬೀಳಗಿ ತಾಲ್ಲೂಕಿನ ಈರಸಂಗಯ್ಯ "ರಾಜಶೇಖರ ವಿಳಾಸ" ಎಂಬ ಕೃತಿಯನ್ನು ಓದಿಸುವ, ಬಸಪ್ಪ "ಕಪೋತಚರಿತೆ", ನೂರೊಂದಯ್ಯನು ಕುಮಾರವ್ಯಾಸ ಭಾರತದ "ವಿರಾಟಪರ್ವ"ವನ್ನು, ಗಲಗಲಿಯ ಮಡಿವಾಳ ಎಂಬುವವನು "ಸಿಂಗಿರಾಜನ ಅಮಲಬಸವ ಚಾರಿತ್ರ್ಯ" ಎಂಬ ಕೃತಿಗಳನ್ನು ಲಿಪಿಗೊಳಿಸಿದ ಲಿಪಿಕಾರರು. ಪ್ಯಾಟೆಬಸಪ್ಪ ಎಂಬುವವರು ಚನ್ನಪ್ಪ ಕವಿಯ "ಶರಣಲೀಲಾಮೃತ", ಅಕ್ಕಸಾಲೇರ ಜೀವಣ್ಣ ಮಹಾಲಿಂಗರಂಗನ "ಅನುಭವಾಮೃತ" ಕೃತಿಗಳನ್ನು ಬರೆಯಿಸಿರುವುದರ ಮೂಲಕ ಪೋಷಕರಾಗಿದ್ದಾರೆ.

ಬಾದಾಮಿ ತಾಲ್ಲೂಕಿನ ತೋಟಯ್ಯ, ಚೊಳಚಗುಡ್ಡದ ದಸ್ತೂರಿಮರಿ ದೇವರು, ಚೊಳಚಗುಡ್ಡದ ಮರಿಲಿಯ್ಯ, ರುದ್ರಗೌಡ, ಚೊಳಚಗುಡ್ಡದ ಸಾರಂಗಯ್ಯ, ಕೆರೂರಿನ ಹುಳಸೆಮಾನೆ ದೇವಪ್ಪ ಎಂಬುವವರು ಕ್ರಮವಾಗಿ "ಶರಣಲೀಲಾಮೃತ", "ಚಿಂತಾಮಣಿ ಪುಸ್ತಕ", ಲಕ್ಷ್ಮೀಶನ "ಜೈಮಿನಿಭಾರತ", ಜ್ಯೋತಿರ್ಮಯ ಶಾಂಭವವಿಜ್ಞಾನ ದೀಕ್ಷಾಬೋಧೆ, "ಅಭಿಮನ್ಯು ಕಾಳಗ" ಎಂಬ ಕೃತಿಗಳನ್ನು ರಚಿಸಿದ್ದಾರೆ. ಮುಧೋಳ ತಾಲ್ಲೂಕಿನ ಮಹಾಲಿಂಗಪುರದ ಕಂಬಿ ಮಹಾಲಿಂಗಯ್ಯ, ತರಳ ಶಿವಬಸವ, ಮಾಚಕನೂರಿನ ಷಡದಯ್ಯ ಕ್ರಮವಾಗಿ "ಅರವತ್ತ್ಮೂರು ಪುರಾತನದ ಪುರಾಣ", "ಶೂನ್ಯ ಸಂಪಾದನೆ", "ಪ್ರೌಢದೇವರಾಯನ ಕಾವ್ಯ" ಎಂಬ ಹಸ್ತಪ್ರತಿಗಳನ್ನು ಲಿಪಿಗೊಳಿಸಿದ್ದಾರೆ. ತಾಲ್ಲೂಕಿನ ಮಂಟೂರಿನ ಮಲ್ಲಣ್ಣ ೧೮೦೩ರಲ್ಲಿಯೇ ಪಂಪನ "ಆದಿಪುರಾಣ"ವನ್ನು ಲಿಪಿ ಮಾಡಿರುವುದು ಮಹತ್ವದ ಸಂಗತಿ.

ಜಮಖಂಡಿ ತಾಲ್ಲೂಕಿನ ತೇರದಾಳದ ಬಸವಲಿಂಗ ನಿರಂಜನ ಶಿವಯೋಗಿ, "ಆತ್ಮಲಿಂಗ ಪ್ರಣಮ ಸಂಯೋಗ ಸ್ಥಲದ ತ್ರಿವಿಧಿ" ಗ್ರಂಥವನ್ನು, ತೇರವಾಳದ ಮೂಗಯ್ಯ ವೀರಸಂಗಯ್ಯನ "ಸಾಂಗತ್ಯ" ಗ್ರಂಥವನ್ನು, ರಬಕವಿಯ ಮಡಿವಾಳಯ್ಯನು "ಬಸವೇಶ್ವರ ಸಹಸ್ರನಾಮ" ಕೃತಿಯನ್ನು, ಜಮಖಂಡಿಯ

ಮುರಿಗೆಪ್ಪ ಅವರು "ಭಾವಚಿಂತಾರತ್ನ", ಸಿದ್ದವೀರಪ್ಪ ಅದೃಷ್ಯಪ್ಪ "ಏಕೋತ್ತರ ಶತಸ್ಥಲ ಟೀಕೆ" ಎಂಬ ಕೃತಿಗಳನ್ನು ಲಿಪಿಗೊಳಿಸಿದ್ದಾರೆ.

ಹುನಗುಂದ ತಾಲ್ಲೂಕಿನ ಹಿರೇಬಾದವಾಡಗಿಯ ಶಿವಯ್ಯ ರಾಘವಾಂಕನ "ಸಿದ್ದರಾಮೇಶ್ವರ ಕಾವ್ಯವನ್ನು", ಚತುರ್ಮುಖ ಬೊಮ್ಮರಸನ "ರೇವಣಸಿದ್ದೇಶ್ವರ ಪುರಾಣ" ಕೃತಿಯನ್ನು ಲಿಪಿಸಿದ್ದಾನೆ. ಹಿರೇವಾದವಾಡಗಿಯ ಮಠದ ಗಂಗಾಧರಯ್ಯ "ಶಿಲ್ಪಶಾಸ್ತ್ರ ಟೀಕು" ಕೃತಿಯನ್ನು, ಹುನಗುಂದದ ಗುರುಬಸಯ್ಯ "ಶಿವಕವಚ"ದ ಪದ್ಯಗಳನ್ನು ಹುನಗುಂದದ ಪುರಾಣದ ಸೂರಪ್ಪಯ್ಯ "ವೀರಶೈವಾಮೃತ ಪುರಾಣ"ವನ್ನು, ಚಿತ್ತರಗಿಯ ಬಸಯ್ಯ ಗುಣಕಲ್ಲುಮಠ "ಕರಣಹಸಿಗೆ"ಯನ್ನು, ಮುಪ್ಪಿನ ಬಸವಲಿಂಗಸ್ವಾಮಿಗಳು "ಬಸವಚರಿತೆ"ಯನ್ನು, ಬಿಷ್ಟರೆಡ್ಡಿ ಸಂಗನಬಸಪ್ಪ "ರಾಘವೇಶ್ವರ ಕಾವ್ಯ"ವನ್ನು ಕೆರೂರಿನ ಬಾಗೂರುಬಸವ "ಉದ್ದರಣೆ ವಾಚ್ಯ" ಎಂಬ ಗದ್ಯ ಕೃತಿಯನ್ನು(ಅಮೀನಗಡದ) ಮುರುಗೆಪ್ಪ "ರಾಜಶೇಖರ ವಿಳಾಸ" ಎಂಬ ಕೃತಿಯನ್ನು ಕೂಡಲಸಂಗಮದ ಶರಭಯ್ಯನು "ಸಿಂಗಿರಾಜನ ಅಮಲಬಸವ ಚಾರಿತ್ರ್ಯ"ವನ್ನು ಕಮತಗಿಯ ಶಂಕರಪ್ಪ ಕಡ್ಲೀಮಟ್ಟ "ಹೇಮರಡ್ಡಿ ಮಲ್ಲಮ್ಮನ ಪುರಾಣ", ಕಲಬುರ್ಗಿ ಶರಣಬಸವೇಶ್ವರ ಪುರಾಣ ಕೃತಿಗಳನ್ನು, ಹಳ್ಳೂರಿನ ಶಿವರುದ್ರಪ್ಪ "ಕೈವಲ್ಯ ಪದ್ದತಿ" ಕೃತಿಯನ್ನು, ಹಳ್ಳೂರಿನ ಬಸವಣ್ಣಯ್ಯ "ಬಸವೇಶ್ವರ ಷಟಸ್ಥಲ" ವಚನಗಳನ್ನು ಲಿಪಿಗೊಳಿಸಿದ್ದಾರೆ. ಇಲ್ಲಿನ ಎಲ್ಲಾ ಲಿಪಿಕಾರರೂ ಕೂಡ ಇಂದಿನ ಬಾಗಲಕೋಟೆ ಜಿಲ್ಲೆಯವರೇ ಎಂಬುದು ಗಮನಾರ್ಹ."[೧೮]

ಹೀಗೆ ಈ ಹಸ್ತಪ್ರತಿಗಳ ಹರವು ಬಹು ವಿಸ್ತಾರವಾಗಿದೆ. ಜಿಲ್ಲೆಯೂ ಕೂಡ ನಾಡಿನ ಹಸ್ತಪ್ರತಿ ಭಂಡಾರಕ್ಕೆ ಅಮೂಲ್ಯ ಕೊಡುಗೆಗಳನ್ನಿಟ್ಟಿದೆ. ಜಿಲ್ಲೆಯನ್ನಾಳಿದ ರಾಜಮನೆತನಗಳು, ಮಠಮಾನ್ಯಗಳು, ಬಸದಿಗಳು, ಶ್ರೀಮಂತ ಮನೆತನಗಳು ಜಿಲ್ಲೆಯಲ್ಲಿ ಹಸ್ತಪ್ರತಿಗಳ ರಚನೆಗಳಿಗೆ ಆಶ್ರಯವನ್ನಿಟ್ಟು ಅವುಗಳ ಪೋಷಣೆಗೈದಿವೆ. ಅಂತೆಯೇ ಜಿಲ್ಲೆಯಲ್ಲಿ ಹಲವಾರು ಜನ ಲಿಪಿಕಾರರು ಇದ್ದಿರುವುದು ಜಿಲ್ಲೆಯ ಶೈಕ್ಷಣಿಕ ಶ್ರೇಷ್ಠತೆಯನ್ನು ಬಿಂಬಿಸುತ್ತದೆ. ಮಾತ್ರವಲ್ಲದೇ ಈ ಹಸ್ತಪ್ರತಿಗಳನ್ನು ಅತ್ಯಂತ ಪೂಜ್ಯಭಾವನೆಯಿಂದ ಆರಾಧಿಸಿರುವ ಹಲವಾರು ಐತಿಹ್ಯಗಳನ್ನು ಕಾಣಬಹುದಾಗಿದೆ. ಕಾಯಕಯೋಗಿ ಬಸವಣ್ಣನ ಆರಾಧಕರಾದ ಇಲಕಲ್ಲಿನ ಪರಮಪೂಜ್ಯ ವಿಜಯಮಹಾಂತಪ್ಪಗಳು ಬಸವಣ್ಣನವರ ವಚನದ ಕಟ್ಟುಗಳನ್ನು ಸದಾ ಬೆನ್ನಿಗೆ ಕಟ್ಟಿಕೊಂಡು ತಿರುಗಾಡುತ್ತಿರುವುದರ ಬಗೆಗೆ ಅವರ ಚರಿತ್ರೆಯಲ್ಲಿ ಕಾಣಬಹುದಾಗಿದೆ. ಇನ್ನು ಜಿಲ್ಲೆಯ ಪವಿತ್ರ ಸ್ಥಳವಾದ ಶಿವಯೋಗ ಮಂದಿರವು ಹಸ್ತಪ್ರತಿ ರಚನಾಕೇಂದ್ರವಾಗಿರುವುದಕ್ಕೆ ಉಲ್ಲೇಖಗಳು ದೊರೆಯುತ್ತವೆ. ಅಲ್ಲದೇ ಇಂದಿನವರೆಗೂ ಕೂಡ ಹಸ್ತಪ್ರತಿಗಳ ಪೋಷಣಾ ಕೇಂದ್ರವಾಗಿ ಕಾರ್ಯ ನಿರ್ವಹಿಸುತ್ತಲಿದೆ.

ಹಸ್ತಪ್ರತಿ ಕ್ಷೇತ್ರಕ್ಕೆ ತನ್ನದೇ ಆದ ಕೊಡುಗೆ ನೀಡಿದ ಜಿಲ್ಲೆಯು, ಹಸ್ತಪ್ರತಿಗಳ ಚಿತ್ರಕಲಾ ವಿನ್ಯಾಸದಲ್ಲಿಯೂ ತನ್ನ ಶ್ರೇಷ್ಠತೆಯನ್ನು ಉಳಿಸಿಕೊಂಡಿದೆ. ಮೊದಲೇ ತಿಳಿಸಿದಂತೆ ಅಗತ್ಯ,

---

೧೮. ಡಾ. ವೀರೇಶ ಬಡಿಗೇರ, ಜಿಲ್ಲೆಯ ಹಸ್ತಪ್ರತಿ ಲಿಪಿಕಾರರ ಮತ್ತು ಪೋಷಕರ ಪರಂಪರೆ, ತ್ರೈಲೋಕ್ಯ (ಸಂಸ್ಮರಣ ಸಂಪುಟ), ಪು. ೮೯-೯೯.

ಅನಿವಾರ್ಯತೆಗಳಿಗಾಗಿಯೋ ಅಥವಾ ಹಸ್ತಪ್ರತಿಗಳ ಸೌಂದರ್ಯ ಅಭಿವೃದ್ಧಿಗಾಗಿಯೋ ಚಿತ್ರಗಳ ರಚನೆಯಾಗಿರುವುದನ್ನು ತಿಳಿಯಬಹುದು. ಹಸ್ತಪ್ರತಿ ಗ್ರಂಥಗಳಲ್ಲಿ ಲಿಪಿಕಾರರ ಹೆಸರು ಮತ್ತು ಕಾಲಗಳನ್ನು ನಮೂದಿಸಲಾಗಿದ್ದು, ಆದರೆ ಚಿತ್ರಕಾರರ ಹೆಸರನ್ನು ಎಲ್ಲಿಯೂ ಉಲ್ಲೇಖಿಸಲಾಗಿಲ್ಲ. ಕೆಲವೆಡೆ ಲಿಪಿಕಾರರೇ ಚಿತ್ರಗಳನ್ನು ರಚಿಸಿರಬಹುದಾಗಿದ್ದು, ಇನ್ನೂ ಹಲವು ಸಂದರ್ಭಗಳಲ್ಲಿ ಚಿತ್ರಕಾರರಿಂದ ಚಿತ್ರಗಳನ್ನು ಬರೆಸಿರಬಹುದಾಗಿದೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಮೀಕ್ಷೆಯ ಪ್ರಕಾರ ೪,೦೭೫ ಹಸ್ತಪ್ರತಿಗಳು ದೊರೆತಿದ್ದರೂ ಸಹ, ಜಿಲ್ಲೆಯಲ್ಲಿ ಇವತ್ತಿಗೂ ಹಸ್ತಪ್ರತಿಗಳ ಸಂಗ್ರಹ ಕಂಡುಬರುವುದು ಎರಡು ಕಡೆಗಳಲ್ಲಿ. ಬಹಳ ಹಿಂದಿನಿಂದಲೂ ಹಸ್ತಪ್ರತಿ ರಚನೆ, ಪ್ರಸಾರದಂತಹ ಕಾರ್ಯಗಳನ್ನು ನಿರ್ವಹಿಸುತ್ತಲೇ ಬಂದಿರುವ ವೀರಶೈವ ಶೈಕ್ಷಣಿಕ ಕೇಂದ್ರವಾದ ಬಾದಾಮಿ ತಾಲ್ಲೂಕಿನ ಶಿವಯೋಗ ಮಂದಿರದ ಗ್ರಂಥಾಲಯದಲ್ಲಿ ಹಸ್ತಪ್ರತಿಗಳ ಸಂಗ್ರಹವಿದೆ. ಇಲ್ಲಿ ಹಸ್ತಪ್ರತಿಗಳ ಪೋಷಣೆಯ ಕಾರ್ಯ ಬಹಳ ಹಿಂದಿನಿಂದಲೇ ನಡೆಯುತ್ತಾ ಬಂದಿದೆ.

ತೀರಾ ಇತ್ತೀಚಿಗೆ ಮುಧೋಳ ತಾಲ್ಲೂಕಿನ ಮಾಚಕನೂರಿನ ಕಲ್ಮಠ ಎಂಬುವವರ ಮನೆಯಲ್ಲಿ ದೊರೆತ ಹಲವಾರು ಹಸ್ತಪ್ರತಿಗಳನ್ನು ತಂದು ಬಾಗಲಕೋಟೆ ನಗರದ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘದ ಕನ್ನಡ ಅಧ್ಯಯನ ವಿಭಾಗದ ಗ್ರಂಥಾಲಯದಲ್ಲಿ ಸಂರಕ್ಷಿಸಿ ಸಂಗ್ರಹಿಸಿಡಲಾಗಿದೆ.

ಮಹಾಲಿಂಗಪುರದ ಮಹಾಲಿಂಗೇಶ್ವರಮಠ, ಗುಳೇದಗುಡ್ಡದ ಮುರುಘಾಮಠಗಳಲ್ಲಿಯೂ ಹಸ್ತಪ್ರತಿಗಳಿದ್ದವು. ಮೂಲತಃ ಚಿಕ್ಕಮಂಗಳೂರು ಜಿಲ್ಲೆಯವರಾದ ಉಮಾಪತಿಶಾಸ್ತ್ರಿಯವರು ಶಿವಯೋಗ ಮಂದಿರದ ವಟುವಾಗಿ ಪ್ರಾಥಮಿಕ ಶಿಕ್ಷಣವನ್ನು ಅಲ್ಲಿಯೇ ಪೂರೈಸುತ್ತಾರೆ. ಅನಂತರದಲ್ಲಿ ಶಿವಯೋಗ ಮಂದಿರದಲ್ಲಿ ಸಂಸ್ಕೃತ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸುವಾಗ ಪ್ರಾರಂಭವಾದ ಹಸ್ತಪ್ರತಿಗಳ ಬಗೆಗಿನ ಅವರ ಒಲವು, ಮುಂದೆ ಅವುಗಳನ್ನು ಸಂರಕ್ಷಿಸುವುದು ಸಂಗ್ರಹಿಸುವ ಕಾರ್ಯವನ್ನು ಮುಂದುವರೆಯಿತು. ತಾವು ಸಂಗ್ರಹಿಸಿದ ಎಲ್ಲಾ ಹಸ್ತಪ್ರತಿಗಳನ್ನು ತಮ್ಮ ಮನೆಯ ಶಾರದಾಭವನದಲ್ಲಿ ಸಂಗ್ರಹಿಸಿದ್ದರು. ಮುಂದೆ ಈ ಹಸ್ತಪ್ರತಿಗಳೆಲ್ಲವನ್ನು ಧರ್ಮಸ್ಥಳಕ್ಕೆ ಹಸ್ತಾಂತರಿಸಿದ್ದು ತಿಳಿದುಬರುತ್ತದೆ. ಈ ಜಿಲ್ಲೆಯಲ್ಲಿ ದೊರೆತ ೪,೦೭೫ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದಲ್ಲಿ ಸಂಗ್ರಹಿಸಿಡಲಾಗಿದೆ. ಇಲ್ಲಿನ ಹಾಗೂ ಈ ಜಿಲ್ಲೆಯ ಪ್ರಮುಖ ಹಸ್ತಪ್ರತಿ ಸಂಗ್ರಹವಾಗಿರುವ ಶಿವಯೋಗಮಂದಿರ ಹಾಗೂ ಮಾಚಕನೂರಿನ ಸದ್ಯ ಬಸವೇಶ್ವರ ಕಲಾ ಮಹಾವಿದ್ಯಾಲಯದ ಸಂಗ್ರಹದಲ್ಲಿರುವ ಹಸ್ತಪ್ರತಿಗಳ ಬಗೆಗೆ ಇಲ್ಲಿ ವಿವೇಚಿಸಲಾಗಿದೆ.

**ಹಸ್ತಪ್ರತಿ ಚಿತ್ರಗಳ ರಚನೆ ಮತ್ತು ತಂತ್ರ-ವಿಧಾನಗಳು**

ಹಸ್ತಪ್ರತಿ ಚಿತ್ರಗಳ ರಚನೆಯಾಗಿರುವ ಆಧಾರ ಸಾಮಗ್ರಿಯನ್ನು ಮೂಲವಾಗಿಟ್ಟುಕೊಂಡು, ಅಧ್ಯಯನದ ಅನುಕೂಲದ ದೃಷ್ಟಿಯಿಂದ ಹಸ್ತಪ್ರತಿ ಚಿತ್ರಗಳ ವಿಂಗಡಣೆಯನ್ನು ಮಾಡಿಕೊಳ್ಳಲಾಗಿದೆ.

**ಹಸ್ತಪ್ರತಿ ಚಿತ್ರಗಳು**

ತಾಳೆಗರಿ ಮೇಲಿನ ಚಿತ್ರಗಳು ಫಲಕದ ಮೇಲಿನ ಚಿತ್ರಗಳು

ಜಿಲ್ಲೆಯಲ್ಲಿ ಲಭ್ಯವಾಗಿರುವ ಅಲಂಕಾರಿಕ, ಸಾಂದರ್ಭಿಕ ಚಿತ್ರಗಳನ್ನು ಆಧಾರವಾಗಿಟ್ಟುಕೊಂಡು ಮೇಲಿನ ಚಿತ್ರರಚನೆಗಳ ರಚನೆ ಹಾಗೂ ತಂತ್ರ ವಿಭಾಗಗಳನ್ನು ಕುರಿತು ವಿವರಿಸಲಾಗಿದೆ.

ಜಿಲ್ಲೆಯಲ್ಲಿ ದೊರೆತಿರುವ ತಾಳೆಗರಿಗಳ ಮೇಲೆ ರಚನೆಗೊಂಡ ಚಿತ್ರಗಳೆಲ್ಲವೂ ಕೂಡ ರೇಖಾಚಿತ್ರಗಳಾಗಿವೆ. ಅಂದರೆ ತಾಳೆಗರಿಗಳ ಮೇಲೆ ವರ್ಣಚಿತ್ರಗಳನ್ನು ರಚಿಸಿರುವ ಕೆಲವು ಉದಾಹರಣೆಗಳು ಬೇರೆಡೆಗಳಲ್ಲಿ ಇವೆಯಾದರೂ ಜಿಲ್ಲೆಯ ಚಿತ್ರಗಳನ್ನು ಅವಲೋಕಿಸಿದಾಗ ಕಂಠ, ಕೈವಾರ, ಅಳತೆಪಟ್ಟಿಗಳಿಂದ ರಚಿತವಾದ ರೇಖಾಚಿತ್ರಗಳು ಮಾತ್ರವೇ ಕಾಣಸಿಗುತ್ತವೆ.

**ಅ. ತಾಳೆಗರಿ**

**ಚಿತ್ರರಚನೆಯ ತಂತ್ರ**

ಮೊದಲೇ ತಿಳಿಸಿದಂತೆ ತಾಳೆಗರಿಗಳ ಮೇಲೆ ರಚನೆಗೊಂಡ ಚಿತ್ರಗಳೆಲ್ಲವೂ ರೇಖಾಚಿತ್ರಗಳಾಗಿರುವುದರಿಂದ ಗರಿಗಳ ಮೇಲಿನ ಬರವಣಿಗೆ ಬಳಸಲಾದ ತಂತ್ರವನ್ನೇ ಬಳಸಲಾಗಿದೆ.

ಚಿತ್ರಗಳ ರಚನೆ ಕೂಡ ಬರವಣಿಗೆಗೆ ಬಳಸಲಾಗುವ ಕಂಠವನ್ನು ಹೆಚ್ಚಾಗಿ ಬಳಸಿಕೊಂಡಂತಿದೆ. ಅದರೊಟ್ಟಿಗೆ ವರ್ತುಲ ನಕ್ಷೆಗೆ ಕೈವಾರವನ್ನು ವಿಶೇಷವಾಗಿ ಮತ್ತು ಎಷ್ಟು ರೀತಿಯಿಂದ ಬಳಸಿಕೊಂಡಿರುವುದು ಕಂಡುಬರುತ್ತದೆ. ಹಾಗೆ ಕ್ವಚಿತ್ತಾಗಿ ಅಳತೆ ಪಟ್ಟಿಯನ್ನು ಬಳಸಿಕೊಳ್ಳಲಾಗಿದೆ. ಈ ಉಪಕರಣಗಳನ್ನು ಅಗತ್ಯಕ್ಕೆ ಅನುಗುಣವಾಗಿ ಬಳಸಿ, ಚಿಕ್ಕ ಚಿಕ್ಕ ಅಲಂಕಾರಿಕ ಚಿತ್ರಗಳನ್ನು ರಚಿಸಿ ಸಾಂದರ್ಭಿಕ ಚಿತ್ರಗಳನ್ನು ರಚಿಸಿ ಅದರಲ್ಲಿ ಬೆಳ್ಳಿಯ ಕಡ್ಡಿಯಿಂದ ಕಪ್ಪನ್ನು ತುಂಬಲಾಗಿದೆ. ಉದ್ದೇಶಿತ ನಕ್ಷಾಚಿತ್ರ ರಚನೆಗೆ ಕಂಠದ ಜೊತೆಗೆ ಕೈವಾರ ಹಾಗೂ ಅಳತೆಪಟ್ಟಿಗಳನ್ನು ಬಳಸಿಕೊಂಡು ಜ್ಯಾಮಿತಿಕ ನಕ್ಷೆಗಳ ಅಲಂಕಾರಿಕ ನಕ್ಷಾ ಚಿತ್ರಗಳನ್ನು ರಚಿಸಿದ್ದಾರೆ. ಈ ಚಿತ್ರಗಳಲ್ಲಿಯೂ ವೃತ್ತ ಒಳವೃತ್ತ, ಅರ್ಧವರ್ತುಲ, ಅದರೊಳಗಿನ ಹೂಬಳ್ಳಿ ಅಲಂಕಾರಗಳನ್ನು ರಚಿಸಿ, ಅವುಗಳಲ್ಲಿಯೂ ಬೆಳ್ಳಿಕಡ್ಡಿಯಿಂದ ಕಪ್ಪನ್ನು ತುಂಬಿ ರೇಖೆಗಳು ಸ್ಪಷ್ಟವಾಗುವಂತೆ ಮಾಡಲಾಗಿದೆ. ಜೊತೆಗೆ ಅಗತ್ಯವೆನಿಸುವಲ್ಲಿ ಕಪ್ಪನ್ನು ಪೂರ್ಣವಾಗಿ ತುಂಬಿ ಒಂದರೊಳಗೊಂದು ನಕ್ಷೆಗಳು ಅಂದವಾಗಿ ಕಾಣುವಂತೆ ರಚನೆಗಳನ್ನು ಮಾಡಲಾಗಿದೆ. ಹೀಗೆ ತಾಳೆಗರಿಯನ್ನು ಕಂಠದಿಂದ ಕೊರೆದು ಚಿತ್ರಗಳನ್ನು ರಚಿಸಿರುವುದನ್ನು ಡಾ.ಬಿ.ಕೆ. ಹಿರೇಮಠರು 'ಪತ್ರಚ್ಛೇದನ ಕಲೆ' ಎಂದು ಉಲ್ಲೇಖಿಸಿದ್ದಾರೆ.

ಇನ್ನುಳಿದಂತೆ ಸಾಂದರ್ಭಿಕವಾಗಿ ರಚನೆಗೊಂಡ ಶಾಸ್ತ್ರಸಂಬಂಧಿ ಚಿತ್ರಗಳಲ್ಲಿಯೂ ಸಹ ಇದೇ ತಂತ್ರದಿಂದ ಚಿತ್ರಗಳ ರಚನೆ ಮಾಡಲಾಗಿದೆ. ಇಲ್ಲಿ ಕೇವಲ ಒಂದು ಗರಿಯಲ್ಲಿ ಮಾತ್ರ ರಚನೆ ಮಾಡದೆ, ಒಂದು ಗುರಿಯ ಮುಖ ಮತ್ತು ಗರಿಯ ಬೆನ್ನುಗಳೆರಡನ್ನೂ ಜೋಡಿಸಿಕೊಂಡು ಒಂದು ಗರಿಯ ಮಿತಿಯನ್ನು

ದಾಟುವ ದೊಡ್ಡದಾದ ಶಾಸ್ತ್ರಸಂಬಂಧಿ ಉದ್ಧರಣೆಯ ಚಿತ್ರಗಳನ್ನು ರಚಿಸಲಾಗಿದೆ. ಹೀಗೆ ರಚನೆಗೊಂಡ ಚಿತ್ರಗಳು ಒಂದೇ ಗರಿಯಲ್ಲಿ ಚಿತ್ರಿತಗೊಂಡಷ್ಟು ಸ್ಪಷ್ಟವಾಗಿ, ಸುಂದರವಾಗಿ, ಶಿಸ್ತುಬದ್ಧವಾಗಿ ರಚನೆಗೊಂಡಿರುವುದನ್ನು ನೋಡಿದಾಗ ಚಿತ್ರಕಾರನ ಶಾಸ್ತ್ರಬದ್ಧತೆ ಹಾಗೂ ಕಲಾನೈಪುಣ್ಯತೆಯ ಅರಿವಾಗುತ್ತದೆ.

ಜಿಲ್ಲೆಯ ಶಿವಯೋಗ ಮಂದಿರದಲ್ಲಿರುವ ಶಾಸ್ತ್ರಸಂಬಂಧಿ ಚಿತ್ರವೊಂದರಲ್ಲಿ(ಅಧೋಮುಖ ಕುಂಡಲಿನಿ) ಪ್ರಾಣಿ ಮುಖ ನಡುವು ಮನುಷ್ಯನದಾಗಿದ್ದು, ಅದರ ಕೆಳಗಿನ ದೇಹವು ಪ್ರಾಣಿಯಾಕಾರದಲ್ಲಿದೆ. ಎರಡು ಗರಿಗಳ ತುಂಬ ಇರುವ ಈ ಚಿತ್ರದ ಆಕೃತಿಯ ನಡುವಿನವರೆಗಿನ ಅರ್ಧಭಾಗವು ಮೇಲಿನ ಒಂದು ಗರಿಯಲ್ಲಿದ್ದು, ಕೆಳಗಿನ ಪ್ರಾಣಿ ದೇಹಾಕೃತಿಯು ಕೆಳಗರಿಯಲ್ಲಿದೆ. ಎರಡೂ ಗರಿಗಳನ್ನು ಕೂಡಿಸಿದಾಗ ಚಿತ್ರವೂ ಒಂದೇ ಎನ್ನಿಸುವಷ್ಟು ಸುಂದರವಾದ ಚಿತ್ರರಚನೆಯನ್ನು ಕಾಣಬಹುದಾಗಿದೆ. ಆಕೃತಿ ಮಾತ್ರವಲ್ಲದೇ ದೊಡ್ಡ ವರ್ತುಲ, ಷಟ್ಕೋನಾಕೃತಿಗಳ ರಚನೆಯನ್ನು ಸಹ ಮೇಲೆ ಅರ್ಧಭಾಗ, ಕೆಳಗರ್ಧ ಭಾಗದಂತೆ ರಚಿಸಲಾಗಿದ್ದು, ಕೂಡಿಸಿ ನೋಡಿದಾಗ ಒಂದೇ ದೊಡ್ಡ ವರ್ತುಲ ಹಾಗೂ ಷಟ್ಕೋನಾಕೃತಿಗಳು ಕಾಣಸಿಗುತ್ತವೆ. ಇನ್ನು ಹಲವಾರು ಈ ರೀತಿಯ ಶಾಸ್ತ್ರಸಂಬಂಧಿ ಚಿತ್ರಗಳು ಚಿತ್ರಕಾರನ ಶಿಸ್ತುಬದ್ಧ ಕಲಾಪ್ರಾವೀಣ್ಯಕ್ಕೆ ಮಾದರಿಗಳಾಗಿವೆ.

**ಹಸ್ತಪ್ರತಿ ಚಿತ್ರ: ವಸ್ತು-ವಿಷಯಗಳು**

**ತಾಳೆಗರಿ: ಸಾಂದರ್ಭಿಕ ಚಿತ್ರಗಳು**

ಇಲ್ಲಿ ಹಸ್ತಪ್ರತಿ ಗ್ರಂಥಗಳು ರಚನೆಗೊಂಡಿರುವ ವಿಷಯದ ಆಧಾರದ ಮೇಲೆ, ಅಲ್ಲಿರುವ ಸಂದರ್ಭಕ್ಕನುಸಾರವಾಗಿ ಚಿತ್ರಗಳು ರಚಿತವಾಗಿರುತ್ತವೆ. ಹಸ್ತಪ್ರತಿ ಗ್ರಂಥವು ಶಾಸ್ತ್ರಸಂಬಂಧಿ ಗ್ರಂಥಗಳಾಗಿದ್ದಲ್ಲಿ ಅಲ್ಲಿ ಯಂತ್ರ, ಮಂತ್ರ ಆರಾಧನೆಯಾಗುವ ದೈವ ಚಿತ್ರಗಳು. ನವ ಗ್ರಹಗಳ ಚಿತ್ರಗಳು, ಉದ್ಧರಣೆಯ ಚಿತ್ರಗಳು, ಮಂತ್ರಾಕ್ಷರಗಳ ಚಿತ್ರಗಳು ರಚಿತವಾಗಿರುತ್ತವೆ. ಸಾಮಾನ್ಯವಾಗಿ ಇಂತಹ ಚಿತ್ರಗಳನ್ನು ಶಾಸ್ತ್ರ ಪಂಡಿತನಾಗಿದ್ದು, ಅದರ ಜೊತೆಗೆ ಚಿತ್ರಕಲೆಯ ನೈಪುಣ್ಯತೆಯನ್ನು ಸಾಧಿಸಿರುವವರು ಮಾತ್ರ ಇಂಥಹ ಚಿತ್ರಗಳ ರಚನೆ ಮಾಡಬಹುದಾಗಿದೆ.

ಅಲ್ಲದೆ ಸಾಹಿತ್ಯ, ಪುರಾಣ, ಹಸ್ತಪ್ರತಿ ಗ್ರಂಥಗಳಾಗಿದ್ದಲ್ಲಿ ಅಲ್ಲಿ ಬರುವ ಕಥೆ, ಕಾವ್ಯಗಳಲ್ಲಿನ ಪ್ರಮುಖವಾದ ಸನ್ನಿವೇಶದ ಚಿತ್ರಗಳ ರಚನೆಯನ್ನು ಮಾಡಲಾಗಿರುತ್ತದೆ. ಶಬ್ದ ರೂಪದಲ್ಲಿರುವ ಸಂದರ್ಭವನ್ನು ಚಿತ್ರ ರೂಪಕ್ಕಿಳಿಸಿ, ಹೃದಯ ವೇದ್ಯವಾಗುವಂತೆ ಚಿತ್ರಿಸಿದ ರಚನೆಗಳು ಅಪರೂಪವಾಗಿವೆ. ಕೆಲವೆಡೆಗಳಲ್ಲಿ ಮಾತ್ರವೇ ಈ ಕಥಾಸಂಬಂಧಿ ಚಿತ್ರರಚನೆಗಳಾಗಿದ್ದು, ಜಿಲ್ಲೆಯಲ್ಲಿ ಸಂಗ್ರಹದಲ್ಲಿರುವ ಹಸ್ತಪ್ರತಿಗಳಲ್ಲಿ ಇಂತಹ ಚಿತ್ರಗಳಿಲ್ಲ.

ಜಿಲ್ಲೆಯ ಶಿವಯೋಗ ಮಂದಿರದಲ್ಲಿ ಹಲವಾರು ಉದ್ಧರಣೆಯ ಚಿತ್ರಗಳಿದ್ದು, ಅವುಗಳ ವಿವರಣೆಯನ್ನು ಕೆಳಗೆ ನೀಡಲಾಗಿದೆ. ಜಿಲ್ಲೆಯ ಹಸ್ತಪ್ರತಿಗಳ ಚಿತ್ರಗಳನ್ನು ಗಮನಿಸಲಾಗಿ, ತಾಳೆಗರಿಗಳ ಮೇಲೆ ರಚಿತವಾದ ಚಿತ್ರಗಳೆಲ್ಲವೂ ರೇಖಾಚಿತ್ರಗಳೇ ಆಗಿವೆ. ವರ್ಣಚಿತ್ರಗಳನ್ನು ಕೆಲವೆಡೆಗಳಲ್ಲಿ

ಕಾಣಬಹುದಾದರೂ ಜಿಲ್ಲೆಯಲ್ಲಿ ದೊರೆತ ಹಸ್ತಪ್ರತಿಗಳಲ್ಲಿ ಈ ಉದಾಹರಣೆಗಳಿಲ್ಲ. ಕೇವಲ ಹಸ್ತಪ್ರತಿ ಫಲಕಗಳ ಮೇಲೆ ಮಾತ್ರ ವರ್ಣಚಿತ್ರಗಳನ್ನು ರಚಿಸಲಾಗಿದೆ. ಜಿಲ್ಲೆಯಲ್ಲಿ ದೊರೆತ ಸಾಂದರ್ಭಿಕ ಹಸ್ತಪ್ರತಿ ಚಿತ್ರಗಳಲ್ಲಿ ಶಾಸ್ತ್ರಸಂಬಂಧಿ ಚಿತ್ರಗಳು ಮಾತ್ರ ರಚನೆಗೊಂಡಿವೆ.

ಶಿವಯೋಗ ಮಂದಿರದ ಹಸ್ತಪ್ರತಿ ಸಂಗ್ರಹದಲ್ಲಿ ಲಭ್ಯವಾಗಿರುವ ತಾಳೆಗರಿಗಳ ಮೇಲಿನ ಕಂಠದಿಂದ ಚ್ಛೇಧನಗೊಳಿಸಿದ, ಕೈವಾರಗಳನ್ನು ಬಳಸಿದ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಉದ್ಧರಣೆ ರೇಖಾಚಿತ್ರಗಳಿವೆ. ನಾಡಿನೆಲ್ಲೆಡೆ ಲಭ್ಯವಾಗುವ ಉದ್ಧರಣೆಗೆ ಸಂಬಂಧಿಸಿದ ವರ್ಣಚಿತ್ರಗಳಿಗಿಂತ ಭಿನ್ನವಾಗಿರುವ ಈ ಚಿತ್ರಗಳು ತಾತ್ವಿಕವಾಗಿ ಒಂದೇ ನೆಲೆ ಒಂದೇ ಅರ್ಥ ಕೊಡುವಂತಿದ್ದರೂ, ರೇಖೆಯಲ್ಲಿಯೇ ಎಲ್ಲವನ್ನು ಸಾದರಪಡಿಸಿದ್ದು, ಚಿತ್ರ ರಚನಾಕಾರನ ಸಾಮರ್ಥ್ಯವನ್ನು ಎತ್ತಿ ತೋರುತ್ತದೆ.

**೧. ಜಂಗಮೋದ್ಧರಣೆ**

ಈ ಚಿತ್ರದಲ್ಲಿ ಜಂಗಮನೋರ್ವ ಎಡದ ಕೈಯಲ್ಲಿ ಸ್ಥಾವರಲಿಂಗವನ್ನು ಹಿಡಿದು, ಬಲದ ಕೈಯಿಂದ ಮಂತ್ರ ಪಠಣೆಯ ಎಣಿಕೆಯನ್ನು ಮಾಡುತ್ತಿರುವಂತೆ ಹಾಗೂ ಕಣ್ಣು ಗುಡ್ಡೆಗಳು ತದೇಕಚಿತ್ತವಾಗಿ ಲಿಂಗವನ್ನು ಲಿಂಗಾಂಗ ಸಾಮರಸ್ಯದಿಂದ ವೀಕ್ಷಿಸುತ್ತಿರುವಂತೆ ಭಾಸವಾಗುತ್ತದೆ. ಕುಳಿತ ಸ್ಥಳದಿಂದ ಪ್ರತೀ ಅಂಗಾಂಗದ ಮೇಲೆ ಹಾಯ್ದು ಹೋಗುವಂತೆ ನವಚಕ್ರೋದ್ಧರಣೆಯನ್ನು ಕಾಲು, ಹೊಟ್ಟೆ, ಎದೆ, ಕುತ್ತಿಗೆ ಮತ್ತು ತಲೆಯವರೆಗೂ ಅನುಕ್ರಮವಾಗಿ ಹೊಂದಿಸಲಾಗಿದೆ. ಧರ್ಮ ಚಿಂತನೆಯಲ್ಲಿ ಮುಖ್ಯವಾಗಿ ಬರುವ ಅಂಶಗಳನ್ನು ಜಂಗಮ ಪೂಜಾ ಸಂದರ್ಭದಲ್ಲಿ ಇಡೀ ಶರೀರವನ್ನು ಅದರ ನಿಯಮಾವಳಿಗೆ ತಕ್ಕುದಾಗಿ ಹೊಂದಾಣಿಕೆ ಮಾಡಿಕೊಳ್ಳುವ ಅಗತ್ಯತೆಗಳನ್ನು ತಿಳುಹಿಕೊಡುವ ಚಿತ್ರ ಇದಾಗಿದೆ. ಇನ್ನು ಮನುಷ್ಯನನ್ನು ಸಾಮಾನ್ಯ ದೃಷ್ಟಿಯಲ್ಲಿ ನೋಡುವುದಾದರೆ ಹಣೆಗೆ ವಿಭೂತಿ, ಕೊರಳಲ್ಲಿ, ರಟ್ಟೆಯಲ್ಲಿ, ಮುಂಗೈಯಲ್ಲಿ, ನಡುಕಟ್ಟಿನಲ್ಲಿ ಹಾಗೂ ಕಿವಿಯಲ್ಲೂ ಕೂಡ ಲೋಲಕದಂತೆ ರುದ್ರಾಕ್ಷಿಗಳನ್ನು ಬಳಸಿರುವುದು ಇಲ್ಲಿನ ವಿಶೇಷ. ಚಿತ್ರದಲ್ಲಿ ಮಾನವಾಕೃತಿಯು ಕಟ್ಟಿಗೆಯ ಪೀಠದ ಮೇಲೆ ಕುಳಿತಂತೆ ಕಾಣುತ್ತದೆ. ದೈವೀ ಸ್ವರೂಪವೆಂಬುವಂತೆ ಎರಡೂ ಬದಿಯಲ್ಲಿ ಕಂಬ, ಮೇಲೆ ಕಮಾನಿನ ಆರಂಭದಲ್ಲಿ ಹೂಗುಚ್ಛ ಇರಿಸಿ, ನಕ್ಷೆಗಳನ್ನು ರಚಿಸಿ ದೇವರ ಮನೆ ಅಥವಾ ದೇವಸ್ಥಾನದಲ್ಲಿ ಕುಳಿತಂತೆ ಚಿತ್ರಿಸಲಾಗಿದೆ.

ಈ ಉದ್ಧರಣೆ ಚಿತ್ರ ಕುರಿತಾದ ಸಾಹಿತ್ಯ ಇಂತಿದೆ: "ಜ್ಞಾನ ಮುದ್ರಾಲಕ್ಷಣ, ಬ್ರಹ್ಮಾಂಡವೇ ಕಿರೀಟ, ಗಗನವೇ ಮುಖ, ಸಮಸ್ತ ದಿಕ್ಕುಗಳೇ ಭುಜಂಗಳು, ಚಂದ್ರಸೂರ್ಯರೇ ನೇತ್ರಂಗಳು, ನಿರ್ವಯ ಸ್ವರೂಪವೇ ಶರೀರ ಪಾತಾಳವೇ ಪಾದಾರವಿಂದವು, ಕರಸ್ಥಲದಲ್ಲಿ ಶೂನ್ಯಲಿಂಗವು, ಸಮಸ್ತ ಮೇಘಗಳೇ ಜಡೆಗಳು, ಚಂದ್ರ ಜ್ಯೋತಿಯೇ ಭಸ್ಮ ಲೇಪನವು, ಸಮಸ್ತ ವೇದಂಗಳೇ ಸತ್ಕ್ರಿಯೆಗಳು, ನಕ್ಷತ್ರಂಗಳೇ ಪುಷ್ಪಮಾಲೆ, ಕುಲಪರ್ವತಗಳೇ ರುದ್ರಾಕ್ಷ ಮಾಲಾಭರಣ, ಸಮುದ್ರಂಗಳೇ ಕಮಂಡಲ, ಸೃಷ್ಟಿಮಯವಾದ ಜಗತ್ತೇ ಕಂಥೆ, ಪೃಥ್ವಿಯೇ ಸಿಂಹಾಸನವು, ದಿವಾರಾತ್ರಿಗಳೇ ಅಕಲ್ಪಿತ ಮಟವು, ತ್ರಿಕಾಲಂಗಳೇ ಜ್ಞಾನಸಂಪತ್ತು, ಷಡುಋತುಗಳೇ ಷಟ್ಸ್ಥಲಂಗಳು, ಮಹಾಶೇಷವೇ ಕಟಿಸೂತ್ರವು, ಸಮಸ್ತ ಶಿವ ಮಂತ್ರ ವಿದ್ಯೆಯೇ

ಜ್ಞಾನಮುದ್ರೆ, ಮೇರುಗಿರಿಯೇ ದಂಡಿಕೋಲು, ಗುಣತ್ರಯವೇ ಕರ್ಪೂರ, ಕುಲವೇ ಶಿವಕುಲವು, ನವಸ್ಪತಿಗಳೇ, ರೋಮಂಗಳು, ಇಂತಿಪ್ಪ ಅನಾದಿಜಂಗಮವು ತನ್ನ ಮುಖ, ಬಾಹು, ತೊಡೆ, ಪಾದಾದಿ ಅವಯವಂಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ ವೈಶ್ಯ, ಶೂದ್ರ ಮೊದಲಾದ ಸಕಲ ಜಗತ್ತು ನಿರ್ಮಿಸಿ, ತಾನು ಜಗದ್ಧಿತಾರ್ಥವಾಗಿ ಸಾಕಾರಮಂ ಧರಿಸಿ ಸರ್ವಲಕ್ಷಣ ಸಂಪೂರ್ಣನಾಗಿರ್ಪ ಜಂಗಮದ ಸ್ವರೂಪ ಸಂಬಂಧವೆಂತೆಂದೊಡೆ."[೧೯]

**೨. ಅಧೋಕುಂಡಲಿನಿ ಉದ್ಧರಣೆ**

ಈ ಚಿತ್ರದಲ್ಲಿ ಹೀಗೆ ಅಧೋಕುಂಡಲೀ ಉದ್ಧರಣೆ ಬಗ್ಗೆ ಪ್ರತೀ ಅಂಗಾಂಗಕ್ಕೂ ವ್ಯಾಖ್ಯಾನ ಕೊಡುತ್ತಾ ಜಿಂಕೆಯ ಮುಖ, ಎದೆಯಿಂದ ನಡುವಿನವರೆಗೆ ಸ್ತ್ರೀ ದೇಹ, ಮುಂದಿನವು ಹುಲಿಗಾಲು, ಹಿಂದಿನವು ನಂದಿಗಾಲು, ನೀಳವಾದ ಬೆನ್ನ ಮೇಲೆ ಹಾವು, ನಾಲ್ಕು ಕೈಗಳು ಮತ್ತು ಖಡ್ಗ, ರುಂಡಗಳು, ಪ್ರಾಣಿಗಳಾದ ಸಿಂಹ, ಆಕಳು, ಹರಿಣಗಳಂತಹ ಸಂಕೇತಿಕ ಚಿತ್ರಗಳಿಂದ ಆವೃತವಾಗಿವೆ. ವಿದ್ವಾಂಸರು ಚಿತ್ರದ ಒಳ ಅರ್ಥವನ್ನು ನೀಡಿದರೆ ಇಲ್ಲಿ ರೇಖಾಪ್ರಧಾನವಾದ ಚಿತ್ರವಿದ್ದು, ಅಲ್ಲಲ್ಲಿ ವಿಚಿತ್ರವಾದ ಸಮತೋಲನವಲ್ಲದ ಕೃತಿ ಇದಾಗಿದೆ. ಜಿಂಕೆ ಮುಖ, ಕೈಗಳಲ್ಲಿ ಕುಂಭ, ಮೈಮೇಲೆಲ್ಲಾ ಕಪ್ಪು ಶಾಹಿಯಲ್ಲಿ ಅಲಂಕೃತ ನಕ್ಷೆ, ಪ್ರಾಣಿಯ ಕಾಲು, ಮನುಷ್ಯನ ಕಾಲು ಒಂದೇ ಕಾಲು ಒಂದೇ ಕಡೆ ಇಳಿಬಿದ್ದಿದ್ದು, ಪ್ರಾಣಿ ಕುತ್ತಿಗೆಯಲ್ಲಿ ಮನುಷ್ಯಾಕೃತಿ ಕುಳಿತಂತೆ ಅಲ್ಲಿಂದ ಸರ್ಪದ ಮುಖವು ಕೆಳಮುಖವಾಗಿ ವಿಷವನ್ನು ಬಿಟ್ಟಂತೆ ಭಾಸವಾಗುವ ಚಿತ್ರ ಇದಾಗಿದ್ದು, ಚಿತ್ರದ ಕೆಳಗೆ ಸಾಲಾಗಿ ಪ್ರಾಣಿಗಳನ್ನು ಚಿತ್ರಿಸಲಾಗಿದೆ. ಮಗ್ಗುಲಲ್ಲಿ ಗಿಡಬಳ್ಳಿಯ ಚಿತ್ರಗಳು, ರೇಖೆಗಳು ಅಲಂಕೃತಗೊಂಡಿವೆ.

ಈ ಚಿತ್ರದಲ್ಲಿ ವಿಶೇಷವಾಗಿ ಗಮನಿಸಬೇಕಾದುದು ಸರ್ಪರೂಪಿಯಾದ ಕುಂಡಲಿನಿಯಾಗಿದೆ. ಇಡೀ ಚಿತ್ರವೇ ಸಾಂಕೇತಿಕವಾದುದು. ದೇಹದಲ್ಲಿರುವ ವಿವಿಧ ಚಕ್ರಗಳಲ್ಲಿ ಪ್ರವೇಶ ಮಾಡುತ್ತ ಊರ್ಧ್ವಮುಖಿಯಾಗಿ ಸಾಗಬೇಕಾಗಿದ್ದ ಕುಂಡಲಿನಿ(ಸರ್ಪರೂಪಿ)ಯು ಅಧೋಮುಖಿಯಾಗಿ ಪಥ ಭ್ರಷ್ಟವಾಗಿದೆ. ತಾತ್ಪರ್ಯ ಸರ್ಪದ ಮುಖವು ಕೆಳಗೆ ಬಾಗಿದಂತಿದ್ದರೆ ಅದು ಅಧೋಕುಂಡಲಿನಿ ಉದ್ಧರಣೆ ಎಂಬ ಅರ್ಥವನ್ನು ಸೂಚಿಸುತ್ತದೆ.

**೩. ಊರ್ಧ್ವಕುಂಡಲಿನಿ ಉದ್ಧರಣೆ**

ಈ ಚಿತ್ರದಲ್ಲಿ ಹೀಗೆ ಊರ್ಧ್ವಕುಂಡಲಿ ಉದ್ಧರಣೆ ಬಗ್ಗೆ ಪ್ರತೀ ಅಂಗಾಂಗಕ್ಕೂ ವ್ಯಾಖ್ಯಾನ ಕೊಡುತ್ತಾ ವಿದ್ವಾಂಸರು ಚಿತ್ರದ ಒಳ ಅರ್ಥವನ್ನು ನೀಡಿದರೆ ಇಲ್ಲಿ ರೇಖಾಪ್ರಧಾನವಾದ ಚಿತ್ರವಿದ್ದು, ಅಲ್ಲಲ್ಲಿ ವಿಚಿತ್ರವಾದ ಸಮತೋಲನವಲ್ಲದ ಕೃತಿ ಇದಾಗಿದೆ. ಜಿಂಕೆ ಮುಖ, ಕೈಗಳಲ್ಲಿ ಕುಂಭ, ಮೈಮೇಲೆಲ್ಲಾ ಕಪ್ಪು ಶಾಹಿಯಲ್ಲಿ ಅಲಂಕೃತ ನಕ್ಷೆ, ಪ್ರಾಣಿಯ ಕಾಲು, ಮನುಷ್ಯನ ಕಾಲು ಒಂದೇ ಕಾಲು ಒಂದೇ ಕಡೆ ಇಳಿಬಿದ್ದಿದ್ದು, ಪ್ರಾಣಿ ಕುತ್ತಿಗೆಯಲ್ಲಿ ಮನುಷ್ಯಾಕೃತಿ ಕುಳಿತಂತೆ ಅಲ್ಲಿಂದ ಸರ್ಪದ ಮುಖವು ಮೇಲ್ಮುಖವಾಗಿ

---

೧೯. ಡಾ.ಕೆ. ರವೀಂದ್ರನಾಥ(ಸಂ), ಉದ್ಧರಣೆ ಸಾಹಿತ್ಯ, ೨೦೧೦.

ಅಮೃತವನ್ನು ಬಿಟ್ಟಂತೆ ಭಾಸವಾಗುವ ಚಿತ್ರ ಇದಾಗಿದ್ದು, ಚಿತ್ರದ ಕೆಳಗೆ ಸಾಲಾಗಿ ಪ್ರಾಣಿಗಳನ್ನು ಚಿತ್ರಿಸಲಾಗಿದೆ. ಮಗ್ಗುಲಲ್ಲಿ ಗಿಡಬಳ್ಳಿಯ ಚಿತ್ರಗಳು, ರೇಖೆಗಳು ಅಲಂಕೃತಗೊಂಡಿವೆ.

ಒಟ್ಟು ತಾತ್ಪರ್ಯ ಸರ್ಪದ ಮುಖವು ಮೇಲಕ್ಕೆ ಹೆಡೆ ಎತ್ತಿದಂತಿದ್ದರೆ ಅದು ಊರ್ಧ್ವಕುಂಡಲಿನಿ ಉದ್ಧರಣೆ ಎಂಬ ಅರ್ಥವನ್ನು ಸೂಚಿಸುವ ಚಿತ್ರ ಇದಾಗಿದೆ.

ಈ ಸಾಂಕೇತಿಕ ಚಿತ್ರದ ಸಾಂಕೇತಿಕ ಅರ್ಥದ ಸಾಹಿತ್ಯ ಇಂತಿದೆ- "ಪರಮಶಾಂತಿ, ರತಿವಿಲಾಸ, ಮೋಹನವೇ ಮುಖ, ಸದ್ವಿವೇಕವೇ ಶಿರಸ್ಸು, ಶಿವಸದ್ವಾಸನ ಸ್ವೀಕಾರವೇ ನಾಸಿಕ, ನಿತ್ಯ ಜೀವನ ಮುಕ್ತಿಯೇ ಮೂಗುತಿ, ಚಿದಾವಾಕ್ಷಿಯೇ ಜಿಹ್ವೆ, ನಿಃ ಸಂಕಲ್ಪ ನಿರ್ವಿಕಲ್ಪಾದಿ ಸದ್ಗುಣಂಗಳೇ ದಂತಪಂಕ್ತಿಗಳೇ ನಯನಂಗಳು, ಸದ್ಬೋದೆ ನಿರ್ಬೋಧೆಗಳೇ ಕರ್ಣಂಗಳು, ಮಾರ್ಗಕ್ರಿಯೆ ಮೀರಿದ ಕ್ರಿಯಾಚಾರಂಗಳೇ ಕರ್ಣಾಂಭರಣಂಗಳು, ನಿರಹಂಕಾರ, ಮಮಕಾರಂಗಳೇ ಕೋಡ್ಗಳು, ಸದ್ಧೃಢವೇ ಕಂಠ, ನಿಜನಿಷ್ಠೆಯೇ ಕಂಠಾಭರಣ ಸುನಾದ ಸೂತ್ರ ವಿಡಿದಿರ್ಪ, ಮಂತ್ರಾಕ್ಷರ ಮಾಲೆಯೇ ಕೊರಳ ಹಾರ, ಸುಚಿತ್ತ ಸುಬುದ್ಧಿ, ಸುಮನ ಸದ್ಭಾವವೇ ಕರ ಚತುಷ್ಟಯಂಗಳು, ಸದ್ಗುಣ ಪ್ರಭಾವಂಗಳೇ ಹಸ್ತಾಭರಣಂಗಳು, ಪರಮಾಮೃತ ಚಿದಾಮೃತ ಪೂರಿತವಾದ ಪಾತ್ರ ಸತ್ಪಾತ್ರಂಗಳೇ ಮ್ಯಾಲಣ ಹಸ್ತದ್ವಯದ ಕುಂಭಂಗಳು, ನಿರ್ಲಿಖಿತವ ಲಿಖಿಸುವ ಮೂಲಜ್ಞಾನವೇ ಬಲದ ಹಸ್ತದ ಕಂಠ, ಪ್ರಾರಬ್ದ ಕಲ್ಪಿತವಳಿದ ಚಿತ್ಪಿಂಡ ಸಂಬಂಧವಪ್ಪ ಫಣೆಯ ಪಂಚಾಕ್ಷರ ಲೇಖನವೇ ಎಡದ ಹಸ್ತದ ಶಾಸನ ಪತ್ರ, ಭಕ್ತರ ಸಾರಾಮೃತ ಪೂರಿತವಾದ ಸತ್ಕರ್ಮ ನಿಷ್ಕರ್ಮಂಗಳೇ ಸ್ತನಂಗಳು."[೨೦]

### ೪. ಜ್ಞಾನ ಅಷ್ಟಾವರಣೋದ್ಧರಣೆ

ಜ್ಞಾನ ಅಷ್ಟಾವರಣೋದ್ಧರಣೆಯನ್ನು ಬಿಂಬಿಸುತ್ತಿರುವ ಈ ಚಿತ್ರದಲ್ಲಿ ಹಸ್ತಪ್ರತಿಯ ಮಧ್ಯಭಾಗಕ್ಕೆ ಕೈವಾರದಿಂದ ದೊಡ್ಡ ವೃತ್ತವನ್ನು ರಚಿಸಿ ಅದರ ಮಧ್ಯದಲ್ಲಿ ಅಷ್ಟದಳ ಪುಷ್ಪಾಕೃತಿಯನ್ನು ರಚಿಸಲಾಗಿದೆ. ವರ್ತುಲ ಮತ್ತು ಅಷ್ಟದಳಪುಷ್ಪದ ನಡುವಿನ ಜಾಗವನ್ನು ಕಪ್ಪು ವರ್ಣದಿಂದ ಚಪ್ಪಟೆಯಾಗಿ ತುಂಬಿಸಲಾಗಿದೆ. ಅಷ್ಟದಳದಲ್ಲಿ ಪ್ರತಿಯೊಂದು ದಳಕ್ಕೂ ಎರಡು ಓರೆ ರೇಖೆಗಳನ್ನು ರಚಿಸಲಾಗಿದೆ. ಹಸ್ತಪ್ರತಿಯ ಮಧ್ಯಕ್ಕೆ ರಚಿತವಾಗಿರುವ ಈ ವರ್ತುಲದ ಸುತ್ತಲೂ ಹಸ್ತಪ್ರತಿಯ ಅಂಚಿನವರೆಗೂ, ಅಲಂಕಾರಿಕ ನಕ್ಷಾ ಚೌಕಟ್ಟನ್ನು ಚಿತ್ರಿಸಲಾಗಿದೆ. ಉಳಿದ ಜಾಗದಲ್ಲಿ ನಾಲ್ಕು ವಿವಿಧ ವಿನ್ಯಾಸದ ಮಾನವಾಕೃತಿಗಳ ಚಿತ್ರಗಳು ರಚನೆಗೊಂಡಿವೆ.

ಈ ಚಿತ್ರದ ಸಾಹಿತ್ಯ ಇಂತಿದೆ- "ಚಕ್ರಾಕೃತಿಯಂ ತರುಹಿ ಅದರ ಮಧ್ಯದಲ್ಲಿ ಕರ್ಣಿಕಾ ವರ್ಣಮಂ ಬಳಸಿ, ಚತುರ್ವಿಧ ಸ್ಥಾನಬೇಧ ಮಾಗಿರ್ದ ಅಷ್ಟದಳಂಗಳಂ ಬರೆದವರಲ್ಲಿ, ಪೂರ್ವದಳ ಮೊದಲುಗೊಂಡು, ತ್ರಿವಿಧ ದರ್ಶಬೇಧವನೊಳಗೊಂಡಿರ್ಪ ಅಷ್ಟಾವರ್ಣಮಂ ಉದ್ಧರಿಸಿ ಕೈಕಾವರ್ಣ ತಂತ್ರ ವಿಧಾನದಿಂ ಸಂಬಂಧಿಸುವ ಬೇಧವೆಂತೆಂದೊಡೆ. ಹೀಗೆ ಸುಗುಣ, ನಿರ್ಗುಣ ಸ್ವಭಾವ ಚಾರಿತ್ರವನುಳ್ಳ ಅನಾದಿ ಭಕ್ತನ

---

೨೦. ಡಾ.ಕೆ. ರವೀಂದ್ರನಾಥ(ಸಂ), ಉದ್ಧರಣೆ ಸಾಹಿತ್ಯ, ೨೦೧೦.

ಅಂಗದಲ್ಲಿ ಅಲಂಕೃತವಾಗಿ ತೋರುವ ಅಷ್ಟಾವರ್ಣದ ಜ್ಞಾನಸಾಧನ ಸಂಪತ್ತುವನ್ನು ಉದ್ಧರಿಸುವ ಕ್ರಮವೆಂತೆಂದೊಡೆ."[೨೧]

೫. ಶೂನ್ಯ ಲಿಂಗೋದ್ಧರಣೆ

ಈ ಚಿತ್ರದಲ್ಲಿ "ಮಾತಾಪಿತ ಸಹೋದರ ಬಂಧು ಸತಿಸುತ ಕುಲಗೋತ್ರ ನಾಮರೂಪು ತನು ಕರುಣಾದಿ ಭೋಗ ಭುವನ ಕಾಲೋಕಲ್ಪತ ಮಾಯೋಪಾದಿಗಳಿಲ್ಲದೆ ಬಾಹ್ಯಾಂಭ್ಯಾಂತರ ದಿಕ್ಕುವಿದಿಕ್ಕು ಅದ್ಯಾಂತರ ರಹಿತವಾಗಿ ಜ್ವಲಿಸುತ್ತಿರ್ದ ಕಾಲಾಗ್ನಿಯೋಪಾದಿಯ ಕಾಂತಿಯಿಂ, ಕೋಟಿ ಮಿಂಚುಗಳ ಪ್ರಭಾವ ಪುಂಜವನೊಳಗೊಂಡು ಪ್ರಕಾಶಿಸುತ್ತಿರ್ದ ಶಿಖಾಗ್ರದ, ಸೂಕ್ಷ್ಮ ಚಿತ್ಕಲಾಲಿಂಗವು ಭಾವಮನ ದೃಷ್ಟಿಗಳಿಂ ಬಹಿಷ್ಕರಿಸಿ ವೃತ್ತಗೋಳಕ, ಗೋಮುಖಾಕಾರದಿಂ, ವ್ಯಕ್ತೀಕರಿಸಿ, ಸರ್ವಲಕ್ಷಣ ಸಂಪೂರ್ಣವಾಗಿ, ಪರಮ ಲೀಲೋಲ್ಲಾಸ ಭಕ್ತಿಭಾವ ಭರಿತಾಂತಃಕರಣನಾಗಿರ್ಪ ಅನಾದಿ ಜಂಗಮದ ವಾಮಕರದಲ್ಲಿ ಸ್ಥಾಪ್ಯವಾಗಿರ್ಪವು. ಇದನ್ನುದ್ಧರಿಸುವ ಕ್ರಮವೆಂತೆಂದೊಡೆ"[೨೨] ಎಂಬ ಸಾಹಿತ್ಯವಿದ್ದು, ಅದನ್ನು ದೃಶ್ಯ ಅಥವಾ ರೇಖಾತ್ಮಕವಾಗಿ ಹೀಗೆ ಚಿತ್ರಿಸಲಾಗಿದೆ. ಲಿಂಗದಶಕ್ತಿ ಹಾಗೂ ಲಕ್ಷಣಗಳನ್ನು ಬಿಂಬಿಸುತ್ತಿರುವ ಈ ಉದ್ಧರಣೆ ಚಿತ್ರದಲ್ಲಿ ಎಂಟು ಅಡ್ಡ ರೇಖೆಗಳು, ನಾಲ್ಕು ಉದ್ದ ರೇಖೆಗಳನ್ನು ವಿವಿಧ ಅಳತೆಗಳಲ್ಲಿ ಬಳಸಿಕೊಂಡು ಚಿತ್ರಿಸಲಾಗಿರುವ ಈ ಲಿಂಗದ ಕೆಳಗೆ ಅಲಂಕೃತ ಪೀಠವನ್ನು ಚಿತ್ರಿಸಲಾಗಿದೆ. ಪೀಠದ ಎರಡೂ ಬದಿಯಲ್ಲಿ ಸಣ್ಣ ವೃತ್ತಗಳನ್ನು ಚಿತ್ರಿಸಿದ್ದು, ಒಂದೊಮ್ಮೆ ತೇರಿನಾಕೃತಿಯನ್ನೂ ಬಿಂಬಿಸುವಂತಿದೆ. ಈ ಸಂಪೂರ್ಣ ಲಿಂಗಾಕೃತಿಯ ಸುತ್ತಲೂ ಕಮಾನಿನಾಕಾರವನ್ನು ಚಿತ್ರಿಸಲಾಗಿದೆ. ಈ ಕಮಾನನ್ನು ಒಳಗೊಂಡಂತೆ ಹಸ್ತಪ್ರತಿಯ ಅಂಚಿನವರೆಗೂ ಅಲಂಕೃತ ಚೌಕಟ್ಟನ್ನು ರಚಿಸಲಾಗಿದೆ.

೬. ಶಾಂಭವಿ ಚಕ್ರೋದ್ಧರಣೆ

ಈ ಚಿತ್ರದಲ್ಲಿ ಹಸ್ತಪ್ರತಿಯ ಮಧ್ಯಭಾಗಕ್ಕೆ ಎರಡಂಗುಲದ ವೃತ್ತವನ್ನು ರಚಿಸಿ ಅನಂತರದಲ್ಲಿ ಮೂರು ಅಂಗುಲ, ನಾಲ್ಕು ಅಂಗುಲ, ಐದು, ಆರು, ಏಳು ಅಂಗುಲಗಳ ವೃತ್ತಗಳನ್ನು ಒಂದೇ ಮಧ್ಯಬಿಂದುವಿನಿಂದ ಚಿತ್ರಿಸಲಾಗಿದೆ. ಎರಡಂಗುಲದ ಮಧ್ಯದ ವೃತ್ತವನ್ನು ಬಿಟ್ಟು ಅದರ ನಂತರದ ವೃತ್ತದಲ್ಲಿ ನಾಲ್ಕೂ ಕಡೆಗಳಲ್ಲಿ ಎಲೆಯಾಕಾರದಲ್ಲಿ ಚಿತ್ರಿಸಿದ್ದು, ನಂತರದ ವೃತ್ತದಲ್ಲಿ ಎಂಟು, ಅದರ ನಂತರದ ವೃತ್ತದಲ್ಲಿ ಹದಿನಾರು ಅದರ ನಂತರದ ವೃತ್ತದಲ್ಲಿ ಮುವತ್ತೆರಡು ಎಲೆಗಳನ್ನು ಚಿತ್ರಿಸಲಾಗಿದೆ. ಒಂದು ಹಸ್ತಪ್ರತಿಯು ಬೆನ್ನುಭಾಗ ಮತ್ತೊಂದರ ಮುಖಭಾಗಗಳನ್ನು ಸೇರಿಸಿ ರಚಿಸಲಾಗಿರುವ ಈ ವೃತ್ತಾಕೃತಿಯು ಒಂದೇ ಗರಿಯಲ್ಲಿ ಚಿತ್ರಿತವಾದಷ್ಟು ಸ್ಪಷ್ಟ ಹಾಗೂ ಶಿಸ್ತುಬದ್ಧವಾಗಿ ರಚಿತವಾಗಿದೆ. ಈ ವರ್ತುಲದ ಸುತ್ತಲೂ ಅಲಂಕಾರಿಕ ಚೌಕಟ್ಟನ್ನು ಚಿತ್ರಿಸಲಾಗಿದೆ.

---

೨೧. ಡಾ.ಕೆ. ರವೀಂದ್ರನಾಥ(ಸಂ), ಉದ್ಧರಣೆ ಸಾಹಿತ್ಯ, ೨೦೧೦.
೨೨. ಡಾ.ಕೆ. ರವೀಂದ್ರನಾಥ(ಸಂ), ಉದ್ಧರಣೆ ಸಾಹಿತ್ಯ, ೨೦೧೦.

ಹೀಗೆ ದೃಶ್ಯೀಕರಿಸಿದ ಚಿತ್ರದ ಸಾಹಿತ್ಯವು ಹೀಗಿದೆ- "ಚತುರಾಶ್ರಯ ಮಧ್ಯದಲ್ಲಿ ಮೂಡಪಡುವ ತೆಂಕ ಬಡಗವಾರಂಗುಲವಹ ಹಾಂಗೆ ಮಧ್ಯಸ್ಥಾನದಲ್ಲಿ ಕಪ್ಪೆಯಾಕಾರದ ಮೊನೆಯನೂರಿ, ಮತ್ತೊಂದು ಮೊನೆಗೆ ಬತ್ತಿಯಂ ಸುತ್ತಿ ಎರಡಂಗುಲ ಪ್ರಮಾಣವಹ ಹಾಂಗೆ ಮಾಡಿ ಪಿತವರ್ಣದಿಂ ತಿರುಹಲದು ಕರ್ನಿಕಾವೃತ್ತವೆನಿಸುವುದು. ಆ ಕನಿಕಾವೃತ್ತದ ಬಹಿ ಪ್ರದೇಶದಲ್ಲಿ ಒಂದು ವೃತ್ತವಾ ಮೂರಂಗುಲ ಪ್ರಮಾಣದಿಂದ ಹಾಂಗೆ ರಕ್ತವರ್ಣದಿಂ ಮತ್ತೊಂದು ವೃತ್ತವಾವೈದಂಗುಲ ಪ್ರಮಾಣವಹ ಹಾಂಗೆ ಹೆಚ್ಚಿಸಿ ಕೃಷ್ಣವರ್ಣದಿಂ ಮತ್ತೊಂದು ವೃತ್ತವಾವೈದಂಗುಲ ಪ್ರಮಾಣವಹ ಹಾಂಗೆ ಹೆಚ್ಚಿಸಿ ಶ್ವೇತವರ್ಣದಿಂ ಮತ್ತೊಂದು ವೃತ್ತವಾ ಹಾಂಗೆ ಒಂದಾನೊಂದ ಬಳಸಿಕೊಂಡಿರ ಹಾಂಗೆ ತಿರುಹಲು ಮಧ್ಯದಲ್ಲಿ ವರ್ಣತ್ರಯಾತ್ಮಕವಾದ ವೃತ್ತತ್ರಯಂಗಳು ಮೂಡಲು ತ್ರಯಂಗಳೆನಿಸಿಕೊಂಬವು."[೨೩]

## ೭. ವೃಷಬೋದ್ಧರಣೆ

ಈ ಚಿತ್ರದಲ್ಲಿ ವೃಷಣ ಅಥವಾ ನಂದಿಯನ್ನು ಚಿತ್ರಿಸಲಾಗಿದ್ದು, ರಭಸದಿಂದ ಹೋಗುತ್ತಿರುವಂತೆ ಭಾಸವಾಗುವ ರೀತಿಯಲ್ಲಿ ಕಾಲುಗಳನ್ನು ಚಿತ್ರಿಸಲಾಗಿದೆ. ದೈವೀ ಸ್ವರೂಪ ತನ್ನ ಅನಾದಿ ಚಿತ್‌ಚೈತನ್ಯವೇ ವೃಷಭೇಶ್ವರ ರೂಪ ಧರಿಸಿದಂತಿದೆ. ವೀರಶೈವನ ಭಕ್ತಿ ಜೀವನಕ್ಕೆ ಆಶ್ರಯ ಆಧಾರವಾದ ಷಡುಸ್ಥಲ, ಪಂಚಾಚಾರ, ಅಷ್ಟಾವರಣಗಳು ಮೂರ್ತಿಗೊಂಡಂತಿದೆ. ವೃಷಭನ ಒಂದು ಕಾಲಿನ ಅಡಿಯಲ್ಲಿ ಮನುಷ್ಯ ರುಂಡವಿದ್ದು, ಅದರ ಮೇಲೆ ಕಾಲಿರಿಸಿದಂತೆ ಚಿತ್ರಿಸಲಾಗಿದೆ. ವೃಷಭ ಶರೀರದ ಮೇಲೆ ನವಚಕ್ರವನ್ನು ಚಿತ್ರಿಸಿದೆ. ಒಟ್ಟು ಚಿತ್ರಕ್ಕೆ ಅಲಂಕಾರಿಕ ನಕ್ಷಾ ಚೌಕಟ್ಟನ್ನು ಚಿತ್ರಿಸಲಾಗಿದೆ.

ಈ ಚಿತ್ರದ ಸಾಹಿತ್ಯ ಇಂತಿದೆ- "ಇಂತಪ್ಪ ನಿತ್ಯ ನಿರವಯ ನಿರಂಜನ ಸತ್ಯಜ್ಞಾನ ನಂದಮಯವಪ್ಪ ಅಖಂಡ ತೇಜೋಮೂರ್ತಿಯಾದ ಮಹಾಘನಲಿಂಗವು, ಸ್ವಲೀಲೆಯಿಂದ ಸಕಲ ತತ್ತ್ವ ಬ್ರಹ್ಮಾಂಡ ಜಗತ್ ಸಚರಾಚರಂಗಳಂ ರಚಿಸಿ, ತಾನವಕ್ಕಾಧಾರ ಕರ್ತೃವೆನಿಸಿ ತನಗೊಂದಾಧಾರವ ಯೋಚಿಸಲಾಕ್ಷಣ, ತನ್ನನಾದಿ ಚಿಚೈತನ್ಯವೇ ಸ್ಫುರಿಸಿ ಮೂರ್ತಿಗೊಂಡು ಷಡುಸ್ಥಲ ಜ್ಞಾನವೇ ಪ್ರಾಣ, ಪಂಚಾಚಾರವೇ ಅಂಗವಾಗಿ ಭಸ್ಮೋದ್ಧೂಳಿತ ವಿಗ್ರಹ ಗಾತ್ರದಿಂ ರುದ್ರಾಕ್ಷಭರಣ, ರಚಿತಾಲಂಕಾರದಿಂ, ಪಂಚಾಕ್ಷರಿ ಮಂತ್ರಭಾಷಾ ಸಮೇತನಾಗಿ, ಭಕ್ತಿ ಬಾವಂತಕರಣದಿಂ ಕರಕಮಲಮಂ ಮುಗಿದು ಬಿನ್ನವಿಸುತ್ತಿರ್ದ ಜಗದಾನಂದ ಕಾರಣ ಪುರುಷನಾದ ಭಕ್ತನಪ್ಪಾ ನಂದಿಕೇಶ್ವರನೇ ಸದ್ಧರ್ಮ ವಾಹನನೆನಿಸಿ ಜಗವನುದ್ಧರಿಸಿದ ವೃಷಭೇಶ್ವರನ ಸ್ವರೂಪು ಲಕ್ಷಣ ಭಕ್ತಿ ಪ್ರಭಾವತಿಶಯವೆಂತೆಂದೊಡೆ."[೨೪]

## ೮. ಜ್ಞಾನ ಚಕ್ರೋದ್ಧರಣೆ

ಈ ಉದ್ಧರಣೆ ಚಿತ್ರದಲ್ಲಿ ಹನ್ನೆರಡು ಭಾಗಗಳನ್ನು ರಚಿಸಿಕೊಂಡು ಮಧ್ಯದಲ್ಲಿ ಷಟ್‌ಸ್ಥಲವನ್ನು ರಚಿಸಲಾಗಿದೆ. ಮಧ್ಯಭಾಗದಿಂದ ಕೊನೆಯವರೆಗೂ ಹಲವಾರು ಅಡ್ಡ, ಉದ್ದ, ಓರೆಯಾಗಿ

---

೨೩. ಡಾ.ಕೆ. ರವೀಂದ್ರನಾಥ(ಸಂ), ಉದ್ಧರಣೆ ಸಾಹಿತ್ಯ, ೨೦೧೦.

೨೪. ಡಾ.ಕೆ. ರವೀಂದ್ರನಾಥ(ಸಂ), ಉದ್ಧರಣೆ ಸಾಹಿತ್ಯ, ೨೦೧೦.

ರೇಖೆಗಳನ್ನೆಳೆದಿರುವದರಿಂದ ಚಿತ್ರವು ಗೊಂದಲವಾಗಿ ಕಾಣಿಸುತ್ತದೆ. ಈ ಚಕ್ರದ ಸುತ್ತಲೂ ಅಲಂಕಾರಿಕ ಚೌಕಟ್ಟನ್ನು ನಿರ್ಮಿಸಲಾಗಿದೆ. ಪಕ್ಕದಲ್ಲಿ ವೃತ್ತಾಕಾರವನ್ನು ರಚಿಸಿ ಅದರ ಮಧ್ಯದಲ್ಲಿ ಕೈವಾರದಿಂದ ಅರ್ಧ ವೃತ್ತಗಳನ್ನೆಳೆಯುತ್ತಾ ಅರಳಿದ ಹೂದಳಗಳಂತೆ ಕಾಣುವ ನಕ್ಷಾಚಿತ್ರವು ಉದ್ಧರಣೆಯ ಭಾಗವಲ್ಲ.

ಇಂತಪ್ಪ ಶಿವಯೋಗಿಯ ಶಿವಜ್ಞಾನ ಚೈತನ್ಯ ಅಕ್ಷರಜ್ಞಾತ್ವಾದಿ ಭೇದಂಗಳನೊಳಗೊಂಡು ವ್ಯಾವೃತ್ತಮಾಗಿರ್ಪ ಕಾರಣದಿಂ ಜ್ಞಾನ ಚಕ್ರವೆನಿಸಿತು- ಎಂಬ ಸಾಹಿತ್ಯ ವಿವರಣೆ ಇದೆ.

**ಅಲಂಕಾರಿಕ ಮತ್ತು ನಕ್ಷಾಚಿತ್ರಗಳು**

ಬರವಣಿಗೆಯೇ ಪ್ರಮುಖವಾದ ತಾಳೆಗರಿಗಳ ಮೇಲೆ ಆರಂಭದಲ್ಲಿ ಖಾಲಿ ಉಳಿದಿರುವಂತ ಸ್ಥಳಗಳನ್ನು, ಅಲಂಕೃತವಾಗಿ ಶ್ರೀಕಾರ ಹಾಕುವುದು, ಪುಷ್ಪದಳದಂತಹ ದಳಗಳು ಐದು, ಒಂಭತ್ತು, ಎಂಟು ಅಂಕಿಗಳ ಮುತ್ತಿನಾಕೃತಿಗಳು, ಶ್ರೀಕಾರಗಳ ಪಕ್ಕದಲ್ಲಿ ಎರಡು ಜೋಡಿ ಗೆರೆಗಳನ್ನು ರಚಿಸುವುದು ಲಿಂಗದಾಕೃತಿಗಳನ್ನು ರಚಿಸಿರುವುದನ್ನು ಕಾಣಬಹುದು. ಮಾತ್ರವಲ್ಲದೇ ಅಲಂಕೃತವಾದ ಒಂದೇ ಅಲೆಯಲ್ಲಿ ತೇಲಿರುವಂತೆ, ಒಂದರ ಕೆಳಗೊಂದರಂತೆ ವಕ್ರ ರೇಖೆಗಳನ್ನು, ರಂಗೋಲಿ ಕಲೆಯಲ್ಲಿ ಹಾಕುವ ಬಳ್ಳಿಯಂತಹ ರೇಖೆಯನ್ನು ರಚಿಸಲಾಗಿರುತ್ತದೆ. ಇನ್ನೂ ಹತ್ತು ಹಲವು ರೀತಿಯ ಹೆಸರಿಸಲು ಅಸಾಧ್ಯವೆನಿಸುವಂತಹ ಅಲಂಕೃತ ವಿನ್ಯಾಸಗಳನ್ನು ಕಾಣಬಹುದಾಗಿದೆ.

ಹಾಗೆ ಅರೆಬರಹಗಳಿಂದಾಗಿ ಹಸ್ತಪ್ರತಿಗಳಲ್ಲಿ ಖಾಲಿ ಇರುವ ಸ್ಥಳಗಳನ್ನು ಇಂತಹ ಅಲಂಕೃತ ನಕ್ಷೆಗಳಿಂದ ತುಂಬಿಸಿರುವ ಹಲವಾರು ಉದಾಹರಣೆಗಳನ್ನು ಕಾಣಬಹುದು. ಇವು ಸೌಂದರ್ಯಕ್ಕಾಗಿ ರಚನೆಗೊಂಡ ಚಿತ್ರಗಳಿಗಿಂತ ಹೆಚ್ಚಾಗಿ ಅರೆಬರಹದ ಅನಿಷ್ಟವನ್ನು ನಿವಾರಿಸಿಕೊಳ್ಳಲು ಬರೆದ ಚಿತ್ರಗಳಾಗಿವೆ ಎಂಬುದು ಸ್ಪಷ್ಟಗೊಳ್ಳುತ್ತದೆ. ಇವುಗಳಿಗೆ ಜಿಲ್ಲೆಯ ಹಸ್ತಪ್ರತಿಗಳಲ್ಲಿ ದೊರೆತ ಕೆಲವು ಅಲಂಕಾರಿಕ ಚಿತ್ರಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ.

ಜಿಲ್ಲೆಯ ಶಿವಯೋಗ ಮಂದಿರದ ಸಂಗ್ರಹದಲ್ಲಿರುವ ಗ್ರಂ.ಸಂಖ್ಯೆ ೪೪ರಲ್ಲಿ ಕೊನೆಯ ಪುಟದಲ್ಲಿ ಪುಷ್ಪಾಕೃತಿ, ಶ್ರೀಕಾರ ವರ್ತುಲಗಳನ್ನು ಬರೆಯದೇ ಉಳಿದ ಸ್ಥಳದಲ್ಲಿ ಚಿತ್ರಿಸಿರುವುದನ್ನು ಕಾಣಬಹುದು.

ಶಿವಯೋಗ ಮಂದಿರದಲ್ಲಿಯ ಗ್ರಂ.ಸಂಖ್ಯೆ ೨೧೯ರಲ್ಲಿಯ ಪ್ರತಿಯ ಅಂತ್ಯದಲ್ಲಿ ಲಿಂಗದಾಕಾರಗಳು, ನಕ್ಷತ್ರಾಕಾರಗಳು, ಚಿತ್ರಿತಗೊಂಡಿವೆ. ಇದರ ನಂತರದ ಪ್ರತಿಯಲ್ಲಿ ಅರಳಿದ ಕಣಿಗಲ ಹೂವಿನಂತಿರುವ ಆಕೃತಿಗಳನ್ನು ಪುಟದ ತುಂಬೆಲ್ಲ ಚಿತ್ರಿಸಲಾಗಿದೆ.

ಅಗತ್ಯತೆಗಳಿಗನುಗುಣವಾಗಿ ರಚನೆಗೊಂಡಂತಹ ಚಿತ್ರಗಳದ್ದೊಂದು ಬಗೆಯಾದರೆ, ಉದ್ದೇಶಪೂರ್ವಕವಾಗಿ ಅಲಂಕಾರಿಕ ನಕ್ಷಾಚಿತ್ರಗಳನ್ನು ರಚಿಸಿರುವುದು ಇನ್ನೊಂದು ಬಗೆ. ಹಸ್ತಪ್ರತಿಗಳ ರಕ್ಷಣೆಯ ದೃಷ್ಟಿಯಿಂದ ಬರಹ ಆರಂಭವಾದ ಗರಿಯ ಮೊದಲಲ್ಲಿ ಹಾಗೂ ಬರಹ ಅಂತ್ಯವಾದ ನಂತರದಲ್ಲಿ ಎರಡು, ಮೂರು ಖಾಲಿ ಗರಿಗಳನ್ನು ಜೋಡಿಸಿಕೊಳ್ಳಲಾಗುತ್ತಿತ್ತು. ಸೌಂದರ್ಯೋಪಾಸನೆ ಹಾಗೂ ರಕ್ಷಣೆ ಈ ಎರಡು ಕಾರ್ಯಗಳ ನಿರ್ವಹಣೆಗಾಗಿ ಆ ಖಾಲಿ ಗರಿಗಳ ಮೇಲೆ ಪ್ರಾಣಿ. ಪಕ್ಷಿ. ಹೂಗಳ ಅಲಂಕಾರಿಕ

ವಿನ್ಯಾಸವನ್ನೂ, ಕೈವಾರ, ಕಂಟ ಹಾಗೂ ಅಳತೆಪಟ್ಟಿಗಳ ಸಹಾಯದಿಂದ ಚೌಕ, ತ್ರಿಕೋನ, ವರ್ತುಲ, ಅರ್ಧವರ್ತುಲ, ಅಷ್ಟಕೋನ, ಷಟ್ಕೋನ ಇತ್ಯಾದಿ V ಜ್ಯಾಮಿತಿ ನಕ್ಷೆಗಳನ್ನು ಅಲಂಕಾರಿಕ ನಕ್ಷಾಚಿತ್ರಗಳನ್ನು ರಚಿಸಲಾಗಿದೆ.

ಜಿಲ್ಲೆಯ ಶಿವಯೋಗ ಮಂದಿರದ ಹಸ್ತಪ್ರತಿ ಸಂಗ್ರಹದ ಗ್ರ.ಸಂ. ೪೪ರಲ್ಲಿ ಬರಹ ಅಂತ್ಯಗೊಂಡ ನಂತರದ ಗರಿಯಲ್ಲಿ ಅಂಚಿನುದ್ದಕ್ಕೂ ಎದುರುಬದುರಾದ ಓರೆ ರೇಖೆಗಳು ಒಂದನ್ನೊಂದು ಛೇದಿಸುವಂತೆ ಚಿತ್ರಿಸಲಾಗಿದ್ದು, ಇಲ್ಲಿ ಚೌಕೋನದ ಸರಪಳಿ ಉಂಟಾಗಿದೆ. ಚೌಕೋನಗಳ ಮಧ್ಯೆದಲ್ಲಿ ಕೈವಾರದಿಂದ ರಚಿಸಿದ ಅಷ್ಟದಳದ ಪುಷ್ಪ ಅವತರಿತ ವರ್ತುಲಗಳು, ಕಳಸದಂತಹ ಆಕೃತಿಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ. ಅನಂತರ ಶಿವಯೋಗ ಮಂದಿರದಲ್ಲಿರುವ ಇನ್ನುಳಿದ ಹಸ್ತಪ್ರತಿ ಗ್ರಂಥಗಳಲ್ಲಿ ವರ್ತುಲದ ನಕ್ಷಾಚಿತ್ರಗಳಿದ್ದು, ಅವುಗಳ ವಿವರಣೆಯನ್ನು ಮುಂದೆ ವಿವರಿಸಲಾಗಿದೆ.

**ಆ. ಫಲಕ**

ತಾಳೆಗರಿಗಳ ಮೇಲೆ ಕಂಟದ ಮೊನೆಯಿಂದ ಗೀರಿ ಬರೆದ ರೇಖಾಚಿತ್ರಗಳಂತಹ ಪತ್ರಚ್ಛೇದನ ಕಲೆಯ ಈ ಬಗೆಯ ಚಿತ್ರಗಳು ಒಂದು ರೀತಿಯವು. ಇನ್ನೊಂದು ಬಗೆಯ ಚಿತ್ರಗಳೆಂದರೆ ಕಾಗದ ಹಾಗೂ ಕಟ್ಟಿಗೆ, ರಟ್ಟು ಸುತ್ತಿದ ಅರಿವೆಗಳ ಮೇಲೆ ರಚಿಸಲಾದ ಚಿತ್ರಗಳು. ಇಂಥ ಚಿತ್ರಗಳು ಕಾಗದ ಹಸ್ತಪ್ರತಿಗಳಲ್ಲಿ ಅಲಂಕಾರಗಳಂತೆಯೂ, ಸಾಂದರ್ಭಿಕ ಚಿತ್ರಗಳಾಗಿಯೂ ರಚನೆಗೊಂಡಿವೆ. ಇಂಥ ವರ್ಣ ಚಿತ್ರಗಳು ಹಸ್ತಪ್ರತಿ ರಕ್ಷಾ ಕವಚದಂತಿರುವ ಕಟ್ಟಿಗೆ ಫಲಕಗಳ ಮೇಲ್ಗಡೆಯಲ್ಲಿ ಮತ್ತು ಒಳಗಡೆಯಲ್ಲಿ ಚಿತ್ರಿತವಾಗಿರುವುದನ್ನು ಕಾಣಬಹುದು.

ಇಂಥ ವರ್ಣ ಚಿತ್ರಗಳ ರಚನಾತಂತ್ರ- ವಿಧಾನಗಳನ್ನು, ಅದಕ್ಕೆ ಬಳಕೆಯಾಗುವ ವರ್ಣ, ಲೆಕ್ಕಣಿಕೆ, ಕುಂಚ ಮುಂತಾದ ಸಾಧನ-ಸಲಕರಣೆಗಳ ಕುರಿತ ಮಾಹಿತಿಯನ್ನು ಇಲ್ಲಿ ಕೊಡಲಾಗಿದೆ. ಜಿಲ್ಲೆಯಲ್ಲಿ ದೊರೆತ ಚಿತ್ರಗಳೆಲ್ಲವೂ ಫಲಕಗಳ ಮೇಲಿನ ವರ್ಣಚಿತ್ರಗಳಾಗಿವೆ. ಈ ವರ್ಣಚಿತ್ರಗಳ ರಚನಾತಂತ್ರ ವಿಧಾನವನ್ನು ಫಲಕ ಸಿದ್ದತಾ ಹಂತ, ವರ್ಣಚಿತ್ರ ರಚನಾ ಹಂತಗಳೆಂದು ಎರಡು ವಿಭಾಗಗಳಾಗಿ ವಿಂಗಡಿಸಬಹುದು.

ಹಸ್ತಪ್ರತಿಗ್ರಂಥ ಪೂರ್ಣಗೊಂಡ ನಂತರ ಅದರ ಅಳತೆಗಿಂತ ಹೆಚ್ಚು ಅಳತೆಯ ಫಲಕಗಳನ್ನು ಬಡಿಗರು ಸಿದ್ದಪಡಿಸುತ್ತಾರೆ. ಹಸ್ತಪ್ರತಿ ಕಟ್ಟಿನ ಮೊದಲೊಂದು ಅನಂತರ ಅಂತ್ಯದಲ್ಲೊಂದು ಫಲಕಗಳನ್ನು ಜೋಡಿಸಿರಲಾಗಿರುತ್ತದೆ. ಹೆಚ್ಚಾಗಿ ಬಿಲ್ವಪತ್ರಿ ಮರದ ಅಥವಾ ತೇಗದ ಮರದ ಕಟ್ಟಿಗೆಯನ್ನು ಉಪಯೋಗಿಸಿ, ಫಲಕಗಳನ್ನು ತಯಾರಿಸಿ, ಅನಂತರದಲ್ಲಿ ಅವುಗಳ ಅಂಚನ್ನು ಇಳಿಜಾರುಗೊಳಿಸಿ, ಅಂಚುಗಳನ್ನು ನುಣುಪುಗೊಳಿಸುವ ಕಾರ್ಯವನ್ನು ಬಡಿಗರು ಮಾಡುತ್ತಿದ್ದರು. ಇದು ಫಲಕ ಸಿದ್ಧತಾ ಹಂತವಾಗಿದೆ.

ಅನಂತರದ್ದು ವರ್ಣಚಿತ್ರ ರಚನಾಹಂತ. ಇಲ್ಲಿ ವರ್ಣಚಿತ್ರಕಾರರು ಗ್ರಂಥಗಳ ಮುಖಪುಟ ವಿನ್ಯಾಸಗೊಳಿಸುವಂತೆ ಫಲಕಗಳನ್ನು ಸುಂದರವಾಗಿ ವಿನ್ಯಾಸಗೊಳಿಸುತ್ತಿದ್ದರು. ಫಲಕಗಳ ಮೇಲೆ ಚಿತ್ರವನ್ನು ಬರೆಯಲು ಬೇಕಾಗುವ ಸಾಮಗ್ರಿ ಹಾಗೂ ಸಿದ್ಧತೆ ಕುರಿತು ಒಂದೊಂದಾಗಿ ಅವಲೋಕಿಸಲಾಗಿದೆ.

**ಚಿತ್ರ-ವರ್ಣಚಿತ್ರ ರಚನಾತಂತ್ರ-ವಿಧಾನಗಳು**

**ಅ. ವರ್ಣ**

ಹಸ್ತಪ್ರತಿ ಫಲಕಗಳ ಮೇಲಿನ ವರ್ಣಚಿತ್ರಗಳನ್ನು ಗಮನಿಸಲಾಗಿ, ಹೆಚ್ಚಾಗಿ ನೈಸರ್ಗಿಕವಾಗಿ ದೊರೆಯುವಂತಹ ವರ್ಣಗಳನ್ನೇ ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಬಿಳಿ, ಕಪ್ಪು, ಕೆಂಪು, ಹಳದಿ, ಹಸಿರು ಹಾಗೂ ನೀಲಿ ವರ್ಣಗಳನ್ನು ನೈಸರ್ಗಿಕವಾಗಿ ಸಿದ್ಧಪಡಿಸಿಕೊಂಡು, ಅವಶ್ಯಕವೆನಿಸಿದಾಗ ಈ ಮೂಲವರ್ಣಗಳನ್ನು ಮಿಶ್ರಣ ಮಾಡಿ ವರ್ಣಶ್ರೇಣಿಗಳನ್ನು ತಯಾರಿಸಿಕೊಂಡು ಚಿತ್ರರಚನೆ ಮಾಡಲಾಗಿದೆ.

ಪ್ರಾಚೀನ ಕಲಾವಿದ ಬಳಸಿಕೊಂಡಿರುವಂತೆ ನೈಸರ್ಗಿಕವಾದ ವಸ್ತುಗಳನ್ನು ಸಂಸ್ಕರಿಸಿ, ವರ್ಣಗಳನ್ನು ತಯಾರಿಸಿಕೊಳ್ಳುತ್ತಿದ್ದುದು ತಿಳಿಯುತ್ತದೆ. ಬಿಳಿ ವರ್ಣವನ್ನು ಬಳಪದ ಕಲ್ಲನ್ನು ನೀರಿನಲ್ಲಿ ತೇಯ್ದು, ಅದನ್ನು ಅಂಟು ಪದಾರ್ಥದಲ್ಲಿ ಮಿಶ್ರಣ ಮಾಡಿ ತಯಾರಿಸಿಕೊಳ್ಳುತ್ತಿದ್ದರು. ಕಪ್ಪು ವರ್ಣವನ್ನು ಕುಡಿಯಿರುವ ದೀಪದ ಮೇಲೆ ಮಣ್ಣಿನ ಮುಚ್ಚಳವನ್ನಿಟ್ಟು, ಅದರ ಕಾಡಿಗೆ ಅಥವಾ ಕರ್ಪೂರ ಮಿಶ್ರಿತ ಬತ್ತಿಯನ್ನು, ಸಾಸಿವೆ ಎಣ್ಣೆ ಹಾಕಿ, ದೀಪ ಹಚ್ಚಿ ಅದರಿಂದ ದೊರೆತ ಕಾಡಿಗೆಯನ್ನು ಅಂಟು ದ್ರವ್ಯದಲ್ಲಿ ಬೆರೆಸಿ ಬಳಸಿಕೊಂಡಿರಬಹುದಾಗಿದೆ. ಕೆಂಪುವರ್ಣಕ್ಕಾಗಿ ಹುರುಮಂಜನ್ನು ಸೋಸಿ, ಸಂಸ್ಕರಿಸಿ ಬಳಸಿಕೊಂಡಿರಬಹುದಾಗಿದೆ. ನೀಲಿ, ಹಳದಿ ವರ್ಣಗಳನ್ನು ಅವುಗಳ ವರ್ಣದ ಶಿಲೆಯನ್ನು ತೇಯ್ದು ಅಥವಾ ನೈಸರ್ಗಿಕವಾಗಿ ದೊರೆತ ಖನಿಜಗಳಿಂದ ಅಥವಾ ಸಸ್ಯಮೂಲಗಳಿಂದ ಪಡೆದು, ಸಂಸ್ಕರಿಸಿಕೊಂಡಿರಬಹುದಾಗಿದೆ.

**ಆ. ಕುಂಚ ಮತ್ತು ಲೆಕ್ಕಣಿಕೆ**

ಇಲ್ಲಿಯೂ ಸಹ ಆದಿಮಾನವ ತಯಾರಿಸಿಕೊಂಡಿರುವಂತೆಯೇ ಪ್ರಾಣಿಗಳ ಕೂದಲುಗಳು, ಇಲ್ಲವೇ ಸಸ್ಯಗಳ ನಾರುಗಳನ್ನು ಬಳಸಿಕೊಂಡು ಕುಂಚಗಳನ್ನು ತಯಾರಿಸಿಕೊಂಡಿರಬಹುದಾಗಿದೆ. ಅಲ್ಲದೇ ಹಸ್ತಪ್ರತಿ ಚಿತ್ರಕಾರರು ಬಹಳ ಶಿಸ್ತುಬದ್ಧವಾಗಿ ತಮ್ಮ ಚಿತ್ರರಚನೆಗೆ ಅನುಕೂಲವಾಗುವ ರೀತಿಯಲ್ಲೇ 'ಅಂಟು' ಅಥವಾ 'ಸರಿ'ಯನ್ನು ಬಳಸಿಕೊಂಡು ದುಂಡಾದ ದಪ್ಪ ಕೂದಲಿನ, ಸೂಕ್ಷ್ಮವಾದ ತೆಳು ಕೂದಲಿನ ಕುಂಚಗಳನ್ನು ತಯಾರಿಸಿಕೊಂಡು ಚಿತ್ರರಚನೆ ಮಾಡಲಾಗಿದೆ.

ಇಲ್ಲಿ ಲೆಕ್ಕಣಿಕೆಯನ್ನು(ಸೀಸದ ಕಡ್ಡಿಯಂತೆ) ಚಿತ್ರಗಳ ಹೊರರೇಖೆಗಳನ್ನು ಹಾಕಲು ಉಪಯೋಗಿಸಿರುವ ಸಾಧನ ಎಂದು ಡಾ.ಬಿ.ಕೆ. ಹಿರೇಮಠ ಅವರು ಪ್ರಸ್ತುತಪಡಿಸಿದ್ದಾರೆ. ಆದರೆ ಈ ವಸ್ತುವಿನ ಬಗೆಗೆ ಖಚಿತತೆ ಸಿಗುವುದು ಕಷ್ಟಸಾಧ್ಯ. ಬದಲಾಗಿ ಆಕೃತಿಗಳಿಗೆ ಹೊರರೇಖೆಗಳನ್ನು ತೆಳು ಕೂದಲಿನ ಸೂಕ್ಷ್ಮ ಕುಂಚ(Point brush)ಗಳಿಂದ ಹಾಕಿರಬಹುದಾಗಿದೆ.

ಕುಂಚಗಳ ತಯಾರಿಕೆಗೆ ಆಡು, ಅಳಿಲು, ಮುಂಗಲಿಗಳ ರೋಮಗಳನ್ನು ಬಳಸಿರಬಹುದು ಎಂದು ಉಲ್ಲೇಖಿಸಿದ್ದು, ಸಾಧ್ಯತೆಗಳನ್ನು ಒಪ್ಪಿಕೊಳ್ಳುವಂತಿದೆ. ಅನಂತರ ಚಿತ್ರರಚನೆ ಆರಂಭಿಸುವುದಕ್ಕೆ ಮುನ್ನ ಫಲಕಗಳ ಮೇಲೆ ಭಿತ್ತಿಯನ್ನು ಸಿದ್ಧಪಡಿಸಿಕೊಳ್ಳಬೇಕಾಗುತ್ತದೆ. ಕೆಲವೊಮ್ಮೆ ಫಲಕಗಳ ನುಣುಪಾದ ಮೇಲ್ಮೈನ ನೇರವಾಗಿ ಮೇಲೆ ಚಿತ್ರ ರಚಿಸಲಾಗಿದ್ದು, ಕೆಲವು ಸಲ ಫಲಕದ ಮೇಲೆ ಅಂಟು ಅಥವಾ ಸರಿಯನ್ನು ಹಚ್ಚಿ ಅದರ ಮೇಲೆ ಒರಟಾದ ಬಟ್ಟೆಯನ್ನು ಮುದ್ದೆಯಾಗದಂತೆ ಲೇಪಿಸಿ, ಒಣಗಿಸಿ, ಚಿತ್ರ ರಚಿಸಿದ ಉದಾಹರಣೆಗಳನ್ನು ಕಾಣಬಹುದಾಗಿದೆ. ಆದರೆ ಸಾಮಾನ್ಯವಾಗಿ ಫಲಕಗಳ ಮೇಲೆ ಬಿಳಿಯ ಲೇಪಕವನ್ನು ಸವರಿ, ಹಿನ್ನೆಲೆ ತಯಾರಿಸಿ ಚಿತ್ರ ರಚಿಸಲಾದ ಉದಾಹರಣೆಗಳೇ ಹೆಚ್ಚಾಗಿವೆ. ಅನಂತರ ಈ ಭಿತ್ತಿಯ ಮೇಲೆ ಯಾವುದಾದರೂ ಒಂದು ವರ್ಣವನ್ನು ಸಮತಟ್ಟಾಗಿ ಲೇಪಿಸಿರಬೇಕು.

ಚಿತ್ರರಚನೆ ಹಂತದಲ್ಲಿ ಮೊದಲಿಗೆ ಕುಂಚಗಳಿಂದ ಆಕೃತಿಗಳ ರೇಖಾಚಿತ್ರಗಳನ್ನು, ಸರಿಯಾದ ಸ್ಥಳಾವಕಾಶ ಹಾಗೂ ಸಂಯೋಜನೆಯಿಂದ ರಚಿಸಬೇಕು. ಅನಂತರದಲ್ಲಿ ಆಕೃತಿಗಳಿಗೆ ಹೊಂದುವ ಬಟ್ಟೆ, ಅಲಂಕರಣ ಸಾಮಗ್ರಿಗಳನ್ನು ಚಿತ್ರಿಸುವುದು. ಮೂರನೆಯದಾಗಿ ಮೈವರ್ಣ, ಬಟ್ಟೆ, ಆಭರಣಗಳ ಹಿನ್ನೆಲೆ ವರ್ಣದೊಂದಿಗೆ ಹೊಂದಿಕೆಯಾಗುವಂತೆ ಚಪ್ಪಟೆಯಾಗಿ ಸಮತಟ್ಟಾಗಿ ಕುಂಚಗಳಿಂದ ವರ್ಣಲೇಪನ ಮಾಡಲಾಗುವುದು.

ಇನ್ನು ಕೊನೆಯ ಹಂತ(Final touchup) ಇದನ್ನು ಮಾತ್ರ ಒಬ್ಬ ನುರಿತ ಕಲಾವಿದನೇ ಮಾಡಬೇಕಾದ ಅನಿವಾರ್ಯತೆ. ಆಕೃತಿಗಳಿಗೆ ಭಾವನೆ ಹಾಗೂ ನಿಜವಾದ ಜೀವಕಳೆ ಬರುವುದು ಕಣ್ಣು, ಮೂಗು, ಬಾಯಿಗಳನ್ನು ಅಂದವಾಗಿ ಬರೆದಾಗ ಮಾತ್ರವೇ. ಕೊನೆಯಲ್ಲಿ ಆಕೃತಿಗಳ ಹೊರರೇಖೆಗಳನ್ನು ಅಂಗಾಂಗಗಳು ಸ್ಪುಟಗೊಳ್ಳುವಂತೆ ಅಂತಿಮವಾಗಿ ಸ್ಪಷ್ಟವಾಗಿ ರೇಖೆಗಳನ್ನು ಎಳೆಯುವುದೇ ಕೊನೆಯ ಹಂತವಾಗಿದೆ.

ಈ ರೀತಿಯಾಗಿ ಚಿತ್ರಗಳು ರಚನೆಗೊಂಡಿರಬಹುದಾಗಿದೆ. ಚಿತ್ರರಚನೆಯ ವಿಧಾನವಾಗಲಿ ಅಥವಾ ಚಿತ್ರಕಾರರ ಹೆಸರುಗಳು ಯಾವುದೇ ಹಸ್ತಪ್ರತಿ ಗ್ರಂಥಗಳಲ್ಲಿ ಉಲ್ಲೇಗೊಂಡಿಲ್ಲ. ಆದರೆ ಹಸ್ತಪ್ರತಿಗಳ ಈ ರಕ್ಷಾಫಲಕಗಳ ಮೇಲಿನ ಚಿತ್ರಗಳ ಆಧಾರದ ಮೇಲೆಯೇ ಇವು ಇಂತಹ ಧರ್ಮದ್ದೇ ಚಿತ್ರಗಳು ಎಂದು ಖಚಿತವಾಗಿ ಹೇಳುವಷ್ಟು ಸ್ಪಷ್ಟವಾಗಿ ಶಿಸ್ತುಬದ್ಧವಾಗಿ ಈ ವರ್ಣಚಿತ್ರಗಳು ರಚನೆಗೊಂಡಿವೆ.

ಫಲಕದ ಮೇಲಿನ ವರ್ಣಚಿತ್ರಗಳಲ್ಲಿ ದೇವಾನುದೇವತೆಗಳು, ಶರಣರು, ಕಾವ್ಯ ಅಥವಾ ಕಥೆಯ ನಾಯಕರುಗಳು, ಮುನಿಗಳು, ಸಿದ್ಧರು, ಅರಸರು, ಸೇವಕರು ಮುಂತಾದ ವ್ಯಕ್ತಿಗಳನ್ನು ಒಳಗೊಂಡ ಚಿತ್ರಗಳನ್ನು ಅವುಗಳ ಜೊತೆಗೆ ನಕ್ಷಾ ಚಿತ್ರಗಳನ್ನು ರಚಿಸಿರುವುದನ್ನು ಕಾಣಬಹುದಾಗಿದೆ. ಜಿಲ್ಲೆಯ ಹಸ್ತಪ್ರತಿಗಳಲ್ಲಿ ವೀರಶೈವ, ವೈಷ್ಣವ ಪಂಥಗಳಿಗೆ ಸಂಬಂಧಿಸಿದ ಚಿತ್ರ, ವರ್ಣಚಿತ್ರಗಳನ್ನು ಕಾಣಬಹುದಾಗಿದೆ. ಜಿಲ್ಲೆಯಲ್ಲಿ ದೊರೆತ ವರ್ಣಚಿತ್ರಗಳಲ್ಲಿ ಶಿವಲಿಂಗ, ನಂದಿ, ಗಣಪತಿ, ಶಿವ, ಪಾರ್ವತಿ, ಶರಣರು, ಮಠದ ಸ್ವಾಮಿಗಳು, ಭಕ್ತರು, ಉತ್ಸವಮೂರ್ತಿ, ಕೃಷ್ಣ, ಗೋಪಿಯರು, ಸೇವಕರು ಮುಂತಾದವುಗಳೇ ವಸ್ತುವಿಷಯಗಳಾಗಿವೆ. ಜೊತೆಗೆ ಅಲಂಕಾರಿಕ ನಕ್ಷಾಚಿತ್ರಗಳನ್ನು ಕೂಡ

ಕಾಣಬಹುದಾಗಿದೆ. ವೀರಶೈವ ಹಾಗೂ ವೈಷ್ಣವ ಧರ್ಮಗಳಿಗೆ ಸಂಬಂಧಿಸಿದ ಅಂಥ ವರ್ಣಚಿತ್ರಗಳ ಪ್ರಾತಿನಿಧಿಕ ಉದಾಹರಣೆಗಳನ್ನು ಇಲ್ಲಿ ಪರಿಶೀಲಿಸಬಹುದು.

*** ಫಲಕ: ಸಾಂದರ್ಭಿಕ ವರ್ಣಚಿತ್ರಗಳು**

**೧. ಶಿವನ ಓಲಗ**

ಈ ಚಿತ್ರದ ಕೆಂಪು ಹಿನ್ನೆಲೆ ವಿನ್ಯಾಸದ ಮಧ್ಯಭಾಗದಲ್ಲಿ ಶಿವನಿದ್ದು, ತೊಡೆಯ ಮೇಲೆ ಗಾತ್ರದಲ್ಲಿ ಚಿಕ್ಕದಾಗಿ ಪಾರ್ವತಿಯನ್ನು ಕುಳ್ಳಿರಿಸಲಾಗಿದೆ. ಶಿವನ ತಲೆಯ ಹಿಂಭಾಗದಲ್ಲಿ ಐದು ಮುಖವಿರುವ ಆದಿಶೇಷನ ಹೆಡೆಗಳಿರುವುದು ವಿಶೇಷ. ಅಲ್ಲದೆ ಶಿವನ ಜಡೆಯಲ್ಲಿ ಗಂಗೆ, ಚಂದ್ರ ಅಸ್ಪಷ್ಟವಾಗಿದ್ದು, ಶಿವನಿಗೆ ಮೀಸೆ ಇರುವುದು ಇನ್ನೂ ವಿಶೇಷ. ಮೇಲಿನ ಬಲದ ಕೈಯಲ್ಲಿ ಡಮರು ಇದ್ದು, ಮೇಲಿನ ಎಡದ ಕೈಯಲ್ಲಿ ತ್ರಿಶೂಲವನ್ನು ಚಿತ್ರಿಸಲಾಗಿದೆ. ಕೆಳ ಬಲಗೈ ಆಶೀರ್ವಾದ ಹಸ್ತವಾಗಿದ್ದು, ಕೆಳ ಎಡಗೈಯಿಂದ ಪಾರ್ವತಿಯನ್ನು ಹಿಡಿದುಕೊಂಡಿರುವುದು ಕಂಡುಬರುತ್ತದೆ. ಶಿವನಿಗೆ ಹುಲಿಚರ್ಮದ ಬದಲು ಹಳದಿ ಬಣ್ಣದ ಧೋತ್ರವನ್ನು ಉಡಿಸಿರುವುದು ವಿಶೇಷವಾಗಿದೆ. ಎಡತೊಡೆಗೆ ಹೊಂದಿಕೊಂಟು ಪುತ್ರ ಗಣಪತಿಯನ್ನು ಚಿತ್ರಿಸಿದ್ದು, ಕೈಯಲ್ಲಿ ಚಾಟಿ ಸೊಂಡಿಲನ್ನು ಒಳಗೆ ತೆಗೆದುಕೊಂಡಿರುವಂತಿದೆ. ಗಣೇಶನಿಗೆ ಆಭರಣಗಳು ಕೆಂಪು ವರ್ಣದ ಕಿರೀಟಗಳಿಂದ ಅಲಂಕೃತಗೊಳಿಸಲಾಗಿದೆ. ಇನ್ನು ಶಿವನ ಬಲಬದಿಯಲ್ಲಿ ಇನ್ನೋರ್ವ ಮಗನೆಂದೆನಿಸಿದ ವೀರಭದ್ರ ಆಸೀನನಾಗಿದ್ದಾನೆ. ಕೆಳ ಬಲಗೈಯಲ್ಲಿ ದೊಡ್ಡದಾದ ಖಡ್ಗ, ಕೆಳ ಎಡಗೈಯನ್ನು ತೊಡೆಯ ಮೇಲೆ ಇಟ್ಟುಕೊಂಡಿದ್ದಾನೆ. ಹಿಂದಿನ ಮೇಲಿನ ಎರಡೂ ಕೈಗಳನ್ನು ಮೇಲೆತ್ತಿ ಏನನ್ನೊ ಹಿಡಿದಿರುವಂತೆ ಗೋಚರವಾಗುತ್ತದೆ. ಹಸಿರು, ಕಪ್ಪು ಬಣ್ಣದ ಮೈಬಣ್ಣವನ್ನು ಹೊಂದಿದ ವೀರಭದ್ರನಿಗೆ ಎದ್ದು ಕಾಣುವಂತೆ ಹಣೆಗೆ ವಿಭೂತಿಯನ್ನು, ಕೊರಳ ಆಭರಣಗಳನ್ನು ಬಿಳಿಯ ವರ್ಣದಲ್ಲಿ ಚಿತ್ರಿಸಲಾಗಿದೆ. ಎಡತೊಡೆಯನ್ನು ಮಡಿಚಿ ಬಲಗೈಯಿಂದ ಬಲಗಾಲನ್ನು ಮಂಡೆಯೂರಿ ಹಿಡಿದುಕೊಂಡಂತೆ ಕಾಣುತ್ತದೆ. ಮಧ್ಯದಲ್ಲಿ ಶಿವ, ಗಣಪತಿ, ವೀರಭದ್ರ ಮೂವರು ಅಲಂಕೃತ ಕಟ್ಟೆಯ ಮೇಲೆ(ಗದ್ದುಗೆ) ಆಶೀನರಾದಂತೆ ಚಿತ್ರಿಸಲಾಗಿದೆ.

ಓಲಗದಲ್ಲಿ ಗಣಪತಿಯ ಹಿಂದೆ ನಾರದಮುನಿಗಳು ಶಿವನಿಗೆ ಏನನ್ನೋ ಹೇಳುತ್ತಿರುವಂತೆ ನಿಂತುಕೊಂಡಿದ್ದಾನೆ. ಹೆಗಲ ಮೇಲೆ ಕೆಂಪು ಶಲ್ಯೆ ಹಿಂದೆ ಹಾರಿದಂತೆ ಚಿತ್ರಿಸಿದ್ದು, ಹಳದಿ ಬಣ್ಣದ ಧೋತರವನ್ನು ಉಟ್ಟುಕೊಂಡಿದ್ದಾರೆ. ಎಡಗೈಯಲ್ಲಿ ತಂಬೂರಿ, ಬಲಗೈಯಲ್ಲಿ ತಾಳ, ಗಡ್ಡ, ಮೀಸೆ, ಎತ್ತರಿಸಿ ಕಟ್ಟಿದ ಜಟಾಯನ್ನು ಚಿತ್ರಿಸಲಾಗಿದೆ. ನಾರದನ ಹಿಂದೆ ನಂದಿ ಇದ್ದು, ಎದ್ದುನಿಂತಂತೆ ಚಿತ್ರಿಸಲಾಗಿದೆ. ಅಲ್ಲಿಯೂ ಕೂಡ ಕೆಂಪು ಧೋತರವನ್ನು ಉಡಿಸಿ ಹಸಿರು ಧೋತರವನ್ನು ಹೆಗಲ ಮೇಲೆ ಹಾಕಲಾಗಿದೆ. ಎರಡೂ ಕೈಯಲ್ಲಿ ಹಾರವನ್ನು ಹಿಡಿದುಕೊಂಡಂತೆ ಚಿತ್ರಿತವಾಗಿದೆ. ಇನ್ನು ಶಿವನ ಬಲಬದಿಯಲ್ಲಿ ವೀರಭದ್ರನ ನಂತರ ಮೂರು ಕಾಲುಗಳುಳ್ಳ ಭೃಂಗಿಯನ್ನು ಚಿತ್ರಿಸಲಾಗಿದ್ದು, ಮೂರೂ ಕಾಲುಗಳಿಗೆ ಹಳದಿ ಬಣ್ಣದ ಧೋತರವನ್ನು ಚಿತ್ರಿಸಿ ಹೆಗಲ ಮೇಲೆ ಶಲ್ಯೆಯನ್ನು ಮೇಲೆತ್ತಿದ ಕೈಯಾಚೆ ಹಾರಿ ಬಿಡಲಾಗಿದೆ. ಕೆಳಮುಖ ಮಾಡಿದ ನೃತ್ಯ ಭಂಗಿ ಇದಾಗಿದ್ದು, ತಲೆಯ ಮೇಲೆ ಅಲ್ಪಸ್ವಲ್ಪ ಜಟವನ್ನು ಚಿತ್ರಿಸಲಾಗಿದೆ. ಭೃಂಗಿಯ

ನಂತರ ಮೃದಂಗವನ್ನು ಹಿಡಿದ ತುಂಬುರ ಹಸಿರು ಬಣ್ಣದ ಧೋತರವನ್ನು ಉಟ್ಟಿದ್ದು ಕೊರಳಿಗೆ ಮೃದಂಗದ ದಾರವನ್ನು ರಚಿಸಲಾಗಿದೆ. ಒಟ್ಟು ೮ ಜನರಿರುವ ಈ ಚಿತ್ರ ಎಲ್ಲರೂ ಒಂದೊಂದು ಭಂಗಿಯಲ್ಲಿ ಇರುವುದು ವಿಶೇಷ. ಅಂಚಿನಲ್ಲಿ ಸೇವಂತಿಗೆಯಂತಹ ಬಿಳಿಯ ಹೂವುಗಳಿಂದ ಅಲಂಕೃತಗೊಳಿಸಲಾಗಿದೆ.

**೨. ಪಗಡೆಯಾಡಲು ಕುಳಿತ ಶಿವ, ಪಾರ್ವತಿಯರು**

ಚಿತ್ರಸಂಖ್ಯೆ ೯ರಲ್ಲಿ ವಿವರಿಸಲಾದ ಪೇಶ್ವೆ ಶೈಲಿಯ ಗಣಪತಿ ಹಾಗೂ ಸರಸ್ವತಿಯ ಚಿತ್ರವನ್ನೇ ಈ ಚಿತ್ರವು ಹೋಲುತ್ತಿದ್ದು, ಆ ಚಿತ್ರದಲ್ಲಿರುವಂತೆ ಇಲ್ಲಿಯೂ ಯಥಾವತ್ತಾಗಿ ಅಂಚಿನ ನಕ್ಷೆಯನ್ನು ಚಿತ್ರಿಸಲಾಗಿದ್ದು, ಮಧ್ಯದಲ್ಲಿ ಎದುರು ಬದುರಾಗಿ ಶಿವ, ಪಾರ್ವತಿಯರು ಪಗಡೆಯಾಡಲು ಕುಳಿತಿದ್ದಾರೆ. ಎಡಗಡೆಗೆ ನಿಂತ ಸೇವಕನು ಶಿವನಿಗೆ ಚಾಮರವನ್ನು ಬೀಸುತ್ತಿದ್ದು, ಬಲಗಡೆಗೆ ಸೇವಕಿಯು ಪಾರ್ವತಿಗೆ ಚಾಮರವನ್ನು ಬೀಸುತ್ತಿರುವಂತೆ ಚಿತ್ರಿಸಲಾಗಿದೆ. ಈ ನಾಲ್ಕೂ ಆಕೃತಿಗಳ ಉಡುಪುಗಳು, ಆಭರಣ ಹಾಗೂ ಇವುಗಳನ್ನು ಚಿತ್ರಿಸಿದ ರೀತಿ ಪೇಶ್ವೆ ಶೈಲಿಯನ್ನು ಹೋಲುತ್ತವೆ. ಶಿವ, ಪಾರ್ವತಿ, ಸೇವಕಿಯ ಉಡುಪುಗಳು ಕೆಂಪು ವರ್ಣದವಾಗಿದ್ದು, ಎಡಭಾಗದಲ್ಲಿರುವ ಸೇವಕನ ಉಡುಪು ಮಾತ್ರ ಬಿಳಿ ವರ್ಣದ್ದಾಗಿದೆ. ಸೇವಕಿಯ ಹಿಂದುಗಡೆ ಬಿಳಿ ವರ್ಣದಲ್ಲಿ ನಂದಿಯನ್ನು ಚಿತ್ರಿಸಲಾಗಿದ್ದು, ಮರದಡಿಯಲ್ಲಿ ವಿಶ್ರಾಂತಿ ಪಡೆಯುತ್ತಿರುವಂತೆ ಗೋಚರಿಸುತ್ತದೆ. ಸೇವಕನ ಹಿಂದುಗಡೆಯಲ್ಲಿ ಅಲಂಕಾರಿಕವಾದ ಅಶೋಕ ಮರವನ್ನು ಹೋಲುವಂತ ಗಿಡಗಳನ್ನು ಚಿತ್ರಿಸಲಾಗಿದೆ. ಹುಲಿಯ ಚರ್ಮದ ಮೇಲೆ ಆಸೀನ ವ್ಯಕ್ತಿಯು ಮಕುಟಧಾರಿಯಾಗಿದ್ದು, ಕೈಯಲ್ಲಿ ಹಿಡಿದಿರುವ ತ್ರಿಶೂಲಗಳಿಂದ ಮಾತ್ರ ಶಿವ ಎಂದು ಗುರುತಿಸಲು ಸಾಧ್ಯವಾಗುತ್ತದೆ. ಶಿವ-ಪಾರ್ವತಿಯರ ಮಧ್ಯದಲ್ಲಿ ಪಗಡೆಯ ಪಟವನ್ನು ಚಿತ್ರಿಸಿರುವುದು ಒಂದು ವಿಶೇಷ. ಶಿವನಿಗೆ ಮೀಸೆ, ಗಡ್ಡಗಳಿವೆ. ಲೋಡುಗಳಿಗೆ ಆತುಕೊಂಡು ಕುಳಿತ ಶಿವ ಪಾರ್ವತಿ ಚಿತ್ರವು ಕಲಾವಿದನ ನೈಪುಣ್ಯತೆಗೆ ಹಿಡಿದ ಕನ್ನಡಿಯಂತಿದೆ.

**೩. ಅಲಂಕೃತ ಶಿವ**

ಈ ಚಿತ್ರದಲ್ಲಿ ಕೆಂಪು ವರ್ಣದ ಹಿನ್ನೆಲೆ ಇದೆ. ಸುಂದರ ವಿನ್ಯಾಸವನ್ನು ಹೊಂದಿದ ಚಿತ್ರವು ಮಧ್ಯದ ಶಿವನಿಗೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಿ ಹಳದಿ ವರ್ಣದಲ್ಲಿ ಚಿತ್ರಿತವಾಗಿದೆ. ತಲೆ, ಕೊರಳು ಮತ್ತು ಕೈಗಳಿಗೆ ರುದ್ರಾಕ್ಷಿ ಸರಗಳಿಂದ ಅಲಂಕೃತಗೊಳಿಸಲಾಗಿದೆ. ಬಲದ ಮೇಲಿನ ಕೈಯಲ್ಲಿ ಕೊಡಲಿ, ಎಡದ ಮೇಲಿನ ಕೈಯಲ್ಲಿ ಡಮರುಗ ಇದೆ. ಕೆಳ ಬಲಗೈಯನ್ನು ಆಶೀರ್ವಾದ ಹಸ್ತವನ್ನು ಲಕ್ಷ್ಮಿ ಹಣ ಸುರಿಯುವಂತೆ ಕೈ ಕೆಳಗೆ ಮಾಡಲಾಗಿದೆ. ಕೆಳ ಎಡಗೈ ಪಾರ್ವತಿ ನಡುವನ್ನು ಹಿಡಿದುಕೊಂಡಂತೆ ಚಿತ್ರಿಸಲಾಗಿದೆ. ಶಿವನ ಎರಡೂ ಕಡೆ ದೊಡ್ಡದಾದ ಕಪ್ಪು ಬಣ್ಣದ ಆನೆಗಳನ್ನು ಎದುರು ಬದುರು ಸೊಂಡಿಲನ್ನು ಮೇಲೆತ್ತಿ ಶಿವನಿಗೆ ಹೂವನ್ನು ಹಾಕುತ್ತಿರುವಂತೆ ಚಿತ್ರಿಸಲಾಗಿದೆ. ಆನೆ ಕೊರಳು, ಬೆನ್ನು, ಬಾಲದ ಕೆಳಗೆ ಹಿಂದಿನ ಕಾಲುಗಳಿಂದ ಹೊಟ್ಟೆಯೊಳಗೆ ಅಲಂಕೃತ ಕೆಂಪು ಬಣ್ಣದ ಪಟ್ಟಿ ವಿನ್ಯಾಸಗಳನ್ನು ರಚಿಸಲಾಗಿದೆ. ಎರಡು ಕಾಲುಗಳನ್ನು ಮೇಲಕ್ಕೆತ್ತಿ ಬಾಲವನ್ನು ಹಿಂದೆ ಚಾಚಿ ಗಜಲಕ್ಷ್ಮಿಯ ರೀತಿ ಆನೆಗಳಿರುವುದನ್ನು ಕಾಣಬಹುದು. ಆದರೆ ಶಿವನಿಗೂ ಈ ಅಲಂಕಾರ ಇರುವುದು ವಿಶೇಷ. ಪಟ್ಟಿಕೆಯ ಉಳಿದ ಸ್ಥಳಗಳಲ್ಲಿ ಕ್ರಿಸ್‌ಮಸ್ ಹೂವಿನಂತೆ

ಆಚೆಈಚೆ ಆನೆಯ ಹಿಂದೆ ಬಿಳಿ ಹೂವುಗಳಿಂದ ಮರ ರಚಿಸಲಾಗಿದೆ. ಆನೆಯ ಮೇಲೆ ಒಂದೊಂದು ಹೂವು ಮತ್ತು ಒಂದೊಂದು ಹೂಬಳ್ಳಿ ಜೋತುಬಿದ್ದಂತೆ ಚಿತ್ರಿಸಲಾಗಿದೆ. ಅಂಚಿನಲ್ಲಿ ಸೇವಂತಿಗೆಯಂತಹ ಬಿಳಿಯ ಹೂವುಗಳಿಂದ ಸಾಲಂಕೃತ ನಕ್ಷೆ ರಚಿಸಲಾಗಿದೆ.

**೪. ಶಿವ-ಪಾರ್ವತಿ**

ಈ ಚಿತ್ರದಲ್ಲಿ ಕೆಂಪು ವರ್ಣದ ಹಿನ್ನೆಲೆಯ ವಿನ್ಯಾಸವಿದ್ದು, ಹಳದಿ ವರ್ಣದಲ್ಲಿ ಹೆಚ್ಚು ಚಿತ್ರವನ್ನು ಪೂರ್ಣಗೊಳಿಸಲಾಗಿದೆ. ಸಾಮಾನ್ಯವಾಗಿ ಶಿವ ಎಂದಾಕ್ಷಣ ಆಧುನಿಕ ತರ್ಕಕ್ಕೆ ಬರುವುದು, ಜಡೆಯಲ್ಲಿ ಚಂದ್ರನಿರುವುದು, ಅಲ್ಲಿರುವ ಗಂಗೆಯ ಬಾಯಿಂದ ನೀರು ಬರುವುದು ಹೀಗೆಲ್ಲಾ ಇರುವ ಶಿವನನ್ನು ಹೊರತುಪಡಿಸಿ ಇಲ್ಲಿ ನಾಟ್ಯಭಂಗಿಯಲ್ಲಿ ಪಾರ್ವತಿಯನ್ನು ತೊಡೆಯ ಮೇಲೆ ಕುಳ್ಳರಿಸಿಕೊಂಡಿದ್ದಾನೆ. ಕಾಳಿಯ ಅವತಾರದಂತೆ ಪಾರ್ವತಿಗೆ ಮೈಗೆ ಕಪ್ಪು ವರ್ಣವನ್ನು ಬಿಂಬಿಸಲಾಗಿದೆ. ಪಾರ್ವತಿಯ ಬಲಗೈಯಲ್ಲಿ ಹೂ ಹಿಡಿದಿದ್ದಾಳೆ. ಶಿವನ ಎಡದ ಮೇಲಿನ ಕೈಯಲ್ಲಿ ಜಿಂಕೆಯನ್ನು ಹಿಡಿಸಲಾಗಿದೆ. ಪಾರ್ವತಿಯ ಎಡಗೈಯನ್ನು ಕೆಳಗೆ ಸಮತೋಲನಕ್ಕಾಗಿ ಬಿಡಿಸಲಾಗಿದೆ. ಇನ್ನು ಶಿವನ ಕೈಯಲ್ಲಿ ತ್ರಿಶೂಲದ ಬದಲು ಕೊಡಲಿಯಾಕಾರ ಆಯುಧವನ್ನು ಚಿತ್ರಿಸಲಾಗಿದೆ. ಇವರಿಬ್ಬರ ಮುಂದೆ ನಂದಿ ಮೊಳಕಾಲೂರಿ ಕುಳಿತಿರುವುದು ನಂದಿವಾಹನ, ಶಿವನ ಕಲ್ಪನೆ ಮೂಡಿಸುತ್ತದೆ. ಹಿಂದೊಬ್ಬ ಭಕ್ತ ಅಥವಾ ಸೇವಕ ಚಾಮರವನ್ನು ಬೀಸುತ್ತಿರುವಂತೆ ಚಿತ್ರಿಸಲಾಗಿದೆ. ನಂದಿಯ ಮೇಲ್ಭಾಗದಲ್ಲಿ ಹಳದಿ ವರ್ಣದಲ್ಲಿ ಹೂ, ಎಲೆ, ಬಳ್ಳಿಯನ್ನು ಚಿತ್ರಿಸಲಾಗಿದೆ. ಉಳಿದ ಸ್ಥಳಗಳಲ್ಲಿ ದೊಡ್ಡ ದೊಡ್ಡದಾದ ಹೂಗಳನ್ನು ಸೃಷ್ಟಿಸಿ ಸ್ಥಳಾವಕಾಶ ಹೊಂದಾಣಿಕೆ ಮಾಡಲಾಗಿದೆ. ಅಂಚಿನಲ್ಲಿ ತಿಳಿ ಹಸಿರು ಬಣ್ಣದಿಂದ ದಪ್ಪನೆ ರೇಖೆಗಳನ್ನು ಹಾಕಿ ಮತ್ತೆ ಅದೇ ಹಳದಿ ಬಣ್ಣದಿಂದ ಚುಕ್ಕೆಗಳನ್ನಿಟ್ಟು ಅವುಗಳ ಮಧ್ಯ ಓರೆ ಗೆರೆಯನ್ನು ಎಳೆದು ಅಂಚನ್ನು ಅಲಂಕಾರಗೊಳಿಸಲಾಗಿದೆ.

**೫. ನಂದಿ, ಈಶ್ವರ ಪಟ್ಟಿಕೆ**

ಈ ಚಿತ್ರದಲ್ಲಿ ಕೆಂಪು ವರ್ಣದ ಲೇಪನವಿದ್ದು, ಮಧ್ಯದಲ್ಲಿ ಸ್ಥಾವರ ಶಿವಲಿಂಗವೊಂದನ್ನು ಕಪ್ಪು ಬಣ್ಣದಿಂದ ಚಿತ್ರಿಸಿ ಹಳದಿ ಹೊರ ರೇಖೆಗಳನ್ನು ರೇಖಿಸಲಾಗಿದೆ. ಈಶ್ವರ ಮುಖಲಿಂಗಕ್ಕೆ ಹಣೆಗೆ ವಿಭೂತಿಯನ್ನು, ತಲೆಯ ಮೇಲೆ ಹೂವನ್ನು ರಚಿಸಲಾಗಿದ್ದು, ಎರಡೂ ಬದಿಗಳಲ್ಲಿ ಲಿಂಗಕ್ಕೆ ಎದುರುಬದುರಾಗಿ ಎರಡು ನಂದಿಗಳನ್ನು ಅದೇ ಕಪ್ಪು ವರ್ಣದಲ್ಲಿ ರಚಿಸಲಾಗಿದೆ. ಇಲ್ಲಿಯೂ ಕೂಡ ಹಳದಿ ಹೊರ ರೇಖೆಗಳಿದ್ದು, ನಂದಿಯ ಕೊರಳಲ್ಲಿ ಗಂಟೆ, ಕೋಡು ಮತ್ತು ಹಣೆಪಟ್ಟಿಗಳ ವಿನ್ಯಾಸ ಸೂಕ್ಷ್ಮವಾಗಿ ಚಿಕ್ಕ ಚಿಕ್ಕ ಚುಕ್ಕೆಗಳಿಂದ ಪೂರ್ಣಗೊಳಿಸಲಾಗಿದೆ. ಅದೇ ವರ್ಣದಲ್ಲಿ ಬಾಲದ ಹಿಂದಿನಿಂದ ಜೂಲವನ್ನು ವಿನ್ಯಾಸಗೊಳಿಸಲಾಗಿದೆ. ಸದರಿ ವಿನ್ಯಾಸವು ಎರಡೂ ನಂದಿಗಳಿಗೆ ಅನ್ವಯವಾಗುತ್ತದೆ. ಇದಲ್ಲದೆ ಕೆಂಪು ಹಿನ್ನೆಲೆಯಲ್ಲಿ ಹಳದಿ ಮತ್ತು ಕಪ್ಪು ವರ್ಣದಲ್ಲಿ ಎಲೆಬಳ್ಳಿಗಳ ಸೂಕ್ಷ್ಮ ರೇಖೆಗಳಿಂದ ಎಲೆ-ಬಳ್ಳಿಗಳನ್ನು ರಚಿಸಲಾಗಿದೆ.

**೬. ಶಿವಲಿಂಗ ಪೂಜೆ**

ಈ ಚಿತ್ರದಲ್ಲಿ ಕೆಂಪು ಹಿನ್ನೆಲೆ ವಿನ್ಯಾಸದೊಂದಿಗೆ ಮೂರು ಮಂಟಪಗಳನ್ನು ಹಳದಿ ವರ್ಣದಲ್ಲಿ ರಚಿಸಲಾಗಿದೆ. ಮಧ್ಯದ ಮಂಟಪದಲ್ಲಿ ಶಿವಲಿಂಗವನ್ನು ಸ್ಥಾಪಿಸಲಾಗಿದೆ. ಲಿಂಗಕ್ಕೆ ವಿಭೂತಿ, ಅಲಂಕೃತ

ಹಾರವೊಂದನ್ನು ಚಿತ್ರಿಸಲಾಗಿದೆ. ಎಡದ ಬದಿಯಲ್ಲಿ ಅರ್ಚಕನೊಬ್ಬ ಪೂಜೆ ಮಾಡುತ್ತಾ ಹಳದಿ ಧೋತ್ರವನ್ನುಟ್ಟು ತಲೆಗೂದಲನ್ನು ಸುಳಿಯ ಮೇಲೆ ಅಷ್ಟೇ ಬಿಟ್ಟು ಹೆಗಲ ಮೇಲೊಂದು ಕೆಂಪು ವರ್ಣದ ಶೆಲ್ಯೆಯನ್ನು ಹಿಂದೆ ಹಾರಿಬಿಡಲಾಗಿದೆ. ಕೈಯಲ್ಲಿ ಗಂಟೆ, ಧೂಪಾರತಿಗಳನ್ನು ಹಿಡಿದು ಪೂಜೆ ಮಾಡುವಂತೆ ಚಿತ್ರಿಸಲಾಗಿದೆ. ಲಿಂಗದ ಬಲಬದಿಯಲ್ಲಿ ಇನ್ನೋರ್ವನು ಮೇಲಿನ ಲಕ್ಷಣಗಳನ್ನೇ ಹೊಂದಿದ ವ್ಯಕ್ತಿ ಕೆಂಪು ದೋತ್ರವನ್ನುಟ್ಟು ಕೆಂಪು ಶೆಲ್ಯವನ್ನು ಹಾಕಿಕೊಂಡಿದ್ದಾನೆ. ಸದರಿ ವ್ಯಕ್ತಿಯೂ ಗಂಟೆ, ಧೂಪಾರತಿಗಳನ್ನಿಡಿದು ಪೂಜೆ ಮಾಡುತ್ತಿರುವಂತೆ ಚಿತ್ರಿಸಲಾಗಿದೆ. ಶಿವಲಿಂಗದ ಮಧ್ಯದ ಮಂಟಪದ ಆಚೆ ಈಚೆ ಮಾನವಾಕೃತಿಗಳ ಹಿಂದುಗಡೆಯಲ್ಲಿ ಎದುರು ಬದುರು ನಂದಿಗಳಿರುವ ಎರಡು ಮಂಟಪಗಳಿವೆ. ಬಾಲವನ್ನು ಮೇಲೆಕೆತ್ತಿದ ಮಂಡಿಯೂರಿ ಕುಳಿತು, ಮೇಲ್ಮುಖ ಮಾಡಿದ ನಂದಿಗಳನ್ನು ಆಕರ್ಷಕವಾಗಿ ಚಿತ್ರಿಸಲಾಗಿದೆ. ಜೂಲದಲ್ಲಿ ಕಡು ಹಸಿರು ಅಂಚು ಇದೆ. ಮಧ್ಯಭಾಗದಲ್ಲಿ ಕೆಂಪು ಬಣ್ಣವಿದ್ದು, ಒಳಗೆ ನಕ್ಷೆಯನ್ನು ರಚಿಸಲಾಗಿದೆ. ಕೊರಳಲ್ಲಿ ಗೆಜ್ಜೆಗಳು, ಮೂಗುದಾರ ಹಣೆಪಟ್ಟುಗಳಿಂದ ಅಲಂಕೃತಗೊಳಿಸಿ ಕೋಡಿಗೆ ಮಾತ್ರ ಕಪ್ಪು ಬಣ್ಣವನ್ನು ಹಾಕಲಾಗಿದೆ. ಅದೇ ರೀತಿ ಕೊಳಗಗಳಿಗೂ ಕಪ್ಪನ್ನು ಹಾಕಲಾಗಿದೆ. ಎರಡೂ ನಂದಿಗಳಲ್ಲಿ ಯಾವುದೇ ವ್ಯತ್ಯಾಸ ಕಂಡುಬರುವುದಿಲ್ಲ. ಎರಡೂ ನಂದಿಗಳ ಮಂಟಪದ ಮುಂದೆ ಒಂದೊಂದು ಫಲಭರಿತ ತೆಂಗಿನ ಮರವನ್ನು ರಚಿಸಲಾಗಿದೆ. ಮಧ್ಯದ ಮಂಟಪಕ್ಕೆ ಮೇಲಿನಿಂದ ಆಚೆ ಈಚೆ ಹೂವಿನ ಮಾಲೆಯನ್ನು ಜೋತುಬಿಡಲಾಗಿದೆ. ಫಲಕದ ಕೊನೆಯಲ್ಲಿ ಒಂದೊಂದು ದೊಡ್ಡ ಮರ, ಎರಡೆರಡು ಅಶೋಕ ಮರಗಳನ್ನು ರಚಿಸಿದ್ದು, ಅಂತಿಮವಾಗಿ ಅಂಚಿಗೆ ಹಳದಿ ಹೂಗಳಿಂದ ಅಲಂಕೃತಗೊಳಿಸಲಾಗಿದೆ.

**೭. ಕುಳಿತ ಭಂಗಿಯ ಗಣಪ ಮತ್ತು ನವಿಲಿನ ಮೇಲೆ ಕುಳಿತ ಸರಸ್ವತಿ**

ಈ ಚಿತ್ರದಲ್ಲಿ ಫಲಕದ ಸುತ್ತಲೂ ಕಪ್ಪು, ಹಸಿರು ವರ್ಣದ ಚೌಕಟ್ಟನ್ನು ಚಿತ್ರಿಸಿ ಎಡಭಾಗಕ್ಕೆ ಹಾಸಿನ ಮೇಲೆ ಕುಳಿತ ಭಂಗಿಯಲ್ಲಿರುವಂತೆ ಹಾಗೂ ಸರಸ್ವತಿ ಕಡೆಗೆ ಮುಖ ಮಾಡಿರುವ ಲೋಡಿಗೆ ಆತುಕೊಂಡು ಕುಳಿತ ಗಣಪತಿಯನ್ನು ಚಿತ್ರಿಸಲಾಗಿದೆ. ಇಲ್ಲಿಯೂ ಸಹ ಗಣಪತಿಗೆ ಆಭರಣಗಳನ್ನು ಚಿತ್ರಿಸಿದ್ದು, ಚತುರ್ಭುಜನಾಗಿದ್ದಾನೆ. ಎದುರಿನಲ್ಲಿ ನವಿಲಿನ ಮೇಲೆ ಕುಳಿತ ಸರಸ್ವತಿಯು ಸರ್ವಾಲಂಕಾರ ಭೂಷಿತೆಯಾಗಿದ್ದು, ಗಣಪತಿಯೆಡೆಗೆ ನೋಡುತ್ತಿರುವಂತೆ ಚಿತ್ರಿಸಲಾಗಿದೆ. ನವಿಲನ್ನು ನೈಜವಾಗಿ ಚಿತ್ರಿಸಿದ್ದು, ಕಲಾವಿದನ ನೈಪುಣ್ಯವನ್ನು ಸಾರುವಂತಿದೆ. ಗಣಪತಿಗೆ ಹಳದಿ ವರ್ಣದ ಬೊಟ್ಟುಗಳಿರುವ ಹಸಿರು ವರ್ಣದ ಉದ್ದ ತೋಳಿನ ಅಂಗಿಯನ್ನು ಚಿತ್ರಿಸಲಾಗಿದ್ದು, ಅಡ್ಡ ಗೆರೆಗಳಿರುವ ಹಳದಿ ವರ್ಣದ ದೋತರವನ್ನು ಅಲಂಕಾರಿಕವಾಗಿ ಚಿತ್ರಿಸಲಾಗಿದೆ. ಸರಸ್ವತಿಯ ಸೀರೆ ಹಾಗೂ ಚಿತ್ರದ ಹಿನ್ನೆಲೆ ಎರಡನ್ನೂ ಕೆಂಪು ವರ್ಣದಿಂದಲೇ ಚಿತ್ರಿಸಿದ್ದು, ಆಕೃತಿಗಳು ಎದ್ದು ಕಾಣುವಂತೆ ಕಪ್ಪು ವರ್ಣದ ಹೊರ ರೇಖೆಗಳನ್ನು ಎಳೆಯಲಾಗಿದೆ. ಹಿನ್ನೆಲೆಯ ಉಳಿದ ಖಾಲಿ ಜಾಗದಲ್ಲಿ ಹಳದಿ ವರ್ಣದ ಹೂಬಳ್ಳಿಗಳನ್ನು ಅಲಂಕಾರಿಕವಾಗಿ ಚಿತ್ರಿಸಲಾಗಿದೆ.

### ೮. ಎದುರು ಬದುರು ಕುಳಿತ ಸರಸ್ವತಿ ಮತ್ತು ಗಣಪತಿ

ಈ ಚಿತ್ರದಲ್ಲಿ ಫಲಕಕ್ಕೆ ಹಿನ್ನೆಲೆಯಾಗಿ ಕೆಂಪು ವರ್ಣವನ್ನು ಲೇಪಿಸಿದ್ದು, ಫಲಕದ ಮಧ್ಯಭಾಗದಲ್ಲಿ ಕಳಸದಂತಹ ಆಕೃತಿಯನ್ನು ಚಿತ್ರಿಸಲಾಗಿದ್ದು, ಇದರ ಬಲಭಾಗಕ್ಕೆ ಗಣಪತಿಯನ್ನು, ಎಡಭಾಗಕ್ಕೆ ಸರಸ್ವತಿಯನ್ನು ಚಿತ್ರಿಸಲಾಗಿದೆ. ಕುಳಿತ ಭಂಗಿಯಲ್ಲಿರುವ ಚತುರ್ಭುಜ ಸರಸ್ವತಿ ಮತ್ತು ಚತುರ್ಭುಜ ಗಣಪತಿ ಇಬ್ಬರೂ ಒಬ್ಬರನ್ನೊಬ್ಬರು ನೋಡುವಂತೆ ಚಿತ್ರಿಸಲಾಗಿದೆ. ಸರಸ್ವತಿಯ ಸೀರೆಯನ್ನು ಹಾಗೂ ಗಣಪತಿಯ ಉದ್ದತೋಳಿನ ಮೇಲಂಗಿಯನ್ನು ಹಸಿರು ವರ್ಣದಿಂದ, ಸರಸ್ವತಿಯ ರವಿಕೆಯನ್ನು ಕೆಂಪು ವರ್ಣದಿಂದಲೂ ಹಾಗೂ ಗಣಪತಿಯ ಧೋತರವನ್ನು ಹಳದಿ ವರ್ಣದಲ್ಲಿಯೂ ಚಿತ್ರಿಸಿ ವರ್ಣಗಳ ಸಮತೋಲನವನ್ನು ಕಾಯ್ದುಕೊಳ್ಳಲಾಗಿದೆ. ಸರಸ್ವತಿ ಹಾಗೂ ಗಣಪತಿಯ ಮೈಮೇಲೆ ಅಲಂಕಾರಿಕ ಆಭರಣಗಳನ್ನು ಚಿತ್ರಿಸಿದ್ದು, ಇಬ್ಬರ ತಲೆಯ ಮೇಲಿನ ಕಿರೀಟಗಳು ಒಂದೇ ತೆರನಾಗಿದ್ದು, ಸರಸ್ವತಿಯ ಮೂಗಿನಲ್ಲಿರುವ ದೊಡ್ಡದಾದ ನತ್ತನ್ನು ಗಮನಾರ್ಹವಾಗಿ ಚಿತ್ರಿಸಲಾಗಿದೆ. ಆಕೃತಿಗಳ ಸುತ್ತಲೂ ಉಳಿದ ಖಾಲಿ ಜಾಗವನ್ನು ಹಳದಿ ವರ್ಣದ ಹೂಗಳನ್ನು ಚಿತ್ರಿಸಿ ತುಂಬಿಸಲಾಗಿದೆ.

### ೯. ಗಣಪತಿ, ಸರಸ್ವತಿ

ಎಡಗಡೆ ಸರಸ್ವತಿ, ಬಲಗಡೆ ಗಣಪತಿ ಹಾಸಿನ ಮೇಲೆ ಕುಳಿತಿದ್ದಾರೆ. ಇವರ ಕಿರೀಟ, ಮೈಮೇಲಿನ ಆಭರಣಗಳನ್ನು ಆಕರ್ಷಕವಾಗಿ ಚಿತ್ರಿಸಲಾಗಿದೆ. ಸರಸ್ವತಿಯ ಸೀರೆ, ಗಣಪತಿಯ ಉದ್ದತೋಳಿನ ಕೊರಳವರೆಗಿನ ಅಂಗಿಯು ಹಸಿರು ವರ್ಣದ್ದಾಗಿದ್ದು, ಚಿತ್ರದ ಸಮತೋಲಕ್ಕೂ ಕಾರಣವಾಗಿದೆ. ಇಲ್ಲಿಯ ಅಂಗಿಯ ಮೇಲೆಯೇ ಆಭರಣಗಳನ್ನು ಚಿತ್ರಿಸಿದೆ. ಸರಸ್ವತಿಯ ಮೂಗಿನಲ್ಲಿಯ ದೊಡ್ಡ ನತ್ತು ವಿಶೇಷವಾಗಿದೆ. ಈ ಚಿತ್ರಗಳ ಬಾಹ್ಯ ರೇಖೆಗಳನ್ನು ಕುಂಚದಿಂದ ಸೂಕ್ಷ್ಮವಾಗಿ ಚಿತ್ರಿಸಿದೆ. ಗಣಪತಿಯ ವೇಷವೆಲ್ಲ ಪೇಶ್ವೆಗಳಂತಹದು. ಬಲಗೈಗಳಲ್ಲಿ ಕೊಡಲಿ ಮತ್ತು ತ್ರಿಶೂಲ, ಎಡಗೈಗಳಲ್ಲಿ ಮೋದಕ ಮತ್ತು ಅಂಕುಶ ಹಿಡಿದಿದ್ದಾನೆ. ಗಣಪತಿಯ ತಲೆಯ ಮೇಲೆ ಕಿರೀಟವಿರದೆ ಪೇಶ್ವಯಂತಹ ಪಟಕವನ್ನು ಧರಿಸಿರುವುದು ವಿಶೇಷ ಮತ್ತು ಸರಸ್ವತಿಗೆ ಎರಡೇ ಕೈಗಳು ಇರುವುದು ವಿಶೇಷ.

ಗಣಪತಿಯ ಹಿಂದೆ ಸರಸ್ವತಿಯ ಹಿಂದೆ ಸೇವಕಿಯರನ್ನು ಚಿತ್ರಿಸಲಾಗಿದ್ದು, ಅವರು ನವಿಲು ಗರಿ ಗುಚ್ಛದಿಂದ ಗಾಳಿ ಹಾಕುತ್ತಿದ್ದಾರೆ. ಇಲ್ಲಿನ ಚಿತ್ರಗಳಲ್ಲೆಲ್ಲ ಪೇಶ್ವೆಗಳ ವೇಷಭೂಷಣಗಳ ಪ್ರಭಾವ ದಟ್ಟವಾಗಿ ಕಾಣಿಸುವುದನ್ನು ಲಕ್ಷಿಸಿದರೆ ಪೇಶ್ವೆಗಳ ಪ್ರಭಾವಕ್ಕೆ ಒಳಗಾದ ಪ್ರದೇಶದಲ್ಲಿನ ಚಿತ್ರಕಾರನೊಬ್ಬ ಇದನ್ನು ಚಿತ್ರಿಸಿರಬೇಕೆನಿಸುತ್ತದೆ. ಸೇವಕರ ಹಿಂದುಗಡೆಯಲ್ಲಿ ಎರಡೂ ಬದಿಗೆ ಎರಡು ಅಶೋಕ ವೃಕ್ಷಗಳನ್ನು ಚಿತ್ರಿಸಿದೆ. ಫಲಕದ ಅಂಚಿಗೆ ಎಲೆ ಮತ್ತು ಹೂವಿನ ಅಂಚು ನಕ್ಷೆಯನ್ನು ಸುತ್ತಲೂ ಹಾಕಲಾಗಿದೆ.

### ೧೦. ನಂದಿಮಂಟಪ, ಗಣಪತಿ ಮತ್ತು ಸರಸ್ವತಿ

ಈ ಚಿತ್ರದಲ್ಲಿ ಕಡುಗಪ್ಪು ಬಣ್ಣದ ನೇರಳೆಯನ್ನು ಹೋಲುವ ಹಿನ್ನೆಲೆ ವಿನ್ಯಾಸವಿದ್ದು, ಮಧ್ಯದ ಮಂಟಪವೊಂದರಲ್ಲಿ ನಂದಿಯನ್ನು ಪ್ರತಿಷ್ಠಾಪಿಸಿದ್ದು, ಅದರ ಎದುರು ಮಂಟಪದಷ್ಟೇ ಎತ್ತರವಾದ ಗಣಪತಿ ಚಿತ್ರವನ್ನು ರಚಿಸಲಾಗಿದೆ. ಗಣಪತಿಯು ಮೊಳಕಾಲನ್ನು ಮಡಿಚಿಕೊಂಡು ಸಿಂಹಾಸನದ ಮೇಲೆ

ಕಮಲದ ಹೂ ವಿನ್ಯಾಸದಲ್ಲಿ ಕುಳಿತಿರುವಂತಿದೆ. ಗಣಪತಿಯ ಕೊರಳು, ಕೈಕಾಲುಗಳಿಗೆಲ್ಲಾ ಆಭರಣಗಳನ್ನು ಚಿತ್ರಿಸಲಾಗಿದೆ. ಚಿತ್ರದ ಬಲಗೈಯಲ್ಲಿ ಶಂಖದಂತಹ ವಸ್ತು ಹಿಡಿದಿದ್ದು, ಎಡಗೈಯಲ್ಲಿ ಕೊಡಲಿ, ಚಾಟಿ ಹಿಡಿದಿದ್ದು, ಕಿರೀಟದ ಕೆಳಭಾಗದಲ್ಲಿ ಕಪ್ಪು ವರ್ಣದಿಂದ ಕೂದಲಗಳನ್ನು ಚಿತ್ರಿಸಲಾಗಿದೆ. ಕಿರೀಟವು ವಿಷ್ಣುವಿನ ಕಿರೀಟದಂತೆ ಎತ್ತರವಾಗಿದ್ದು, ಅಲಂಕೃತ ಗಣೇಶ ಇದಾಗಿದೆ. ಗಣಪತಿಯ ಹಿಂದೆ ಪೇಶ್ವೆ ವೇಷಭೂಷಣದಲ್ಲಿ ಸೇವಕನೊಬ್ಬ ಎರಡೂ ಕೈಗಳಿಂದ ಚೌರಿ ಬೀಸುವ ಚಿತ್ರ ರಚಿಸಲಾಗಿದೆ. ಇನ್ನು ಮಂಟಪದ ಹಿಂಭಾಗದಲ್ಲಿ ಸರಸ್ವತಿಯ ಚಿತ್ರ ಇದ್ದು, ತೀರಾ ಅಲಂಕಾರಿಕವಾದ ನೈಜವಲ್ಲದ ನವಿಲಿನ ಮೇಲೆ ಕುಳಿತಂತೆ ಸರಸ್ವತಿಯನ್ನು ಚಿತ್ರಿಸಲಾಗಿದೆ. ಇಲ್ಲಿನ ನಾಲ್ಕೂ ಕೈಗಳಿಗಳಲ್ಲಿ ಅನುಕ್ರಮವಾಗಿ ಎಡಗೈ ಹಸ್ತ ಆಶೀರ್ವಾದದ್ದಾಗಿದೆ. ಬಲಗೈಯಲ್ಲಿ ಹೂ ಹಿಡಿದಿದ್ದು, ಮೇಲಿನ ಬಲಗೈಯಲ್ಲಿ ಮುತ್ತಿನ ಹಾರದಂತಹ ವಸ್ತು ಹಿಡಿದಿದ್ದು, ಮೇಲಿನ ಎಡಗೈಯಲ್ಲಿ ವೀಣೆಯನ್ನು ಚಿತ್ರಿಸಲಾಗಿದೆ. ನವಿಲಿನ ಕಾಲುಗಳು ದೊಡ್ಡವಾಗಿದ್ದು, ಚುಂಚದಲ್ಲಿ ಜಡೆಯಂತಹ ಹೂವನ್ನು ಕೊಡಲಾಗಿದೆ. ಉಳಿದೆಲ್ಲಾ ಸ್ಥಳದಲ್ಲಿ ಗುಲಾಬಿ ಬಣ್ಣದ ಹೂಗಳನ್ನು ಅದಕ್ಕೆ ತಕ್ಕುದಾಗಿ ಕಡು ಹಸಿರು ಬಣ್ಣದಲ್ಲಿ ಎಲೆಗಳನ್ನು ಚಿತ್ರಿಸಿ ಸ್ಥಳವನ್ನು ಸೂಕ್ತವಾಗಿ ಬಳಸಿಕೊಳ್ಳಲಾಗಿದೆ. ಅಂಚು ಚೌಕಟ್ಟಿನಲ್ಲಿ ಇದೇ ತರಹದ ಹೂ, ಎಲೆಗಳನ್ನು ಸಾಲಾಗಿ ಚಿತ್ರಿಸಿ ಕೊನೆಯ ಅಂಚಿನಲ್ಲಿ ಕೌದಿ ದಾರದ ಹೊಲಿಗೆಯಂತೆ ಬಿಳಿ ವರ್ಣದಿಂದ ನಕ್ಷೆ ಹಾಕಲಾಗಿದೆ.

**೧೧. ಗುರು-ಶಿಷ್ಯರ ಸಂವಾದ**

ಈ ಫಲಕದ ಮೇಲೆ ವ್ಯಕ್ತಿಯೊಬ್ಬ ಬಾಗಿ ಓಲೆಕಟ್ಟನ್ನು ಎದುರಿಗೆ ಕುಳಿತ ವ್ಯಕ್ತಿಗೆ ತೋರಿಸುವಂತಿದೆ. ಕೊರಳು, ತೋಳು ಮುಂಗೈಯಲ್ಲಿ ರುದ್ರಾಕ್ಷಿಗಳಿವೆ. ಕಾವಿ, ವಸ್ತ್ರವನ್ನು ತಲೆಯ ಮೇಲೆ ಮತ್ತು ಎದೆಗೆ ಅಡ್ಡವಾಗಿ ಹಾಕಿಕೊಳ್ಳಲಾಗಿದೆ. ಈ ವ್ಯಕ್ತಿಯ ಎದುರಿಗಿನ ವ್ಯಕ್ತಿಯು ತೋರುಬೆರಳು ಮಾಡಿ ಏನನ್ನೋ ಸೂಚಿಸುತ್ತಲಿದ್ದಾನೆ. ಈತನಿಗೆ ಉದ್ದ ಮೀಸೆಗಳಿವೆ. ಬಲಗೈ ಓಲೆಕಟ್ಟು ಹಿಡಿದು ಮುಂದೊಡ್ಡಿದ್ದಾನೆ. ಮಗ್ಗಲಲ್ಲಿಯೂ ಓಲೆಕಟ್ಟಿದೆ. ಕಾವಿ ಧರಿಸಿದ್ದಾನೆ. ಉದ್ದವಾದ ಮೀಸೆ ಹುಲುಸಾದ ಗಡ್ಡಗಳಿವೆ. ಕೊರಳು ರಟ್ಟೆಗಳಲ್ಲಿ ರುದ್ರಾಕ್ಷಿಗಳಿವೆ. ಎದುರಿಗಿನ ವ್ಯಕ್ತಿಯ ಮೈಬಣ್ಣ ಹಳದಿ, ಕಾವಿ ವಸ್ತ್ರ ತಲೆ ಮೇಲೆ ಹೊದ್ದು ಎದೆಗೆ ಅಡ್ಡವಾಗಿ ಬಲಗೈ ಮೇಲೆ ಬಂದಿದೆ. ಎಡಗೈ ತೊಡೆಯ ಮೇಲಿದ್ದು ಬಲಗೈಯಲ್ಲಿ ಓಲೆಕಟ್ಟಿದೆ. ರಂಧ್ರದ ಎಡಬದಿಯಲ್ಲಿ ಸೇವಕನೊಬ್ಬ ನಿಂತಿದ್ದು, ಕೈಯಲ್ಲಿ ಚಾಮರವನ್ನು ಹಿಡಿದುಕೊಂಡಿದ್ದಾನೆ. ಕೇಸರಿ ಲಂಗೋಟಿಯನ್ನು ಧರಿಸಿದ್ದು, ಸಾಧು ಅಥವಾ ಶಿಷ್ಯನಾಗಿರಬೇಕು. ಅವನ ಮುಂದೆ ಕುಳಿತಿರುವ ಗುರುವಿನ ಚಿತ್ರ ಅರ್ಧ ಲಭ್ಯವಾಗಿದ್ದು, ಅದು ಗುರುವಿನ ಚಿತ್ರ ಎಂಬುದಕ್ಕೆ ಸೇವಕನೊಬ್ಬ ಬದಿಯಲ್ಲಿ ಚಾಮರ ಹಿಡಿದು ನಿಂತಿರುವುದು ಸಹಕಾರಿ ಅಂಶವಾಗುತ್ತದೆ.

**೧೨. ಕರಣಹಸಿಗೆ**

ಈ ಚಿತ್ರದಲ್ಲಿ ಕಡುಗಪ್ಪಿನೊಂದಿಗೆ ಕೆಂಪು ಮಿಶ್ರಿತ ಹಿನ್ನೆಲೆ ವಿನ್ಯಾಸದೊಂದಿಗೆ ತಿಳಿ ಹಸಿರು ಹಾಗೂ ಹಳದಿ ವರ್ಣದ ಕುಳಿತ ಮತ್ತು ನಿಂತ ವ್ಯಕ್ತಿ ಚಿತ್ರಗಳನ್ನು ಚಿತ್ರಿಸಲಾಗಿದೆ. ನಿಂತ ಇಬ್ಬರು ವ್ಯಕ್ತಿಗಳೂ ಸೇವಕ ಇಲ್ಲವೆ ವಟುಗಳಿರಬೇಕು. ಕೌಪೀನಧಾರಿಗಳಾದ ಇವರು ಒಂದು ಕೈಯಲ್ಲಿ ನವಿಲುಗರಿ ಗುಚ್ಛವನ್ನು

ಇನ್ನೊಂದು ಚಾಚಿದ ಕೈಯಲ್ಲಿ ದುಂಡಾದ ವಸ್ತುವೊಂದನ್ನು ಹಿಡಿದಿದ್ದಾರೆ. ಒಂದೊಂದು ವ್ಯಕ್ತಿ ಚಿತ್ರಣದ ಮಧ್ಯ ಮೇಲ್ಬದಿಗೆ ಬಾಳೆಹೂವಿನಂತಹ ನಕ್ಷೆಯಿದೆ. ರಂಧ್ರಗಳ ಸುತ್ತಲೂ ಹೂವಿನ ಚಿತ್ರಣವಿದೆ. ಸೇವಕರ ಕೊರಳಲ್ಲಿ ಕರಡಿಗೆ, ತೋಳು ಮುಂಗೈಗಳಲ್ಲಿ ರುದ್ರಾಕ್ಷಿ ಮಾಲೆಗಳಿವೆ. ಇನ್ನು ಆಸನಸ್ಥರಾದ ವ್ಯಕ್ತಿಗಳ ಚಿತ್ರಣವು ಫಲಕದ ಎಡಬದಿಯಿಂದ ಬಲಬದಿಯತ್ತ ನೀಲಛಾಯೆಯ ತಿಳಿಹಸಿರು ಮೈಬಣ್ಣವುಳ್ಳ ಕಡುಗೆಂಪು ಕಾವಿಧಾರಿ ವ್ಯಕ್ತಿಯಿದ್ದು, ಆತನಿಗೆ ತಲೆಗೂದಲು, ಗಡ್ಡ, ಮೀಸೆಗಳಿವೆ. ಕಾವಿ ಬಣ್ಣದ ಮೇಲ್ಹೊದಿಕೆಯನ್ನು ಎದೆಯ ಮೇಲೆ ಅಡ್ಡವಾಗಿ ಹಾಕಿಕೊಂಡಿದ್ದು, ಕೈಯಲ್ಲಿ ಓಲೆಗರಿ ಕಟ್ಟು ಹಿಡಿದಿದ್ದಾನೆ. ಈತನ ಆಸನದ ಮಗ್ಗಲಲ್ಲಿಯೂ ಓಲೆಯ ಕಟ್ಟಿದೆ. ಅದನ್ನು ಬಿಳಿ ವರ್ಣದಿಂದ ಚಿತ್ರಿಸಿದೆ. ಎದುರಿನ ವ್ಯಕ್ತಿಯ ಮೈಬಣ್ಣ ಹಳದಿ; ತೋಳು, ಮುಂಗೈಗಳಲ್ಲಿ ರುದ್ರಾಕ್ಷಿ; ಒಂದು ಕೈಯಲ್ಲಿ ಎದುರಿನ ವ್ಯಕ್ತಿಯು ಕೊಟ್ಟಿರುವ ಓಲೆಗಳನ್ನು ಪಡೆದುಕೊಂಡಂತಿದೆ. ಕಾವಿ ಅಥವಾ ಧೋತರವನ್ನುಟ್ಟ ಈ ವ್ಯಕ್ತಿಯು ಮೈಮೇಲೆ ಹೊದ್ದಿರುವ ಬಟ್ಟೆ ಮಾತ್ರ ಹಳದಿ, ಮುಖದ ಮೇಲೆ ಗಡ್ಡ, ಮೀಸೆಗಳಿಲ್ಲದಿರುವುದು ಗಮನಾರ್ಹ. ಇದೊಂದು ಸಾಂದರ್ಭದ ಚಿತ್ರದಂತಿದೆ.

ಸೇವಕನೊಬ್ಬ ನಿಂತಿರುವ ವ್ಯಕ್ತಿಯ ಲಕ್ಷಣ ಮೈಮೇಲೆ ಹೊದ್ದಿರುವ ಬಟ್ಟೆ, ಕುಳಿತಿರುವ ಭಂಗಿ ಎಲ್ಲವೂ ಮೊದಲಿನಾಕೃತಿಯಲ್ಲಿ ಇರುವಂತೆ ಇದೆ. ಕೈಯಲ್ಲಿ ಓಲೆಕಟ್ಟಿದೆ. ಅಡ್ಡವಾಗಿ ಹೊದ್ದಿಕೊಂಡ ಮೈಮೇಲಿನ ಬಿಳಿ ಅರಿವೆ, ತಲೆಯ ಮೇಲೆ ಕೂಡ ಬಂದಿದೆ. ಕೊರಳ ಹಾಗೂ ಕೈ, ರಟ್ಟೆಗಳಲ್ಲಿ ರುದ್ರಾಕ್ಷಿಗಳಿವೆ.

ಕುಳಿತ ವ್ಯಕ್ತಿ ಸ್ವಲ್ಪ ಬಾಗಿ ಬಲಗೈ ಮುಂದೆ ಮಾಡಿ ಓಲೆ ಕಟ್ಟನ್ನು ಎದುರಿಗೆ ಇರುವ ವ್ಯಕ್ತಿಗೆ ಕೊಡುವಂತಿದೆ. ಇವರ ಮೈಬಣ್ಣ ಹಳದಿಯಾಗಿದ್ದು, ಬಟ್ಟೆ ಕಾವಿಯಾಗಿದೆ. ತಲೆಯ ಮೇಲೆ ಮತ್ತು ಹೆಗಲ ಮೇಲೆ ಅಡ್ಡಡ್ಡಲಾಗಿ ಹೊದಿಕೆ ಹಾಕಿಕೊಳ್ಳಲಾಗಿದೆ. ಎಡಗೈ ಮುಂದಕ್ಕೆ ಚಾಚಿದೆ. ಎದುರಿಗೆ ಇರುವ ವ್ಯಕ್ತಿಯ ಮೈಬಣ್ಣವು ಹಳದಿಯಾಗಿದ್ದು, ಉದ್ದವಾದ ಮೀಸೆ, ನವಿರಾದ ಗಡ್ಡಗಳಿವೆ. ಹೊದಿಕೆಯನ್ನು ತಲೆಯ ಮೇಲೆ ಹೊದ್ದುಕೊಳ್ಳಲಾಗಿದೆ. ಚಿತ್ರವು ಕೆಲವು ಕಡೆ ಅಸ್ಪಷ್ಟವಾಗಿದೆ.

ಪ್ರತಿ ಆಕೃತಿಯು ಒಂದಕ್ಕೊಂದು ಸಾಮ್ಯವಾಗಿದ್ದು, ಮೈಬಣ್ಣ, ಬಟ್ಟೆ ಇತ್ಯಾದಿ ಒಂದೇ ತರದಲ್ಲಿ ಚಿತ್ರಿಸಲಾಗಿದೆ. ಚಿತ್ರವು ಕರಣಹಸಿಗೆ ಮಂತ್ರಗೋಪ್ಯ ಹಸ್ತಪ್ರತಿಗಳಿಗೆ ಸಂಬಂಧಿಸಿದವು ಆಗಿರಬೇಕು.

**೧೩. ಕಪ್ಪಿನ ನಂಜೇಸ್ವಾಮಿ** [೨೫]

ಈ ಹಸ್ತಪ್ರತಿಯ ಫಲಕದ ಮೇಲಿನ ವರ್ಣಚಿತ್ರಗಳು ಕಪ್ಪಿನ ನಂಜೇಸ್ವಾಮಿಗಳ ಜೀವನಕ್ಕೆ ಸಂಬಂಧಿಸಿದವುಗಳೆಂದು ಡಾ.ಬಿ.ಕೆ. ಹಿರೇಮಠ ಅವರು ತಮ್ಮ ಹಸ್ತಪ್ರತಿಗಳ ಕಲಾವಿನ್ಯಾಸ ಅಧ್ಯಾಯದಲ್ಲಿ ಅಭಿಪ್ರಾಯಪಡುತ್ತಾರೆ. ತಲೆ, ಮುಖ ಕ್ಷೌರ ಮಾಡಿಸಿಕೊಂಡ ಈ ಸ್ವಾಮಿಗಳ ಹೆಗಲ ಮೇಲೆ ಕೊಪ್ಪೆ(ಕಂಬಳಿ) ತಪ್ಪದೇ ಚಿತ್ರಿತವಾಗಿದೆ. ಈ ಕಾರಣಕ್ಕಾಗಿಯೇ ಸ್ವಾಮಿಗಳನ್ನು ಕೊಪ್ಪಿನ ಅಥವಾ ಕಪ್ಪಿನ ನಂಜೇಸ್ವಾಮಿಯೆಂದು ಗುರುತಿಸಿರಬೇಕು. ಕೊರಳಲ್ಲಿ ಕರಡಿಗೆ ಇರುವುದು ವಿಶೇಷ. ಈ ಸ್ವಾಮಿಗಳು

---

೨೫. ಡಾ.ಬಿ.ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು, ಪು. ೨೦೧-೨೦೩.

ಕರಡಿಗೆ ಧರಿಸಿದ, ತನ್ನ ಪಾದಕ್ಕೆ ಅಡ್ಡಬಿದ್ದು ನಮಸ್ಕಾರ ಮಾಡುತ್ತಿರುವ ದೊರೆಯೊಬ್ಬನನ್ನು ಆಶೀರ್ವಾದಿಸುತ್ತಿರುವಂತಿದೆ. ನಮಸ್ಕರಿಸುವ ವ್ಯಕ್ತಿಯ ತಲೆಮೇಲೆ ಕಿರೀಟ, ಮೈಮೇಲೆ ಉದ್ದನೆಯ ತೋಳಿನ ಅಂಗಿ, ನಡುವಿಗೆ ಕಟ್ಟಿದ ವಸ್ತ್ರ ಇವೆಲ್ಲವೂ ಗಮನಾರ್ಹವಾದವುಗಳು.

ಈ ಸ್ತ್ರೀಯ ಮುಂದುಗಡೆ ಸ್ವಾಮಿಗಳಿಗೆ ಎದುರಾಗಿ ತನ್ನೆರಡೂ ಮಂಡೆಗಳನ್ನೂರಿ ಕುಳಿತುಕೊಂಡ ವ್ಯಕ್ತಿಯನ್ನು ಚಿತ್ರಿಸಲಾಗಿದೆ. ಈತನ ಪೋಷಾಕು ಕೂಡ ಅರಸನಂತೆಯೇ ಇದ್ದು, ತಲೆಯ ಮೇಲೆ ಮಾತ್ರ ಕಿರೀಟದ ಬದಲು ಪಗಡೆಯಂತಹ ತಲೆದೊಡುಗೆ ಇದೆ. ಕೈಯಲ್ಲಿ ಓಲೆಗರಿ ಹಿಡಿದು ಬೆರಳು ಮಾಡಿ ಸ್ವಾಮಿಗಳಿಗೆ ಏನನ್ನೊ ತೋರಿಸುತ್ತಲಿದ್ದಾನೆ. ಈತನ ಕೊರಳಲ್ಲಿಯೂ ಕರಡಿಗೆ ಇದೆ. ಹೆಗಲ ಮೇಲೆ ಕೊಪ್ಪೆಯೂ ಇದೆ. ಈತನ ಎದುರುಗಡೆ ಹಸಿರು ಹಾಸಿನ ಮೇಲೆ ವಿಶಾಲ ವೃಕ್ಷವೊಂದರ ಕೆಳಗಡೆ ದಿಂಬಿಗೆ ಆತುಕೊಂಡು ಕುಳಿತು ಸ್ವಾಮಿಗಳು ಒಂದು ಕೈಯಲ್ಲಿ ಓಲೆಗರಿಯನ್ನು ಹಿಡಿದು ಏನನ್ನೋ ವಿವರಿಸುತ್ತಲಿದ್ದಾರೆ. ಈ ಇಬ್ಬರ ಮಧ್ಯ ವ್ಯಾಸಪೀಠವಿದೆ. ಇದು ಇನ್ನೊಂದು ಸಂದರ್ಭದ ಚಿತ್ರಣವಾಗಿದೆ.

**೧೪. ಗೋಪಿಕೆಯರೊಡನೆ ಕೃಷ್ಣ**

ಈ ಚಿತ್ರವು ಹೆಚ್ಚು ಆಯತವಲ್ಲದ, ಚೌಕವೂ ಅಲ್ಲದ ಆಕಾರದಲ್ಲಿದ್ದು, ಕಡುಗಪ್ಪು ಬಣ್ಣದ ನೇರಳೆಯನ್ನು ಹೋಲುವ ಹಿನ್ನೆಲೆ ವಿನ್ಯಾಸವಿದ್ದು, ಮಧ್ಯದಲ್ಲಿ ಕೊಳಲುಧಾರಿ ಕೃಷ್ಣ ನಿಂತಿದ್ದು, ಎರಡೂ ಕೈಗಳಿಂದ ಕೊಳಲು ನುಡಿಸುತ್ತಾ ಹಿಂದಿನ ಮೇಲ್ಸೈಯೊಂದರಿಂದ ಕೊಳಲನ್ನು ಹಿಡಿದಿದ್ದು, ಮೈಗೆ ಹಸಿರು ಮಿಶ್ರಿತ ಶ್ಯಾಮ ವರ್ಣವನ್ನು ಲೇಪಿಸಲಾಗಿದೆ. ಇಲ್ಲಿಯೂ ಕೂಡ ಹಿಂದಿನ ಚಿತ್ರದಲ್ಲಿನ ಗಣೇಶನ ಕಿರೀಟದಂತೆ ಉದ್ದನೆಯ ಕಿರೀಟವನ್ನು ರಚಿಸಿದ್ದು, ಕೈಗಳ ಮೇಲೆ ಶಲ್ಯೆಯೊಂದನ್ನು ಗುಲಾಬಿ ಬಣ್ಣದಲ್ಲಿ ಚಿತ್ರಿಸಲಾಗಿದೆ. ಕೃಷ್ಣ ನಿಂತ ಸ್ಥಾನವನ್ನು ಪೀಠದಂತೆ ಹಳದಿ ವರ್ಣದಿಂದ ರಚಿಸಿದ್ದು, ಪಾರಿಜಾತದ ಕಲ್ಪನೆಯನ್ನು ಕೊಡುವಂತಿದೆ. ಕೃಷ್ಣನ ಎರಡೂ ಪಕ್ಕದಲ್ಲಿ ಹಾಲು, ಮೊಸರು, ಬೆಣ್ಣೆಗಳನ್ನು ಹೊತ್ತು ಗೋಪಿಕಾಸ್ತ್ರೀಯರಿದ್ದಾರೆ. ಇಬ್ಬರ ತಲೆಯ ಮೇಲೂ ಎರೆಡೆರೆಡು ಗಡಿಗೆಯಂತಹ ವಿನ್ಯಾಸವಿದ್ದು, ಗಡಿಗೆಯಿಂದ ಬೆಣ್ಣೆ ತೆಗೆದು ಇಬ್ಬರೂ ಕೃಷ್ಣನಿಗೆ ತೋರಿಸುತ್ತಾ ಕರೆಯುವಂತೆ ಕಾಣುತ್ತದೆ. ಕೃಷ್ಣನ ಮುಂದಿರುವ ಗೋಪಿಕೆಯ ಚಿತ್ರಕ್ಕೆ ಸೀರೆಯನ್ನು ವಿನ್ಯಾಸಗೊಳಿಸಲಾಗಿದೆ. ನಡುಕಟ್ಟು ತಲೆಯಾಭರಣ, ಕೊರಳಿನಲ್ಲಿ ಮಾಲೆ, ಕೈಯಲ್ಲಿ ಬಳೆಗಳು ಎದ್ದು ಕಾಣುವಂತೆ ಬಿಳಿಯ ವರ್ಣದಲ್ಲಿ ಚಿತ್ರಿಸಿದ್ದು, ಒಂದು ವಿಶೇಷವೆಂದರೆ ಇಬ್ಬರ ಮೂಗಿನಲ್ಲಿಯೂ ನತ್ತನ್ನು ತುಂಬಾ ದೊಡ್ಡದಾಗಿ ಮತ್ತು ಆಕರ್ಷಕವಾಗಿ ಚಿತ್ರಿಸಲಾಗಿದೆ. ಇನ್ನು ಕೃಷ್ಣನ ಹಿಂದಿರುವ ಸ್ತ್ರೀ ಚಿತ್ರಕ್ಕೆ ಸೀರೆಯಲ್ಲಿ ಬಿಳಿಬಣ್ಣದ ಅಲಂಕೃತ ನಕ್ಷೆಯನ್ನು ರಚಿಸಿ ತೋರಲಾಗಿದೆ. ಉದ್ದನೆಯ ಜಡೆ ಅದರ ಕೊನೆಗೊಂದು ರಿಬ್ಬನ್ನಿನಂತಹ ವಿನ್ಯಾಸ ರಚಿಸಲಾಗಿದೆ. ಇಲ್ಲಿಯೂ ಕೂಡ ಉಳಿದೆಲ್ಲಾ ಸ್ಥಳದಲ್ಲಿ ಗುಲಾಬಿ ಬಣ್ಣದ ಹೂಗಳನ್ನು ಅದಕ್ಕೆ ತಕ್ಕುದಾಗಿ ಕಡು ಹಸಿರು ಬಣ್ಣದಲ್ಲಿ ಎಲೆಗಳನ್ನು ಚಿತ್ರಿಸಿ ಸ್ಥಳವನ್ನು ಸೂಕ್ತವಾಗಿ ತುಂಬಿಕೊಳ್ಳಲಾಗಿದೆ. ಅಂಚು ಚೌಕಟ್ಟಿನಲ್ಲಿ ಇದೇ ತರಹದ ಹೂ, ಎಲೆಗಳನ್ನು ಸಾಲಾಗಿ ಚಿತ್ರಿಸಿ ಕೊನೆಯ ಅಂಚಿನಲ್ಲಿ ಕೌದಿ ದಾರದ ಹೊಲಿಗೆಯಂತೆ ಬಿಳಿ ವರ್ಣಬಿಂದುಗಳ ನಕ್ಷೆ ಹಾಕಲಾಗಿದೆ.

*** ಫಲಕ: ಅಲಂಕಾರ ನಕ್ಷಾ ವರ್ಣಚಿತ್ರಗಳು**

ಫಲಕಗಳ ಮೇಲಿನ ನಕ್ಷಾ ವರ್ಣಚಿತ್ರಗಳ ಹಲವಾರು ರೀತಿಯ ಜಾಮಿತಿಕ ಹಾಗೂ ಅಲಂಕಾರಿಕ ವರ್ಣನಕ್ಷಾ ಚಿತ್ರಗಳನ್ನು ಕಾಣಬಹುದಾಗಿದೆ. ಜಿಲ್ಲೆಯ ಹಸ್ತಪ್ರತಿ ಸಂಗ್ರಹಗಳಿರುವ ಶಿವಯೋಗ ಮಂದಿರ ಹಾಗೂ ಬ.ವಿ.ವಿ. ಸಂಘದ ಸಂಗ್ರಹದಲ್ಲಿ ವಿವಿಧ ನಮೂನೆಯ ನಕ್ಷಾಚಿತ್ರಗಳ ಫಲಕಗಳನ್ನು ಕಾಣಬಹುದು. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**೧. ಹೂ, ಎಲೆ ನಕ್ಷಾವಿನ್ಯಾಸ**

ಈ ಫಲಕದ ಮೇಲೆ ಹಳದಿ ವರ್ಣವನ್ನು ಹಿನ್ನೆಲೆಯಾಗಿ ಲೇಪಿಸಿ ಅದರ ಮೇಲೆ ಚೌಕಾಕಾರವಾಗಿ ಅಂಚನ್ನು ಬಿಟ್ಟು ಮಧ್ಯದಲ್ಲಿ ಹೂಬಳ್ಳಿಯ ಅಲಂಕಾರಿಕ ನಕ್ಷಾವಿನ್ಯಾಸವನ್ನು ರಚಿಸಲಾಗಿದೆ. ಒಂದೇ ಬಳ್ಳಿಗೆ ನಾಲ್ಕು ಕೆಂಪು ಹೂಗಳು ಬಿಟ್ಟಿರುವಂತಿದ್ದು, ಬಳ್ಳಿಗೆ ಎಲೆಗಳನ್ನು ಹಸಿರು ವರ್ಣದಲ್ಲಿ ವಿನ್ಯಾಸಗೊಳಿಸಲಾಗಿದೆ. ಈ ಹೂಬಳ್ಳಿ ನಕ್ಷಾವಿನ್ಯಾಸಕ್ಕೆ ಕೆಂಪು ವರ್ಣದಿಂದ ಅಂಚನ್ನು ರಚಿಸಲಾಗಿದೆ. ಮಧ್ಯದಲ್ಲಿರುವ ಹೂಬಳ್ಳಿ ಹಾಗೂ ಎಲೆಗಳಿಗೆ ಕಪ್ಪು ವರ್ಣದಿಂದ ಹೊರರೇಖೆಗಳನ್ನು ಎಳೆಯಲಾಗಿದ್ದು, ಒಟ್ಟು ನಕ್ಷಾವಿನ್ಯಾಸವು ಸ್ಫುಟವಾಗಿ ಕಾಣುವಂತೆ ಚಿತ್ರರಚನೆ ಮಾಡಲಾಗಿದೆ. ಕೆಂಪು ಅಂಚಿನಿಂದ ಸುತ್ತಲೂ ಬಿಟ್ಟಿರುವ ಅಂಚಿನ ಸುತ್ತಲೂ ಆಂಗ್ಲಭಾಷೆಯ V ಆಕಾರದ ಸಂಕೇತಗಳನ್ನು ಕಪ್ಪು ವರ್ಣದಲ್ಲಿ ರಚಿಸಲಾಗಿದ್ದು, ಹಳದಿ ವರ್ಣದಲ್ಲಿ ಕಪ್ಪು ರೇಖಾಕಾರಗಳು ಎದ್ದು ಕಾಣುವಂತಿದೆ. ಈ ಫಲಕದ ನಾಲ್ಕೂ ಬದಿಯ ಇಳಿಜಾರಿನಲ್ಲಿ ಹಸಿರು ವರ್ಣವನ್ನು ಲೇಪಿಸಿ ಅದರ ಮೇಲೆ ಹಳದಿ ವರ್ಣದ ದಪ್ಪ ಗೆರೆಗಳನ್ನು ಓರೆಯಾಗಿ ಚಿತ್ರಿಸಲಾಗಿದೆ. ಹಳದಿ ವರ್ಣದ ಹಿನ್ನೆಲೆಯ ಮೇಲೆ ಹಸಿರು, ಕೆಂಪು, ಕಪ್ಪು ವರ್ಣಗಳಿಂದ ರಚಿತಗೊಂಡ ಈ ಅಲಂಕಾರಿಕ ನಕ್ಷೆಯು ಫಲಕದ ಮೇಲೆ ಸರಳವೂ, ಸುಂದರವೂ ಆಗಿ ರಚಿತಗೊಂಡಿದೆ.

**೨. ಚೌಕಾಕಾರದ ಹೂ, ಎಲೆ ನಕ್ಷಾವಿನ್ಯಾಸ**

ಈ ಫಲಕದ ಮೇಲೆ ಇಳಿಜಾರನ್ನು ಬಿಟ್ಟು ಕಡುಗೆಂಪು ವರ್ಣವನ್ನು ಲೇಪಿಸಲಾಗಿದ್ದು, ಮಧ್ಯದಲ್ಲಿ ಆಯತಾಕಾರವನ್ನು ಹಳದಿ ವರ್ಣದಿಂದ ರಚಿಸಿ ಅದನ್ನು ಆರು ಭಾಗಗಳಾಗಿ ವಿಂಗಡಿಸಿ ಒಂದೊಂದರಲ್ಲಿಯೂ ಹೂಎಲೆಗಳ ವಿನ್ಯಾಸವನ್ನು ಒಂದೇ ತೆರನಾಗಿ ಮಾಡಲಾಗಿದೆ. ಒಂದು ಚೌಕಾನೆಯ ಮಧ್ಯದಲ್ಲಿ ಹಳದಿ ವರ್ಣದ ದೊಡ್ಡ ಹೂವನ್ನು ರಚಿಸಿ ಅದರ ನಾಲ್ಕೂ ಬದಿಗೆ ಅಲಂಕಾರಿಕವಾದ ಎಲೆಯ ವಿನ್ಯಾಸವನ್ನು ಹಸಿರು ವರ್ಣದಿಂದ ಮಾಡಲಾಗಿದ್ದು, ಒಂದೊಂದು ಬದಿಗೂ ಅಲಂಕಾರಿಕ ಎಲೆಗಳು ಎದುರು ಬದುರಾಗಿರುವಂತೆ ಚಿತ್ರಿಸಲಾಗಿದ್ದು, ನಾಲ್ಕೂ ಬದಿಯಲ್ಲೂ ಈ ಎಲೆಗಳ ಮಧ್ಯದಲ್ಲಿ ಒಂದೊಂದು ಹಳದಿ ವರ್ಣದ ಮೊಗ್ಗುಗಳನ್ನು ಚಿತ್ರಿಸಲಾಗಿದೆ. ಇದೇ ಹೂಎಲೆಗಳ ವಿನ್ಯಾಸ ಪ್ರತೀ ಚೌಕಾನೆಗಳಲ್ಲಿಯೂ ಬಿಡಿ ಬಿಡಿಯಾಗಿ ಒಂದೇ ತೆರನಾಗಿ ರಚನೆಗೊಂಡಿವೆ. ಒಂದೊಂದು ಚೌಕದಲ್ಲಿಯೂ ಈ ಹೂಎಲೆಗಳ ವಿನ್ಯಾಸದ ನಂತರವೂ ಉಳಿದ ಖಾಲಿ ಜಾಗದಲ್ಲಿ ನಾಲ್ಕೂ ಬದಿಗೆ ಕೆಂಪು ಹೂವುಗಳನ್ನು ರಚಿಸಲಾಗಿದ್ದು, ಪ್ರತೀ ಖಾನೆಯಲ್ಲಿಯೂ ಇದನ್ನೇ ಮುಂದುವರೆಸಲಾಗಿದೆ. ಮಧ್ಯ ರಚಿಸಿದ ದೊಡ್ಡ ಹೂವಿನಲ್ಲಿ ಕೆಂಪು ವರ್ಣದಿಂದ ಹೂದಳಗಳಂತೆ ರೇಖೆಗಳನ್ನು ರಚಿಸಲಾಗಿದೆ. ಈ ಆಯಾತಾಕಾರದ ಕೃತಿಯ ಸುತ್ತಲೂ

ಉಳಿದ ಜಾಗದಲ್ಲಿ ಎಲೆಗಳು ಒಂದೊನ್ನೊಂದು ಛೇದಿಸುತ್ತಿರುವಂತೆ ರಚಿಸಿದ್ದು, ಮಧ್ಯದಲ್ಲಿ ಕೆಂಪು ವರ್ಣದ ಹೂಗಳಿದ್ದು, ಅದರ ಸುತ್ತಲೂ ರಿಂಗಿನಾಕಾರದಲ್ಲಿ ಎಲೆ ಬಳ್ಳಿಗಳ ನಕ್ಷಾವಿನ್ಯಾಸವಿದೆ.

**೩. ನಕ್ಷಾ ಪಟ್ಟಿಕೆ**

ಈ ಪಟ್ಟಿಕೆಯ ಮೇಲೆ ಕೆಂಪು ವರ್ಣ ಲೇಪನ ಮಾಡಿ, ಹಳದಿ ವರ್ಣದಿಂದ ಸರಳಗೈ ಚಿತ್ರ ಹೂ, ಎಲೆ, ಬಳ್ಳಿ ರಚಿಸಲಾಗಿದೆ. ಹೂಗಳಿಗೆ ಕೆಂಪು ಬಣ್ಣದಲ್ಲಿಯೂ ಎದ್ದು ಕಾಣುವಂತೆ ಹೆಚ್ಚು ಬಿಳಿ ಮಿಶ್ರಿತ ಗುಲಾಬಿ ಬಣ್ಣವನ್ನು ಬಳಸಲಾಗಿದೆ. ಪಟ್ಟಿಕೆಯ ಸುತ್ತಲೂ ಇಳಿಜಾರಿದ್ದು ಅಲ್ಲಿ ಹಳದಿ ರೇಖೆಗಳೊಂದಿಗೆ ಶಂಕರಪಾಳಿಯಂತಹ ವಿನ್ಯಾಸದ ಕಡುಗೆಂಪು ಬಣ್ಣದ ಚುಕ್ಕೆಗಳ ನಕ್ಷೆ ರಚಿಸಲಾಗಿದೆ.

**೪. ಸರಳಗೈ ಚಿತ್ರ ಪಟ್ಟಿಕೆ**

ಈ ಚಿತ್ರದಲ್ಲಿಯೂ ಕೂಡ ಅರ್ಧಚಂದ್ರಾಕೃತಿಗಳನ್ನು ಹೊಂದಾಣಿಕೆ ಮಾಡಿ ಸುಂದರ ಆಕೃತಿಗೊಳಿಸಿ ಅಂಥ ಆಕೃತಿಗಳ ಆರು ಸರಣಿಯನ್ನು ರಚಿಸಿ ಅವುಗಳನ್ನು ಮಾಡಿ ಮಧ್ಯಭಾಗದಲ್ಲಿ ಸುಂದರವಾದ ೮ ಪಕಳೆಗಳುಳ್ಳ ಹೂವನ್ನು ರಚಿಸಿ ಅದರ ಸುತ್ತಲೂ ಎಲ್ಲಿಯೂ ಜಾಗ ಉಳಿಯದಂತೆ ಪಣತೆಯಾಕಾರದ ವಿನ್ಯಾಸಗಳನ್ನು ರಚಿಸಲಾಗಿದ್ದು, ಅದರ ವಿರುದ್ಧ ದಿಕ್ಕಿನಲ್ಲಿಯೂ ಅರ್ಧ ಹೂ ಇಟ್ಟು ಸ್ಥಳಾವಕಾಶವನ್ನು ಸಮರ್ಥವಾಗಿ ಬಳಸಿಕೊಳ್ಳಲಾಗಿದೆ. ಇದೊಂದು ಶಿಷ್ಟ ಪರಂಪರೆಯ ಆಧುನಿಕತೆಯ ಸೊಗಡನ್ನು ಹೊಂದಿದ್ದು, ತೀರಾ ತಿಳುವಳಿಕೆಯಿಂದ ಇದನ್ನು ವಿನ್ಯಾಸಗೊಳಿಸಲಾಗಿದೆ.

**iv. ಹಸ್ತಪ್ರತಿ ಚಿತ್ರಗಳ ವಿಶೇಷತೆ**

* ಜಿಲ್ಲೆಯಲ್ಲಿರುವ ಎಲ್ಲಾ ಹಸ್ತಪ್ರತಿಗಳಲ್ಲಿಯೂ ಪಟ್ಟಿಕೆಗಳ ಮೇಲೆ ಮಾತ್ರ ವರ್ಣ ಚಿತ್ರಗಳಿದ್ದು, ತಾಳೆಗರಿಗಳ ಮೇಲೆ ಕೇವಲ ರೇಖಾಚಿತ್ರಗಳಿರುವುದು ವಿಶೇಷ.

* ಉದ್ಧರಣೆಯಂಥಹ ಗಂಭೀರ ವಿಷಯದ ಚಿತ್ರಗಳನ್ನು ವರ್ಣವಿನ್ಯಾಸ ಮಾಡದೆ, ಕೇವಲ ರೇಖೆಗಳಿಂದಲೇ ಸ್ಪಷ್ಟವಾಗಿ ಚಿತ್ರಿಸಲಾಗಿದ್ದು, ಒಟ್ಟು ಚಿತ್ರವನ್ನು ಒಂದು ಗರಿಯ ಹಿಂಭಾಗ ಮತ್ತು ಒಂದು ಗರಿಯ ಮುಂಭಾಗವನ್ನು ಬಳಸಿಕೊಂಡು ದೊಡ್ಡದಾದ ಚಿತ್ರಗಳನ್ನು ಬರೆಯಲಾಗಿದೆ.

* ಚಿತ್ರರಚನೆಗಾಗಿ ಕೈವಾರ, ಅಳತೆ ಪಟ್ಟಿಗಳನ್ನು ಬಳಸಿಕೊಂಡು ಅತ್ಯುತ್ತಮ ನಕ್ಷಾ ವಿನ್ಯಾಸಗಳನ್ನು ಚಿತ್ರಿಸಿರುವುದು ವಿಶೇಷ.

* ಪಟ್ಟಿಕೆಗಳ ಮೇಲಿನ ವರ್ಣ ಚಿತ್ರಗಳೆಲ್ಲವನ್ನು ಕೆಂಪು ವರ್ಣದ ಹಿನ್ನೆಲೆಯ ಮೇಲೆಯೇ ರಚಿಸಿದ್ದು, ಎಲ್ಲಾ ಚಿತ್ರಗಳಿಗೂ ಅಂಚನ್ನು ಬಿಟ್ಟು ಚಿತ್ರ ರಚಿಸಿರುವುದು ವಿಶೇಷ.

* ಪಟ್ಟಿಕೆಯ ಮೇಲಿನ ವರ್ಣ ಚಿತ್ರಗಳಲ್ಲಿ ಶಿವನನ್ನು ಹಲವಾರು ವಿವಿಧ ರೂಪದಲ್ಲಿ ಚಿತ್ರಿಸಿರುವುದು ಗಮನಾರ್ಹ.

* ಹಸ್ತಪ್ರತಿ ಚಿತ್ರಗಳ ರಚನೆಯಲ್ಲಿ ಕಲಾವಿದನ ಪ್ರೌಢತೆ ಎದ್ದು ಕಾಣುವಂತಿದೆ. ಅದರೊಂದಿಗೆ ಶಿಷ್ಟವಲ್ಲದ ಕಲಾವಿದರು ರಚಿಸಿದ ಕೆಲವು ಪಟ್ಟಿಕೆ ಚಿತ್ರಗಳನ್ನು ಕಾಣಬಹುದಾಗಿದ್ದು, ಅವುಗಳು ಜನಪದ ಶೈಲಿಯಲ್ಲಿಯೇ ರಚನೆಗೊಂಡಂತಿವೆ.



ತಾಳೆಗರಿಗಳ ಮೇಲಿನ ಉದ್ಧರಣೆ ಚಿತ್ರಗಳು ೧) ಜಂಗಮೋದ್ಧರಣೆ



೩) ಊರ್ಧ್ವ ಕುಂಡಲಿನಿ ಉದ್ಧರಣೆ



೬) ಶಾಂಭವಿ ಚಕ್ರೋದ್ಧರಣೆ



೭) ವೃಷಭೋದ್ಧರಣೆ



೮) ಜ್ಞಾನ ಚಕ್ರೋದ್ಧರಣೆ



ತಾಳೆ ಗರಿಗಳ ಮೇಲಿನ ಅಲಂಕಾರಿಕ ರೇಖಾ ನಕ್ಷಾ ಚಿತ್ರಗಳು



೧) ಪಗಡೆ ಆಡಲು ಕುಳಿತ ಶಿವ ಪಾರ್ವತಿಯರು



೪) ಶಿವ ಪಾರ್ವತಿ



೬) ಶಿವಲಿಂಗ ಪೂಜೆ



೭) ಕುಳಿತ ಭಂಗಿಯ ಗಣಪ ಮತ್ತು ನವಿಲಿನ ಮೇಲೆ ಕುಳಿತಿರುವ ಸರಸ್ವತಿ



೮) ಎದರು ಬದುರು ಕುಳಿತ ಸರಸ್ವತಿ ಮತ್ತು ಗಣಪತಿ



೯) ಗಣಪತಿ, ಸರಸ್ವತಿ



೧೨) ಕರಣ ಸಹಿಗೆ



೧೩) ಕಪ್ಪಿನ ನಂಜೇಸ್ವಾಮಿ

ಫಲಕಗಳಮೇಲಿನ ಅಲಂಕಾರಿಕ ನಕ್ಷಾ ಚಿತ್ರಗಳು



೧) ಹೂ ಎಲೆ ನಕ್ಷಾ ಚಿತ್ರ ಪಟ್ಟಿಕೆ



೨) ಚೌಕಾಕಾರದ ಹೂ, ಎಲೆ, ನಕ್ಷಾ ವಿನ್ಯಾಸ



ಅಧ್ಯಾಯ ಐದು

**ಬಾಗಲಕೋಟೆ ಜಿಲ್ಲೆಯ ತೊಗಲು ಮಾಧ್ಯಮ ಚಿತ್ರಕಲೆ**

ಅ. ತೊಗಲುಗೊಂಬೆ

ಆ. ಹಚ್ಚೆ

ಇ. ಮದರಂಗಿ

# ಬಾಗಲಕೋಟೆ ಜಿಲ್ಲೆಯ ತೊಗಲು ಮಾಧ್ಯಮ ಚಿತ್ರಕಲೆ

## ಅ. ತೊಗಲುಗೊಂಬೆ ಚಿತ್ರಗಳು

ಮಾನವ ತನ್ನ ನಿತ್ಯ ಜೀವನದ ಅವಶ್ಯಕತೆಗಳನ್ನು ಪೂರೈಸುತ್ತ, ಸಾಂಘಿಕ ಜೀವನವನ್ನು ಅನುಸರಿಸುತ್ತ, ಸರ್ವತೋಮುಖವಾಗಿ ವಿಕಾಸಗೊಳ್ಳುತ್ತಿರುವಾಗ ತನ್ನ ಸುಖ-ಸಂತೋಷಗಳನ್ನು ಪುನಃ ನೆನಪಿಸಿಕೊಳ್ಳಲು ದುಃಖ ದುಮ್ಮಾನ, ಬೇಸರಗಳನ್ನು ಕಳೆದುಕೊಳ್ಳಲು ಕಲೆಗಳಿಗೆ ಮೊರೆಹೋದ. ತನ್ನ ಬದುಕಿನೊಂದಿಗೇ ಅದರ ಪ್ರತಿಬಿಂಬವಾದ ಕಲೆಗಳನ್ನು ಸೃಷ್ಟಿಸಿಕೊಂಡು, ರೂಢಿಸಿಕೊಂಡು, ರಕ್ಷಿಸಿಕೊಂಡು ಬಂದಿದ್ದಾನೆ. ಹಾಗಾಗಿ ಮಾನವನ ಬದುಕಿನೊಂದಿಗೇ ಈ ಕಲೆಗಳು ವಿಕಾಸ ಹೊಂದುತ್ತ ಸಾಗಿವೆ. ಕೇವಲ ತನ್ನ ಆತ್ಮ ಸಂತೋಷಕ್ಕಾಗಿ ಅಲ್ಲದೆ ತನ್ನ ದೇವ ಭಕ್ತಿ-ಶ್ರದ್ಧೆಗಳನ್ನು ಸಮರ್ಪಿಸಲು ದೇವ ಆರಾಧನೆಯಾಗಿಯೂ ಕಲೆಗಳು ಮುಂದುವರಿದಿದೆ. ಹೀಗೆ ಕಲೆಗಳು ಮುಖ್ಯವಾಗಿ ಆರಾಧನೆ ಮತ್ತು ಮನರಂಜನೆಯನ್ನೇ ಮೂಲವಾಗಿಸಿಕೊಂಡವು. ಅವುಗಳಲ್ಲಿ ತೊಗಲುಗೊಂಬೆ ಯಾಟವು ಒಂದು.

ಭಾರತದ ಎಲ್ಲಾ ರಾಜ್ಯಗಳಲ್ಲಿಯೂ ತೊಗಲುಗೊಂಬೆಯಾಟವನ್ನು ಕಾಣಬಹುದಾಗಿದ್ದು, ಹೆಚ್ಚಾಗಿ ದಕ್ಷಿಣ ಭಾರತದಲ್ಲೇ ಪ್ರಸ್ತುತತೆ ಹೊಂದಿದೆ ಎನ್ನಬಹುದು. ಕರ್ನಾಟಕ, ಆಂಧ್ರಪ್ರದೇಶ, ಕೇರಳ, ತಮಿಳುನಾಡು, ಮಹಾರಾಷ್ಟ್ರ, ಒರಿಸ್ಸಾ ಹಲವಾರು ರಾಜ್ಯಗಳಲ್ಲಿ ಇದರ ಪ್ರಸ್ತುತತೆಯನ್ನು ಕಾಣಬಹುದಾಗಿದೆ. ಅಂತಯೇ ಕರ್ನಾಟಕದ ಹೆಚ್ಚು ಕಡಿಮೆ ಎಲ್ಲಾ ಭಾಗಗಳಲ್ಲೂ ಈ ಕಲೆಯನ್ನು ಕಾಣಬಹುದು.

ಒಂದರ್ಥದಲ್ಲಿ ಈ ತೊಗಲುಗೊಂಬೆಯಾಟವು ವಿಶ್ವವ್ಯಾಪಿಯಾಗಿದೆ. ಇಂಡೋನೇಶಿಯಾ, ಮಲೇಶಿಯಾ, ಚೀನಾ, ಜಾವಾ, ಥೈಲ್ಯಾಂಡ್‌ಗಳಲ್ಲಿ ಈ ಕಲೆಯನ್ನು ಕಾಣಬಹುದಾಗಿದೆ. ಏಷ್ಯಾದ ಇನ್ನೂ ಹಲವೆಡೆಗಳಲ್ಲಿಯೂ ಈ ತೊಗಲುಗೊಂಬೆಯಾಟವನ್ನು ಕಾಣಬಹುದಾಗಿದ್ದು, ಇವುಗಳು ಭಾರತೀಯ ತೊಗಲುಗೊಂಬೆಯಾಟವನ್ನೇ ಹೋಲುವಂತಿವೆ. ಥೈಲ್ಯಾಂಡ್‌ನ ತೊಗಲುಗೊಂಬೆಯಾಟಕ್ಕೂ, ಭಾರತೀಯ ತೊಗಲುಗೊಂಬೆಯಾಟಕ್ಕೂ ಹಲವು ಸಾಮ್ಯತೆಗಳನ್ನು ಕಾಣಬಹುದಾಗಿದೆ.[೨೬] ಅಲ್ಲದೇ ಈ ದೇಶಗಳು

---

೨೬. ದೇವಂತ ಡಿ. ಇಂಡಿಯನ್ ಮಲಯ ಆ್ಯಂಡ್ ಬ್ರೋನಿಯೋ-ಟಿವೋ ಮಿಲೇನಿಯಾ ಆಫ್ ಕಾಂಟ್ಯಾಕ್ಟ್ಸ್ ಆ್ಯಂಡ್ ಕಲ್ಚರಲ್ ಸಿಂತೆಸಿಸ್ ಇನ್ ಇಂಡಿಯಾಸ್ ಕಾಂಟ್ರಿಬ್ಯೂಷನ್ ಟು ವರ್ಲ್ಡ್ ತಾಟ್ ಆ್ಯಂಡ್ ಕಲ್ಚರ್, ಪು. ೫೧೯

ಈ ಗೊಂಬೆಯಾಟಕ್ಕೆ ಭಾರತದಲ್ಲಿ ಜನಪ್ರಿಯವಾದ ರಾಮಾಯಣ ಮತ್ತು ಮಹಾಭಾರತದ ಕಥಾವಸ್ತುಗಳನ್ನೇ ಆಯ್ಕೆ ಮಾಡಿಕೊಂಡುದು ಕಂಡುಬರುತ್ತದೆ. ಇದನ್ನು ಗಮನಿಸಿದಾಗ ಭಾರತೀಯ ಸಾಹಿತ್ಯ ಹಾಗೂ ಸಂಸ್ಕೃತಿಯ ಪ್ರಭಾವದ ಅರಿವಾಗುತ್ತದೆ.

ಈ ತೊಗಲುಗೊಂಬೆಯಾಟವನ್ನು ಆಂಗ್ಲಭಾಷೆಯಲ್ಲಿ Puppetry ಅಥವಾ Puppet show ಎಂದು ಕರೆಯುತ್ತಾರೆ. ಹಿಂದಿ ಮತ್ತು ಮರಾಠಿ ಭಾಷೆಯಲ್ಲಿ "ಕಟಪುತಲಿ ಬೇಲ" ತೆಲುಗಿನಲ್ಲಿ "ತೋಲುಬೊಮ್ಮಲಾಟ", ತಮಿಳಿನಲ್ಲಿ "ಸೂತ್ರಬೊಮ್ಮೈ", ಮಲೆಯಾಳದಲ್ಲಿ "ಪಾವೈಕ್ಕೊತ್ತ್" ಎಂದು ಕರೆಯುತ್ತಾರೆ.[೨೨] ಅಂತೆಯೇ ಕರ್ನಾಟಕದ ವಿವಿದೆಡೆಗಳಲ್ಲಿ ತೊಗಲುಗೊಂಬೆಯಾಟವನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುವುದುಂಟು. ಕರ್ನಾಟಕದಲ್ಲಿ ಈ ಗೊಂಬೆಯಾಟದ ಪದುಗಳಾದ ಸಮುದಾಯದವರನ್ನು ಕಿಳ್ಳೇಕ್ಯಾತರು ಎಂದು ಗುರುತಿಸುತ್ತಾರೆ. ಈ ತೊಗಲುಗೊಂಬೆಯಾಟವನ್ನು 'ಕಿಳ್ಳೇಕ್ಯಾತರಾಟ', 'ಕವಬರಾಟ', 'ಗೊಂಬೆರಾಮರಾಟ' ಎಂತಲೂ ಕರೆಯುತ್ತಾರೆ.

ತೊಗಲುಗೊಂಬೆಯಾಟವು ಒಂದು ಜನಪದ ಕಲೆಯಾಗಿದ್ದು, ಇದನ್ನು ಪರಂಪರಾಗತವಾಗಿ ಕಿಳ್ಳೇಕ್ಯಾತರೆಂಬ ಸಮುದಾಯದವರು ಆಡಿಸುತ್ತಾರೆ. ಪ್ರಾಣಿಗಳ ತೊಗಲನ್ನು ಹದಗೊಳಿಸಿ, ಬೇಕಾದ ಮಾನವ, ಗಿಡ, ಪ್ರಾಣಿ ಮುಂತಾದ ಆಕಾರಕ್ಕೆ ಕತ್ತರಿಸಿಕೊಂಡು, ಕಥಾ ಪಾತ್ರಗಳಿಗನುಗುಣವಾಗಿ ವರ್ಣಲೇಪನ ಮಾಡುತ್ತಾರೆ. ತೊಗಲಿನ ಈ ವಿವಿಧ ಆಕೃತಿಗಳೇ "ತೊಗಲುಗೊಂಬೆಗಳು". ಈ ತೊಗಲುಗೊಂಬೆಗಳಿಗೆ ಆಧಾರಕ್ಕಾಗಿ ಹಾಗೂ ಆಟ ಆಡಿಸುವ ಸೂತ್ರದಾರನು ಅವನ್ನು ಹಿಡಿದುಕೊಳ್ಳಲು ಅನುಕೂಲವಾಗುವಂತೆ ಮಧ್ಯದಲ್ಲಿ ಬಿದಿರಿನ ಕಡ್ಡಿಯನ್ನು ಜೋಡಿಸಿರುತ್ತಾರೆ.

ರಾಮಾಯಣ, ಮಹಾಭಾರತ ಇನ್ನೂ ಮುಂತಾದ ಪೌರಾಣಿಕ ಕಥೆಗಳನ್ನು ಸಾಮಾನ್ಯ ಪ್ರೇಕ್ಷಕರಿಗೆ ಮುಟ್ಟುವಂತೆ ಮಾಡಲು, ಗೊಂಬೆಯಾಟಗಳಂತಹ ಪ್ರದರ್ಶನ ಕಲೆಗಳನ್ನು ಬಳಸಿಕೊಂಡ. ತೊಗಲಿನ ಮೇಲೆ ಕಥಾಪಾತ್ರಗಳ ಚಿತ್ರ ಬರೆದು, ತೊಗಲುಗೊಂಬೆಗಳನ್ನಾಗಿ ಮಾಡಿ ನೆರಳು ಬೆಳಕಿನಲ್ಲಿ ಆಟ ಆಡಿಸುತ್ತ ಪ್ರದರ್ಶನಗಳನ್ನು ನೀಡಲು ಮುಂದಾದ. ಇದೇ "ತೊಗಲುಗೊಂಬೆಯಾಟ". ಈ ತೊಗಲುಗೊಂಬೆಯಾಟದ ಮೂಲ ಉದ್ದೇಶವೇ ಮನರಂಜನೆ. ಆದ್ದರಿಂದ ಈ ತೊಗಲುಗೊಂಬೆ ಚಿತ್ರಕಲೆಯೇ ಮನರಂಜನ ಮೂಲದ ಏಕೈಕ ತೊಗಲಿನ ಚಿತ್ರಕಲೆಯಾಗಿದೆ.

ಈ ಗೊಂಬೆಯಾಟದ ಕಲಾವಿದರೇ ಪ್ರೇಕ್ಷಕರಿಗೆ ಎದುರಾಗಿ ಒಂದು ಸಣ್ಣದಾದ ರಂಗಮಂಟಪ ನಿರ್ಮಿಸಿಕೊಳ್ಳುತ್ತಾರೆ. ರಂಗಮಂಟಪದ ಮುಂದೆ ಬಿಳಿ ಪರದೆಯೊಂದನ್ನು ಜಗ್ಗಿ ಕಟ್ಟಿರುತ್ತಾರೆ. ಪರದೆಯ ಹಿಂದೆ ಹೊತ್ತಿಸಿಟ್ಟ ದೀಪದ ಬೆಳಕಿನಲ್ಲಿ, ವಾದ್ಯಮೇಳಗಳೊಂದಿಗೆ ಆಟವಾಡಿಸುತ್ತಾರೆ. ಇದೇ "ತೊಗಲುಗೊಂಬೆಯಾಟ".

ಈ ತೊಗಲುಗೊಂಬೆಯಾಟದ ಪ್ರಾಚೀನತೆಯ ಕುರಿತ ಯಾವುದೇ ಖಚಿತ ಮಾಹಿತಿ ದೊರೆಯುವುದಿಲ್ಲ. ವಿಶ್ವದ ಅತ್ಯಂತ ಪ್ರಾಚೀನ ಕಲೆಗಳಾದ ಸೂತ್ರದ ಗೊಂಬೆಯಾಟ ಮತ್ತು

---

೨೨. ಡಾ.ಎಸ್.ಸಿ. ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪು. ೧೭೨.

ತೊಗಲುಗೊಂಬೆಯಾಟಗಳು ನಾಟ್ಯ, ನಾಟಕ ಮುಂತಾದ ರಂಗ ಪ್ರದರ್ಶನ ಕಲೆಗಳಲ್ಲಿಯೇ ಪ್ರಾಚೀನ ತರವಾದವು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಕ್ರಿ.ಪೂ. ೩ನೇ ಶತಮಾನದಲ್ಲಿಯೇ ತೊಗಲುಗೊಂಬೆಯಾಟವು ಆಂಧ್ರದಲ್ಲಿ ಪ್ರಚಾರವಿತ್ತು ಎಂಬುದಕ್ಕೆ ಆಧಾರಗಳಿರುವುದನ್ನು ಡಾ. ಶಶಿಕಲಾಹೂಗಾರ ಅವರು ತಮ್ಮ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಉಲ್ಲೇಖಿಸಿದ್ದಾರೆ. ಕ್ರಿ.ಶ. ೧೨ನೇ ಶತಮಾನದಲ್ಲಿ ವಚನಕಾರ ಚನ್ನಬಸವಣ್ಣ ತನ್ನ ಒಂದು ವಚನದಲ್ಲಿ ತೊಗಲುಗೊಂಬೆಯ ಕುರಿತು ಉಲ್ಲೇಖಿಸಿದ್ದಾರೆ. ಸಕಲ ಭೋಗಾದಿ ಭೋಗಂಗಳನ್ನು ಜಂಗಮಕ್ಕೆ ಅರ್ಪಿಸದೆ ತಾನೇ ಅನುಭವಿಸಿದರೆ, ಚಿತ್ರ ವಿಚಿತ್ರ ವಿನೋದದಾಟವನ್ನು ಜಂಗಮ ಮುಂತಾಗಿ ನೋಡದೆ ತಾ ನೋಡಿದನಾದಡೆ ತೊಗಲುಗೊಂಬೆಯ ನೋಡಿದ ಸಮಾನ ಎಂದು ಹೇಳಿದ್ದಾರೆ. ಕ್ರಿ.ಶ. ೧೫ನೇ ಶತಮಾನದ ಕನಕದಾಸರೂ ತಮ್ಮ ಒಂದು ಕೀರ್ತನೆಯಲ್ಲಿ ತೊಗಲುಗೊಂಬೆ ಪ್ರಸ್ತಾಪ ಮಾಡುತ್ತಾರೆ. ಕಾಲ ಕಾಲಕ್ಕೆ ರಾಜ ಮಹಾರಾಜರಿಂದ ಜನಸಾಮಾನ್ಯರವರೆಗೂ ಎಲ್ಲರೂ ತೊಗಲುಗೊಂಬೆಯಾಟವನ್ನು ಪೋಷಿಸುತ್ತಲೇ ಬಂದಿದ್ದಾರೆ.

ಈ ತೊಗಲುಗೊಂಬೆಯಾಟವು ಕಿಳ್ಳೆಕ್ಯಾತ ಸಮುದಾಯದ ಮೂಲ ಕಸುಬಾಗಿದ್ದು, ಹಲವಾರು ಕುಟುಂಬಗಳು ಇಂದಿಗೂ ಈ ಮೂಲವೃತ್ತಿಯನ್ನು ಉಳಿಸಿಕೊಂಡು ಬಂದಿರುವುದು ಗಮನಾರ್ಹ. ಈ ಗೊಂಬೆಯಾಟವು ಹಲವಾರು ಜನರ ಅಗತ್ಯತೆಯನ್ನು ಹೊಂದಿದ್ದು, ಕುಟುಂಬದ ಎಲ್ಲ ಸದಸ್ಯರೂ ಗೊಂಬೆಯಾಟದ ಪ್ರದರ್ಶನದಲ್ಲಿ ಪಾಲ್ಗೊಳ್ಳುತ್ತಾರೆ. ಅಂದರೆ ಗೊಂಬೆಯನ್ನು ಆಡಿಸುವ ಮುಖ್ಯ ಸೂತ್ರಧಾರ, ಹಿಂದೆ ವಾದ್ಯಮೇಳದಲ್ಲಿ ಕೆಲವು ಜನ, ಪ್ರದರ್ಶನದ ತಯಾರಿಗಾಗಿ, ಹೀಗೆ ಎಲ್ಲಾ ಕುಟುಂಬ ಸದಸ್ಯರೂ ಆಟದಲ್ಲಿ ಪಾಲ್ಗೊಳ್ಳುತ್ತಾರೆ. ಇಲ್ಲಿ ಗೊಂಬೆಯಾಡಿಸುವ ಸೂತ್ರಧಾರನೇ ಮೇಳದ ನಾಯಕ. ಈ ಆಟದಲ್ಲಿ ಅವನ ಪಾತ್ರವೇ ಮುಖ್ಯವಾದದ್ದು. ರಾಮಾಯಣ ಅಥವಾ ಮಹಾಭಾರತದ ಯಾವುದಾದರೂ ಒಂದು ಕಥಾವಸ್ತುವನ್ನು ಆಯ್ದುಕೊಂಡು ಪ್ರದರ್ಶನವೇರ್ಪಡಿಸಿದಾಗ, ಪರದೆಯ ಈ ಹಿಂದೆ ಈ ಸೂತ್ರಧಾರ ಕಥೆ ಮುಕ್ತಾಯವಾಗುವವರೆಗೂ ಒಬ್ಬನೇ ಗೊಂಬೆಗಳನ್ನು ಆಡಿಸುತ್ತ, ಹಿನ್ನೆಲೆ ಸಂಭಾಷಣೆಯನ್ನು ಹೇಳುತ್ತಿರುತ್ತಾನೆ. ಕಥೆಯ ಸಮಯ ಹೆಚ್ಚು ಕಡಿಮೆ ೨ರಿಂದ ೩ ಗಂಟೆಗಳಾಗಬಹುದು. ಇಷ್ಟು ಹೊತ್ತಿನವರೆಗೂ ಈ ಸೂತ್ರಧಾರ ತಾನೊಬ್ಬನೇ ಸಂದರ್ಭಕ್ಕೆ ತಕ್ಕ ಹಾಗೆ ಪಾತ್ರದ ಗೊಂಬೆಗಳ ಬದಲಾವಣೆ ಮಾಡುತ್ತ, ಆಡಿಸುತ್ತ, ಹಿನ್ನೆಲೆಯಲ್ಲಿ ಜೋರಾಗಿ ಸಂಭಾಷಣೆಗಳನ್ನು ಹೇಳುತ್ತಿರುವುದನ್ನು ನೋಡಿದರೆ, ಇವರ ತಾಳ್ಮೆ ಕಲಾರಾಧನೆಯ ಗುಣ, ವೃತ್ತಿಯ ಬಗೆಗಿನ ಗೌರವಗಳ ಅರ್ಥವಾಗುತ್ತವೆ.

ಇನ್ನು ಹಿಂದಿನ ಮೇಳದಲ್ಲಿ ತಬಲಾ, ಹಾರ್ಮೋನಿಯಂಗಳ ಜೊತೆಗೆ ಹಾಡುಗಾರರಾಗಿ ಕುಟುಂಬದ ಸದಸ್ಯರಿರುತ್ತಾರೆ. ಭೌತಿಕವಾಗಿ ಬಡತನ, ಅನಕ್ಷರತೆಯೇ ಎದ್ದು ಕಾಣುವ ಈ ಕಿಳ್ಳೇಕ್ಯಾತ ಸಮುದಾಯದಲ್ಲಿ, ಮಹಾಭಾರತ, ರಾಮಾಯಣದಂತಹ ಕಥೆಗಳನ್ನು ಮೌಖಿಕವಾಗಿ ತಲೆಮಾರಿನಿಂದ ಕಲಿತ ಅವುಗಳ ಉಚ್ಚಾರಣೆ ಹಾಗೂ ಪ್ರಸ್ತುತತೆಯನ್ನು, ಸಂಭಾಷಣೆಗಳನ್ನು ಶಿಸ್ತುಬದ್ಧವಾಗಿ ನಿರ್ವಹಿಸುವ ಸೂತ್ರಧಾರನ ಜಾಣ್ಮೆ ಪ್ರಶಂಸನೀಯ. ಆ ಕಾರಣದಿಂದಲೇ ಭಗವಂತನೇ ಸೂತ್ರಧಾರ, ಮಾನವರೆಲ್ಲಾ ಅವನು ಆಡಿಸಿದಂತೆ

ಆಡುವ ಪಾತ್ರದಾರಿ ಗೊಂಬೆಗಳು ಎಂದು ಜ್ಞಾನಿಗಳು ನುಡಿದಿರುವುದು ಸೂತ್ರಧಾರನ ಮಹತ್ವವನ್ನು ತಿಳಿಸುವಂತಿದೆ. ಅಂದಿನಿಂದ ಇಂದಿನವರೆಗೂ ಈ ತೊಗಲುಗೊಂಬೆಯಾಟವನ್ನು ತಿಳಿಸಿಕೊಂಡು ಬಂದಿರುವ ಕುಟುಂಬಗಳಿದ್ದರೂ ಸಹ, ಆಧುನಿಕತೆಯ ಭರದಲ್ಲಿ ಆದಾಯದ ಕೊರತೆಯಿಂದ ಹಲವಾರು ಕುಟುಂಬಗಳು ಬೇರೆ ಬೇರೆ ವೃತ್ತಿಗಳನ್ನು ಆಯ್ಕೆ ಮಾಡಿಕೊಂಡಿರುವುದನ್ನು ಕಾಣಬಹುದು.

ಇನ್ನೂ ಈ ತೊಗಲುಗೊಂಬೆಗಳ ತಯಾರಿಕೆಯ ಬಗೆಗೆ ಹೇಳುವುದಾದರೆ, ಹಲವು ಕಿಳ್ಳೇಕ್ಯಾತ ಕುಟುಂಬಗಳು, ಗೊಂಬೆಗಳ ತಯಾರಿಕೆಯ ವಿಧಾನವನ್ನು ಪೂರ್ವಿಕರಿಂದ ಕಲಿತು, ಗೊಂಬೆಗಳ ತಯಾರಿಕೆಯನ್ನು ಇಂದಿಗೂ ಮುಂದುವರಿಸಿದ್ದಾರೆ. ಅಲ್ಲದೇ ಕೆಲವು ಕುಟುಂಬಗಳು, ಪೂರ್ವಿಕರು ತಯಾರಿಸಿದ ಹಳೆಯ ಗೊಂಬೆಗಳನ್ನೇ ಸುರಕ್ಷಿತವಾಗಿ ರಕ್ಷಿಸಿಕೊಂಡು, ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಈ ಗೊಂಬೆಯಾಟದ ಕಥಾವಸ್ತುಗಳನ್ನು ರಾಮಾಯಣ, ಮಹಾಭಾರತವಲ್ಲದೇ ಬೇರೆ ಬೇರೆ ಪೌರಾಣಿಕ ಕಥೆಗಳನ್ನು ಬಳಸಿಕೊಂಡಿರುವ ಉದಾಹರಣೆಗಳಿವೆ. ಆದರೆ ಪೌರಾಣಿಕ ಕಥೆಗಳಿಗೆ ಹೋಲಿಸಿದರೆ ರಾಮಾಯಣ, ಮಹಾಭಾರತದ ಕಥಾವಸ್ತುಗಳ ಆಯ್ಕೆಯೇ ಹೆಚ್ಚು. ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ತೊಗಲುಗೊಂಬೆಗಳ ಚಿತ್ರವಿನ್ಯಾಸ, ಪ್ರದರ್ಶನಾ ವಿಧಾನಗಳಲ್ಲಿ ಅಲ್ಪಸ್ವಲ್ಪ ಭಿನ್ನತೆಗಳಿರುವಂತೆ, ಪ್ರದೇಶಗಳಿಗನುಗುಣವಾಗಿ ತೊಗಲುಗೊಂಬೆಗಳ ಗಾತ್ರದಲ್ಲೂ ವಿಭಿನ್ನತೆ ಕಾಣಬಹುದಾಗಿದೆ. ೬ರಿಂದ ೭ ಅಡಿಗಳಷ್ಟು ಎತ್ತರದ ಗೊಂಬೆಗಳಿಂದ ೨ರಿಂದ ೩ ಅಡಿಗಳಷ್ಟು ಸಣ್ಣದಾದ ಗೊಂಬೆಗಳನ್ನು ಕಾಣಬಹುದು.

ತೊಗಲುಗೊಂಬೆಯಾಟವು ಮನರಂಜನೆಯ ಮೂಲವಾದರೂ ಸಹ ಹಲವಾರು ರೀತಿಯ ಸಾಮಾನ್ಯರ ನಂಬಿಕೆಗಳಿಂದಲೇ ಇಂದಿಗೂ ಉಳಿದುಕೊಂಡು ಬಂದಿದೆ ಎಂಬುದನ್ನು ಮರೆಯುವಂತಿಲ್ಲ. ಗೊಂಬೆಯಾಟ ಆಡಿಸಿದರೆ ರೋಗ-ರುಜಿನೆಗಳು ದೂರಾಗುತ್ತವೆ, ನಮಗೆ ಬಂದ ಕಷ್ಟಗಳು ದೂರಾಗುತ್ತವೆ. ಗೊಂಬೆಯಾಟ ಆಡಿಸಿ ದೇವರನ್ನು ತೃಪ್ತಿಪಡಿಸಿದರೆ ಮಳೆ ಬರುತ್ತದೆ ಎಂಬ ನಂಬಿಕೆಗಳಿಂದಲೇ ತೊಗಲುಗೊಂಬೆಯಾಟ ಇಂದಿಗೂ ಪೋಷಣೆಯಾಗುತ್ತ ಬಂದಿದೆ ಎನ್ನಬಹುದು. ಇಂತಹ ಭವ್ಯ ಜನಪದ ಕಲೆಯಾದ ತೊಗಲುಗೊಂಬೆಯಾಟ, ಬಾಗಲಕೋಟೆ ಜಿಲ್ಲೆಯಲ್ಲಿ ಹೊಂದಿರುವ ಅಸ್ತಿತ್ವದ ಬಗೆಗೆ ಕೆಳಗೆ ಚರ್ಚಿಸಲಾಗಿದೆ.

### i. ಜಿಲ್ಲೆಯ ತೊಗಲುಗೊಂಬೆಯಾಟದವರ ನೆಲೆಗಳು

ಪ್ರಾಚೀನ ಕಾಲದಿಂದಲೂ ಸಹ ಚಿತ್ರಕಲೆಯ ಕ್ಷೇತ್ರದಲ್ಲಿ ಜಿಲ್ಲೆಯು ಭವ್ಯ ಪರಂಪರೆಯನ್ನು ಉಳಿಸಿಕೊಂಡು ಬಂದಿದೆ. ಬಾಗಲಕೋಟೆ ಜಿಲ್ಲೆಯು ಜನಪದ ಕಲೆಗಳ ತಾಣವೆಂದೇ ಕರೆಯಬಹುದು. ಕರಡಿಮಜಲು, ಡೊಳ್ಳುಕುಣಿತ, ಝೂಂಜ್‌ಪತರಾ, ಹೆಜ್ಜೆಕುಣಿತ, ಮೋಹರಂ ಕುಣಿತ ಇನ್ನೂ ಹಲವಾರು ರೀತಿಯ ಜನಪದ ಕಲೆಗಳು, ಜನಪದ ಕಲಾವಿದರನ್ನು ಹೊಂದಿರುವ ಬಾಗಲಕೋಟೆ ಜಿಲ್ಲೆಯು ಜನಪದ ಕಲಾ ವಲಯದಲ್ಲಿ ತನ್ನದೇಯಾದ ಶ್ರೇಷ್ಠತೆಯನ್ನು ಹೊಂದಿದೆ. ಜನಪದ ಚಿತ್ರಕಲೆಗಳಾದ ತೊಗಲುಗೊಂಬೆ ಚಿತ್ರಕಲೆ, ಹಚ್ಚೆ, ಮದರಂಗಿಯಂತಹ ಕಲೆಗಳಲ್ಲೂ ತನ್ನದೇಯಾದ ಸ್ಥಾನ, ವೈಶಿಷ್ಟ್ಯವನ್ನು ಉಳಿಸಿಕೊಂಡಿದೆ.

ಅತೀ ಪ್ರಾಚೀನ ಕಲೆಗಳಲ್ಲೊಂದಾದ ಆರಾಧನೆಯ ಜೊತೆಗೆ ಮನರಂಜನೆಗೂ ಮೂಲವಾಗಿರುವ ಕಲೆ ತೊಗಲುಗೊಂಬೆಯಾಟ. ಬಹಶಃ ತೊಗಲನ್ನು ಚಿತ್ರರಚನೆಗಾಗಿ ಮಾಧ್ಯಮವಾಗಿಸಿಕೊಂಡ ಏಕೈಕ ಜನಪದ ಕಲೆ ಇದಾಗಿದೆ. ಹಲವಾರು ಜನಪದ ಕಲೆಗಳ ತವರಾದ ಬಾಗಲಕೋಟೆ ಜಿಲ್ಲೆಯಲ್ಲಿ ತೊಗಲುಗೊಂಬೆಯಾಟವೂ ಪರಂಪರಾಗತವಾಗಿ ಉಳಿದುಕೊಂಡು ಬಂದಿದೆ ಎಂಬುದು ವಿಶೇಷ.

ಜಿಲ್ಲೆಯನ್ನಾಳಿದ ಚಾಲುಕ್ಯ ದೊರೆಗಳ ಕಲಾಪೋಷಕರೆಂದೇ ಪ್ರಸಿದ್ಧಿ ಪಡೆದವರು. ಜಿಲ್ಲೆಯಲ್ಲಿ ಅವರ ಕಾಲದಲ್ಲಿ ಸಂಗೀತ, ನೃತ್ಯಕಲೆಗಳ ಜೊತೆಗೆ ಶಿಲ್ಪ, ವಾಸ್ತುಶಿಲ್ಪ, ಚಿತ್ರಕಲೆಗಳಿಗೂ ಪ್ರಾಶಸ್ತ್ಯ ನೀಡಿರುವ ಜ್ವಲಂತ ಉದಾಹರಣೆಗಳು ನಮ್ಮೆದುರಿಗಿವೆ. ಅಂತೆಯೇ ರಂಗ ಕಲೆಗಳಾದ ಸೂತ್ರದ ಗೊಂಬೆಯಾಟ ಅಥವಾ ತೊಗಲುಗೊಂಬೆಯಾಟಗಳೂ ಚಾಲುಕ್ಯ ದೊರೆಗಳ ಪೋಷಣೆಯಲ್ಲಿದ್ದಿರಬಹುದು. ಪಟ್ಟದಕಲ್ಲಿನಲ್ಲಿರುವ ಶಾಸನ ಒಂದರಲ್ಲಿ 'ಇನ್ನಾತನೆ ನರ್ತಕಂ ನಟರೊಳ್ ಅಗ್ಗಳಂ' ಎಂಬ ಒಬ್ಬ ಪ್ರಖ್ಯಾತ ನಟ, ನರ್ತಕನ ಪ್ರಸ್ತಾಪವಿದೆ. ಇದು ಶಿಷ್ಟಪದ ಕಲೆಯ ನಿದರ್ಶನವೆಂಬುದಾಗಿ ಭಾವಿಸುವುದಾದರೆ ತೊಗಲುಗೊಂಬೆಯಾಟವು ಈ ಪ್ರದೇಶದ ಜನಪದ ರಂಗ ಪ್ರದರ್ಶನ ಕಲೆ ಆಗಿರಬಹುದಾಗಿದೆ. ಈ ನಿಟ್ಟಿನಲ್ಲಿ ನಡೆಯುವ ಅಧ್ಯಯನಗಳು ಇತಿಹಾಸ ಕಾಲ ಸಂದರ್ಭದ ನಿದರ್ಶನಗಳನ್ನು ಒದಗಿಸಿ ಕೊಡಬಹುದಾಗಿದೆ. ಇಂಥ ಪರಂಪರೆಯ ಒಂದು ಜೀವಂತ ಎಳೆಯೆಂಬಂತೆ ತೊಗಲುಗೊಂಬೆಯಾಟ ಕಲೆಯನ್ನು ಪರಂಪರಾಗತವಾಗಿ ಉಳಿಸಿಕೊಂಡು ಬಂದಿರುವ ಏಕೈಕ ಕಿಳ್ಳೇಕ್ಯಾತ ಕುಟುಂಬವನ್ನು ಜಿಲ್ಲೆಯಲ್ಲಿ ಕಾಣಬಹುದಾಗಿದೆ. ಬಾದಾಮಿ ತಾಲ್ಲೂಕಿನ ಕುಳಗೇರಿ ಕ್ರಾಸ್ ಸಮೀಪದ "ಕಾಕನೂರು" ಜಿಲ್ಲೆಯ ಏಕೈಕ ತೊಗಲುಗೊಂಬೆಯಾಟದ ನೆಲೆಯಾಗಿದೆ.

ತೊಗಲುಗೊಂಬೆಯಾಟವೇ ಮೂಲವೃತ್ತಿಯಾಗಿರುವ ಹಾಗೂ ಈ ಭಾಗದ ತೊಗಲುಗೊಂಬೆಯಾಟದ ಮೂಲಿಗರೆನಿಸಿರುವ ಕಿಳ್ಳೇಕ್ಯಾತ ಸಮುದಾಯದ ಕುಟುಂಬಗಳು ಜಿಲ್ಲೆಯಲ್ಲಿವೆ. ಅವುಗಳಲ್ಲಿ ತೊಗಲುಗೊಂಬೆಯಾಟವನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿರುವ ಏಕೈಕ ಕಿಳ್ಳೇಕ್ಯಾತರ ಕುಟುಂಬವೊಂದು ಕಾಕನೂರಿನಲ್ಲಿದೆ. ಕಿಳ್ಳೇಕ್ಯಾತರನ್ನು ಸಿಳ್ಳೇಕ್ಯಾತರೆಂದೂ ಕರೆಯುವ ವಾಡಿಕೆಯಿದೆ. ಕಾಕನೂರಿನಲ್ಲಿರುವ ಈ ಮನೆತನವನ್ನು ಸಿಳ್ಳೇಕ್ಯಾತರೆಂದೇ ಕರೆಯುತ್ತಿದ್ದು, ಸಿಳ್ಳೇಕ್ಯಾತ ಎನ್ನುವುದೇ ಇವರ ಅಡ್ಡ ಹೆಸರಾಗಿ, ಶಾಲಾದಾಖಲಾತಿ ಹಾಗೂ ಇನ್ನಿತರ ದಾಖಲಾತಿಗಳಲ್ಲಿದೆ. ಸಧ್ಯದ್ದು ತಮ್ಮ ಮನೆತನದ ನಾಲ್ಕನೇ ತಲೆಮಾರೆಂದು ಹೇಳಿಕೊಳ್ಳುವ ಈ ಕುಟುಂಬ ಇಂದಿಗೂ ತೊಗಲುಗೊಂಬೆಯಾಟವನ್ನು ಮೂಲವೃತ್ತಿಯನ್ನಾಗಿ ಉಳಿಸಿಕೊಂಡು ಬಂದಿದೆ.

ಈ ಕುಟುಂಬದವರು ಹೇಳುವ ಪ್ರಕಾರ ಸುಮಾರು ೨೦೦ ವರ್ಷ ಹಿಂದಿನ ಇವರ ಹಿರಿತಲೆ, ಶ್ರೀ ಸುಭಾನಪ್ಪ ಶಾಸ್ತ್ರಿಗಳು, ಅವರೇ ಈಗಲೂ ಆಡಿಸುವ ತೊಗಲುಗೊಂಬೆಗಳನ್ನು ತಯಾರಿಸಿದವರು. ಇವರಿಗಿಂತಲೂ ಪೂರ್ವಜರು ತೊಗಲುಗೊಂಬೆಯಾಟವನ್ನು ಆಡಿಸುತ್ತಿದ್ದರೇ ಎಂಬುದಕ್ಕೆ ಸ್ಪಷ್ಟ ಉತ್ತರ ದೊರೆಯುವುದಿಲ್ಲ. ಆದರೆ ಕುಟುಂಬ ನೀಡುವ ಮಾಹಿತಿಯ ಪ್ರಕಾರ ಶ್ರೀ ಸುಭಾನಪ್ಪಶಾಸ್ತ್ರಿಗಳು ನಂತರ ಮಗಳ ಗಂಡನಾದ ಕಾಕಪ್ಪನವರು. ಇವರ ನಂತರ ಇವರ ಮಗನಾದ ಕೇಶಪ್ಪನವರು ಈ ಕಲೆಯನ್ನು

ಮುಂದುವರೆಸಿಕೊಂಡು ಬಂದಿದ್ದಾರೆ. ಕೇಶಪ್ಪನವರು ನಂತರ ಅವರ ಹಿರಿಯ ಮಗನಾದ ಕಲ್ಲಪ್ಪನು ಇದನ್ನು ಮುಂದುವರೆಸಿದ್ದನಾದರೂ ಅವನು ಅಕಾಲಿಕ ಮರಣಕ್ಕೆ ತುತ್ತಾದ. ಕಲ್ಲಪ್ಪನ ನಂತರ ಅವನ ತಮ್ಮನಾದ ೩೧ ವರ್ಷ ಪ್ರಾಯದ ಪ್ರಕಾಶ್‌ರವರೇ ತೊಗಲುಗೊಂಬೆಯಾಟವನ್ನು ಮುಂದುವರೆಸಿರುವವರು.

ತೊಗಲುಗೊಂಬೆಯಾಟ ಆಡಿಸಲು ಬೇಕಾಗುವ ಜನರ ಗುಂಪನ್ನು 'ಮೇಳ' ಎಂದು ಕರೆಯಲಾಗುತ್ತದೆ. ಕುಟುಂಬದ ಸದಸ್ಯರೇ ಈ ಮೇಳದಲ್ಲಿರುತ್ತಾರೆ. ಗೊಂಬೆಯಾಡಿಸುವ ಸೂತ್ರಧಾರಿಯೇ ಮೇಳದ ನಾಯಕ. ಇಲ್ಲಿ ಸುಭಾನಪ್ಪಶಾಸ್ತ್ರಿಗಳಿಂದ ಹಿಡಿದು ಈಗಿನ ಪ್ರಕಾಶ್‌ನವರೆಗೆ ನಮೂದಿಸಲಾಗಿರುವವರೆಲ್ಲರೂ ಕೂಡ ಮೇಳದ ನಾಯಕರೇ ಇವರ ಜೊತೆಗೆ ಆಟದಲ್ಲಿ ಹಿಮ್ಮೇಳವಾಗಿ, ವಾದ್ಯಮೇಳದವರಾಗಿ ಮನೆಯ ಕುಟುಂಬ ಸದಸ್ಯರಾದ ದಾಕ್ಷಾಯಿಣಿ ಮತ್ತು ಮಾರುತಿ ಎಂಬುವವರು ಹಿಮ್ಮೇಳದಲ್ಲಿರುತ್ತಾರೆ. ತಾಳ ಹಾಕುವುದು ಮತ್ತು ಹಿನ್ನೆಲೆಯಾಗಿ ಸಾಂದರ್ಭಿಕವಾದ ಹಾಡುಗಳನ್ನು ಹಾಡುವುದು, ಮೇಳನಾಯಕನ ಸಂಭಾಷಣೆಯ ಸಂದರ್ಭದಲ್ಲಿ ಅವಶ್ಯವಿರುವಲ್ಲಿ ಸಾಥ್ ನೀಡುವುದು. ಈ ಕೆಲಸಗಳನ್ನು ಹಿಮ್ಮೇಳದವರು ನಿರ್ವಹಿಸುತ್ತಾರೆ. ಇನ್ನು ವಾದ್ಯಮೇಳದಲ್ಲಿ ತಬಲಾ, ಹಾರ್ಮೋನಿಯಂಗಳ ಬಳಕೆ ಇರುತ್ತದೆ. ಈ ವಾದ್ಯಮೇಳದಲ್ಲಿಯೂ ತಬಲವಾದಕರಾಗಿ ಕಾಕಪ್ಪ, ಹಾರ್ಮೋನಿಯಂ ವಾದಕರಾಗಿ ಶಂಕರ್ ಎಂಬ ಕುಟುಂಬ ಸದಸ್ಯರಿಬ್ಬರಿದ್ದಾರೆ. ಹೀಗೆ ಈ ತೊಗಲುಗೊಂಬೆಯಾಟದ ಮೇಳದಲ್ಲಿ ಕುಟುಂಬ ಸದಸ್ಯರೆಲ್ಲರೂ ಪಾಲ್ಗೊಳ್ಳುತ್ತಾರೆ.

ಈ ತೊಗಲುಗೊಂಬೆ ಚಿತ್ರಗಳ ರಚನೆಯ ಬಗೆಗೆ ವಿಚಾರಿಸಿದಾಗ, ಸುಮಾರು ೨೦೦ ವರ್ಷದ ಹಿಂದೆಯೇ. ಇವರ ಹಿರಿತಲೆಯಾದ ಸುಭಾನಪ್ಪಶಾಸ್ತ್ರಿಗಳೇ ಈ ಚಿತ್ರಗಳನ್ನು ರಚಿಸಿದ್ದಾರೆ ಎಂದು ಕುಟುಂಬ ಸದಸ್ಯರು ವಿವರಿಸುತ್ತಾರೆ. ಅದೇ ಗೊಂಬೆಗಳನ್ನು ಇಂದಿಗೂ ಜೋಪಾನವಾಗಿರಿಸಿಕೊಂಡು, ಅವುಗಳನ್ನೇ ಪ್ರದರ್ಶಿಸುತ್ತಿದ್ದಾರೆ. ಕಿಳ್ಳೇಕ್ಯಾತ ಸಮುದಾಯವೇ ತೊಗಲುಗೊಂಬೆಗಳ ರಚನೆ ಹಾಗೂ ಪ್ರದರ್ಶನಗಳೆರಡನ್ನು ಮಾಡುವುದರಿಂದ ಈ ಈ ಗೊಂಬೆಗಳ ರಚನೆಯೂ ಈ ಕುಟುಂಬದ ಹಿರಿಕರೊಬ್ಬರಿಂದ ಚಿತ್ರಣಗೊಂಡಿರಬಹುದಾಗಿದೆ. ಈ ಕುಟುಂಬದ ಮೂಲ ಹಿರಿಯರಾದ ಸುಭಾನಪ್ಪಶಾಸ್ತ್ರಿಗಳೇ ತೊಗಲುಗೊಂಬೆಗಳನ್ನು ರಚಿಸಿದ್ದಾರೆಂಬುದಕ್ಕೆ ಖಚಿತ ಮಾಹಿತಿ ಇಲ್ಲವಾದರೂ, ಈ ಕುಟುಂಬದ ಪೂರ್ವಿಕರೇ ಈ ಗೊಂಬೆಗಳನ್ನು ರಚಿಸಿರುವುದಂತೂ ಬಹುತೇಕ ಖಚಿತ. ಇವರಲ್ಲಿಯ ಗೊಂಬೆಗಳನ್ನು ನೋಡಿದಾಗ, ತುಂಬಾ ಹಿಂದೆಯೇ ರಚನೆಗೊಂಡಿವುಗಳು ಎಂಬುದು ಸ್ಪಷ್ಟವಾಗುತ್ತವೆ. ಹಾಗೆಯೇ ಬೇರೆ ಬೇರೆ ಪ್ರದೇಶಗಳಲ್ಲಿಯ ಕಿಳ್ಳೇಕ್ಯಾತರು, ತೊಗಲುಗೊಂಬೆಗಳ ಪ್ರದರ್ಶನದ ಜೊತೆಗೆ ಗೊಂಬೆಗಳ ರಚನೆಯನ್ನೂ ಮುಂದುವರೆಸಿಕೊಂಡು ಬಂದಿರುವುದು ಈ ಮಾತಿಗೆ ಆಧಾರವಾಗಿ ನಿಲ್ಲುತ್ತದೆ. ಹಾಗಾಗಿ ಕಾಕನೂರಿನ ಈ ಕುಟುಂಬವೂ ಕೂಡ ತಮ್ಮ ಪೂರ್ವಿಕರಿಂದ ಬಂದ ಗೊಂಬೆಗಳನ್ನೇ ರಕ್ಷಿಸಿಕೊಂಡು ಅವುಗಳ ಪ್ರದರ್ಶನವನ್ನೇ ಮುಂದುವರೆಸಿದ್ದಾರೆ.

ಆಧುನಿಕತೆಯ ಭರಾಟೆಯಲ್ಲಿ ತೊಗಲುಗೊಂಬೆಯಾಟಗಳಂತಹ ಜನಪದ ಕಲೆಗಳು ನಿರ್ಲಕ್ಷ್ಯಕ್ಕೆ ಒಳಗಾಗುತ್ತಿವೆ. ಅದರಿಂದಾಗಿ ಕುಟುಂಬದ ಉಳಿದ ಸದಸ್ಯರು ಹೊಟ್ಟೆಪಾಡಿಗಾಗಿ ಬೇರೆ ಬೇರೆ ವೃತ್ತಿಗಳನ್ನು ಕೈಗೊಂಡಿದ್ದಾರೆ. ಆದಾಗ್ಯೂ ಈ ಸಮುದಾಯದ ಕೆಲವರು ತಮ್ಮ ಮೂಲವೃತ್ತಿಯಾದ

ತೊಗಲುಗೊಂಬೆಯಾಟ ವನ್ನು ಯಾವುದೇ ಕಾರಣಕ್ಕೂ ಎಂತಹ ಕಷ್ಟದಲ್ಲೂ ಬಿಟ್ಟಿಲ್ಲ, ಬಿಡುವುದಿಲ್ಲ ಎಂಬುದು ವೃತ್ತಿ ಅಭಿಮಾನವಾಗಿದೆ. ನಮ್ಮ ಜೀವನದ ಅತ್ಯಂತ ಕಠಿಣ ಪರಿಸ್ಥಿತಿ ಒಮ್ಮೊಮ್ಮೆ ತುತ್ತು ಅನ್ನಕ್ಕಾಗಿ ಪರಿತಪಿಸುತ್ತಿರುವ ಸಂದರ್ಭದಲ್ಲಿಯೂ ಕೂಡ ಯಾವುದೋ ಒಂದು ರೀತಿಯಿಂದ ಆಟ ಪ್ರದರ್ಶಿಸಲು ಬೇಡಿಕೆಗಳು ಬಂದು ನಮ್ಮ ಕಷ್ಟಗಳು ದೂರಾಗಿವೆ ಎನ್ನುತ್ತಾರೆ. ಇದು ಅವರ ದೃಢವಾದ ನಂಬಿಕೆ.

ತೊಗಲುಗೊಂಬೆಗಳನ್ನು ಎರಡು ಪ್ರತ್ಯೇಕವಾದ ಕಬ್ಬಿಣದ ಪೆಟ್ಟಿಗೆಗಲ್ಲಿ ಸುರಕ್ಷಿತವಾಗಿಟ್ಟಿದ್ದಾರೆ. ಈ ಪೆಟ್ಟಿಗೆಗಳನ್ನು ಮಾತ್ರ ಒಂದು ಪ್ರತ್ಯೇಕ ಕೋಣೆಯಲ್ಲಿಯೇ ಇರಿಸಿರುತ್ತಾರೆ. ಸಾಕ್ಷಾತ್ ದೇವರಂತೆ ತಮಗೆ ಅನ್ನ ನೀಡುವ ಗೊಂಬೆಗಳನ್ನು ಪೂಜನೀಯವಾಗಿ ಕಾಣುತ್ತಾರೆ. ಗೊಂಬೆಗಳನ್ನಿಟ್ಟಿರುವ ಪೆಟ್ಟಿಗೆಗಳೇನಾದರೂ ಅಪ್ಪಿತಪ್ಪಿ ಕೆಳಗೆ ಬಿದ್ದರೆ, ತಮ್ಮ ಮನೆಯಲ್ಲಿ ಖಂಡಿತವಾಗಿ ಸಾವಾಗುತ್ತದೆ ಎಂಬುದು ಈ ಕುಟುಂಬದವರ ನಂಬಿಕೆ. ಕಾಕತಾಳಿಯವೆಂಬಂತೆ ನಡೆದ ಒಂದೆರಡು ಘಟನೆಗಳನ್ನೂ ಇದಕ್ಕೆ ಉದಾಹರಿಸುತ್ತಾರೆ. ಹಲವಾರು ಜನಪದ ವಿದ್ವಾಂಸರು, ಮ್ಯೂಸಿಯಂಗಳ ಮಾಲೀಕರು, ಭಾರಿ ಬೆಲೆ ನೀಡುತ್ತೇವೆಂದು ಒತ್ತಾಯಿಸಿ ಗೊಂಬೆಗಳನ್ನು ಬೇಡಿದರೂ ಸಹ ಕುಟುಂಬದವರು ಖಡಾಖಂಡಿತವಾಗಿ ನಿರಾಕರಿಸಿದ್ದಾರೆ. ಅಂತೆ ಹಲವಾರು ಜನ, ಗೊಂಬೆಗಳನ್ನಾಡಿಸುವುದರಿಂದ ಸಿಗುವ ಲಾಭವೆಷ್ಟು? ಅದನ್ನು ಬಿಟ್ಟು ಬೇರೆ ಬೇರೆ ಲಾಭದಾಯಕ ಉದ್ಯೋಗಗಳನ್ನು ಅರಿಸಿ ಎಂದು ನೀಡಿರುವ ಉಚಿತ ಸಲಹೆಗೆ ಕಿವಿಗೊಡದೇ, ಇಂದಿಗೂ ತಮ್ಮ ಮೂಲವೃತ್ತಿಯನ್ನು ಮುಂದುವರೆಸಿಕೊಂಡು ಬಂದಿರುವುದನ್ನು ಕಂಡರೆ ಕುಟುಂಬದವರಿಗೆ ತಮ್ಮ ವೃತ್ತಿಯ ಮೇಲಿರುವ ಗೌರವ, ನಂಬಿಕೆ, ಪೂಜ್ಯತೆಗಳನ್ನು ಎತ್ತಿತೋರಿಸುತ್ತದೆ. ತನ್ನ ಕುಟುಂಬಕ್ಕೆ ಆಸರೆಯಾಗಿ ಬಂದ ತಮ್ಮ ಮೂಲವೃತ್ತಿಯಾದ ತೊಗಲುಗೊಂಬೆಯಾಟದ ಬಗೆಗೆ ಯಾವುದೇ ರೀತಿಯಿಂದ ಅಪಮಾನಗೆಯ್ಯುವುದು, ಅಪರಾಧ ಎಂದು ಗಾಢವಾಗಿ ನಂಬಿರುವ ಈ ಕುಟುಂಬದ ನಂಬಿಕೆಯೇ ಇಂದೂ ದೇಶದ ಜಿಲ್ಲೆಯ ಸಂಸ್ಕೃತಿಯ ಪ್ರತೀಕದಂತಿರುವ ತೊಗಲುಗೊಂಬೆಯಾಟದಂತಹ ಪ್ರಾಚೀನ ಜನಪದ ಕಲೆ ಉಳಿದಿರುವುದಕ್ಕೆ ಕಾರಣ ಎನ್ನಬಹುದು.

ಇತ್ತೀಚಿನ ದಿನಗಳಲ್ಲಿ ವಿದ್ಯುದ್ದೀಪದ ಸಹಾಯದಿಂದ ನೆರಳನ್ನು ಸೃಷ್ಟಿಸಿ ತೊಗಲುಗೊಂಬೆಗಳ ಪ್ರದರ್ಶನ ಮಾಡಲಾಗುತ್ತದೆ. ಆದರೆ ಹಿಂದಿನ ದಿನಗಳಲ್ಲಿ ದೊಡ್ಡ ಪಣತೆಯಲ್ಲಿ ಗಾಣದೆಣ್ಣೆಯನ್ನು ಹಾಕಿ, ಅರಿವೆಯ ಬತ್ತಿಗಳನ್ನು ಹಾಕಿ, ದೀಪದ ಬೆಳಕಿನಲ್ಲಿ ಗೊಂಬೆಯಾಟದ ಪ್ರದರ್ಶನ ಮಾಡುತ್ತಿದ್ದರು. ಕಾಲ ಕಾಲಕ್ಕೆ ಆಗುತ್ತಿರುವ ಇಂತಹ ಬದಲಾವಣೆಗಳ ಜೊತೆ ಜೊತೆಗೆ ಇಂದು ಪ್ಲಾಸ್ಟಿಕ್ ಹಾಗೂ ಇನ್ನಿತರ ವಸ್ತುಗಳಿಂದ ಗೊಂಬೆಗಳನ್ನು ರಚಿಸಿ, ಸಾಮಾಜಿಕ ಕಳಕಳಿಯ ಪ್ರದರ್ಶನಗಳನ್ನು ನೀಡುತ್ತಿರುವವರ ಬಗೆಗೆ ಈ ಕುಟುಂಬ ಅಸಮಾಧಾನ ಹೊಂದಿದೆ. ಅಂತೆಯೇ ಕೇವಲ ಮಹಾಭಾರತ ಮತ್ತು ರಾಮಾಯಣದ ಕಥಾ ಪ್ರಸಂಗಗಳಾದ ದ್ರೌಪದಿ ವಸ್ತ್ರಾಪಹರಣ, ಕುರುಕ್ಷೇತ್ರ, ದ್ರೌಪದಿ ಸ್ವಯಂವರ, ಕೀಚಕವಧಾ, ಲವಕುಶ, ಐರಾವಣ-ಮಹಿರಾವಣದಂತಹ ಪೌರಾಣಿಕ ಕಥಾ ಪ್ರಸಂಗಗಳನ್ನು ಮಾತ್ರ ಪ್ರದರ್ಶನಗೊಳಿಸುತ್ತಾರೆ.

ಎಲ್ಲಾ ತೊಗಲುಗೊಂಬೆಯಾಟಗಳೂ ಗಣಪತಿ ಹಾಗೂ ಸರಸ್ವತಿಯ ಗೊಂಬೆಗಳೊಂದಿಗೆ ಆರಂಭಗೊಳ್ಳುವಂತೆ ಇವರೂ ಸಹ ಗಣಪತಿಯ ಗೊಂಬೆಯೊಂದಿಗೆ ಗಣೇಶ ಸ್ತೋತ್ರದ ಮೂಲಕ ಆಟವನ್ನು ಆರಂಭಿಸುತ್ತಾರೆ. ಅಲ್ಲದೇ ಪೌರಾಣಿಕ ಕಥಾ ಪ್ರಸಂಗಗಳ ಕೊನೆಯಲ್ಲಿ ಬಸಪ್ಪ ಎಂಬ ಹಾಸ್ಯಪಾತ್ರದ ಗೊಂಬೆಯೊಂದಿದ್ದು, ಹಾಸ್ಯದೊಂದಿಗೇ ಅದನ್ನು ಮುಕ್ತಾಯಗೊಳಿಸಲಾಗುತ್ತದೆ. ಈ ರೀತಿಯಾಗಿ ಪರಂಪರಾಗತವಾಗಿ ತೊಗಲುಗೊಂಬೆಯಾಟವನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವ ಕಾಕನೂರಿನ ಸಿಳ್ಳೇಕ್ಯಾತ ಕುಟುಂಬ, ಮುಂದೆ ತಮ್ಮ ಮಕ್ಕಳಿಗೂ ಈ ಕಲೆಯನ್ನು ಕಲಿಸಿ, ಮುಂದುವರೆಸುವಂತೆ ಪ್ರೇರಿಪಿಸುತ್ತೇವೆಂದು ಹೇಳಿರುವುದು. ತೊಗಲುಗೊಂಬೆಯಾಟದಂತಹ ಪ್ರಾಚೀನ ಜನಪದ ಕಲೆ, ಜಿಲ್ಲೆಯ ಸಾಂಸ್ಕೃತಿಕ ವೈಭವದಲ್ಲಿ ಖಚಿತವಾಗಿರುವಂತಹ ಆಸೆಯನ್ನು ಇಮ್ಮಡಿಗೊಳಿಸುತ್ತದೆ. ಕೇವಲ ವಿದ್ವಾಂಸರಿಗೆ ಮಾತ್ರ ಮೀಸಲಾಗಿದ್ದ ಮಹಾಕಾವ್ಯಗಳು, ತೊಗಲುಗೊಂಬೆಯಾಟಗಳಂತಹ ಕಲೆಗಳ ಮೂಲಕ ಜನಸಾಮಾನ್ಯರನ್ನು ತಲುಪಿದ್ದು ಉಲ್ಲೇಖನೀಯ. ಜಿಲ್ಲೆಯಲ್ಲಿರುವ ಈ ಏಕೈಕ ಕುಟುಂಬಕ್ಕೆ ಸರ್ಕಾರದ ಹಾಗೂ ಜನರ ಪ್ರೋತ್ಸಾಹ ಸಿಕ್ಕಿದಲ್ಲಿ ಇನ್ನೂ ಹಲವು ವರ್ಷಗಳ ಕಾಲ ಈ ಕಲೆಯನ್ನು ಜೀವಂತವಾಗಿರಿಸಬಹುದು.

ಗೊಂಬೆ ಪ್ರದರ್ಶನದ ರಂಗಸಿದ್ಧತೆಯನ್ನು ಕುಟುಂಬ ಸದಸ್ಯರೇ ಮಾಡುತ್ತಾರೆ. ಎಲ್ಲರಿಗೂ ಕಾಣಿಸುವ ದೊಡ್ಡ ಬಯಲು ಪ್ರದೇಶದಲ್ಲಿ ನಾಲ್ಕು ಮೂಲೆಗೂ ಗಳವನ್ನು ಹೂಳಿ, ಪ್ರದರ್ಶನದ ಮುಂಭಾಗವೊಂದನ್ನು ಬಿಟ್ಟು, ಉಳಿದೆಡೆಗೆ ಸ್ಥಳೀಯವಾಗಿ ಸಿಗುವ ಚಾಪೆ, ಗೋಣಿಚೀಲಗಳಿಂದ ಮುಚ್ಚುತ್ತಾರೆ. ಪ್ರದರ್ಶನದ ಮುಂಭಾಗವನ್ನು ಮುದುರದಂತೆ ಬಿಳಿ ಬಟ್ಟೆಯನ್ನು ಪರದೆಯಂತೆ ಬಿಗಿಯಾಗಿ ಕಟ್ಟುತ್ತಾರೆ. ಈ ಬಿಳಿ ಪರದೆಯು ಇದರಿಂದ ಆರು ಅಡಿಯಷ್ಟು ಎತ್ತರ, ಎಂಟರಿಂದ ಹತ್ತು ಅಡಿಯಷ್ಟು ಅಗಲವಾಗಿರುತ್ತದೆ. ಪರದೆಯ ಕೆಳಭಾಗದಲ್ಲಿ ಸುಮಾರು ೨ ಅಡಿಯಷ್ಟು ಎತ್ತರಕ್ಕೆ ಕಂಬಳಿಯನ್ನು ಕಟ್ಟಿರುತ್ತಾರೆ. ಪರದೆಯ ಮೇಲೆ ನೆರಳು ಸ್ಪಷ್ಟವಾಗಿ ಬೀಳುವಂತೆ, ದೀಪವನ್ನು ಅಳವಡಿಸಿರುತ್ತಾರೆ. ಈ ರೀತಿಯಾಗಿ ತಮ್ಮ ಅನುಕೂಲಕ್ಕೆ ತಕ್ಕಂತೆಯೇ ರಂಗವಿನ್ಯಾಸವನ್ನು ಮಾಡಿಕೊಂಡು ತೊಗಲುಗೊಂಬೆಯಾಟವನ್ನು ಯಶಸ್ವಿಗೊಳಿಸುತ್ತ ಬಂದಿದ್ದಾರೆ.

### ii. ಚಿತ್ರ ರಚನಾತಂತ್ರ-ವಿಧಾನಗಳು

ನಾಡಿನ ಹಲವಾರು ಕಡೆಗಳಲ್ಲಿ ಕಿಳ್ಳೇಕ್ಯಾತ ಕುಟುಂಬದವರೇ ಇಂದಿಗೂ ತೊಗಲುಗೊಂಬೆಗಳ ರಚನೆಯನ್ನು, ಚಿತ್ರಣವನ್ನು ಮುಂದುವರೆಸಿವೆ. ಬಾಗಲಕೋಟೆ ಜಿಲ್ಲೆಯ ಕಾಕನೂರಿನ ಈ ಕುಟುಂಬವು ತಮ್ಮ ಪೂರ್ವಿಕರಿಂದ, ಅಂದರೆ ಸುಮಾರು ೨೦೦ ವರ್ಷಗಳ ಹಿಂದೆಯೇ ತಮ್ಮ ಹಿರಿಕರೊಬ್ಬರಿಂದ ರಚನೆಗೊಂಡ ತೊಗಲುಗೊಂಬೆಗಳನ್ನೇ ಪ್ರದರ್ಶಿಸುತ್ತ ಸಾಗಿದೆ. ಇತ್ತೀಚೆಗೆ ಹಲವಾರು ರೀತಿಯ ಆಧುನಿಕ ತಂತ್ರ ವಿಧಾನಗಳನ್ನು ಅಳವಡಿಸಿಕೊಂಡುದು ಕಂಡುಬರುತ್ತದೆ.

ಜಿಲ್ಲೆಯಲ್ಲಿರುವ ತೊಗಲುಗೊಂಬೆ ಚಿತ್ರಗಳು ಬಹಳ ಹಿಂದೆ ರಚನೆಗೊಂಡಿದ್ದರಿಂದ ಬಹುಶಃ ಆಧುನಿಕತೆಯ ಸ್ಪರ್ಶ ಇಲ್ಲವೆಂದೇ ಹೇಳಬಹುದು. ಎಸ್.ಸಿ.ಪಾಟೀಲರು ಈ ಕುಟುಂಬದವರಿಂದ

ಸಂಗ್ರಹಿಸಿದ ಮಾಹಿತಿಯನ್ನು ಲಕ್ಷಿಸಿ ತೊಗಲುಗೊಂಬೆಗಳ ರಚನಾತಂತ್ರ-ವಿಧಾನಗಳನ್ನು ಈ ರೀತಿಯಾಗಿ ವಿಭಜಿಸಿ ವಿವರಿಸಬಹುದಾಗಿದೆ.

೧. ಚರ್ಮದ ಸಂಗ್ರಹಣೆ, ೨. ಚರ್ಮದ ಹದಗೊಳಿಸುವಿಕೆ, ೩. ಚರ್ಮದ ಮೇಲೆ ರೇಖಾವಿನ್ಯಾಸ ಮಾಡುವುದು, ೪. ಚರ್ಮವನ್ನು ಆಕೃತಿಗನುಸಾರವಾಗಿ ಕತ್ತರಿಸುವುದು, ೫. ಬಣ್ಣದ ಲೇಪನ, ೬. ಅಂತಿಮ ಸ್ಪರ್ಶ ನೀಡುವುದು. ಇವುಗಳನ್ನು ಒಂದೊಂದಾಗಿ ವಿವರಿಸಬಹುದು.

**೧. ಚರ್ಮ ಸಂಗ್ರಹಣೆ**

ತೊಗಲುಗೊಂಬೆಗಳಿಗೆ ಚಿಗರೆಯ ಚರ್ಮವನ್ನೇ ಹೆಚ್ಚಾಗಿ ಬಳಸಿಕೊಳ್ಳುತ್ತಾರೆ. ಚಿಗರೆಯ ಚರ್ಮವನ್ನು ಸ್ವತಃ ಕಿಳ್ಳೇಕ್ಯಾತರೇ ಸಂಗ್ರಹಿಸುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಮಾತ್ರ ಬೇಟೆಗಾರರಿಂದ ಅಥವಾ ಬೇರೆಯವರಿಂದ ದಾನ ಪಡೆಯುವುದರ ಮೂಲಕ ಚಿಗರಿ ಚರ್ಮದ ಸಂಗ್ರಹಣೆ ಮಾಡುತ್ತಿದ್ದರು. ಯಾವುದೇ ವಾಣಿಜ್ಯ ಲಾಭದ ದೃಷ್ಟಿಯಿಂದಲ್ಲದೆ ಕೇವಲ ಕಲೆಗಾಗಿ ಈ ಚಿಗರೆ ಚರ್ಮ ಬಳಸಿಕೊಳ್ಳುತ್ತಿದ್ದರಿಂದ ಆಗಿನ ಕಾಲಕ್ಕೆ ಯಾವುದೇ ರೀತಿಯಿಂದಲೂ ಚಿಗರೆ ಚರ್ಮದ ಸಂಗ್ರಹಣೆಗೆ ಅಡಚಣೆ ಇರಲಿಲ್ಲ. ಹೇರಳವಾಗಿ ಚರ್ಮದ ಸಂಗ್ರಹಣೆ ಮಾಡಿ, ಗೊಂಬೆಗಳನ್ನು ತಯಾರಿಸಲು ಅಣಿಗೊಳಿಸಲಾಗುತ್ತಿತ್ತು.

ಜಿಲ್ಲೆಯಲ್ಲಿರುವ ತೊಗಲುಗೊಂಬೆಗಳೆಲ್ಲವೂ ಚಿಗರೆ ಚರ್ಮದಿಂದಲೇ ರಚನೆಗೊಂಡಿರಬಹುದಾಗಿದೆ. ಇವು ಬಹಳ ಹಿಂದೆಯೇ ರಚನೆಗೊಂಡ ಕಲಾಕೃತಿಗಳಾದ್ದರಿಂದ ಶಾಸ್ತ್ರಬದ್ಧವಾಗಿ, ಚಿಗರಿ ಚರ್ಮದಿಂದಲೇ ರಚನೆಗೊಂಡಿವೆ ಎನ್ನಬಹುದು. ತೊಗಲುಗೊಂಬೆಗೆ ಜಿಂಕೆ ಚರ್ಮವನ್ನೇ ಬಳಸಿಕೊಳ್ಳುತ್ತಿದ್ದುದಕ್ಕೆ ಪ್ರಮುಖ ಕಾರಣ, ಅದರ ಪಾರದರ್ಶಕತೆ ಚಿಗರೆ ಅಥವಾ ಜಿಂಕೆಯ ಚರ್ಮವು ಉಳಿದ ಪ್ರಾಣಿಗಳು ಚರ್ಮಕ್ಕಿಂತಲೂ ಹೆಚ್ಚು ಪಾರದರ್ಶಕತೆಯನ್ನು ಹೊಂದಿರುತ್ತದೆ ಮತ್ತು ಇದು ಹೆಚ್ಚು ಕಾಲ ಬಾಳಿಕೆಯೂ ಬರುತ್ತದೆ. ಈ ಅಂಶಗಳನ್ನು ಗಮನಿಸಿದಾಗ ಹಾಗೂ ಕುಟುಂಬದವರ ಹೇಳಿಕೆಯನ್ನು ಕೇಳಿದಾಗ, ಗೊಂಬೆಗಳನ್ನು ನೋಡಿದಾಗ ಜಿಲ್ಲೆಯಲ್ಲಿರುವ ತೊಗಲುಗೊಂಬೆಗಳು ಚಿಗರೆ ಚರ್ಮದಿಂದಲೇ ರಚನೆಗೊಂಡಿವೆ ಎನ್ನಬಹುದು.

ಆದರೆ ಇತ್ತೀಚಿನ ದಿನಗಳಲ್ಲಿ ತೊಗಲುಗೊಂಬೆಗಳನ್ನು ಆಡು, ಕುರಿ, ಎಮ್ಮೆ, ಒಂಟೆಯ ಚರ್ಮಗಳಿಂದ ರಚಿಸುತ್ತಾರೆ. ಚಿಗರಿ ಚರ್ಮದ ಸಂಗ್ರಹಣೆ ಕಷ್ಟಸಾಧ್ಯವಾದ ಕಾರಣ ಕೇವಲ ರಾಮ, ಕೃಷ್ಣರಂತಹ ದೈವೀ ಪುರುಷರ ಗೊಂಬೆಗಳನ್ನು ಮಾತ್ರ ಚಿಗರಿ ಚರ್ಮದಿಂದ ರಚಿಸಿ, ಉಳಿದ ಪಾತ್ರಗಳ ಗೊಂಬೆಗಳನ್ನು ದೊರೆತ ಪ್ರಾಣಿಯ ಚರ್ಮದಿಂದಲೇ ರಚಿಸುತ್ತಾರೆ ಎಂಬುದು ತಿಳಿದುಬರುತ್ತದೆ.

**೨. ಚರ್ಮ ಹದಗೊಳಿಸುವಿಕೆ**

ತೊಗಲುಗೊಂಬೆಗಳ ರಚನೆಯಲ್ಲಿ ಸಂಗ್ರಹಗೊಂಡ ತೊಗಲನ್ನು ಹದಗೊಳಿಸುವುದು ಒಂದು ಪ್ರಮುಖವಾದ ಘಟ್ಟ. ಪ್ರದೇಶದಿಂದ ಪ್ರದೇಶಕ್ಕೆ ಚರ್ಮವನ್ನು ಹದಗೊಳಿಸುವ ವಿಧಾನಗಳು ಭಿನ್ನವಾಗುತ್ತ ಹೋಗುತ್ತವೆ. ಸಾಮಾನ್ಯವಾಗಿ ಚರ್ಮವನ್ನು ಹದಗೊಳಿಸುವಲ್ಲಿ ಬಳಸುವ ವಿಧಾನದ ಬಗೆಗೆ ಕೆಳಗೆ ವಿವರಿಸಲಾಗಿದೆ.

ಚರ್ಮವನ್ನು ಯಾವುದೇ ಪ್ರಾಣಿಯ ಚರ್ಮವು ರೋಮ ಸಹಿತವಾಗಿರುತ್ತದೆ. ರೋಮ ಸಹಿತವಾಗಿರುವ ಚರ್ಮವನ್ನು ಒಂದು ದೊಡ್ಡದಾದ ಪಾತ್ರೆಯಲ್ಲಿ ನೀರನ್ನು ಕಾಯಿಸಿ ಅದಕ್ಕೆ ಸ್ವಲ್ಪ ಉಪ್ಪನ್ನು ಬೆರಸಿ ಅದರಲ್ಲಿ ಹಲವು ಗಂಟೆಗಳವರೆಗೆ ನೆನೆಯಲು ಬಿಡುತ್ತಾರೆ. ಅನಂತರ ನೀರಿನಿಂದ ಹೊರತೆಗೆದ ಚರ್ಮದ ಮೇಲಿರುವ ರೋಮಗಳನ್ನು ಸ್ವಚ್ಛಗೊಳಿಸುತ್ತಾರೆ. ಕೈಯಿಂದ ಇಲ್ಲವೇ ಸೂಕ್ತ ಚಾಕುವಿನಂತಹ ಆಯುಧದ ಸಹಾಯದಿಂದ ಚರ್ಮಕ್ಕೆ ಧಕ್ಕೆಯಾಗದಂತೆ ಕೂದಲುಗನ್ನು ಎಚ್ಚರಿಕೆಯಿಂದ ಸ್ವಚ್ಛಗೊಳಿಸುತ್ತಾರೆ. ಸ್ವಚ್ಛಗೊಳಿಸಿದ ಚರ್ಮವನ್ನು ಕೆಲ ಸಮಯ ಮಡಿಕೆ ಮಾಡಿಟ್ಟು ತದನಂತರ ಚರ್ಮ ಸುಕ್ಕಾದಂತೆ ಮತ್ತು ತೆಳುವಾಗುವಂತೆ ಚರ್ಮದ ನಾಲ್ಕೂ ತುದಿಗೆ ರಂಧ್ರಗಳನ್ನು ಹಾಕಿ ಅದನ್ನು ಮಂಚದ ನಾಲ್ಕೂ ಕಾಲುಗಳಿಗೆ ಎಳೆದು ಕಟ್ಟುತ್ತಾರೆ. ಹೀಗೆ ಕಟ್ಟಿದ ಚರ್ಮವು ನೇರ ಬಿಸಿಲಿನಲ್ಲಿ ಒಣಗದೇ ಮಿತವಾದ ಶಾಖದಲ್ಲಿ ಒಣಗುತ್ತದೆ. ಹೀಗೆ ಒಣಗಿದ ಚರ್ಮವು ಹೆಚ್ಚು ಹೊಳಪನ್ನು ಹೊಂದಿರುತ್ತದೆ ಎಂಬುದು ಅನುಭವಿಗಳ ಹೇಳಿಕೆ.

**೩. ಚರ್ಮದ ಮೇಲೆ ರೇಖಾವಿನ್ಯಾಸ ಮಾಡುವುದು**

ಸಾಕಷ್ಟು ಹದಗೊಂಡು ಮಿತ ಶಾಖದಲ್ಲಿ ಒಣಗಿದ ಚರ್ಮವನ್ನು ಬಿಸಿಲಿಗೆ ಹಿಡಿದರೆ, ಪ್ಲಾಸ್ಟಿಕ್ ಹಾಳೆಯಂತೆ ಗೋಚರಿಸುತ್ತದೆ. ಇಂತಹ ಚರ್ಮದ ಮೇಲೆ ನೇರವಾಗಿ ಮೊಳೆ ಅಥವಾ ಡಬ್ಬಣದಂತಹ ಚೂಪಾದ ಸಾಧನದಿಂದ ಆಕೃತಿಗಳ ರಚನೆ ಮಾಡುವರು. ಕೆಲವೊಮ್ಮೆ ಇದ್ದಿಲಿನ ಸಹಾಯದಿಂದ ಮೊದಲು ಆಕೃತಿಗಳನ್ನು ರಚಿಸಿ, ನಂತರ ಮೊಳೆ ಅಥವಾ ಡಬ್ಬಣದಿಂದ ಹೊರರೇಖೆಗಳನ್ನು ಗೀರಲಾಗುತ್ತದೆ. ಇಲ್ಲಿ ರೇಖಾವಿನ್ಯಾಸ ಮಾಡುವ ಕಲಾವಿದ ಹೆಚ್ಚು ನೈಪುಣ್ಯತೆಯನ್ನು ಹೊಂದಿರಬೇಕಾಗುತ್ತದೆ. ಪೌರಾಣಿಕ ಪಾತ್ರಗಳನ್ನೇ ಚಿತ್ರಿಸಬೇಕಾಗಿರುವುದರಿಂದ, ಒಂದೊಂದೂ ಪಾತ್ರದ ಗುಣಲಕ್ಷಣಗಳ ಬಗೆಗೆ ತಿಳಿದವನಾಗಿರಬೇಕಾಗುತ್ತದೆ. ದೇವ ಪುರುಷರು, ರಾಜರು, ರಾಣಿಯರು, ಉಳಿದ ಸ್ತ್ರೀಪಾತ್ರಗಳು, ಅಸುರರು, ಪ್ರಾಣಿಗಳು, ಪೋಷಕ ಪಾತ್ರ ಹೀಗೆ ಆಯಾ ಪಾತ್ರದ ಭಾವ-ಸ್ವಭಾವ, ಮೈಕಟ್ಟು, ವೇಷಭೂಷಣ ಪಾತ್ರಕ್ಕನುಗುಣವಾಗಿ ನಿಲ್ಲುವ ಭಂಗಿ ಈ ಎಲ್ಲವನ್ನೂ ಗಮನದಲ್ಲಿರಿಸಿಕೊಂಡ, ಕುಶಲತೆಯುಳ್ಳ ನಿಪುಣ ಕಲಾವಿದನೇ ರೇಖಾವಿನ್ಯಾಸವನ್ನು ಮಾಡುತ್ತಾನೆ. ಹಲವು ಸಲ ಒಂದೊಂದು ಪಾತ್ರದ ಒಂದೊಂದು ಗೊಂಬೆಯನ್ನು ಇಲ್ಲವೆ ಒಂದೇ ತೊಗಲಿನ ಮೇಲೆ ಸಂಯೋಜನದಂತಹ ಚಿತ್ರಗಳನ್ನು ರಚಿಸಬೇಕಾಗಿರುವುದರಿಂದ ಹೆಚ್ಚು ತಾಳ್ಮೆ ಹಾಗೂ ಜಾಣ್ಮೆಗಳೆರಡೂ ಕಲಾವಿದನಲ್ಲಿರಬೇಕಾಗುತ್ತದೆ.

ಪುರುಷ ಪಾತ್ರಗಳನ್ನು ಸ್ವಲ್ಪ ದೊಡ್ಡದಾಗಿಯೂ, ಸ್ತ್ರೀ ಪಾತ್ರಗಳನ್ನು ಅದಕ್ಕಿಂತ ಸ್ವಲ್ಪ ಚಿಕ್ಕದಾಗಿಯೂ ರಚಿಸಲಾಗಿರುತ್ತದೆ. ಸಂಯೋಜನ ಚಿತ್ರಗಳಲ್ಲಂತೂ ಪ್ರಧಾನ ಪಾತ್ರವನ್ನು ದೊಡ್ಡದಾಗಿಯೂ, ಅದಕ್ಕೆ ಪೂರಕವಾಗಿರುವಂತೆ ರಥ, ಬಿಲ್ಲು, ಬಾಣ ಉಳಿದ ಪೋಷಕ ಪಾತ್ರಗಳನ್ನು ಜಾಣ್ಮೆಯಿಂದ ಸಂಯೋಜಿಸಿರಲಾಗಿರು ತ್ತದೆ. ತೊಗಲುಗೊಂಬೆಗಳ ಚಿತ್ರರಚನೆಯಲ್ಲಿ ಇದೂ ಒಂದು ಪ್ರಮುಖ ಘಟ್ಟವಾದ್ದರಿಂದ ಇದರಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೂ ಮುಂದಿನ ಕಾರ್ಯಕ್ಕೆ

ಅಡಚಣೆಯುಂಟಾಗುವುದರಿಂದ ನಿಪುಣನಾದ ಕಲಾವಿದನೇ ಅತ್ಯಂತ ಜಾಗರೂಕತೆಯಿಂದ ರೇಖಾವಿನ್ಯಾಸ ಮಾಡುತ್ತಾನೆ. ತೊಗಲುಗೊಂಬೆಗಳ ಈ ರೇಖಾವಿನ್ಯಾಸದ ರೀತಿ ಬೆರಗುಗೊಳಿಸುತ್ತದೆ.

### ೪. ಚರ್ಮವನ್ನು ಆಕೃತಿಗನುಸಾರವಾಗಿ ಕತ್ತರಿಸುವುದು

ಇಡೀ ಚರ್ಮದ ಮೇಲೆ ಮಾಡಿರುವ ಚಿತ್ರದ ಹೊರರೇಖೆಯ ರೇಖಾವಿನ್ಯಾಸಕ್ಕನುಗುಣವಾಗಿ ಕತ್ತರಿಸಿದಾಗ, ಸ್ಪಷ್ಟವಾದ ಆಕೃತಿಯೊಂದು ದೊರೆಯುತ್ತದೆ. ಕೈಕಾಲುಗಳು, ಮುಖ, ದೇಹ, ಬಟ್ಟೆ, ನಿಂತಿರುವ ಭಂಗಿಗಳು, ಕೈಯಲ್ಲಿ ಹಿಡಿದಿರುವ ಆಯುಧಗಳು ಸ್ಪಷ್ಟವಾಗಿ ಗೋಚರಿಸುವಂತೆ ಒಳಗಿನ ಚರ್ಮವನ್ನು ಸೂಕ್ಷ್ಮವಾಗಿ ಕತ್ತರಿಸಿ, ಸ್ಪಷ್ಟ ರೂಪವನ್ನು ನೀಡಲಾಗುತ್ತದೆ. ಸಂಯೋಜನೆಯ ಚಿತ್ರಗಳಲ್ಲಿಯೂ ಸಹ ತಾಳ್ಮೆಯಿಂದ ಪ್ರಧಾನಪಾತ್ರದ ಸುತ್ತಲಿನ ಆಕೃತಿಗಳು ಒಂದರಲ್ಲೊಂದರಂತೆ ಸ್ಪಷ್ಟವಾಗಿ ಕಾಣಿಸುವ ಹಾಗೆ ಅವಶ್ಯವಿರುವಲ್ಲಿ ತೊಗಲನ್ನು ಕತ್ತರಿಸಿರಲಾಗಿರುತ್ತದೆ.

ಅಂತೆ ಗೊಂಬೆಗಳ ಬಟ್ಟೆಗಳ ಅಂಚುಗಳು, ವಿಭಿನ್ನವಾದ ಬಟ್ಟೆಯ ವಿನ್ಯಾಸಗಳು, ಗೊಂಬೆಗಳ ಆಭರಣಗಳು, ಕಿರೀಟ, ಹೊಳೆಯುವಂತೆ ಗೋಚರಿಸಲು, ಅಡ್ಡಗೀರುಗಳು, ವರ್ತುಲ, ದೀರ್ಘವರ್ತುಲ, ಅರ್ಧವರ್ತುಲ, ತ್ರಿಕೋನ, ಚೌಕದ ಚಿಕ್ಕ ರಂಧ್ರಗಳನ್ನು ಸೂಕ್ಷ್ಮವಾಗಿ ರಚಿಸಲಾಗಿರುತ್ತದೆ. ಇದು ತೊಗಲುಗೊಂಬೆ ಚಿತ್ರಗಳ ಒಂದು ವಿಶೇಷ. ಇವುಗಳ ರಚನೆಗೆ ಬಿಳಿ ವರ್ಣವನ್ನು ಬಳಸದೇ ಬೇಕಾದ ಆಕಾರಕ್ಕೆ, ಅಲಂಕಾರಕ್ಕೆ ತಕ್ಕಂತೆ ರಂಧ್ರಗಳನ್ನು ರಚಿಸಲಾಗಿರುತ್ತದೆ. ಈ ರಂಧ್ರಗಳ ಮೂಲಕ ಬೆಳಕು ಪ್ರವಹಿಸಿದಾಗ, ಆಭರಣದ ಕಿರೀಟಗಳಲ್ಲಿ ಜೆಲೆಬಾಳುವ ಹರಳುಗಳು ಹೊಳೆದಂತೆ ಅಂದವಾಗಿ ಗೋಚರವಾಗುತ್ತವೆ. ಇದು ಬಟ್ಟೆಯ ಮೇಲಿನ ಬಿಳಿಯ ವರ್ಣದ ಅಲಂಕೃತ ವಿನ್ಯಾಸವಿರುವಂತೆಯೂ ಗೋಚರವಾಗುತ್ತದೆ. ವೃತ್ತಾಕಾರದ ಉಳಿ, ಮೊಳೆ ಅಥವಾ ಚೂಪಾದ ಸೂಕ್ಷ್ಮ ಉಪಕರಣವನ್ನು ಬಳಸಿಕೊಂಡು ರಚನೆಗೊಳ್ಳುವ ಈ ಸೂಕ್ಷ್ಮ ರಂಧ್ರವಿನ್ಯಾಸವೇ ಈ ತೊಗಲುಗೊಂಬೆ ಚಿತ್ರಕಲೆಯ ಒಂದು ವೈಶಿಷ್ಟ್ಯ.

### ೫. ಬಣ್ಣದ ಲೇಪನ

ತೊಗಲಿನ ಮೇಲಿನ ರಂಧ್ರಗಳನ್ನು ಹೊಳಪಿಗಾಗಿ ಬಳಸಿಕೊಳ್ಳುವ ಈ ಕಲಾವಿದರು ಸೀಮಿತವಾದ ಕೆಲವು ವರ್ಣಗಳನ್ನು ಬಳಸುವ ಮೂಲಕ ಈ ಗೊಂಬೆಗಳನ್ನು ಇನ್ನೂ ಆಕರ್ಷಕವಾಗಿಸುತ್ತಾರೆ. ಈ ವರ್ಣಗಳೂ ಪಾರದರ್ಶಕವಾಗಿರಬೇಕು. ತೊಗಲುಗೊಂಬೆಗಳಿಗೆ ಹೆಚ್ಚಾಗಿ ಪ್ರಖರ ವರ್ಣಗಳನ್ನೇ ಲೇಪಿಸಲಾಗಿರುತ್ತದೆ. ಕೆಂಪು, ಕಪ್ಪು, ನೀಲಿ, ಹಸಿರು, ಹಳದಿ, ಬಿಳಿ, ನೇರಳೆ, ಮದರಂಗಿ ವರ್ಣಗಳ ಬಳಕೆಯನ್ನು ತೊಗಲುಗೊಂಬೆಗಳಲ್ಲಿ ಕಾಣಬಹುದಾದರೂ, ಜಿಲ್ಲೆಯ ತೊಗಲುಗೊಂಬೆಗಳಲ್ಲಿ ಕೆಂಪು, ಕಪ್ಪು, ಹಳದಿ ವರ್ಣಗಳನ್ನೇ ಪ್ರಮುಖವಾಗಿ ಬಳಸಲಾಗಿದೆ. ಕೆಲವು ಗೊಂಬೆಗಳಿಗೆ ನೀಲಿ ಮತ್ತು ನೇರಳೆ ವರ್ಣಗಳ ಲೇಪನವನ್ನು ಕಾಣಬಹುದಾಗಿದೆ. ಅಲ್ಲದೇ ಈ ಹಿಂದೆ ಗಮನಿಸಿರುವಂತೆ ಬಿಳಿಯ ವರ್ಣದಂತೆ ಚಿಕ್ಕ ರಂಧ್ರಗಳ ವಿನ್ಯಾಸವನ್ನು ಮಾಡಲಾಗಿರುತ್ತದೆ.

ಹಲವಾರು ಕಿಳ್ಳೇಕ್ಯಾತರು ತಾವು ಬಳಸುವ ಬಣ್ಣ ಹಾಗೂ ಅವುಗಳ ಲೇಪನದ ಬಗೆಗೆ ಮಾಹಿತಿ ನೀಡುವುದಿಲ್ಲ. ಆದರೆ ನೈಸರ್ಗಿಕವಾಗಿ ಪ್ರಾಣಿ, ಸಸ್ಯ, ಖನಿಜ ಮೂಲಗಳಿಂದ ದೊರೆತ ವರ್ಣಗಳನ್ನು ಹಲವಾರು ವಿಧಾನದಿಂದ ಸಂಸ್ಕರಿಸಿ ಬಳಸಿರುವುದನ್ನು ಕಾಣಬಹುದಾಗಿದೆ.

* ಕಪ್ಪು ಬಣ್ಣವನ್ನು ದೀಪದ ಕಪ್ಪು ಅಥವಾ ತೆಂಗಿನ ಗರಿಯನ್ನು ಸುಟ್ಟ ಕಪ್ಪಿನಿಂದ ಅಥವಾ ಕಟ್ಟಿಗೆಯನ್ನು ಸುಟ್ಟು ಬಂದ ಇದ್ದಿಲನ್ನು ಅಂಟು ಮಾಧ್ಯಮಗಳಲ್ಲಿ ಬೆರೆಸಿ ಬಳಸಿಕೊಂಡಿರುವುದು ಕಂಡುಬರುತ್ತದೆ.

* ಕೆಂಪು ವರ್ಣವನ್ನು, ಕೆಂಪುಮಣ್ಣನ್ನು ಸೋಸಿಕೊಂಡು ಅಥವಾ ರೆಡ್‌ಹೆಮಟೈಟ್ ಖನಿಜವನ್ನು ದ್ರಾವಣದಲ್ಲಿ ಬೆರೆಸಿ ಬಳಸಿರಬಹುದಾಗಿದೆ.

* ಹಳದಿ ವರ್ಣವನ್ನು ಹೆಚ್ಚಾಗಿ ಮೈ ಬಣ್ಣವಾಗಿ ಬಳಸಿರುವುದನ್ನು ಕಾಣಬಹುದಾಗಿದೆ. ಅದನ್ನು ಅರದಾಳ ಅಥವಾ ಬೆಂಗಾಲಿ ಕಾಯಿ, ಹಣ್ಣಿನ ರಸದಿಂದ ಬಂದ ಹಳದಿಯನ್ನು ಅಂಟು ಮಾಧ್ಯಮದಲ್ಲಿ ಬೆರೆಸಿ ಬಳಸಲಾಗಿದೆ.

* ನೀಲಿ ವರ್ಣವನ್ನು ಕೃಷ್ಣ, ರಾಮರಂತಹ ಪಾತ್ರಗಳಿಗೆ, ಅಲ್ಲದೇ ಇನ್ನೂ ಹಲವೆಡೆಗೆ ಬಳಸಿರುವುದನ್ನು ಕಾಣಬಹುದಾಗಿದೆ. ಇದನ್ನು ತುಂಬೆ ಹೂವಿನಿಂದ ತಯಾರಿಸಿಕೊಂಡಿರಬಹುದು.

* ನೇರಳೆ ವರ್ಣವನ್ನು ಕೆಂಪು ಮತ್ತು ನೀಲಿ ವರ್ಣಗಳನ್ನು ಮಿಶ್ರಮಾಡಿ ಲೇಪಿಸಿರುವುದನ್ನು ಕಾಣುತ್ತೇವೆ.

ಇನ್ನು ಮರದ ತುಂಡಿಗೆ ಬಟ್ಟೆ ಸುತ್ತಿ ಅಥವಾ ಬಿದಿರನ್ನು ಜಜ್ಜಿ ಎಳೆಎಳೆಯಾಗಿಸಿ ಬಣ್ಣಲೇಪನ ಮಾಡಿರುವುದನ್ನು ಕಾಣಬಹುದಾಗಿದೆ. ಅಲ್ಲದೇ ನೈಸರ್ಗಿಕವಾಗಿ ದೊರೆತ ವರ್ಣಗಳನ್ನು ನೇರವಾಗಿ ಬಳಸದೇ ತಮಗೆ ತಿಳಿದ ರೀತಿಯಲ್ಲಿ ಸಂಸ್ಕರಿಸಿ, ನೀರಿನಲ್ಲಿ ಅಥವಾ ಇನ್ನಾವುದೇ ದ್ರಾವಣದಲ್ಲಿ ತೆಳುವಾಗಿಸಿ, ತೆಳುವಾಗಿಯೇ ಗೊಂಬೆಗಳ ಮೇಲೆ ವರ್ಣಲೇಪನ ಮಾಡಲಾಗುತ್ತದೆ. ಅಲ್ಲದೇ ಬಣ್ಣಗಳನ್ನು ಒಂದರಲ್ಲೊಂದರಂತೆ ಮಿಶ್ರ ಮಾಡಿ ಬಳಸುವ ವಿಧಾನವನ್ನು ಇವರು ತಿಳಿದಿದ್ದರು ಎಂಬುದಕ್ಕೆ ನೇರಳೆ ವರ್ಣ ಸಾಕ್ಷಿಯಾಗುತ್ತದೆ. ಯಾವ ವಿಶೇಷ ರಾಸಾಯನಿಕಗಳನ್ನು ಬಳಸದೆ, ಸಂಸ್ಕರಿಸಿದ ಬಣ್ಣಗಳನ್ನು ಉಪಯೋಗಿಸಿರುವುದರಿಂದಲೇ ನೂರಾರು ವರ್ಷಗಳಾದರೂ ಗೊಂಬೆಗಳ ವರ್ಣಗಳು ಕಿಂಚಿತ್ತು ಹಾಳಾಗದಂತೆ ಉಳಿದುಕೊಂಡು ಬಂದಿವೆ. ವರ್ಣ ಲೇಪನದ ನಂತರ ನೆರಳಿನಲ್ಲಿಯೇ ಗೊಂಬೆಗಳನ್ನು ಒಣಗಿಸುವುದೊಂದು ವಿಶೇಷ.

ವರ್ಣಲೇಪನದಲ್ಲಿ ಗೊಂಬೆಗಳ ವರ್ಣಸಂಯೋಜನೆ ಅದ್ಭುತವಾಗಿ ಮೂಡಿಬಂದಿದೆ. ಕೃಷ್ಣ, ರಾಮರ ಗೊಂಬೆಗಳಿಗೆ ಮೈ ವರ್ಣಕ್ಕಾಗಿ ನೀಲಿಯನ್ನು ಬಳಸಿದರೆ, ಉಳಿದ ಪಾತ್ರಗಳಿಗೆ ಮಾನವ ಮೈ ವರ್ಣಕ್ಕೆ ಹಳದಿ ಛಾಯೆಯ ವರ್ಣವನ್ನು ಬಳಸಲಾಗಿದೆ. ಹನುಮಂತ, ಗಣಪತಿಯ ಪಾತ್ರದ ಗೊಂಬೆಗಳಿಗೆ ಸಾಂದರ್ಭಿಕವಾಗಿ ವಿಭಿನ್ನವಾದ ವರ್ಣಲೇಪನವನ್ನು ಕಾಣಬಹುದಾಗಿದ್ದು, ರಾಕ್ಷಸ ಪಾತ್ರದ ಗೊಂಬೆಗಳಿಗೆ

ದಟ್ಟವಾದ ಪ್ರಖರ ವರ್ಣ ಲೇಪನವಿದೆ. ಪಾತ್ರಗಳ ಮೈವರ್ಣಕ್ಕೆ ತಕ್ಕ ಹಾಗೆ ಅವುಗಳ ಬಟ್ಟೆಗಳ ವರ್ಣವಿನ್ಯಾಸ ಮಾಡಲಾಗಿದೆ. ಕೆಲವೊಮ್ಮೆ ಬಟ್ಟೆಗೆ ಒಂದೇ ವರ್ಣಲೇಪನವಿದ್ದರೆ, ಕೆಲವೊಮ್ಮೆ ಬೇರೆ ಬೇರೆ ಬಣ್ಣಗಳ ವರ್ಣಛಾಯೆಯ ಉದ್ದುದ್ದ ಗೀರು, ಚಿಕ್ಕಚಿಕ್ಕ ಚೌಕಡಿಗಳಿಂದ ಬಟ್ಟೆಯ ವರ್ಣವಿನ್ಯಾಸ ಮಾಡಲಾಗಿರುವುದು ಬೆರಗುಗೊಳಿಸುವಂತಿವೆ. ಕುದುರೆ, ಹುಲಿ, ಜಿಂಕೆಗಳಂತಹ ಪ್ರಾಣಿಗಳ ವರ್ಣವಿನ್ಯಾಸವನ್ನು ಅದ್ಭುತವಾಗಿಯೂ ಯಥಾವತ್ತಾಗಿಯೂ ಚಿತ್ರಿಸಿರುವುದನ್ನು ಕಾಣಬಹುದಾಗಿದೆ.

**೬. ಅಂತಿಮ ಸ್ಪರ್ಶ ನೀಡುವುದು**

ರೇಖೆ, ವರ್ಣಲೇಪನದೊಂದಿಗೆ ಪೂರ್ಣಗೊಳ್ಳುವ ತೊಗಲುಗೊಂಬೆಗಳಿಗೆ ತೆಳುವಾದ ಕುಂಚದಿಂದ ದಪ್ಪವಾಗಿ ಕಪ್ಪು ವರ್ಣದಿಂದ ಹೊರರೇಖೆಗಳನ್ನು ಎಳೆಯಲಾಗುತ್ತದೆ. ಇದರಿಂದ ಗೊಂಬೆಗಳು ಇನ್ನೂ ಸ್ಫುಟವಾಗಿ ಗೋಚರಿಸುತ್ತವೆ. ಕೈ, ಕಾಲುಗಳ ಬೆರಳುಗಳು, ಮುಖದ ಭಾಗವಾದ ಮೂಗು, ಗದ್ದಗಳು ಸ್ಪಷ್ಟವಾಗಿ, ಯಥಾವತ್ತಾಗಿ ಗೋಚರಿಸುತ್ತವೆ. ಅನಂತರ ಮುಖದಲ್ಲಿ ಹುಬ್ಬು, ಕಣ್ಣು, ಮೀಸೆ, ಹಣೆಯ ನಾಮಗಳನ್ನು ಪಾತ್ರಗಳಿಗನುಗುಣವಾಗಿ ಕಪ್ಪು ರೇಖೆಗಳನ್ನು ಎಳೆವ, ನಿಪುಣ ಕಲಾವಿದ ಪಾತ್ರಗಳನ್ನು ಇನ್ನೂ ನೈಜವಾಗಿಸುತ್ತಾನೆ. ಹೆಚ್ಚಾಗಿ ಅಭರಣಗಳ ರಚನೆಗೆ ಪುಟ್ಟ ರಂಧ್ರಗಳನ್ನು ಬಳಸಿದ್ದರೂ, ಕೆಲವೆಡೆಗಳಲ್ಲಿ ವರ್ಣದಿಂದಲೇ ಆಭರಣಗಳನ್ನು ರಚಿಸಿ, ಅವಶ್ಯವಿದ್ದಲ್ಲಿ ಅಲ್ಲಿಯೂ ಹೊರರೇಖೆ ಎಳೆಯಲಾಗಿರುತ್ತದೆ. ಈ ಅಂತಿಮ ಸ್ಪರ್ಶದ ಹಂತ ಬಹುಮುಖ್ಯವಾಗಿದ್ದು, ಇಲ್ಲಿ ನುರಿತ ನಿಪುಣ ಕಲಾವಿದನೇ ಕಾರ್ಯ ನಿರ್ವಹಿಸಿರುತ್ತಾನೆ. ವರ್ಣಲೇಪನದೊಂದಿಗೆ ಪೂರ್ಣಗೊಂಡ ತೊಗಲುಗೊಂಬೆ ಚಿತ್ರಗಳು ಅಂತಿಮ ಸ್ಪರ್ಶದೊಂದಿಗೆ ಒಟ್ಟಂದದ ಚಲುವಾದ ಆಕೃತಿ, ಸ್ವರೂಪವನ್ನು ಗಳಿಸುತ್ತವೆ.

ಹೀಗೆ ಆರು ಹಂತದ ತಂತ್ರಗಾರಿಕೆಯ ಮೂಲಕ ಪೂರ್ಣಗೊಳ್ಳುವ ಈ ತೊಗಲುಗೊಂಬೆಗಳು ಕಿಳ್ಳೇಕ್ಯಾತ ಸಮುದಾಯದ ರಂಗ ಪ್ರದರ್ಶನದ ಮುಖ್ಯ ಸಾಧನವಾಗಿದ್ದರೂ ಗೊಂಬೆಗಳ ರಚನೆ, ವರ್ಣಲೇಪನದಲ್ಲಿನ ನೈಪುಣ್ಯತೆಗಳು ಈ ಗೊಂಬೆಗಳನ್ನು ಕಲಾವಸ್ತು, ಕಲಾಕೃತಿಗಳನ್ನಾಗಿ ಮಾಡಿದೆ.

ಇನ್ನು ಈ ತೊಗಲುಗೊಂಬೆಯಾಟದ ಮುಖ್ಯ ಪಾತ್ರ ಮೇಳದ ನಾಯಕನದ್ದು. ಮೇಳದ ಪ್ರಕಾಶ್ ಮುಖ್ಯಸ್ಥ ಹೇಳುವಂತೆ ರಾಮಾಯಣ, ಮಹಾಭಾರತದ ಒಂದೊಂದು ಕಥಾಪ್ರಸಂಗಗಳನ್ನು ಆಯ್ಕೆ ಮಾಡಿಕೊಂಡು ಪ್ರದರ್ಶನ ನೀಡುತ್ತಾರೆ. ಒಂದೊಂದು ಪ್ರದರ್ಶನದಾಟವು ಕಡಿಮೆಯೆಂದರೂ ೩ ಗಂಟೆಗಳ ಕಾಲ ನಡೆಯುತ್ತದೆ. ಈ ೩ ಗಂಟೆಗಳ ಕಾಲವೂ ಬಿಟ್ಟುಬಿಡದೆ ಸೂತ್ರಧಾರಿ(ಮೇಳದ ನಾಯಕ)ಯೇ ಗೊಂಬೆಗಳನ್ನು ಆಡಿಸುತ್ತ, ಕಥಾ ಸಂದರ್ಭಕ್ಕನುಸಾರವಾಗಿ ಪಾತ್ರಗಳ ಬದಲಾವಣೆ ಮಾಡುತ್ತಾ, ಆಯಾ ಪಾತ್ರಗಳ ಸಂಭಾಷಣೆಯನ್ನು ಜೋರಾಗಿ ಭಾವಾಭಿವ್ಯಕ್ತಿಯೊಂದಿಗೆ ವ್ಯಕ್ತಪಡಿಸುತ್ತಿರುತ್ತಾರೆ. ಇಲ್ಲಿ ವ್ಯಕ್ತವಾಗುವ ಸೂತ್ರಧಾರನ ಜಾಣ್ಮೆ ಹಾಗೂ ತಾಳ್ಮೆ ಅಭಿನಂದನಾರ್ಹ. ಅನಕ್ಷರಸ್ಥ ಸಮುದಾಯ ಎಂದೇ ಬಿಂಬಿತವಾಗಿರುವ ಈ ಸಮುದಾಯದಲ್ಲಿ ರಾಮಾಯಣ, ಮಹಾಭಾರತದ ಕಥೆಗಳು, ಅವುಗಳ ಸಂದರ್ಭ, ಅವುಗಳ ಸಂಭಾಷಣೆಯನ್ನು ಚಾಚೂ ತಪ್ಪದೇ ಸ್ಫುಟವಾದ ಉಚ್ಚಾರಣೆಯೊಂದಿಗೆ ಸತತ ಮೂರು ಗಂಟೆಗಳ ಕಾಲ ಬಿಟ್ಟೂ ಬಿಡದೇ ಎರಡೂ ಕೈಗಳಿಂದ ಗೊಂಬೆಗಳನ್ನಾಡಿಸುವ ಪರಿ ಎಂತಹ ಜ್ಞಾನಿಗಳನ್ನು

ನಾಚಿಸುವಂಥದ್ದು. ಪ್ರಕಾಶರವರು ಕೇವಲ ೭ನೇ ತರಗತಿಯನ್ನು ಅಭ್ಯಸಿಸಿದ್ದು, ಇವರ ಪೂರ್ವಜರು ಸಂಪೂರ್ಣ ಅನಕ್ಷರಸ್ಥರೇ ಆಗಿದ್ದರು. ಆದರೆ ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳು ತೊಡಕಿಲ್ಲದೇ ಇವರ ನಾಲಿಗೆಯಲ್ಲಿ ನುಲಿಯುತ್ತವೆ.

ಇನ್ನು ಈ ಕುಟುಂಬದವರಲ್ಲಿ ಸುಮಾರು ೧೦೦ರಿಂದ ೧೨೦ ತೊಗಲುಗೊಂಬೆಗಳಿವೆ. ಅವೆಲ್ಲವೂ ರಾಮಾಯಣ ಮತ್ತು ಮಹಾಭಾರತದ ಬೇರೆ ಬೇರೆ ಕಥಾ ಸಂದರ್ಭದಲ್ಲಿ ಕಾಣಿಸಿಕೊಳ್ಳುವ ಕಥಾ ಪಾತ್ರಗಳ ಗೊಂಬೆಗಳು. ಈ ಎರಡೂ ಮಹಾಕಾವ್ಯಗಳ ಆಯ್ದ ಪ್ರಸಂಗಗಳಲ್ಲಿ ಬರುವ ಪಾತ್ರಗಳೇ ಈ ತೊಗಲುಗೊಂಬೆಗಳ ಚಿತ್ರಗಳ ವಿಷಯ. ವಸ್ತುವಾಗುವುದು ಕೂಡ ಸಹಜವೇ. ಇನ್ನುಳಿದಂತೆ ಬೇರೆ ಬೇರೆ ಪಾತ್ರಗಳ ೪೩-೪೫ ಗೊಂಬೆಗಳಿದ್ದು, ಒಂದೇ ಪಾತ್ರದ ಭಿನ್ನ ಸಂದರ್ಭದ ಚಿತ್ರಗಳಾಗಿಯೂ ಬಳಕೆಯಾಗುತ್ತವೆ. ಉದಾಹರಣೆಗೆ: ದ್ರೌಪದಿ ಪಾತ್ರದ ಎರಡು ಭಿನ್ನ ರೀತಿಯ ಗೊಂಬೆಗಳಿವೆ. ಅಂತೆ ಭೀಮನ ಪಾತ್ರದ ಮೂರು ಭಿನ್ನ ರೀತಿಯ ಗೊಂಬೆಗಳಿವೆ. ಇನ್ನೂ ಹಲವಾರು ಈ ರೀತಿಯ ಗೊಂಬೆಗಳಿವೆ. ಒಟ್ಟಾರೆ ಈ ಚಿತ್ರಕಾರರ ಚಿತ್ರದ ವಸ್ತು-ವಿಷಯಗಳು ರಾಮಾಯಣ, ಮಹಾಭಾರತಗಳಲ್ಲಿ ಬರುವ ಪಾತ್ರಗಳ ಚಿತ್ರಣಗಳಿಗೆ ಸೀಮಿತವಾಗಿರುತ್ತದೆ ಎನ್ನಬಹುದು.

### iii. ಚಿತ್ರಣ ವಸ್ತು-ವಿಷಯಗಳು

#### ೧. ಗಣಪತಿ

ಈ ತೊಗಲುಗೊಂಬೆಯ ಗಣಪತಿ ಚಿತ್ರವು ಅನೇಕ ವೈಶಿಷ್ಟ್ಯಗಳಿಂದ ಕೂಡಿದೆ. ಆ ಚಿತ್ರದ ವಿಶೇಷತೆಗಳನ್ನು ಹೀಗೆ ವಿವರಿಸಬಹುದು. ಭಾರತೀಯ ಸಂದರ್ಭದ ಯಾವುದೇ ಆಟ ಅಥವಾ ಪಾಠದ ಸಂದರ್ಭದಲ್ಲಿ ನಿರ್ದಿಷ್ಟತೆಗಾಗಿ ಪ್ರಾರ್ಥಿಸಿಕೊಳ್ಳುವುದು ವಿಘ್ನ ನಾಶಕನಾದ ಗಣಪತಿಯನ್ನು ಗೊಂಬೆಯಾಟದಂತಹ ಸಂದರ್ಭದಲ್ಲಿಯೂ ಸೂತ್ರಧಾರನು ಮೊದಲು ಗಣಪತಿಯನ್ನು ತೋರಿಸಿ, ಪ್ರಾರ್ಥಿಸಿರುವುದು ವಾಡಿಕೆ.

ತೊಗಲುಗೊಂಬೆಯಾಟ ದಲ್ಲಿಯೂ ವಿಘ್ನನಾಶಕ ಗಣೇಶನ ಪಾತ್ರ ಪ್ರಮುಖವಾಗಿರುತ್ತದೆ. ಇಲ್ಲಿ ಗಣೇಶನ ಸೊಂಡಿಲನ್ನು ಊರ್ಧ್ವಮುಖವಾಗಿ ಅಂದರೆ ಸೊಂಡಿಲನ್ನು ಮೇಲೆತ್ತಿದಂತೆ ಚಿತ್ರಿಸಲಾಗಿದೆ. ಉದ್ದನೆಯ ಸುಂದರ ಕಿರೀಟವನ್ನು ಧರಿಸಿದ್ದಾನೆ. ಸಾಮಾನ್ಯವಾಗಿ ಮುಖದಷ್ಟು ದೊಡ್ಡದಾಗಿರುವ ಕಿವಿಗಳಿರುವುದು ಗಣೇಶನ ವೈಶಿಷ್ಟ್ಯವಾದರೆ ಇಲ್ಲಿ ಕಿವಿಗಳನ್ನು ಚಿಕ್ಕದಾಗಿ ಬಿಳಿಬಣ್ಣದ ರೇಖೆಯಲ್ಲಿ ಕಪ್ಪು ಗೆರೆಗಳನ್ನು ಹಾಕಿ ಕಿವಿ ತೋರಿಸಲಾಗಿದೆ. ಹಾಗೆಯೇ ಹಣೆಯ ಮೇಲಿನ ನಾಮವನ್ನೂ, ಕಿರೀಟದ ಕೊನೆಯಲ್ಲಿ ಜೋತುಬಿದ್ದ ಮುತ್ತಿನ ಸರದಂತಿರುವ ಭಾಗವನ್ನೂ, ಕೊರಳಲ್ಲಿಯ ಸರವನ್ನೂ ಹಾಗೂ ಉಟ್ಟ ಧೋತರದ ಅಂಚನ್ನು ಇದೇ ರೀತಿ ರಚಿಸಲಾಗಿದೆ. ಇಲ್ಲಿ ಬೆಳಕಿನ ಕಿರಣಗಳು ಎದುರು ದಿಕ್ಕಿನಲ್ಲಿ ಚಲಿಸುವುದರಿಂದ ಕತ್ತಲಲ್ಲಿ ಕುಳಿತ ನೋಡಗನಿಗೆ ಅಂಚುಗಳು ಮಿಂಚುವಂತೆ ಕಾಣುವುದು ಇಲ್ಲಿನ ವಿಶೇಷತೆ. ಗಣೇಶನಿಗೆ ದೊಡ್ಡದಾದ ಹೊಟ್ಟೆ ಇರುವುದು ಸರ್ವಸಾಮಾನ್ಯವಾಗಿದ್ದರೆ ಇಲ್ಲಿ ಹೊಟ್ಟೆಯ ಭಾಗ ಸಣ್ಣ ನಡುವಿನಂತೆ ಚಿತ್ರಿತವಾಗಿದೆ. ಎದೆಯ ಭಾಗವು ಆಭರಣಗಳಲ್ಲಿ ಮುಚ್ಚಿದಂತೆ ಮುತ್ತುಗಳಿಂದ ಅಲಂಕೃತವಾಗಿದೆ. ಕೆಂಪು,

ಹಳದಿ ಬಣ್ಣದ ಮುತ್ತುಗಳ ಸರಗಳನ್ನು ಕಪ್ಪು ಬಣ್ಣದ ಹೊರರೇಖೆಯೊಂದಿಗೆ ಸ್ಪಷ್ಟವಾಗಿ ರಚಿಸಲಾಗಿದೆ. ಧೋತರದ ಭಾಗವು ಕೆಂಪು ಮತ್ತು ಹಳದಿಯ ಪಟ್ಟಿ ಪಟ್ಟಿಗಳನ್ನು ರಚಿಸಿ, ಮಧ್ಯದ ಜೋತುಬಿದ್ದ ಬಟ್ಟೆಯನ್ನು ಅಡ್ಡಅಡ್ಡವಾಗಿ ಚಿತ್ರಿಸಿ ಕೆಳಭಾಗದ ವಿನ್ಯಾಸ ಮಾಡಲಾಗಿದೆ.

ಬಲಗಾಲು ಮಡಿಚಿಕೊಂಡು ಕುಳಿತ ಅನುಭವ ನೀಡಿದರೆ, ಎಡಗಾಲು ಕೆಳಕ್ಕೆ ಬಿಟ್ಟು ನಿಂತಂತೆ ತೋರುತ್ತದೆ. ಗೊಂಬೆ ಆಡಿಸಲು ಬೇಕಾದ ಮಧ್ಯದ ಕೋಲನ್ನು ಸುತ್ತುವರೆದು ಚಿತ್ರ ಪೂರ್ಣಗೊಳ್ಳುತ್ತದೆ. ಮುಖದಲ್ಲಿ ಕಣ್ಣಿನ ಬಿಳಿಯ ಭಾಗದ ತೊಗಲನ್ನು ಸಂಪೂರ್ಣ ಕತ್ತರಿಸಿರುವುದರಿಂದ ಹಿಂದಿನಿಂದ ಬಂದ ಬೆಳಕು ಕಣ್ಣನ್ನು ಸ್ಪಷ್ಟವಾಗಿ ತೋರಿಸುತ್ತದೆ. ಇದು ಇತರ ಎಲ್ಲಾ ಚಿತ್ರಗಳಿಗಿಂತ ಭಿನ್ನವಾಗಿದೆ. ಎಲ್ಲಾ ಪಾತ್ರಗಳಲ್ಲಿ ಬದಿಯ ಮುಖವಿದ್ದರೂ, ಒಂದೇ ಕಣ್ಣು ಕಾಣುವಂತಿದ್ದರೂ ಅದೇ ಸ್ಥಳದಲ್ಲಿ ಎರಡೂ ಕಣ್ಣುಗಳನ್ನು ಚಿತ್ರಿಸಿರುವುದು ಈ ತೊಗಲುಗೊಂಬೆಗಳ ವೈಶಿಷ್ಟ್ಯವಾಗಿದೆ. ಈ ಗಣಪತಿಗೆ ಮಾತ್ರ ಒಂದು ಬದಿಯ ಒಂದೇ ಕಣ್ಣು ಕಾಣುವಂತೆ ಚಿತ್ರಿಸಲಾಗಿದೆ. ಕೋರೆ ಮುಂದೆ ಕಾಣುವ ಒಂದು ಭಾಗವು ಪೂರ್ಣವಾಗಿದ್ದು, ಆಕಡೆ ಬಲಭಾಗದ ಕೋರೆ ಮೊಂಡಾಗಿರುವ ಅನುಭವವನ್ನು ನೀಡುತ್ತದೆ. ಚಿತ್ರದ ಎರಡೂ ಕಡೆ ಜೋತುಬಿದ್ದ ಬಟ್ಟೆಯ ಕೊನೆಯಲ್ಲಿ ಗಂಟೆಯಾಕಾರದ ಗೊಂಡೆಯನ್ನು ರಚಿಸಲಾಗಿದೆ. ಕೈಯಲ್ಲಿ ಮೋದಕಗಳ ಪಾತ್ರೆಯನ್ನು ಹಿಡಿದ ಅನುಭವ ನೀಡುತ್ತದೆ. ಎಡ ಮೇಲ್ಕೈಯಲ್ಲಿ ಅಂಕುಶ ಹಿಡಿದ ಈ ಗಣೇಶನಿಗೆ ಎರಡೇ ಕೈಗಳು ಇರುವುದು ಇನ್ನೊಂದು ವಿಶೇಷ. ಅಲ್ಲಲ್ಲಿ ಕೊರೆದ ರಂಧ್ರಗಳು ಹಿಂಬದಿಯಿಂದ ಪಸರಿಸುವ ಬೆಳಕಿನಿಂದಾಗಿ ಚಿತ್ರದ ಅಂಚು ಮತ್ತು ಕೊನೆಗಳನ್ನು ಸೂಕ್ಷ್ಮವಾಗಿ ಪರಿಚಯಿಸುತ್ತದೆ.

ಶೆಲ್ಯ, ತೋಳುಬಂದಿ, ಕಾಲ್ಗಡಗ ಮೊದಲಾದ ಅಂಶಗಳು ಕಪ್ಪು, ಕೆಂಪು, ಹಳದಿ ಮತ್ತು ತೆಳುನೀಲಿ ಬಣ್ಣದಿಂದ ರಚನೆಗೊಂಡಿವೆ. ಮುಖ ಹಾಗೂ ಮೈಬಣ್ಣವೂ ತೆಳುನೀಲಿಯಾಗಿರುವುದು ಇಲ್ಲಿನ ವಿಶೇಷತೆಯಾಗಿದೆ.

**೨. ಬಸಪ್ಪ**

ಬಯಲಾಟ ಮತ್ತು ಪಾರಿಜಾತಗಳಲ್ಲಿ ನಾಟಕದ ಸೂತ್ರಧಾರ ಅಥವಾ ಧೂತೆಯಂತಹ ಪಾತ್ರಗಳಿರುವಂತೆ ತೊಗಲುಗೊಂಬೆಯಾಟದಲ್ಲೂ ಬಸಪ್ಪ ಎಂಬ ಹೆಸರಿನ ಅಪೌರಾಣಿಕ ಹಾಗೆಯೇ ಸಮಕಾಲೀನ ಪಾತ್ರವೊಂದನ್ನು ಸೃಷ್ಟಿಸಿಕೊಂಡು ರಾಮಾಯಣ, ಮಹಾಭಾರತಗಳ ಕಥೆಗಳಿಗೆ ಆಧುನಿಕ ಅಥವಾ ಪ್ರಸ್ತುತ ವಾತಾವರಣದಲ್ಲಿ ತರಲು, ಜನಮಾನಸದ ಹಾಸ್ಯ ಪ್ರಸಂಗಗಳನ್ನು ರಾಜಕೀಯ ವಿಡಂಬಣೆಗಳನ್ನು ಮಾಡಿ ಮಧ್ಯ ಮಧ್ಯ ನಗಿಸಲು ಈ ಪಾತ್ರದ ಚಿತ್ರವನ್ನು ಬಳಸಿಕೊಳ್ಳುತ್ತಾರೆ. ಸರ್ಕಸ್‌ನ ಜೋಕರ್‌ನಂತೆ ಚಿತ್ರದಲ್ಲಿ ಉದ್ದನೆಯ, ದಪ್ಪನೆಯ ಮೂಗು ವೇಷಭೂಷಣಗಳನ್ನು ಸೃಷ್ಟಿಸಲಾಗಿದೆ. ಹೊಟೇಲ್‌ಗಳ ಬಾಗಲಲ್ಲಿ ಸ್ವಾಗತಿಸಲು ನಿಂತಿರುವ ಮಹಾರಾಜ ಗೊಂಬೆಯಂತೆ ಪೇಟವನ್ನು ಸುತ್ತಲಾಗಿದೆ. ಕಿವಿಯಲ್ಲಿನ ಆಭರಣ, ಕಣ್ಣಿನ ಬಿಳಿ ಭಾಗದ ತೊಗಲನ್ನು ಕತ್ತರಿಸಿ ಹಿಂದಿನಿಂದ ಬೆಳಕು ಬರುವಂತೆ ಮಾಡಿರುವುದು ಸರ್ವೇಸಾಮಾನ್ಯ. ಉದ್ದನೆಯ ಮೀಸೆ, ಕೊರಳಲ್ಲಿ ಕಪ್ಪು ಬಟ್ಟೆ, ಹೆಗಲ ಮೇಲೆ ಕಂಬಳಿ,

ಧೋತ್ರದ ಸ್ಥಳದಲ್ಲಿ ಪೈಜಾಮಿನಂತಹ ಪಟ್ಟೆಪಟ್ಟೆ ವೇಷವನ್ನು ತೊಡಿಸಲಾಗಿದೆ. ನಡುಪಟ್ಟಿಯನ್ನು ಕಟ್ಟಿ ಬಲಭಾಗದಲ್ಲಿ ಹೆಚ್ಚಾದ ಬಟ್ಟೆಯನ್ನು ಚುಂಗಿನಾಕಾರದಲ್ಲಿ ದಪ್ಪಗೆ ಬಿಡಲಾಗಿದೆ. ಎಡಗೈಯಲ್ಲಿ ಏನನ್ನೋ ಹಿಡಿದುಕೊಂಡಂತೆ ಚಿತ್ರಿಸಲಾದ ಈ ಚಿತ್ರದಲ್ಲಿ ಕೆಂಪು, ಹಳದಿ ಮತ್ತು ಕಪ್ಪು ಈ ಮೂರು ಬಣ್ಣಗಳನ್ನು ಮಾತ್ರ ಬಳಸಿದ್ದು, ಕಾಲುಗಳ ಚಿತ್ರಣಯಲ್ಲಿ ಸ್ಪಷ್ಟತೆ ಇಲ್ಲ.

ತೊಗಲುಗೊಂಬೆಯಾಟದ ಆರಂಭಕ್ಕೆ ಗಣಪತಿಯ ಗೊಂಬೆಯನ್ನು ತೋರಿಸಿ ಗಣಪತಿಯ ಸ್ತೋತ್ರ ಹೇಳುತ್ತಾ ಆಟವನ್ನು ಪ್ರಾರಂಭಿಸುವುದು ವಾಡಿಕೆ. ಅಂತೆಯೇ ಎಲ್ಲಾ ಕಥಾ ಸಂದರ್ಭಗಳಲ್ಲಿಯೂ ಬಸಪ್ಪನ ಪಾತ್ರ ಹಾಸ್ಯ ಪಾತ್ರವಾಗಿ ಜನಮನ ಸೆಳೆಯುತ್ತಾ ಬಂದಿದೆ. ಹೀಗೆ ಈ ಎರಡೂ ತೊಗಲುಗೊಂಬೆಗಳು ಪ್ರತೀ ಕಥಾ ಸಂದರ್ಭದಲ್ಲಿ ಸಾಮಾನ್ಯವಾಗಿ ಪಾತ್ರ ನಿರ್ವಹಿಸುತ್ತವೆ. ಇನ್ನು ಮುಂದಿನ ತೊಗಲುಗೊಂಬೆ ಚಿತ್ರಗಳನ್ನು ಮಹಾಭಾರತ ಮತ್ತು ರಾಮಾಯಣದ ಪಾತ್ರಗಳಾಗಿ ವಿಭಜಿಸಿಕೊಂಡು ಪ್ರಸ್ತುತಪಡಿಸಲಾಗಿದೆ.

*** ಮಹಾಭಾರತದ ತೊಗಲುಗೊಂಬೆ ಚಿತ್ರಗಳು**

**೩. ದ್ರೌಪದಿ**

ಮಹಾಭಾರತದಲ್ಲಿ ದ್ರೌಪದಿಯ ಪಾತ್ರ ತುಂಬಾ ಸುಂದರ ಹಾಗೂ ಪ್ರಮುಖವೆನಿಸುತ್ತದೆ. ಅಂಥ ಪಾತ್ರವನ್ನು ಪ್ರತಿನಿಧಿಸುವ ಈ ಚಿತ್ರದ ಕಣ್ಣು ಮತ್ತು ಹುಬ್ಬುಗಳನ್ನು ಕಪ್ಪಗೆ ರಚಿಸಿ, ಸೂಕ್ಷ್ಮವಾದ ಎಳೆಗಳಿಂದ ಅಲಂಕೃತಗೊಳಿಸಲಾಗಿದೆ. ತಲೆಯ ಮೇಲೆ ಅಲಂಕೃತವಾದ ದಂಡೆ ಇದ್ದು ಕೂದಲನ್ನು ತುರುಬಿನಂತೆ ಕಟ್ಟಿ ಮತ್ತೆ ಉದ್ದಕ್ಕೆ ಬಿಡಲಾಗಿದೆ. ತುಟಿಯ ಅಂಚಿನಲ್ಲಿ ನಗುವು ಸುಳಿದಿದ್ದು, ಈ ಚಿತ್ರದ ವೈಶಿಷ್ಟವಾಗಿದೆ. ಬಲಗೈ ಮೇಲೆ ಮಾಡಿ ಕಮಲದ ಹೂವನ್ನು ಹಿಡಿದು, ಎಡಗೈಯನ್ನು ಕೆಳಗೆ ಬಿಟ್ಟು ನಿಂತಿರುವ ಚಿತ್ರ ಇದಾಗಿದೆ. ಕೆಂಪು ಬಣ್ಣದ ರವಿಕೆ ಮತ್ತು ಪಟ್ಟೆಪಟ್ಟೆಯಾಕಾರದ ಸೀರೆಯಲ್ಲಿ ಪ್ರತ್ಯೇಕತೆಯನ್ನು ತೋರಲಾಗಿದ್ದು, ಕೈಗಳಲ್ಲಿ ಹೂವಿನಾಕಾರದ ಕೈಕಟ್ಟು, ಕಾಲಲ್ಲಿ ಗೆಜ್ಜೆ, ನಡುಕಟ್ಟು ಹೊಂದಿದ ಸೇವಕಿಯೊಬ್ಬಳು ದ್ರೌಪದಿಯ ಹಿಂದೆ ನಿಂತು ಚಾಮರ ಹಿಡಿದಿದ್ದಾಳೆ. ಒಟ್ಟು ಅಂದವಾದ ಹೆಣ್ಣಿನ ಚಿತ್ರ ಇದಾಗಿದ್ದು, ದ್ರೌಪದಿ ತುಂಬಾ ಸುಂದರವಾದ ಮೈಕಟ್ಟನ್ನು ಹೊಂದಿರುವಂತೆ ಬಿಂಬಿಸಲಾಗಿದೆ.

**೪. ದುಶ್ಯಾಸನ**

ದ್ರೌಪದಿ ವಸ್ತ್ರಾಪಹರಣದಲ್ಲಿ ಪ್ರಮುಖ ಪಾತ್ರ ವಹಿಸಿದ ಈ ದುಶ್ಯಾಸನ ಎಡಗೈಯನ್ನು ಮೇಲೆತ್ತಿ ಖಡ್ಗವನ್ನು ಹಿಡಿದು, ಬಲಗೈಯಲ್ಲಿ ಗುರಾಣಿ ಹಿಡಿದಿರುವಂತೆ ಚಿತ್ರಿತವಾಗಿದ್ದಾನೆ. ಕೆಂಪು ಬಣ್ಣದ ಮೇಲ್ಪಟ್ಟೆ, ಪೇಟದಲ್ಲಿ ಮುತ್ತಿನ ಹಾರ ರಾಜಸ್ಥಾನಿ ಶೈಲಿಯ ಅಂಶಗಳು ಕಂಡುಬರುತ್ತವೆ. ಗುರಾಣಿಯ ಕಪ್ಪು ಬಣ್ಣದಲ್ಲಿ ಮುತ್ತಿನಾಕಾರದ ನಕ್ಷೆಗಳನ್ನು ರಚಿಸಲಾಗಿದೆ. ದೇಹದ ಕೆಳಭಾಗವು ಧೋತ್ರದ ಭಾಗದಲ್ಲಿ ಸಂಪೂರ್ಣ ಮುಚ್ಚಿ ಹೋಗಿದ್ದು ಅಜಾನುಬಾಹು ಎಂದೆನಿಸುತ್ತದೆ. ಕಾಲುಗಳನ್ನು ಅಗಲ ಮಾಡಿಕೊಂಡು ಚಲನಶೀಲನಾಗಿ ನಿಂತ ದುಶ್ಯಾಸನ ನಡುಕಟ್ಟಿನಲ್ಲಿ ಕಂಬಳಿಕರಿಯಿಂದ ಮಾಡಿದ ವಿನ್ಯಾಸ ದಾರವನ್ನು ಹಾಕಿದಂತೆ ಕಾಣುತ್ತದೆ. ಮೇಲೆ ಮಣಿದ ಪಾದರಕ್ಷೆ, ಕಾಲ್ಗಡಗ ಮೊದಲಾದವುಗಳಿಂದ ವಿನ್ಯಾಸಗೊಳಿಸಲಾಗಿದೆ.

೫. ಧರ್ಮರಾಜ

ಮಹಾಭಾರತದಲ್ಲಿ ಧರ್ಮರಾಯ ಎಲ್ಲರಿಗಿಂತ ದೊಡ್ಡವನಾದ್ದರಿಂದ ಅವನಿಗೆ ನೆರಳಿಗಾಗಿ ಛತ್ರಿ, ಕೈಯಲ್ಲಿ ಬಿಲ್ಲು, ಬಾಣ, ಖಡ್ಗ, ಹಿಂದೊಬ್ಬ ಸೇವಕ ಚಾಮರವನ್ನು ಬೀಸುತ್ತಿರುವಂತೆ ಚಿತ್ರಿಸಲಾಗಿದೆ. ಕಿರೀಟದಲ್ಲಿ ತುಂಬಾ ಸೂಕ್ಷ್ಮವಾದ ನಕ್ಷೆಗಳನ್ನು ರಚಿಸಲಾಗಿದೆ. ಬದಿಯ ನೋಟಕ್ಕೆ ಎರಡೂ ಕಣ್ಣುಗಳು ಸಣ್ಣನೆಯ ಮೀಸೆ, ಕೊರಳಲ್ಲಿ ಸರ, ಕೈಗಳಲ್ಲಿ ಕೈಗಡಗ ಮತ್ತು ತೋಳುಬಂಧಿ ಚೌಕಡಿ ವಿನ್ಯಾಸಗಳಿಂದ ಅತ್ಯಂತ ಸುಂದರವಾಗಿ ಕಾಣುತ್ತವೆ. ಕೆಂಪು ವರ್ಣದ ಧೋತ್ರದಲ್ಲಿ ಬಿಳಿಯ ಪಟ್ಟಿಗಳನ್ನು ಮಾಡಿ, ಕಾಲಲ್ಲಿ ಪಾದರಕ್ಷೆಗಳನ್ನು ಚಿತ್ರಿಸಲಾಗಿದೆ. ನಡುವಿನ ಮೇಲೆ ಹೊದಿಕೆ, ಮುಂಭಾಗದಲ್ಲಿ ಜೋತುಬಿದ್ದ ಬಟ್ಟೆ ಎಲ್ಲಾ ಕಡೆಯಲ್ಲೂ ಮೇಲೆ ಹಾಕಿಕೊಂಡ ಶ್ಯಾಲಿನ ಅಂಚು ಬಿದ್ದಿರುವುದು ಗಮನಾರ್ಹ. ಒಟ್ಟು ಧರ್ಮರಾಜನು ಗಂಭೀರ ಸ್ವಭಾವದ ದೊಡ್ಡ ಮನುಷ್ಯ ಎಂಬುದು ಭಾಸವಾಗುವಂತೆ ಚಿತ್ರಿಸಲಾಗಿದೆ.

೬. ಭೀಮ

ಮಹಾಭಾರತದಲ್ಲಿ ಬೃಹತ್‌ಕಾಯದ ಭೀಮನನ್ನು ಇಲ್ಲಿ ತಲೆಯಲ್ಲಿ ವಿಭಿನ್ನವಾದ ಕಿರೀಟ ಧರಿಸಿದ ಉದ್ದನೆಯ ಕೂದಲುಗಳು, ಇಳಿಬಿದ್ದ ದಪ್ಪನೆಯ ಮೀಸೆ, ಗಡ್ಡ, ಹೆಗಲ ಮೇಲೆ ಹಾಕಿಕೊಂಡ ಚೌಕಡಿಯ ಶಾಲು ಅತೀ ಸುಂದರವಾಗಿ ವಿನ್ಯಾಸಗೊಂಡಿದೆ. ಎಡಗೈಯಲ್ಲಿ ಹಿಡಿದ ಗಧೆಯು ಅವನ ಆಕೃತಿಗಿಂತ ಚಿಕ್ಕದಾಗಿದೆ. ಬಲಗೈಯನ್ನು ಮೇಲೆತ್ತಿ ಏನನ್ನೋ ಹೇಳುತ್ತಿರುವಂತೆ ಭೀಮನನ್ನು ಚಿತ್ರಿಸಲಾಗಿದೆ. ಕಾಲುಗಳಲ್ಲಿ ಹಗ್ಗದಾಕಾರದ ಚೈನುಗಳನ್ನು ಹಾಕಲಾಗಿದೆ. ಕೆಂಪು ಬಣ್ಣದ ಹನುಮಾನ್ ಚಡ್ಡಿ, ಅಂಚಿಗೆ ಮತ್ತದೇ ವಿನ್ಯಾಸಗಳು ಎದ್ದು ಕಾಣಲು ಮತ್ತು ಮಿಂಚಲು ಅಲ್ಲಲ್ಲಿ ತೊಗಲಿಗೆ ರಂಧ್ರಗಳನ್ನು ಹಾಕಿದ್ದು ಈ ಚಿತ್ರದ ವೈಶಿಷ್ಟ್ಯತೆ.

೭. ದದಿಬಲ

ದದಿಬಲ ಒಂದು ರಾಕ್ಷಸ. ದೊಡ್ಡದಾದ ಮುಖ, ತೆರೆದಿರುವ ಬಾಯಿ, ದೊಡ್ಡ ದೊಡ್ಡ ಹಲ್ಲುಗಳು, ಜೊತೆಗೆ ಕೊನೆಯಲ್ಲಿ ಕೋರೆಹಲ್ಲು, ದಪ್ಪನೆಯ ಮೀಸೆ, ದಪ್ಪನೆಯ ಉಬ್ಬಾದ ಅಗಲವಾದ ಕಣ್ಣು, ಹಿಂದೆ ಕೂದಲು, ದೊಡ್ಡ ಹೊಟ್ಟೆ, ಕೈಯಲ್ಲಿ ಚೂಪಾದ ಒಂದು ಕತ್ತಿ, ಕಾಲು ಮಡಿಚಿಕೊಂಡು ಕುಳಿತ ಈ ಚಿತ್ರವು ತೆಳುನೀಲಿ ಬಣ್ಣದ ನಿರಾಭರಣವಾಗಿದೆ. ಆಟದ ಸಮಯದಲ್ಲಿ ಭಯ ಹುಟ್ಟಿಸಲು ಸಹಾಯಕವಾಗುತ್ತದೆ.

೮. ಧುರ್ಯೋಧನ

ಭೀಮನಂತೆಯೇ ಕಾಣುವ ಧುರ್ಯೋಧನನ ಈ ಚಿತ್ರ ದಪ್ಪದಪ್ಪನೆಯ ಕೈಕಾಲುಗಳನ್ನು ಹೊಂದಿದ್ದು, ಕೆಂಪು ಬಣ್ಣದ ಬಟ್ಟೆ ತೊಡಿಸಲಾಗಿದೆ. ಬದಿಯ ನೋಟವಾದರೂ ಎರಡೂ ಕಣ್ಣುಗಳನ್ನು ಕಾಣುವಂತೆ ಮಾಡಿದ್ದು, ಜೊತೆಗೆ ಮೀಸೆಯ ಒಂದು ಬದಿಯನ್ನು ಪೂರ್ಣ ಮೇಲ್ಭಾಗಕ್ಕೆ ತಿರುಗಿಸಿ ಇನ್ನೊಂದು ಭಾಗದ ಅರ್ಧವನ್ನು ಮುಖದ ಮೇಲೆಯೇ ತೋರಿಸಿರುವುದು ವಿಶೇಷ. ಹುಬ್ಬುಗಳನ್ನು ದಪ್ಪವಾಗಿ ಚಿತ್ರಿಸಿ ಕೂದಲುಗಳು ಎಳೆ ಎಳೆಯಾಗಿ ಕಾಣುವಂತೆ ಅಲ್ಲಲ್ಲಿ ತೊಗಲನ್ನು ಸೂಕ್ಷ್ಮವಾಗಿ ಕತ್ತರಿಸಲಾಗಿದೆ. ಅದೇ

ರೀತಿ ಗಡ್ಡವನ್ನು ಹುಬ್ಬಿನಿಂದ ಸ್ವಲ್ಪ ಭಾಗವನ್ನು ಬಿಟ್ಟು ಆರಂಭಿಸಿ ಪೈಪಿನಾಕಾರದಲ್ಲಿ ಗಲ್ಲಕ್ಕೆ ಜೋಡಿಸಲಾಗಿದೆ. ಇಲ್ಲಿಯೂ ಕೂಡ ಕೂದಲಿನ ಸೂಕ್ಷ್ಮತೆಗಾಗಿ ತೊಗಲನ್ನು ಕತ್ತರಿಸಲಾಗಿದೆ. ಕಣ್ಣಿನಲ್ಲಿ ಸ್ವಲ್ಪ ಭಾಗವನ್ನು ಮಾತ್ರ ಬಿಳಿದಾಗಿ ತೋರಿಸಲು ತೊಗಲನ್ನು ಕತ್ತರಿಸಿ ಧುರ್ಯೋಧನನ ಕರಾಳ ದೃಷ್ಟಿಗಾಗಿ ಕಪ್ಪು ಗುಡ್ಡೆಯ ಸುತ್ತಲೂ ಕೆಂಪು ಬಣ್ಣದ ವರ್ತುಳವನ್ನು ಸೃಷ್ಟಿಸಿ ಅವನ ಕೋಪವನ್ನು ಬಿಂಬಿಸಲಾಗಿದೆ. ಇನ್ನು ತಲೆಯ ಮೇಲೆ ಕಿರೀಟವನ್ನು ಗಾಂಧೀ ಟೋಪಿಯಾಕಾರದಲ್ಲಿ ಚಿತ್ರಿಸಿರುವುದು ಇನ್ನೊಂದು ವಿಶೇಷ. ಅಲ್ಲಿಯೂ ಕೂಡ ಬೆಳಕಿನ ಕಿರಣಗಳ ಆಗಮನಕ್ಕಾಗಿ ಗೀರುಗೀರಾಗಿ ತೊಗಲನ್ನು ಕತ್ತರಿಸಲಾಗಿದೆ. ಕೂದಲಿನ ಭಾಗವನ್ನು ತುಂಬಾ ದಪ್ಪಗಾಗಿ ಬೆನ್ನಹಿಂದೆ ಬಿಡಲಾಗಿದೆ. ಅಲ್ಲಿಯೂ ಕೂಡ ಕೂದಲಿನ ಎಳೆಗಳನ್ನು ತೋರಿಸಲು ಸೂಕ್ಷ್ಮವಾಗಿ ತೊಗಲನ್ನು ಕತ್ತರಿಸಲಾಗಿದೆ. ಕೊರಳಲ್ಲಿ ನೆಕ್ಲೆಸ್ ಆಕಾರದ ಆಭರಣವನ್ನು ಕೆಂಪು, ಹಳದಿ ಮತ್ತು ಕಪ್ಪು ಬಣ್ಣಗಳಲ್ಲಿ ವಿನ್ಯಾಸಗೊಳಿಸಲಾಗಿದೆ. ಎಡಗೈಯಿಂದ ಹಿಡಿದುಕೊಂಡ ಗಧೆಯು ಹೆಗಲಮೇಲೆ ವಿರಾಜಮಾನವಾಗಿದ್ದು, ವ್ಯಕ್ತಿ ಶರೀರಕ್ಕಿಂತ ಚಿಕ್ಕದಾಗಿರುವುದು ಅಚ್ಚರಿ ಮೂಡಿಸುತ್ತದೆ. ಗಧೆಯ ಭಾಗದಲ್ಲಿ ಹಿಡಿಕೆಯಲ್ಲಿ ಹಳದಿ ಮತ್ತು ಕೆಂಪು ಬಣ್ಣದ ಪಟ್ಟಿಗಳನ್ನು ರಚಿಸಿ, ಅಲ್ಲಲ್ಲಿ ಅಡ್ಡಡ್ಡದಾಗಿ ಗೆರೆಗಳನ್ನು ಹಾಕಲಾಗಿದೆ. ಗಧೆಯ ಮುಖ್ಯ ಭಾಗವು ಅಮೆರಿಕಾದ ಧ್ವಜದಂತಿದ್ದು, ಮಧ್ಯದಲ್ಲಿ X ಮತ್ತು + ಆಕಾರದ ರೇಖೆಗಳನ್ನು ಹಾಕಿ ಪೂರ್ಣಗೊಳಿಸಲಾಗಿದೆ. ತೀರಾ ದುಂಡಗಾಗಿ ಇಲ್ಲದಿರುವುದು ಇಲ್ಲಿನ ವಿಶೇಷ. ಕೈಗಳಲ್ಲಿ ಚೈನುಗಳ ಆಕಾರದ ಸರಗಳಿದ್ದು, ನಂತರ ಕೈಕಟ್ಟುಗಳನ್ನು ಹಾಕಲಾಗಿದೆ. ಬಲಗೈ ಕೊನೆ ಮಾತನಾಡುವಾಗ ತೋರುವಂತೆ ಭಾಸವಾಗುತ್ತದೆ. ಕೆಳಭಾಗದಲ್ಲಿ ಕುಸ್ತಿ ಚಡ್ಡಿಯಂತಹ ಬಟ್ಟೆಯನ್ನು ಹಾಕಲಾಗಿದೆ. ಅಲ್ಲಿಯೂ ಕೂಡ ತ್ರಿಕೋನಾಕಾರದ ಕಪ್ಪು ಬಣ್ಣದ ನಕ್ಷೆಗಳನ್ನು ಎದ್ದುಕಾಣುವಂತೆ ಚಿತ್ರಿಸಲಾಗಿದೆ. ಕಾಲುಗಳಲ್ಲಿ ಸರಪಳಿಯಾಕಾರದ ಆಭರಣ ಹಾಕಲಾಗಿದೆ. ಕೆಂಪು ಬಣ್ಣ ಮೈಮೇಲಿನ ಶಲ್ಯ ಎಲ್ಲಾ ಕಡೆ ಹಾರಾಡಿದಂತೆ ಸಂಯೋಜಿಸಿ ಉಗ್ರತೆಯ ವಾತಾವರಣವನ್ನು ಸೃಷ್ಟಿಸಲಾಗಿದೆ.

### ೯. ಜಯದ್ರಥ

ಕೌರವ ಪಕ್ಷದ ಜಯದ್ರಥ ಒಂದೇ ಕೈಯಲ್ಲಿ ಖಡ್ಗ ಮತ್ತು ಗುರಾಣಿಗಳನ್ನು ಹಿಡಿದಿದ್ದಾನೆ. ಬದಿಯ ಚಿತ್ರವಾದರೂ ಎರಡು ಕಣ್ಣು, ಮೀಸೆ, ಪೇಟ, ಹಿಂದೆ ಬಿಟ್ಟ ಚುಂದು, ಕೆಂಪು ಬಣ್ಣದ ಅಲಂಕೃತ ಶಲ್ಯ ಆಚೆ ಈಚೆ ಹಾರಿಬಂದಿರುವುದು, ಕೆಂಪು ಬಣ್ಣದ ಹನುಮಾನ್ ಚಡ್ಡಿ, ನಡುಕಟ್ಟಿನಿಂದ ಜೋತುಬಿಟ್ಟ ಮಧ್ಯದ ಬಟ್ಟೆ ತುಂಬಾ ಸುಂದರವಾದ ವಿನ್ಯಾಸವನ್ನು ಹೊಂದಿದೆ. ನಡುವಿನಲ್ಲಿ ಚಿಕ್ಕದೊಂದು ಕತ್ತಿ ಇದ್ದು ಅದಕ್ಕೂ ನಕ್ಷೆಗಳಿಂದ ಅಲಂಕೃತಗೊಳಿಸಲಾಗಿದೆ.

### ೧೦. ಕೀಚಕ

ಚಿತ್ರವು ಹೆಚ್ಚು ನಕ್ಷೆಗಳನ್ನು ಹೊಂದಿದ್ದು, ಎಡಗೈಯಲ್ಲಿ ಗಧೆಯನ್ನು ಹಿಡಿದು ಕಾಲುಗಳನ್ನು ಅಗಲ ಮಾಡಿ ಬಲಗೈಯಲ್ಲಿ ದುಂಡನೆಯ ವಸ್ತುವೊಂದನ್ನು ಹಿಡಿದುಕೊಂಡು ನೋಡುತ್ತಿರುವಂತೆ ಚಿತ್ರಿಸಲಾಗಿದೆ. ಕಿರೀಟದ ಭಾಗವು ಕಪ್ಪು ಬಣ್ಣದಿಂದ ರಚಿತವಾಗಿದ್ದು, ಅಲ್ಲಿಯೂ ಕೂಡ ತೊಗಲನ್ನು ಸೂಕ್ಷ್ಮವಾಗಿ ಕತ್ತರಿಸಿ ಬೆಳಕು ಬರುವಂತೆ ಮಾಡಲಾಗಿದೆ. ಬದಿಯ ಚಿತ್ರವಾದರೂ ಎರಡೂ ಕಣ್ಣುಗಳನ್ನು ಚಿತ್ರಿಸಿದ್ದು,

ಎಡಭಾಗದ ಮೀಸೆಯನ್ನು ಮೇಲೆ ಮಾಡಿ ತಿರುವಿ ಬಲಭಾಗದ ಅರ್ಧ ಮೀಸೆಯನ್ನು ತೋರಿಸಲಾಗಿದೆ. ಗದ್ದಕ್ಕೆ ದಪ್ಪನೆಯ ಕಪ್ಪು ಪಟ್ಟಿಯನ್ನು ಗಡ್ಡದಾಕಾರದಲ್ಲಿ ಹಾಕಲಾಗಿದೆ. ಕೊರಳಲ್ಲಿ ಕೆಂಪು ಬಣ್ಣದ ಒಂದು ಪಟ್ಟಿ ಆಭರಣವನ್ನು ಅದರ ನಂತರ ಮುತ್ತುಗಳನ್ನು ಹೊಂದಿದ ಇನ್ನೊಂದು ಸರವನ್ನು ಹಾಕಲಾಗಿದೆ. ಅದಾದನಂತರ ನಕ್ಷಾ ಚಿತ್ರಗಳನ್ನು ಹೊಂದಿದ ಶೆಲ್ಯಯನ್ನು ಹೆಗಲ ಮೇಲೆ ಹಾಕಿ ಹಿಂಬದಿಯಿಂದ ಎರಡೂ ಕಡೆ ಕೆಳಗೆ ಬಿಡಲಾಗಿದೆ. ಹಳದಿ, ಕೆಂಪು ಬಣ್ಣದ ಚೌಕಡಿಗಳಿಂದ ನಕ್ಷೆಯನ್ನು ರಚಿಸಿ ಕಪ್ಪು ಬಣ್ಣದ ಹೊರರೇಖೆಗಳಿಂದ ಪೂರ್ಣಗೊಳಿಸಲಾಗಿದೆ. ಕೈಯಲ್ಲಿ ಮುತ್ತಿನ ಸರ, ಕೈಕಟ್ಟು, ತೋಳುಬಂಧಿ ಮೊದಲಾದವು ಇದ್ದು ಗಧೆಯ ಮೇಲ್ಭಾಗ ಸಂಪೂರ್ಣವಾಗಿ ಕಪ್ಪು ಬಣ್ಣದಿಂದ ಚಿತ್ರಿಸಿ ಹೊರರೇಖೆಗಳನ್ನು ತೋರಿಸಲು ಸೂಕ್ಷ್ಮವಾಗಿ ತೊಗಲಿಗೆ ರಂಧ್ರಗಳನ್ನು ಹಾಕಲಾಗಿದೆ. ನಡುಕಟ್ಟಿನಲ್ಲಿ ಹಗ್ಗದಾಕಾರದ ದಾರವನ್ನು ಕಟ್ಟಿ ಬಟ್ಟೆಯನ್ನು ಮಧ್ಯದಲ್ಲಿ ಜೋತು ಬಿಡಲಾಗಿದೆ. ಧೋತ್ರದಲ್ಲಿ ಕೆಂಪು ಮತ್ತು ಹಳದಿ ಪಟ್ಟಿಗಳಿಂದ ಸಡಿಲವಾದ ಬಟ್ಟೆಯನ್ನು ತೊಡಿಸಿದಂತೆ ಭಾಸವಾಗುತ್ತದೆ. ಇಲ್ಲಿಯೂ ಎಲ್ಲಾ ಕಡೆ ಅಂತ್ಯವನ್ನು ಹಾಗೂ ಅಂಚನ್ನು ತೋರಲು ತೊಗಲಿಗೆ ಸೂಕ್ಷ್ಮವಾದ ರಂಧ್ರಗಳನ್ನು ಹಾಕಲಾಗಿದೆ. ಆಕೃತಿ ಜೊತೆಗೆ ಇನ್ನೊಂದು ಮನುಷ್ಯಾಕೃತಿ ಅಥವಾ ಸೈನಿಕ ಇರುವಂತೆ ಕೀಚಕನಿಗಿಂತ ಚಿಕ್ಕದಾಗಿ ಕೈಯಲ್ಲಿ ಕೋಲಿನಾಕಾರದ ವಸ್ತುವನ್ನು ಹಿಡಿದು ನಿಂತಂತೆ ಚಿತ್ರಿಸಲಾಗಿದೆ.

### ೧೧. ಘಟೋದ್ಘಜ

ಭೀಮಪುತ್ರ ಘಟೋದ್ಘಜನ ಚಿತ್ರವನ್ನು ತುಂಬಾ ಆಕರ್ಷಕವಾಗಿ ಭೀಮನೇ ಎಂಬಂತೆ ಚಿತ್ರಿಸಲಾಗಿದೆ. ಮುಷ್ಟಿಯುದ್ಧದ ತಯಾರಿಯಲ್ಲಿರುವಂತೆ ಎಡಗೈಯನ್ನು ಮೇಲೆ ಮಾಡಿ ಉದ್ದವಾದ ಹೆಬ್ಬೆರಳಿನಿಂದ ಉಳಿದ ನಾಲ್ಕೂ ಬೆರಳುಗಳನ್ನು ಅದುಮಿ ಹಿಡಿದಂತೆ ಚಿತ್ರಿಸಲಾಗಿದೆ. ಇಲ್ಲಿಯೂ ಕೂಡ ಸರಪಳಿಯಾಕಾರದ ಕೈಕಟ್ಟನ್ನು ಮೇಲೆತ್ತಿದ ಕೈಗೆ ತಕ್ಕಂತೆ ಜೋತು ಬಿಡಲಾಗಿದೆ. ಕುಸ್ತಿ ಚಡ್ಡಿಯಂತಹ ಬಟ್ಟೆಯನ್ನು ತೊಡಿಸಿದ್ದು, ಇದು ಕೆಂಪು ಬಟ್ಟೆ ಹಾಗೂ ಗುಲಾಬಿ ಬಣ್ಣದ ಹೊರರೇಖೆಗಳಿಂದ ಚಿತ್ರಿಸಲಾಗಿದ್ದು, ನಡದಲ್ಲಿ ಚಿಕ್ಕ ಕತ್ತಿಯೊಂದನ್ನು ತುರುಕಲಾಗಿದೆ. ತಲೆಯ ಮೇಲೆ ಕಾಡು ಮನುಷ್ಯರಂತಹ ಟೋಪಿಯನ್ನು ಕಪ್ಪು ಮತ್ತು ಕೆಂಪು ಬಣ್ಣದಿಂದ ವಿನ್ಯಾಸಗೊಳಿಸಲಾಗಿದೆ. ಇಲ್ಲಿಯೂ ಕೂಡ ಹುಬ್ಬನ್ನೂ, ಕಣ್ಣನ್ನೂ, ಮೀಸೆಯನ್ನೂ ಎದುರುಮುಖದಲ್ಲಿರುವಂತೆ ಚಿತ್ರಿಸಿ ಮೂಗು ಮತ್ತು ತುಟಿಗಳನ್ನು ಬದಿಯ ಚಿತ್ರವನ್ನಾಗಿ ಚಿತ್ರಿಸಲಾಗಿದೆ. ಹಣೆಯ ಮೇಲಿನ ನಾಮವನ್ನು ಎರಡೂ ಹುಬ್ಬುಗಳ ಮಧ್ಯ ಇಟ್ಟಿರುವುದು ವಿಶೇಷ. ಮೈಕಟ್ಟನ್ನು ದಪ್ಪದಾಗಿ ತೋರಿಸಲು ಕೈಕಾಲುಗಳನ್ನು ತುಂಬಾ ದಪ್ಪದಾಗಿ ಚಿತ್ರಿಸಲಾಗಿದೆ. ಕೈಕಾಲುಗಳಿಗೂ ಸರಪಳಿಯಂತಹ ತೆಳು ಹಳದಿ ಬಣ್ಣದ ಸರವನ್ನು ಹಾಕಲಾಗಿದೆ. ಕಾಲಿನ ಬೆರಳುಗಳನ್ನು ಒಂದೇ ದಪ್ಪದಲ್ಲಿ ಚಿತ್ರಿಸಲಾಗಿದೆ. ಕಿವಿಯ ಮಗ್ಗಲದ ಕೂದಲಗಳನ್ನು ಸೂಕ್ಷ್ಮವಾಗಿ ನಕ್ಷೆಯಂತೆ ತಿರುವಲಾಗಿದೆ.

### ೧೨. ಕರ್ಣ

ಬದಿಯ ಮುಖವನ್ನು ಹೊಂದಿದ ಕರ್ಣನ ಚಿತ್ರದಲ್ಲಿ ಕಪ್ಪು ಕನ್ನಡಕದಂತಹ ಗುಡ್ಡೆಗಳನ್ನು ದೊಡ್ಡದಾಗಿ ಚಿತ್ರಿಸಲಾಗಿದೆ. ಕರ್ಣನ ವ್ಯಕ್ತಿತ್ವ ಎದ್ದು ಕಾಣುವಂತೆ ಎಲ್ಲರಂತೆ ಮೀಸೆ, ಚಿಕ್ಕದಾಗಿ ಗಡ್ಡ

ಇದ್ದರೂ ಹಣೆಯ ಮೇಲಿನ ನಾಮ ನಕ್ಷಾಪೂರ್ಣವಾಗಿದೆ. ಇಲ್ಲಿ ಕಿರೀಟದ ವಿನ್ಯಾಸ ಇತರೆ ಎಲ್ಲಾ ಚಿತ್ರಗಳಿಗಿಂತ ಭಿನ್ನವಾಗಿ ಕೆಂಪು ಮತ್ತು ಹಳದಿ, ತೆಳುನೀಲಿ ಬಣ್ಣದಲ್ಲಿ ಕಿರೀಟವನ್ನು ಬಹುಸುಂದರವಾಗಿ ಚಿತ್ರಿಸಲಾಗಿದೆ. ಕಿರೀಟದ ಹಿಂದಿನಿಂದ ಉದ್ದನೆಯ ಕೂದಲನ್ನು ಹೊರಹಾಕಿ ಸೂಕ್ಷ್ಮತೆಗಾಗಿ ಸಣ್ಣಸಣ್ಣ ಉದ್ದನೆಯ ರಂಧ್ರಗಳನ್ನು ಕೊರೆಯಲಾಗಿದೆ. ಕೊರಳಿನ ಆಭರಣ ಹಳದಿ ಮತ್ತು ಕೆಂಪು ಬಣ್ಣದ ಮುತ್ತುಗಳಿಂದ ಸೃಷ್ಟಿಗೊಂಡಂತಿದೆ. ಕಿವಿಯಲ್ಲಿ ಕರ್ಣಕುಂಡಲ, ಕಿವಿಯ ಮಗ್ಗಲಿನ ಕೂದಲುಗಳಲ್ಲಿ ನಕ್ಷಾವಿನ್ಯಾಸ ಮಾಡಲಾಗಿದೆ. ಹಲ್ಲುಗಳನ್ನು ತೋರಿಸಿ ನಗುತ್ತಾ ಸಂತೋಷ ದಿಂದಲೇ ದಾನ ಮಾಡುತ್ತಿರುವ ಚಿತ್ರ ಇದಾಗಿದೆ. ಬೀಸಣಿಕೆಯಾಕಾರದ ಕಪ್ಪು ಬಣ್ಣದ ನಕ್ಷಾ ವಿನ್ಯಾಸಗಳುಳ್ಳ ವಸ್ತ್ರದಲ್ಲಿ ವಸ್ತು ತನ್ನೆಲ್ಲ ಕೊಡುತ್ತಿರುವಂತೆ, ಎರಡೂ ಕೈಗಳಲ್ಲಿ ಹಿಡಿದು ದಾನ ಮಾಡುತ್ತಿರುವಂತೆ ಭಾಸವಾಗುತ್ತದೆ. ಕೈಗಳಲ್ಲಿ ಕೈಕಟ್ಟು ತೋಳುಬಂಧಿ, ಕುಸ್ತಿ ಚಡ್ಡಿಯಂತಹ ವೇಷವನ್ನು ತೊಡಿಸಿ ಅದರ ಅಂಚಿಗೆ ವಿಶಿಷ್ಟವಾದ ಕೆಂಪು, ಹಳದಿ ಮತ್ತು ತೆಳುನೀಲಿ ಬಣ್ಣಗಳಲ್ಲಿ ಸೂಕ್ಷ್ಮವಾದ ಜಾಮಿತಿಕ ನಕ್ಷಾಚಿತ್ರಗಳನ್ನು ರಚಿಸಲಾಗಿದೆ. ಕಾಲಲ್ಲಿ ಸರಪಳಿಯಂತಹ ಕಟ್ಟನ್ನು ಹಾಕಲಾಗಿದೆ. ಚಡ್ಡಿಯ ಕೆಳಗೆ ಗಂಟೆಯಾಕಾರದ ಗೊಂಡೆಗಳನ್ನು ಬಿಡಲಾಗಿದೆ. ಕಾಲುಕಟ್ಟು ವಿನ್ಯಾಸಗಳನ್ನು ಹೊಂದಿದ್ದು, ಅಲ್ಲಿಯೂ ಕೂಡ ರಂಧ್ರಗಳನ್ನು ಹಾಕಿ ಬೆಳಕಿನ ಚಂದಕ್ಕಾಗಿ ಸಿದ್ಧಗೊಳಿಸಲಾಗಿದೆ. ಇವನಿಗೂ ನಡುವಿನಲ್ಲಿ ವಿನ್ಯಾಸಪೂರ್ಣವಾದ ಕತ್ತಿಯನ್ನು ಇರಿಸಿದ್ದು, ಸಿರಿವಂತಿಕೆಯ ಸಂಕೇತಗಳಾದ ಬೆರಳಿಗೆ ಉಂಗುರ ಇತರ ಎಲ್ಲಾ ಕಡೆಗಳಲ್ಲಿ ಆಭರಣಗಳನ್ನು ಇತರರಿಗಿಂತ ಧಾರಾಳವಾಗಿ ಸೃಷ್ಟಿಸಿರುವುದು ಕರ್ಣನ ಚಿತ್ರದ ವಿಶೇಷತೆಯಾಗಿದೆ.

### ೧೩. ಸ್ತ್ರೀ ಪಾತ್ರಧಾರಿ ಭೀಮ

ತೆಳುನೀಲಿ ಬಣ್ಣದ ಮೈಬಣ್ಣವನ್ನು ಹೊಂದಿದ ಭೀಮ ದಪ್ಪನೆಯ ಕಾಯವನ್ನು ಹೊಂದಿದ್ದಾನೆ. ತಲೆಟೋಪಿನಂತಹ ಕೂದಲು ಉದ್ದಕ್ಕೆ ಜಡೆಯಾಕಾರದಲ್ಲಿ ಹಿಂದಕ್ಕೆ ಬಿಟ್ಟುಕೊಂಡು ಹಣೆಯ ಮೇಲೆ ದಾರದಿಂದ ಸೃಷ್ಟಿಸಿದ ನಕ್ಷಾವಿನ್ಯಾಸವನ್ನು ಕಟ್ಟಲಾಗಿದೆ. ಕಪ್ಪು ಕಣ್ಣುಗುಡ್ಡೆಯ ಸುತ್ತಲೂ ಕೆಂಪು ಬಣ್ಣವನ್ನು ಸೃಷ್ಟಿಸಿ ವೀರಾವೇಷದ ಸಂಕೇತವನ್ನು ತೋರಲಾಗಿದೆ. ಕೆಂಪು ಬಣ್ಣದ, ಹಳದಿ ಮತ್ತು ಕಪ್ಪು ಬಣ್ಣದ ಚೌಕಡಿಯನ್ನು ಹೊಂದಿದ ಸುಂದರವಾದ ಸೀರೆಯನ್ನು ಉಟ್ಟುಕೊಂಡ ಭೀಮನ ಚಿತ್ರ ಕೀಚಕವಧಾ ಸಂದರ್ಭ ಸಾರುತ್ತದೆ. ಕೈಯಲ್ಲಿ ಅಲಂಕೃತ ಕೈಕಟ್ಟುಗಳು, ತೋಳುಬಂಧಿಗಳು, ಸ್ತ್ರೀಯರು ಹಾಕುವಂತಹ ವಸ್ತುಗಳಾಗಿದ್ದು ಅವು ಕೂಡ ಕೆಂಪು ಮತ್ತು ಹಳದಿ ಬಣ್ಣವನ್ನು ಮಾತ್ರ ಹೊಂದಿವೆ. ಎಲ್ಲಾ ಸಂದರ್ಭಗಳಲ್ಲೂ ಅತೀ ಸೂಕ್ಷ್ಮವಾದ ಕಪ್ಪು ಬಣ್ಣದ ಹೊರರೇಖೆಯನ್ನು ಹಾಕಲಾಗಿದೆ. ಹೆಣ್ಣೆನ್ನುವ ಕಾರಣಕ್ಕಾಗಿ ಮೀಸೆಯ ಭಾಗವನ್ನು ಕಂಡೂಕಾಣದಂತೆ ಇರಿಸಲಾಗಿದೆ. ಇಲ್ಲಿಯೂ ಕೂಡ ಕಪ್ಪು ಬಣ್ಣದ ಖಡ್ಗವನ್ನು ನಡುವಿನಲ್ಲಿ ತುರಕಲಾಗಿದೆ. ಕೊರಳಲ್ಲಿ ಸರಪಳಿಯಾಕಾರದ ಹಳದಿ ಬಣ್ಣದ ಸರಗಳು, ಕೆಂಪು ಬಣ್ಣದ ಸರಗಳು ರಾರಾಜಿಸುತ್ತವೆ. ಸೀರೆಯ ಕೆಳಗೆ ಕೊನೆಯ ಅಂಚಿನಲ್ಲಿ ಮತ್ತೆ ತೆಳುನೀಲಿ ಮೈ ಬಣ್ಣದ ಕಾಲುಗಳನ್ನು ತೋರಲಾಗಿದೆ. ಅಲ್ಲಲ್ಲಿ ರಂಧ್ರಗಳನ್ನು ಹಾಕಿ ಬೆಳಕಿನ ಕಿರಣಗಳು ಪಸರಿಸುವಂತೆ ಸ್ತ್ರೀ ಪಾತ್ರಧಾರಿ ಭೀಮನನ್ನು ಚಿತ್ರಿಸಲಾಗಿದೆ.

## ೧೪. ಬನ್ನಿಮಹಾಂಕಾಳಿ

ದಕ್ಷಿಣ ಕನ್ನಡ ಜಿಲ್ಲೆಯ ಕೋಲದ ಪೂಜಾಕುಣಿತದ ಚಿತ್ರವನ್ನು ಹೋಲುವ ಬನ್ನಿಮಹಾಂಕಾಳಿ ಅಥವಾ ಆದಿಶಕ್ತಿಯ ಚಿತ್ರವು ಕೆಂಪು, ಬಿಳಿ ಮತ್ತು ಕಪ್ಪು ಬಣ್ಣಗಳಿಂದ ಮಾತ್ರ ಚಿತ್ರಿಸಲಾಗಿದ್ದು, ದೇವತೆಗೆ ಆಭರಣ ವಿಶಿಷ್ಟವಾದ ಹೂ ಮತ್ತು ಪಟ್ಟಿಗಳಿರುವ ಆಭರಣವನ್ನು ಹಾಕಲಾಗಿದೆ. ದೇವರ ಕಣ್ಣುಗಳನ್ನು ಅಗಲವಾಗಿ ಚಿತ್ರಿಸಿ, ಕಪ್ಪು ಬಣ್ಣದ ಗುಡ್ಡೆಯನ್ನು ಮಧ್ಯದಲ್ಲಿಟ್ಟು ಕೋರೆ ಹಲ್ಲುಗಳನ್ನು ಸೃಷ್ಟಿಸಿ, ಭಯಾನಕ ದೃಶ್ಯ ಸೃಷ್ಟಿಸಲಾಗಿದೆ. ಗುಡಿಯ ಒಳಭಾಗದಲ್ಲಿ ದೇವಿಯ ಮೂರ್ತಿ ಇರುವಂತೆ ರಚಿಸಿ ಎರಡೂ ಕಡೆ ಕಂಬಗಳು ನಕ್ಷಾಪೂರ್ಣ ಮೇಲ್ಛಾವಣಿ ಅದರ ಮೇಲೆ ಕಳಶ ಆಚೆಈಚೆ ಅರ್ಧವರ್ತುಲಾಕಾರದ ವಸ್ತುಗಳು ಅದರ ಮೇಲೆ ಚಿಕ್ಕ ಚಿಕ್ಕ ವಿನ್ಯಾಸಗಳು, ಹೂ, ವರ್ತುಲ ಬಿಳಿಯಪಟ್ಟಿ ಮುಂತಾದ ವಸ್ತುಗಳಿಂದ ವಿನ್ಯಾಸ ರಚಿಸಲಾಗಿದೆ. ದೇವಿಯ ತಲೆಯ ಮೇಲೆ ಎತ್ತರವಾದ ಕಿರೀಟವಿದ್ದು ಅಲ್ಲಿಯೂ ಕೂಡ ಕೊನೆಯಲ್ಲಿ ಕಳಶದಂತಹ ಚೂಪನೆಯ ವಿನ್ಯಾಸ ಮಾಡಲಾಗಿದೆ. ಕಿವಿಯ ಎರಡೂ ಪಕ್ಕಗಳಲ್ಲಿ ಯಕ್ಷಗಾನ ಮಾದರಿಯಲ್ಲಿ ದೊಡ್ಡದಾಗಿ ಹೂವು, ಆಭರಣ ವಿನ್ಯಾಸ ರಚಿಸಿ ಕಿವಿಗಳು ಕಾಣದಂತೆ ಚಿತ್ರಿಸಲಾಗಿದೆ. ನಾಲ್ಕೂ ಕೈಗಳಿದ್ದು, ಬಲ ಮೇಲ್ಕೈಯಲ್ಲಿ ಢಮರುಗ, ಎಡ ಮೇಲ್ಕೈಯಲ್ಲಿ ಕಪಾಲ, ಕೆಳ ಬಲಗೈಯಲ್ಲಿ ಚಿಕ್ಕದಾದ ಖಡ್ಗ ಮತ್ತು ಎಡ ಕೆಳಗೈಯಲ್ಲಿ ಉದ್ದನೆಯ ಭರ್ಚಿಯಂತಹ ಕೋಲು ಚಿತ್ರಿಸಲಾಗಿದೆ. ದೇವಿಗೆ ಕೆಂಪು ಬಣ್ಣದ ಸೀರೆಯನ್ನುಡಿಸಿ ಎರಡೂ ಕಡೆ ಸೆರಗನ್ನು ವಿನ್ಯಾಸಪೂರಕವಾಗಿ ಜೋತುಬಿಡಲಾಗಿದೆ. ಕೇವಲ ಕೆಲವೇ ಬಣ್ಣಗಳಲ್ಲಿ ಮಾಡಿದ ಅದ್ಭುತ ಸಂಯೋಜನೆ ಚಿತ್ರ ಇದಾಗಿದೆ. ಕಾಲುಗಳ ಆಕಾರವನ್ನು ಬದಿಗೆ ಮುಖಮಾಡಿರುವಂತೆ ಚಿತ್ರಿಸಿ ಮುಖಕ್ಕೂ, ಕಾಲಿಗೂ ಸಂಬಂಧವಿಲ್ಲದಂತೆ ರಚಿಸಲಾಗಿದೆ. ಅಲ್ಲಲ್ಲಿ ಜೋತುಬಿಟ್ಟ ಹೂಗಳು, ನಕ್ಷೆಗಳು, ಪಟ್ಟಿ ಪಟ್ಟಿ ವಿನ್ಯಾಸಗಳು ದೇವಸ್ಥಾನ, ದೇವಿ ಪರಿಕಲ್ಪನೆಯನ್ನು ನೀಡುವಲ್ಲಿ ಕಲಾವಿದ ಯಶಸ್ವಿಯಾಗಿದ್ದಾನೆ. ಬನ್ನಿಮಹಾಂಕಾಳಿ ಚಿತ್ರವು ಪಾಂಡವರ ವನವಾಸ ನಂತರ ಅಲ್ಲಿ ಬಚ್ಚಿಟ್ಟಿದ್ದ ಆಯುಧಗಳನ್ನು ಪಡೆಯುವ ಕಥಾ ಸಂದರ್ಭವನ್ನು ಸೂಚಿಸಲು ಈ ದೇವಿಯ ಚಿತ್ರವನ್ನು ಬಳಸಿಕೊಳ್ಳಲಾಗುತ್ತದೆ.

## ೧೫. ದ್ರೋಣಾಚಾರ್ಯ

ಸಾಮಾನ್ಯವಾಗಿ ಮಹಾಭಾರತದ ಸಂದರ್ಭದ ಚಿತ್ರಗಳಲ್ಲೆಲ್ಲಾ ದ್ರೋಣಾಚಾರ್ಯರ ಚಿತ್ರವು ತುಂಬಾ ವಿಶಿಷ್ಟ ಎಂಬಂತೆ ಉದ್ದನೆಯ ಬಿಳಿಗಡ್ಡ ಮತ್ತು ಉದ್ದನೆಯ ಕೂದಲುಗಳನ್ನು ಹೊಂದಿದೆ. ಇಲ್ಲಿಯ ದ್ರೋಣನ ಚಿತ್ರವೇ ಬೇರೆ. ಇಲ್ಲಿಯೂ ಕೂಡ ಎಲ್ಲಾ ಚಿತ್ರಗಳಂತೆ ಬದಿ ನೋಟದ ಮುಖವಿದ್ದರೂ, ಎರಡು ಕಣ್ಣುಗಳನ್ನು ತೋರಿಸಿ, ಹುಬ್ಬು ಮತ್ತು ಮೀಸೆಗಳ ಎರಡೂ ಬದಿಯನ್ನು ತೋರಿಸಿ, ಕಿವಿಬದಿಯ ಅಲಂಕೃತ ಕೂದಲುಗಳಿವೆ. ಕರಿಯ ಪಟ್ಟಿಯಾಕಾರದ ಗಡ್ಡ, ತಲೆಯ ಮೇಲೆ ವಿನ್ಯಾಸಪೂರ್ಣ ನೆರಳಿಗಾಗಿ ರಚಿಸಿದ ಛತ್ರಿಯಾಕಾರದ ವಸ್ತು ಹಿರಿತನವನ್ನು ಸೂಚಿಸುವಂತಿದೆ. ದ್ರೋಣನಿಗೂ ಕಿರೀಟವನ್ನು ಹಾಕಿ ಎಡಗೈಯಲ್ಲಿ ಖಡ್ಗ, ಬಲಗೈಯಲ್ಲಿ ಚಿಕ್ಕ ಕತ್ತಿಯಾಕಾರದ ವಸ್ತು. ನಡುವಿನಲ್ಲಿ ಡಾಲು, ಕೆಂಪು ಬಣ್ಣದ ವಸ್ತ್ರ, ಧೋತ್ರದಲ್ಲಿ ಪಟ್ಟಿಪಟ್ಟಿಯಾಕಾರದ ಗೆರೆಗಳು, ಕಾಲಲ್ಲಿ ಚಪ್ಪಲಿಯ ಬದಲು ಬೂಟಿನಂತಹ

ವಸ್ತುವನ್ನು ಹಾಕಿದ್ದು ಈ ಚಿತ್ರದ ವಿಶೇಷ. ನಡುವಿನಲ್ಲಿ ಕಪ್ಪು ಮತ್ತು ಕೆಂಪು ಬಣ್ಣದ ಹಗ್ಗದಾಕಾರದ ನಡುಕಟ್ಟನ್ನು ಚಿತ್ರಿಸಿದ್ದು, ಇಲ್ಲಿಯೂ ಹಿಂದೆ ಚಿಕ್ಕ ಮನುಷ್ಯಾಕೃತಿಯೊಂದು ಸೇವಕನಂತೆ ಬೆನ್ನಹಿಂದೆ ಇರುವುದು ವಿಶೇಷವಾಗಿದೆ. ಕೈಕಟ್ಟು ತುಂಬಾ ದೊಡ್ಡದಾಗಿ ವಿನ್ಯಾಸವನ್ನು ಹೊಂದಿದೆ. ಜೋತುಬಿಟ್ಟ ಬಟ್ಟೆಗಳಲ್ಲಿ ತಿಳುನೀಲಿಬಣ್ಣದ ವಿನ್ಯಾಸವಿದ್ದು, ಅಂಚುಗಳಲ್ಲಿ ಎಲ್ಲಾ ಚಿತ್ರಗಳಂತೆ ಇಲ್ಲಿಯೂ ರಂಧ್ರಗಳನ್ನು ಕೊರೆಯಲಾಗಿದೆ.

**೧೬. ಸುಭದ್ರೆ**

ಮಧ್ಯಮ ಪಾಂಡವ ಅರ್ಜುನನ ಹೆಂಡತಿ ಸುಭದ್ರೆಯ ಈ ತೊಗಲುಗೊಂಬೆಯು ಉಳಿದವುಗಳಿಗಿಂತ ಸುಂದರವಾದ ವಿನ್ಯಾಸವನ್ನು ಹೊಂದಿದ ಚಿತ್ರವಾಗಿದೆ. ಅದ್ಭುತವಾದ ಸಂಯೋಜನೆಯನ್ನು ಹೊಂದಿದ್ದು, ಸೇವಕಿ ಮತ್ತು ದ್ವಾರಪಾಲಕರು ಇಲ್ಲಿರುವುದು ಮತ್ತೊಂದು ವಿಶೇಷ. ಬದಿಯ ಮುಖವಾದರೂ ಸುಂದರವಾದ ಹುಬ್ಬುಗಳನ್ನು, ಹಣೆಯ ಮೇಲೆ ಉದ್ದವಾದ ಕುಂಕುಮ, ತಲೆಗೆ ವಿನ್ಯಾಸಪೂರ್ಣ ಪಟ್ಟಿಯಾಕಾರದ ಕಿರೀಟ ಮುತ್ತುಗಳಿಂದ ಶೃಂಗರಿಸಿದಂತೆ ವಿನ್ಯಾಸಗೊಂಡಿದೆ. ಕಿರೀಟದ ಹಿಂದೆ ಕೂದಲು ಕಪ್ಪಾಗಿದ್ದು, ಅದರ ನಂತರ ಮತ್ತೊಂದು ಮುತ್ತಿನ ಸರ ವಿನ್ಯಾಸಗೊಳಿಸಿ ತದನಂತರ ಜಡೆಯನ್ನು ತಿರುವಿ ಕಟ್ಟಿದಂತೆ, ಗಂಟುಹಾಕಿ ಇಟ್ಟಂತೆ ಮತ್ತೆ ಒಂದು ಕಟ್ಟನ್ನು ಹಾಕಿ ಕೊನೆಯ ಕೂದಲನ್ನು ಉದ್ದಕ್ಕೆ ಬಿಡಲಾಗಿದೆ. ಕೂದಲುಗಳ ಸೂಕ್ಷ್ಮತೆ ಅರ್ಥವಾಗಲು ಅಲ್ಲಲ್ಲಿ ಗೀರುಗೀರಾಗಿ ತೊಗಲಿಗೆ ರಂಧ್ರವನ್ನು ಹಾಕಿ ವಿನ್ಯಾಸಗೊಳಿಸಲಾಗಿದೆ. ತಲೆಯ ಮೇಲ್ಭಾಗದಲ್ಲಿ ಕೆಂಪು ಬಣ್ಣದ ಸುತ್ತಲೂ ವಿನ್ಯಾಸದ ನೀರಿನ ಹನಿಯಾಕಾರದ ಸತ್ತಿಗೆಯೊಂದಿದ್ದು, ಅದು ಸೇವಕಿಯ ಕೈಗಳಲ್ಲಿ ಅದರ ಕೆಳಕೋಲು ಇರುವುದು ವಿಶೇಷವಾಗಿದೆ.

ಕೊರಳಲ್ಲಿ ಕೊರಳ ಆಭರಣ ಇದ್ದು, ಕೊನೆಯಲ್ಲಿ ಮುತ್ತುಗಳಿಂದ ವಿನ್ಯಾಸಗೊಂಡಂತಿದೆ. ಅದಾದ ನಂತರ ಸರಪಳಿಯಂತಹ ಸರಕ್ಕೆ ಕೆಂಪುಬಣ್ಣದ ಸುಂದರವಾದ ಪದಕವೊಂದನ್ನು ರಚಿಸಲಾಗಿದೆ. ರವಿಕೆಯನ್ನು ಹಳದಿ ವರ್ಣದಲ್ಲಿ ರಚಿಸಿ, ಉದ್ದ ತೋಳಿನ ರವಿಕೆಗೆ ಕಪ್ಪು ಬಣ್ಣದ ಚಿಕ್ಕ ಚಿಕ್ಕ ಹೂಗಳ ಅಲಂಕೃತ ನಕ್ಷಾ ಚಿತ್ರವನ್ನು ವಿನ್ಯಾಸ ಮಾಡಲಾಗಿದೆ. ಕೊನೆಯ ಅಂಚು ನಕ್ಷೆಯಲ್ಲಿ ರಂಧ್ರಗಳನ್ನು ಕೊರೆಯಲಾಗಿದೆ. ಎಡಗೈಯಲ್ಲಿ ಮೊಗ್ಗಿನಾಕಾರದ ವಸ್ತುವೊಂದನ್ನು ಹಿಡಿದು, ಬಲಗೈ ಮೇಲೆ ಗಿಳಿಯೊಂದು ಕುಳಿತಿರುವಂತೆ ಚಿತ್ರಿಸಲಾಗಿದೆ. ಉಳಿದ ಕೆಳಭಾಗದಲ್ಲಿ ಪೂರ್ಣ ಕೆಂಪುಬಣ್ಣದ ಸೀರೆ ಇದ್ದು, ಹಳದಿ ಬಣ್ಣದ ಎರಡೂ ಪಟ್ಟಿಗಳುಳ್ಳ ದಡಿಯನ್ನು ವಕ್ರಾಕಾರದಲ್ಲಿ ಚಿತ್ರಿಸಿ ಸೀರೆಯ ಅಂದವನ್ನು ಹೆಚ್ಚಿಸಲಾಗಿದೆ. ಪಾದಗಳಲ್ಲಿ ಕಾಲ್ಗೆಜ್ಜೆಯನ್ನು ಊರ್ಧ್ವಮುಖವಾಗಿ ರಚಿಸಿ, ಸರಪಳಿಗಳಂತಹ ಚೈನುಗಳನ್ನು ಪಾದಕ್ಕೆ ತುಂಬಿಕೊಂಡು ಬಿಡಲಾಗಿದೆ.

ಇಬ್ಬರು ದ್ವಾರಪಾಲಕರು ಎಡಗೈಗಳಲ್ಲಿ ಗಧೆಯಾಕಾರದ ಆಯುಧವನ್ನು ಹಿಡಿದಿದ್ದಾರೆ. ಬದಿಯ ನೋಟದ ಮುಖಗಳಿದ್ದು, ಇವರಿಗೆ ಮಾತ್ರ ಒಂದೊಂದೇ ಕಣ್ಣುಗಳನ್ನು ಚಿತ್ರಿಸಿದ್ದು ವಿಶೇಷತೆ. ಒಬ್ಬನಿಗೆ ತಿಳುಹಳದಿ ಬಣ್ಣದ ನಿಲುವಂಗಿ, ಇನ್ನೊಬ್ಬನಿಗೆ ಕಡುಗೆಂಪುಬಣ್ಣದ ನಿಲುವಂಗಿ ತೊಡಿಸಿ ಸೈನಿಕರಿಗಿರುವಂತೆ

ಇಬ್ಬರಿಗೂ ಕೆಂಪು ಬಣ್ಣದ ಟೋಪಿಯಾಕಾರದ ಕಿರೀಟಗಳನ್ನು ಹಾಕಲಾಗಿದೆ. ಸೈನಿಕರಿಗೂ ಕೂಡ ಬೂಟಿನಂತಹ ಚಪ್ಪಲಿಗಳನ್ನು ತೊಡಿಸಲಾಗಿದೆ. ಇನ್ನು ಸೇವಕಿ ತೆಳುಹಳದಿ ಬಣ್ಣದ ಸೀರೆಯನ್ನು ಉಟ್ಟುಕೊಂಡು ಗಡುಗೆಂಪು ಬಣ್ಣದ ರವಿಕೆಯನ್ನು ತೊಟ್ಟಿದ್ದಾಳೆ. ಮುಖದಲ್ಲಿ ಒಂದೇ ಕಣ್ಣು ಇರುವಂತೆ ಚಿತ್ರಿಸಲಾಗಿದೆ. ಈಕೆಗೂ ಕೂಡ ಬೂಟಿನಾಕಾರದ ಚಪ್ಪಲಿಯನ್ನು ತೊಡಿಸಲಾಗಿದೆ.

### ೧೭. ಸೈರೆಂಧ್ರಿ

ಇದು ಅಜ್ಞಾತವಾಸದಲ್ಲಿ ವಿರಾಟನ ಅರಮನೆಯಲ್ಲಿ ಗಂಧ ತೇಯುವ ಸೇವೆ ಮಾಡುತ್ತಿದ್ದ ದ್ರೌಪದಿ ಚಿತ್ರ. ಚಿತ್ರವು ಬದಿಮುಖ ಆಕಾರದಲ್ಲಿದ್ದು, ತಲೆಯ ಮೇಲಿನ ಜಡೆಯು ದೊಡ್ಡ ದೊಡ್ಡ ಮುತ್ತುಗಳಿಂದ ಅಲಂಕೃತಗೊಂಡಂತೆ ಚಿತ್ರಿತವಾಗಿದೆ. ಇತರ ಹೆಂಗಳೆಯರ ತೊಗಲುಗೊಂಬೆಯ ಚಿತ್ರದಲ್ಲಿನ ಜಡೆಗಿಂತ ಇದು ಭಿನ್ನವಾಗಿದೆ. ತುಂಬಾ ನೀಳವಾಗಿ ರಟ್ಟೆಯ ಮೇಲೆ ಬಿದ್ದಿರುವ ಜಡೆಯ ಹೆಣೆದ ಆಕಾರವನ್ನು ತೋರಿಸಲು ಅಲ್ಲಲ್ಲಿ ತೊಗಲನ್ನು ಕತ್ತರಿಸಿ ರಂಧ್ರ ಮಾಡಿ ಬೆಳಕು ಬರುವಂತೆ ಮಾಡಲಾಗಿದೆ. ಒಂದೇ ಕಣ್ಣು ಇರುವುದು ಇಲ್ಲಿನ ವಿಶೇಷ. ಕೊರಳಲ್ಲಿ ನಾಣ್ಯದ ಆಕಾರದಲ್ಲಿ ನೆಕ್ಲೆಸ್ ಇದ್ದು, ಹಳದಿ ಬಣ್ಣದಲ್ಲಿ ರಚಿಸಲಾಗಿದೆ. ಇದೊಂದು ಸೇವಕಿ ಅಥವಾ ಸಹಚಾರಿಣಿ ಚಿತ್ರವಾಗಿರುವುದರಿಂದ ಒಂದೇ ಕಣ್ಣು ತೋರಿಸಿರುವುದು ಸಾಕ್ಷಿಯಾಗಿದೆ. ಬಲಗೈಯಲ್ಲಿ ಸರವೊಂದನ್ನು ಹಿಡಿದು, ಎಡಗೈಯಲ್ಲಿ ದೀರ್ಘವರ್ತುಲಾಕಾರದ ವಸ್ತುವನ್ನು ಹಿಡಿದು ಮೇಲ್ನೋಟ ಬೀರಿದಂತಿದೆ. ಕೆಂಪು ಸೀರೆಯನ್ನುಟ್ಟ ಈ ಚಿತ್ರ ಅಲ್ಲಲ್ಲಿ ಹಳದಿ ಮತ್ತು ಕಪ್ಪು ಬಣ್ಣಗಳ ರೇಖಾವಿನ್ಯಾಸದಲ್ಲಿ ನಕ್ಷೆಗಳನ್ನು ಒಳಗೊಂಡಿದೆ. ನಡುಕಟ್ಟು ಕೈ ಮತ್ತು ಕಾಲುಗಳಿಗೆ ಚೈನು, ಹಳದಿ ಬಣ್ಣದ ರವಿಕೆ, ತೋಳುಬಂಧಿ, ಬಲಗೈ ಕೆಳಗೆ ಹಿಂದಿನಿಂದ ಹಾರಿಬಂದ ಸೆರಗು, ಅಂಚಿನ ವಿನ್ಯಾಸ ಮೊದಲಾದ ಅಂಶಗಳಿಂದ ಚಿತ್ರವು ಸುಂದರವಾಗಿ, ಆಕರ್ಷಕವಾಗಿ ಸಂಯೋಜಿತ ವಾಗಿರುವುದು ಅರ್ಥಪೂರ್ಣವಾಗಿದೆ.

### ೧೮. ದೃತರಾಷ್ಟ್ರ

ಕಪ್ಪು ಕುದುರೆಯ ಮೇಲೆ ಕುಳಿತು ಹೊರಟ ದೃತರಾಷ್ಟ್ರನು ಕೈಯಲ್ಲಿ ಭರ್ಚಿಯನ್ನು ಹಿಡಿದು ಹಿಂದೆ ಶೋಭಿಸುವ ಧ್ವಜದೊಂದಿಗೆ ಹೋಗುತ್ತಿರುವ ಚಿತ್ರ ಇದಾಗಿದೆ. ದೊಡ್ಡ ಮನುಷ್ಯನಾದರೂ ಇಲ್ಲಿ ಬದಿಯ ಚಿತ್ರಕ್ಕೆ ಒಂದೇ ಕಣ್ಣನ್ನು ಬರೆದಿರುವುದು ವಿಶೇಷ. ಕೋರೆ ಮೀಸೆ, ಗಡ್ಡ, ಕಿವಿಯಲ್ಲಿ ಓಲೆ, ಉದ್ದವಾದ ಬಾಗಿದ ಕಿರೀಟ ಮುತ್ತುಗಳಿಂದ ವಿನ್ಯಾಸವಾಕೊಂಡಿದೆ. ಕೆಂಪು ಬಣ್ಣದ ನಿಲುವಂಗಿ ಅದಕ್ಕೆ ಪಟ್ಟಿ ಪಟ್ಟಿ ವಿನ್ಯಾಸವಿದೆ. ಕೈಯಲ್ಲಿ ಹಿಡಿದ ಭರ್ಚಿಗೆ ತೆಳುಕೆಂಪು ಬಣ್ಣವನ್ನು ಲೇಪಿಸಿ ಅಲ್ಲಲ್ಲಿ ಕಬ್ಬಿನ ಮಾದರಿಯಲ್ಲಿ ಅಡ್ಡಅಡ್ಡ ರೇಖೆಗಳನ್ನು ಎಳೆಯಲಾಗಿದೆ. ಕುದುರೆಯ ಮೇಲಿನ ಬಟ್ಟೆ ಬಾಲಕ್ಕೆ ಕಟ್ಟಿರುವ ರೀತಿ ಎಲ್ಲವೂ ಕಡಿಮೆ ಬಣ್ಣಗಳ ಸುಂದರ ವಿನ್ಯಾಸವಾಗಿದೆ. ಬಲಗೈಯಲ್ಲಿ ಕಪ್ಪು ಬಣ್ಣದ ಡಾಲು ಹಿಡಿದು ಹೊರಟಂತಿದೆ. ನಡುವಿಗೆ ಕಮಲದಂತಹ ವಸ್ತುವನ್ನು ಬೋರಲಾಗಿ ಹಾಕಿಕೊಳ್ಳಲಾಗಿದೆ. ಕುದುರೆಯ ಮಗಾಡ ಮುಖದಿಂದ ಕೆಳಗೆ ಜೋತುಬಿದ್ದ ಬಟ್ಟೆಗಳು ಕೆಂಪು ಮತ್ತು ಹಳದಿ ವಿನ್ಯಾಸಗಳನ್ನು ಹೊಂದಿದೆ. ಕುದುರೆಯ ಕೆಳಗೆ ಕಾಲಲ್ಲಿ ನಾಯಿಯೊಂದನ್ನು ರಚಿಸಲಾಗಿದೆ. ಮೇಲಕ್ಕೆತ್ತಿದ ಬಾಲ ಒಂದು ಕಣ್ಣು ಕೆಂಪು ಬಣ್ಣದ ನಾಯಿಗೆ

ಮುಖಕ್ಕೆ ತುದಿಯಲ್ಲಿ ಹಳದಿ ಬಣ್ಣವನ್ನು ಹಾಕಲಾಗಿದೆ. ಎಲ್ಲಾ ಕಡೆಗೂ ಚುಂಗಗಳ ಕೊನೆಯಲ್ಲಿ ಗಂಟೆಯಾಕಾರದ ಗೊಂಡೆಯನ್ನು ಜೋತುಬಿಡಲಾಗಿದೆ. ನಾಯಿಯ ಹಿಂದೆ ಕೆಂಪು ಧ್ವಜವಿದ್ದು, ಧೃತರಾಷ್ಟ್ರನ ಬೆನ್ನಹಿಂದಿನ ಧ್ವಜಕ್ಕೆ ಸಮಾಂತರವಾಗಿ ಸಂಯೋಜಿತವಾಗಿದೆ. ಒಟ್ಟು ಚಿತ್ರವು ಕುದುರೆಯ ಕಪ್ಪು ವಿನ್ಯಾಸದ ಕೆಂಪು ಮತ್ತು ಹಳದಿ ವರ್ಣಗಳ ತುಂಬಾ ಆಕರ್ಷಕವಾಗಿದೆ. ಕುದುರೆಯ ಬಾಲ ಹೆಂಗಸರ ಜಡೆಯಂತಿದ್ದು, ಇಲ್ಲಿಯೂ ತೊಗಲಿಗೆ ರಂಧ್ರಗಳನ್ನು ಹಾಕಿ ಬೆಳಕು ಹಾಯ್ದು ಹೋಗುವಂತೆ ರಚಿಸಲಾಗಿದೆ. ಒಟ್ಟು ಚಿತ್ರವು ಕೆಲವೇ ಬಣ್ಣಗಳಲ್ಲಿ ಅಚ್ಚುಕಟ್ಟಾಗಿ ಸಂಯೋಜಿತವಾಗಿದೆ.

### ೧೯. ಅರ್ಜುನ

ಮೂರು ಲೋಕದ ಗಂಡ ಎನಿಸಿಕೊಂಡ ಅರ್ಜುನನ ಚಿತ್ರ ವಿಭಿನ್ನ ವಿನ್ಯಾಸವನ್ನು ಹೊಂದಿದೆ. ಅರ್ಜುನ ಎಂದಾಕ್ಷಣ ಬಿಲ್ಲು, ಬಾಣಗಳೇ ಮುಖ್ಯವಾಗಿದ್ದರೂ ಇಲ್ಲಿ ಎಡಗೈಯಲ್ಲಿ ಖಡ್ಗವೊಂದನ್ನು ಹಿಡಿದುಕೊಂಡಿದ್ದಾನೆ. ಬಲಗೈಯಲ್ಲಿ ಹಿಡಿದ ಕಪ್ಪು ಬಣ್ಣದ ಬಾಣವು ಅಲ್ಲಲ್ಲಿ ಹೂಗಳ ನಕ್ಷೆಯೊಂದಿಗೆ ವಿನ್ಯಾಸಗೊಂಡಿದೆ. ಕೆಲವು ಬಾಣಗಳೂ ಬಲಗೈಯಲ್ಲಿದ್ದು, ಕೆಂಪು ಬಣ್ಣದ ಅಂಗಿಯನ್ನು ತೊಡಿಸಲಾಗಿದೆ. ಅರ್ಜುನನ ಮುಖವೂ ಬದಿಯ ನೋಟದ್ದಾಗಿದ್ದು, ಎರಡೂ ಕಣ್ಣುಗಳನ್ನು, ಹುಬ್ಬುಗಳನ್ನು ಮೊನಚಾಗಿ ರಚಿಸಲಾಗಿದೆ. ಕೋರೆ ಮೀಸೆ, ಕಿವಿಯ ಬದಿಯ ಕೂದಲಗಳು ನಕ್ಷಾ ವಿನ್ಯಾಸ ಹೊಂದಿದೆ. ವಜ್ರದಾಕಾರದಂತೆ ಕಿರೀಟದಲ್ಲಿ ಬೆಳಕು ಪಸರಿಸಲು ಅಲ್ಲಲ್ಲಿ ರಂಧ್ರಗಳನ್ನು ತೆಗೆಯಲಾಗಿದೆ. ತಲೆಯ ಹಿಂದೆ ಕೂದಲುಗಳನ್ನು ಜಡೆಯಾಕಾರದಲ್ಲಿ ಜೋತುಬಿಟ್ಟು ಅಲ್ಲಿಯೂ ತೊಗಲನ್ನು ಸೂಕ್ಷ್ಮವಾಗಿ ಕತ್ತರಿಸಲಾಗಿದೆ. ಜಡೆಯ ಮೇಲೆ ಸತ್ತಿಗೆಯಂತಹ ಕೆಂಪು ಬಣ್ಣದ ವಸ್ತುವಿದ್ದು, ಅದರ ಹಿಡಿಕೆ ಕಾಲವರೆಗೂ ಬಂದಿದೆ. ಅಲ್ಲಲ್ಲಿ ಬಿಳಿಯ ಬಣ್ಣದ ವಜ್ರದ ಸರಗಳಂತಹ ಆಭರಣಗಳು ಇಡೀ ಅರ್ಜುನನ ಮುಖ ಮತ್ತು ಮೈಯನ್ನು ಅಲಂಕೃತಗೊಳಿಸಿವೆ. ಖಡ್ಗವು ದಪ್ಪಗಿದ್ದು ಎಲ್ಲಿಯೂ ಮುಕ್ಕಾಗದಿರುವುದು ವಿಶೇಷ. ಧೋತ್ರದ ಸ್ಥಳದಲ್ಲಿ ಕೆಂಪು ಮತ್ತು ಕರಿಯ ಪಟ್ಟೆ ಪಟ್ಟೆ ಬಟ್ಟೆಯನ್ನು ರಚಿಸಿ ಅಂಚಿನಲ್ಲಿ ತೊಗಲನ್ನು ಕತ್ತರಿಸಿ ನಕ್ಷೆಗಳನ್ನು ರಚಿಸಲಾಗಿದೆ. ಬಲಗೈ ಮೇಲೆ ಮುತ್ತಿನ ಹಾರದಂತಹ ಶೆಲ್ಯಯ ತೆರಹ ಕೈಯಿಂದ ಕೆಳಗೆ ಜೋತು ಬಿಡಲಾಗಿದೆ. ಕಾಲ ಕೆಳಗೆ ನಿಂತ ಸ್ಥಳದ ನಕ್ಷಾ ಚಿತ್ರಗಳನ್ನು ಕೆಂಪು ಮತ್ತು ಹಳದಿ ವರ್ಣಗಳಿಂದ ರಚಿಸಲಾಗಿದೆ. ಒಟ್ಟಿನಲ್ಲಿ ಅರ್ಜುನನ ಬಾಣವು ಗಡದು ವರ್ಣದಲ್ಲಿದ್ದು ತಕ್ಷಣ ಅರ್ಜುನನೆಂಬ ಪರಿಕಲ್ಪನೆ ಬರುವಂತೆ ಪ್ರತಿಬಿಂಬಿಸಲಾಗಿದೆ. ಕಾಲುಗಳಿಗೆ ಅತಿಯಾದ ನಕ್ಷೆಯುಳ್ಳ ದಪ್ಪನೆಯ ಕಡಗಗಳನ್ನು ಹಾಕಲಾಗಿದ್ದು, ಪಾದಗಳ ಚಿತ್ರ ಸ್ಪಷ್ಟವಾಗಿಲ್ಲ. ಒಟ್ಟಿನಲ್ಲಿ ಅರ್ಜುನನ ಚಿತ್ರ ಸಮರ್ಪಕವಾದ ಸಂಯೋಜನೆ ಹೊಂದಿದೆ.

### ೨೦. ಸರ್ಪ ಉಟ್ಟ ದ್ರೌಪದಿ

ಚಿತ್ರದ ಬಹುವಿಶಿಷ್ಟ ಅಂಶವೆಂದರೆ ಸ್ತ್ರೀ ಆಕೃತಿ ಇರುವ ದ್ರೌಪದಿಯನ್ನು ಹಾವೊಂದು ಸುತ್ತುವರಿದಿದ್ದು, ಹಾವಿನ ಮೈವಳಿಕೆ, ಬೃಹದಾಕಾರದ ನಿಲುವು ಐದು ಹೆಡೆಗಳನ್ನು ತಲೆಯ ಮೇಲೆ ಒಂದರಮೇಲೊಂದರಂತೆ ಚಿತ್ರಿಸಲಾಗಿದೆ. ದ್ರೌಪದಿಯ ಮುಖ ಮತ್ತು ಕೈಗಳು ಮಾತ್ರ ಹೊರಗಿದ್ದು, ಎರಡೂ ಕೈಗಳಲ್ಲಿ ಕಮಲಗಳಿವೆ. ಬದಿಯ ನೋಟದಲ್ಲೂ ಎರಡೂ ಕಣ್ಣುಗಳು ವಿಭೂತಿ, ಕುಂಕುಮ,

ಮೂಗಿನಲ್ಲಿ ನತ್ತು, ಕಿವಿಯಲ್ಲಿ ಓಲೆ, ತಲೆಯಲ್ಲಿ ಮುತ್ತಿನಲಂಕಾರ, ಕೆಂಪು ರವಿಕೆ ಕೈಗಳಲ್ಲಿ ಉಂಗುರ ಒಂದೆಡೆಯಾದರೆ ಕಪ್ಪು ಲೇಪಿಸಿದ ಹಾವಿಗೆ ಮೈತುಂಬಾ ಸೂಕ್ಷ್ಮವಾದ ಚುಕ್ಕೆಗಳನ್ನು ತೋರಲು ತೊಗಲಿಗೆ ರಂಧ್ರಗಳನ್ನು ಹಾಕಿದ್ದು, ತುಂಬಾ ಶ್ರಮದಾಯಕ ಕೆಲಸವಾಗಿದೆ. ಅಲ್ಲಲ್ಲಿ ಹಾವಿನ ಮೇಲಿರುವ ವರ್ತುಲಾಕಾರದ ನಕ್ಷೆಗಳನ್ನು ತೋರಿಸಿದೆ. ತಲೆಯಿಂದ ಆರಂಭಗೊಂಡು ದ್ರೌಪದಿಯ ಮೈಯನ್ನು ಸುತ್ತುವರಿದು ಕಾಲು ಮಾತ್ರ ಕಾಣುವಂತೆ ಬಿಟ್ಟು ಸೀರೆ ಉಡಿಸಿದಂತೆ ಸೆರಗು ಕೆಳಗೆ ಬಿದ್ದಂತೆ ಬಾಲವನ್ನು ರಚಿಸಲಾಗಿದೆ. ಎರಡೂ ಕಾಲುಗಳಿಗೆ ಮುತ್ತಿನಲಂಕಾರದ ಸರಗಳು ತುಂಬಿಹೋಗಿವೆ. ಚಿತ್ರ ಇತರ ಎಲ್ಲಾ ಚಿತ್ರಗಳಿಗಿಂತ ಭಿನ್ನವಾಗಿದೆ.

**೨೧. ವಿರಾಟರಾಜ ಚಿತ್ರ**

ಎಲ್ಲಾ ಚಿತ್ರಗಳಿಗಿರುವಂತೆ ಮುಖ ಮತ್ತು ಮೈ ವಿನ್ಯಾಸಗಳಿದ್ದು, ಕಿರೀಟದಲ್ಲಿ ಹೊಸ ವಿನ್ಯಾಸ ಕಂಡುಬರುತ್ತದೆ. ಇಬ್ಬರು ಸೇವಕರು ಎಡಬಲಗಳಲ್ಲಿ ನಿಂತು ಸತ್ತಿಗೆ ಸೇವೆ ಮಾಡುತ್ತಿರುವಂತೆ ತೋರುತ್ತದೆ. ವಿರಾಟರಾಜನ ಕೈಯಲ್ಲಿ ಪುಸ್ತಕವೊಂದಿದ್ದು, ಏನನ್ನೋ ಉಪದೇಶಿಸುತ್ತಿರುವಂತೆ ಭಾಸವಾಗುತ್ತದೆ. ತೆಳುನೀಲಿ ಬಣ್ಣದ ಶಾಲು ಎಲ್ಲಾ ಕಡೆಗೂ ಜೋತುಬಿದ್ದಿದ್ದು ಅಲ್ಲಲ್ಲಿ ಬಟ್ಟೆ ನೀರಿಗೆಗಳು ಕಂಡುಬರುತ್ತವೆ. ಸೈನಿಕರ ಗಡ್ಡದಲ್ಲಿ ರಂಧ್ರಗಳನ್ನು ಮಾಡಿ ಹೆಚ್ಚು ಆಕರ್ಷಣೆ ಆಗುವಂತೆ ಚಿತ್ರಿಸಲಾಗಿದೆ.

**೨೨. ಶಕುನಿ**

ಮಹಾಭಾರತದ ಕಥೆಯಲ್ಲಿ ಶಕುನಿ ಹೆಸರು ಯಾರೂ ಮರೆಯುವಂತಿಲ್ಲ. ಅಂತಹ ಚಿತ್ರ ಇದಾಗಿದ್ದು, ಸಂಪೂರ್ಣ ಕಪ್ಪು ವರ್ಣದಲ್ಲಿ ರಚಿತಗೊಂಡಿದೆ. ಕಣ್ಣಿನಲ್ಲಿ ಕೆಂಪುಗುಡ್ಡೆಯನ್ನಿಟ್ಟು ಅಪಾಯದ ಸಂಕೇತವನ್ನು ಸೂಚಿಸಲಾಗಿದೆ. ಕೊರಳಲ್ಲಿ ದೊಡ್ಡ ದೊಡ್ಡ ಗೆಜ್ಜೆಯಾಕಾರ ಸರವಿದ್ದು, ಕೈಗಳಲ್ಲೂ ಅಂತಹ ವಿನ್ಯಾಸವನ್ನೇ ಹೊಂದಿದೆ. ಬಲಗೈಯಲ್ಲಿ ಪಗಡೆ, ಎಡಗೈಯಲ್ಲಿ ಪಗಡೆಯಾಟದ ಬಟ್ಟೆ ಇರುವಂತೆ ತೋರುತ್ತದೆ. ಕಾಲುಗಳು ಅರ್ಧಕ್ಕೆ ನಿಂತಿದ್ದು, ಕೆಳಭಾಗ ಸಂಪೂರ್ಣ ಲಭ್ಯವಿಲ್ಲ. ಮೀಸೆ ಮತ್ತು ಉಬ್ಬುಗಳಲ್ಲಿ ರಂದ್ರಗಳನ್ನು ಹಾಕಿ ಬೆಳಕು ಪಸರಿಸುವಂತೆ ಮಾಡಲಾಗಿದೆ.

*** ರಾಮಾಯಣದ ತೊಗಲುಗೊಂಬೆ ಚಿತ್ರಗಳು**

**೨೩. ಐರಾವಣ**

ತೆಳುನೀಲಿ ವರ್ಣದ ಮುಖಬಣ್ಣವನ್ನು ಹೊಂದಿದ ಐರಾವಣ ರಾಕ್ಷಸನ ಚಿತ್ರವು ಕೂಡ ಬದಿಯ ನೋಟವಾಗಿದ್ದು, ರಾಕ್ಷಸನೆನ್ನುವ ಕುರುಹಿಗಾಗಿ ದೊಡ್ಡ ದೊಡ್ಡ ಹಲ್ಲುಗಳು ಮೇಲೆ ಏಳು, ಕೆಳಗೆ ಏಳು ಕೊನೆಯಲ್ಲಿ ದೊಡ್ಡದೊಂದು ಕೋರೆಹಲ್ಲು ತೆರೆದ ಬಾಯಿಯ ಸಮನಾಂತರದಲ್ಲಿ ಮೇಲಕ್ಕೆ ಚಾಚಿದ ನಾಲಿಗೆ ಹಾಗೂ ಎರಡು ದೊಡ್ಡ ಕಣ್ಣುಗಳನ್ನು, ಮೊಂಡಮೂಗನ್ನು ತೋರಿಸಿದ್ದು ವಿಶೇಷತೆ. ಉದ್ದನೆಯ ಜಡೆಯಾಕಾರದ ಬಾಲದಂತಿರುವ ಕೂದಲುಗಳಲ್ಲಿ ತೊಗಲನ್ನು ಕತ್ತರಿಸಿ ಬೆಳಕು ಬರುವಂತೆ ರಚಿಸಲಾಗಿದೆ. ಕಿರೀಟವೊಂದು ತೆಳ್ಳನೆಯ ಬಂಗಾರ ಬಣ್ಣದ ತಲೆಪಟ್ಟಿಯ ಬಟ್ಟೆಯನ್ನು ಕಟ್ಟಿದಂತೆ ಇದ್ದು, ಅಲ್ಲಲ್ಲಿ ಹಳದಿ ವರ್ಣದಿಂದ ನಕ್ಷೆಗಳನ್ನು ರಚಿಸಲಾಗಿದೆ. ಕೊರಳಲ್ಲಿ ಒಂದು ಸರ, ತೋಳುಬಂಧಿ, ಅರ್ಧ ತೋಳಿನ

ಆಕಾರದ ಒಂದು ಅಂಗಿ, ಎಡಗೈಯಲ್ಲಿ ದೊಡ್ಡ ಖಡ್ಗವಿದ್ದು ಅದು ತುದಿಯನ್ನು ಕಳೆದುಕೊಂಡಿದೆ. ಬಲಗೈಯಲ್ಲಿರುವ ಡಾಲು ಕಪ್ಪು ವರ್ಣದಲ್ಲಿದೆ. ಇಲ್ಲಿ ಬಲಗೈ ಕಾಣುವುದಿಲ್ಲ. ಕೆಂಪು ಧೋತ್ರ, ಕೆಳಗೆ ಕಾಲು, ಕಾಲಿಗೆ ಹಗ್ಗದ ಆಕಾರದ ಚೈನು, ನಡದ ಮಧ್ಯದಿಂದ ಬಟ್ಟೆಯೊಂದು ಜೋತುಬಿದ್ದಿದ್ದು ಅಲ್ಲಲ್ಲಿ ನಕ್ಷಾವಿನ್ಯಾಸ ರಚಿಸಲಾಗಿದೆ. ಒಟ್ಟಿನಲ್ಲಿ ದೊಡ್ಡ ದೊಡ್ಡ ಹಲ್ಲು, ಕೋರೆಹಲ್ಲುಗಳಿಂದ ಭಯಪಡಿಸುವಂತೆ ಚಿತ್ರವನ್ನು ವಿನ್ಯಾಸಗೊಳಿಸಲಾಗಿದೆ.

**೨೪. ಹನುಮಂತ**

ಆಧುನಿಕ ಸಂದರ್ಭದ ಕಪ್ಪು ಕಲ್ಲಿನಲ್ಲಿ ರಚನೆಗೊಂಡ ಹನುಮಂತನ ಮೂರ್ತಿಯಂತೆ ಗೊಂಬೆಗೆ ಬಳಸಿಕೊಂಡ ತೊಗಲಿಗೆ ಕಪ್ಪು ವರ್ಣವನ್ನು ಲೇಪಿಸಿ ಮುಖದ ಭಾಗವನ್ನು ಕೆಂಪು ವರ್ಣದಲ್ಲಿ ರಚಿಸಿ ಬಾಯಲ್ಲಿ ಹಲ್ಲುಗಳು, ಕೋರೆ ಮೀಸೆ, ಕಿವಿಯಲ್ಲಿ ಅಧಿಕ ಆಕಾರದ ಓಲೆ, ಕಿರೀಟಕ್ಕೆ ಕೆಂಪು, ಬಿಳಿ ಮತ್ತು ಹಳದಿ ವರ್ಣಗಳನ್ನು ಬಳಸಿಕೊಂಡು ನೂತನವಾಗಿ ವಿನ್ಯಾಸಗೊಳಿಸಲಾಗಿದೆ. ಕೊರಳಲ್ಲಿ ನಾಣ್ಯದ ಆಕಾರದ ಸರಗಳು, ಹಳದಿ ವರ್ಣದ ಜನಿವಾರ, ಶೆಲ್ಯ ಮೇಲೆ ಕೈ ಮಾಡಿರುವ ಎಡಗೈ ಮತ್ತು ಬಲಗೈಯಲ್ಲಿ ಹಿಡಿದ ಗಧೆ ಇದೆ. ಗಧೆಯ ಹಿಡಿಕೆ ಮಣಿದಂತೆ ಕಂಡರೂ ಗಧೆಯ ಕೊನೆಯಲ್ಲಿರುವ ವರ್ತುಳಾಕಾರದ ನಕ್ಷಾ ವಿನ್ಯಾಸ ಅದರ ವರ್ಣಲೇಪನ ಮತ್ತು ರಂಧ್ರಗಳಿಂದಾಗಿ ಅದ್ಭುತವಾಗಿ ಕಂಡುಬರುತ್ತದೆ. ಗಧೆಯ ಸುತ್ತಲೂ ಸುತ್ತುವರಿದುಕೊಂಡು ಮಣಿದ ಬಾಲ ಬಾಲವನ್ನೂ ಅಲ್ಲಲ್ಲಿ ನಾಮ ಅಲ್ಲಲ್ಲಿ ಲೇಪಿಸಿದ್ದು ವಿಶೇಷ. ಕೈಬೆರಳು, ಮೊಣಕಾಲುಮಣಿತ, ಹುಬ್ಬು ಮೀಸೆ ಮತ್ತು ಆಭರಣಗಳಲ್ಲಿ ಹಾಗೆ ಹನುಮಾನ್ ಚಡ್ಡಿಯ ಅಂಚಿನಲ್ಲಿ ತೊಗಲಿಗೆ ಹಾಕಿದ ರಂಧ್ರಗಳು ವಿನ್ಯಾಸ ಸೊಗಸಾಗಿದೆ ಮತ್ತು ಪೂರ್ಣ ಚಿತ್ರದ ಕಪ್ಪು ವರ್ಣವನ್ನು ಬಿಂಬಿಸುತ್ತಾ ಅಲ್ಲಲ್ಲಿ ಅಂತಿಮ ಗೆರೆಗಳನ್ನು ಸಾಧರಪಡಿಸುತ್ತವೆ. ಎರಡೂ ಬದಿಗಳಲ್ಲಿ ಹಾರಿಬಿಟ್ಟ ಕೆಂಪು ಮತ್ತು ಹಳದಿ ವರ್ಣದ ಶೆಲ್ಯ, ಚಡ್ಡಿಯ ಮಧ್ಯದಲ್ಲಿ ಕೆಳಗೆ ಜೋತುಬಿಟ್ಟ ಬಟ್ಟೆ, ಕೇಸರಿ ಮತ್ತು ಕೆಂಪು ವರ್ಣದಲ್ಲಿ ವಿನ್ಯಾಸಗೊಂಡಿರುವುದು ವಿಶೇಷ. ಕಾಲುಗಳ ಹಿಂದಿನಿಂದ ಅತೀ ದೊಡ್ಡದಾದ ಹಾರವೊಂದು ಹೂಗಳೊಂದಿಗೆ ಅಲಂಕೃತವಾಗಿ ವಿನ್ಯಾಸಗೊಂಡಿದೆ. ಒಟ್ಟು ಹನುಮನ ಚಿತ್ರವು ಅತೀಯಾದ ಕಪ್ಪು ವರ್ಣದಲ್ಲಿದ್ದರೂ, ಬಾಯಿ ಮತ್ತು ಬಟ್ಟೆಯಲ್ಲಿರುವ ಕೆಂಪು ಮತ್ತು ಕೇಸರಿ ವರ್ಣ ಹಳದಿಯೊಂದಿಗೆ ಸೇರಿ ಇಡೀ ಚಿತ್ರ ಸಮಾನ ಹಂಚಿಕೆಯ ವರ್ಣಸಂಯೋಜನೆಯ ಚಿತ್ರವಾಗಿದೆ.

**೨೫. ಮಹಿರಾವಣ**

ಐರಾವಣ ತೆಳುನೀಲಿ ಬಣ್ಣದ ಮೈಬಣ್ಣ ಹೊಂದಿದ್ದರೆ, ಈ ಮಹಿರಾವಣನ ಮೈಬಣ್ಣವನ್ನು ತೆಳುಕೆಂಪು ಮನುಷ್ಯರ ಮೈಬಣ್ಣದಂತೆ ಲೇಪಿಸಲಾಗಿದೆ. ಪ್ರತಿ ಹಂತದಲ್ಲೂ ಐರಾವಣನಂತಹ ಎಲ್ಲಾ ಲಕ್ಷಣಗಳನ್ನು ಹೊಂದಿದ ಈ ಚಿತ್ರದ ಹಲ್ಲುಗಳು ಬಿಳಿಯ ಬದಲು ಮೈಬಣ್ಣವನ್ನೇ ಹೊಂದಿದೆ. ಅಗಲವಾದ ಕಣ್ಣುಗಳು, ಕಪ್ಪುಗುಡ್ಡೆ, ಕೋರೆ ಮೀಸೆ, ಕೋರೆ ಹಲ್ಲು, ತಲೆಯಲ್ಲಿ ಗಂಟು ಹಾಕಿ ಜೋತು ಬಿಟ್ಟಂತೆ ಕಾಣುವ ಜಡೆಯುಪಿನ್ಯಾಸ ಅಲ್ಲಲ್ಲಿ ವಿಭಾಗ ಮಾಡಲು ತೊಗಲಿನಲ್ಲಿ ಹಾಕಿದ ರಂಧ್ರಗಳು ಕೆಂಪು ವರ್ಣದ ಅಂಗಿ, ಹನುಮಾನನಂತಹ ಚಡ್ಡಿ ಇದ್ದು, ಅದು ತೆಳುನೀಲಿ ಬಣ್ಣದ್ದಾಗಿದೆ. ಇವನೂ ಕೂಡ ಎಡಗೈಯಲ್ಲಿ ಖಡ್ಗವನ್ನು

ಹಿಡಿದಿದ್ದು, ಮಣಿದ ಬೆರಳುಗಳು ಅವಾಸ್ತವಿಕವಾಗಿವೆ. ಖಡ್ಗವು ಚೂಪಾದ ಕೊನೆಯ ತುದಿಯನ್ನು ಕಳೆದುಕೊಂಡಿದೆ. ಬಲಗೈಯಲ್ಲಿ ಹಿಡಿದ ಡಾಲು ಕಪ್ಪು ಬಣ್ಣದಿಂದ ರಚಿತವಾಗಿದ್ದು, ಕೆಂಪು ಬಣ್ಣದ ಹೊರವಿನ್ಯಾಸ ಹೊಂದಿದೆ. ನಡುವಿನಲ್ಲಿ ಚಿಕ್ಕದೊಂದು ಕತ್ತಿ ಇದೆ. ಜೋತುಬಿಟ್ಟ ಶಲ್ಯ ಮತ್ತು ನಡುವಿನ ಬಟ್ಟೆ ಕೆಂಪು ಮತ್ತು ಕಡುಗೆಂಪು ವರ್ಣದ್ದಾಗಿದೆ. ಮುಖಕ್ಕೆ ತಕ್ಕುದಾದ ಕೈಕಾಲುಗಳನ್ನು ದಪ್ಪದಾಗಿ ಚಿತ್ರಿಸಲಾಗಿದೆ. ಕಾಲ್ಗಡಗ ವಿನ್ಯಾಸಕ್ಕಾಗಿ ತೊಗಲಿಗೆ ರಂಧ್ರವನ್ನು ಹಾಕಲಾಗಿದೆ. ಕಿವಿಯ ವಿನ್ಯಾಸ ಪಕ್ಷಿಯಂತಿದ್ದು ವಿಶೇಷವಾಗಿದೆ. ಹಿಂಬದಿಯಿಂದ ತೆಳ್ಳನೆಯ ಬಟ್ಟೆಯೊಂದು ಜೋಕಾಲಿಯಂತೆ ಜೋತು ಬಿದ್ದಿದೆ.

**೨೬. ಚಿತ್ರಸೇನ**

ದೇವೇಂದ್ರ ರಾಜನ ಮಗ ಚಿತ್ರಸೇನ. ಚಿತ್ರಸೇನನ ಚಿತ್ರವು ತೊಗಲುಗೊಂಬೆಗಳ ಒಟ್ಟು ಚಿತ್ರಗಳಲ್ಲಿಯೇ ತುಂಬಾ ಸಂಯೋಜನಾಪೂರ್ಣ ಹೆಚ್ಚು ಕುಸುರಿ ಕೆಲಸವನ್ನು ಹೊಂದಿದ ಚಿತ್ರವಾಗಿದೆ. ಚಿತ್ರಸೇನನು ರಥದಲ್ಲಿ ನಿಂತು ಎಡಗೈಯಿಂದ ಬಾಣವನ್ನು ಬಿಡುವ ಸನ್ನಿವೇಶ, ಯುದ್ಧದ ಸನ್ನಿವೇಶವನ್ನು ತೋರುತ್ತದೆ. ವಿನ್ಯಾಸಪೂರಿತ ಕಿರೀಟ, ಬದಿಯ ನೋಟವಾದರೂ ಕಾಣುವ ಎರಡೂ ಕಣ್ಣುಗಳು, ಕೆಂಪನೆಯ ನಿಲುವಂಗಿ, ಕಂಕುಳಲ್ಲಿ ಕತ್ತಿ, ಕಾಲುಗಳಿಗೆ ಉಡಿಸಿದ ಧೋತ್ರ ಅದರ ಹುಲಿಯಂತಹ ನಕ್ಷಾಚಿತ್ರ ರಥದಲ್ಲಿ ಜೋತುಬಿಟ್ಟ ಖಡ್ಗ ತುರ್ತುಯುದ್ಧಕ್ಕೆ ಬಳಸಿಕೊಳ್ಳಬಹುದೇನೋ ಎಂಬಂತಿದೆ. ನಿಂತ ಜಾಗವು ಅಂಚಿನಂತಿದ್ದು ಅವಾಸ್ತವಿಕವೆನಿಸುತ್ತದೆ. ಆದರೂ ಕೂಡ ಆ ರಚನೆ ಮುಂದೆ ಹೋಗಿ ಆನೆಯಾಕಾರದಲ್ಲಿ ವಿನ್ಯಾಸಗೊಂಡಿರುವುದು ತೆರತೆರನಾದ ನಕ್ಷೆಗಳಿಂದ ರಥವಿನ್ಯಾಸ ಗೊಂಡಿದ್ದು, ಅಲ್ಲಲ್ಲಿ ಹಗ್ಗಗಳಿಂದ ಗಾಲಿ ಮತ್ತು ಕಂಬಗಳಿಗೆ ತೊಡಕಿಸಿರುವಂತೆ ಚಿತ್ರಿಸಿರುವುದು ಕಂಡುಬರುತ್ತದೆ. ಸಾರಥಿಯೊಬ್ಬ ಚಿಕ್ಕ ಆಕಾರದಲ್ಲಿದ್ದು, ಒಂದೇ ಕಣ್ಣನ್ನು ಹೊಂದಿರುವುದು ವಿಶೇಷ. ಇದರಿಂದ ರಾಜರು ಮತ್ತು ದೊಡ್ಡ ವ್ಯಕ್ತಿತ್ವವುಳ್ಳವರಿಗೆ ಮಾತ್ರ ಬದಿಯ ನೋಟದಲ್ಲೂ ಎರಡೂ ಕಣ್ಣುಗಳನ್ನು ತೋರಿಸುವ ಪರಿಪಾಠ ಕಲಾವಿದರಲ್ಲಿ ಇತ್ತೆಂಬುದು ಕಂಡುಬರುತ್ತದೆ. ಸಾರಥಿ, ಸೈನಿಕ, ದ್ವಾರಪಾಲಕರು ಮತ್ತು ಸೇವಕಿಯರ ಮುಖಗಳಲ್ಲಿ ಒಂದೇ ಕಣ್ಣನ್ನು ತೋರಿಸುವುದು ಎಂಬುದು ಸತ್ಯವೆನಿಸುತ್ತದೆ. ರಥದ ಮೇಲ್ಭಾಗದಲ್ಲಿ ಮನುಷ್ಯಾಕೃತಿ ಯೊಂದಿದ್ದು ಮೊಣಕಾಲೂರಿ ನಿಂತಂತೆ ತೋರುತ್ತದೆ. ಅದರ ಮುಂದೆ ಪ್ರಾಣಿಯೊಂದು ಹಿಂದಿನ ಎರಡು ಕಾಲುಗಳನ್ನು ಊರಿ ಮುಂದಿನ ಕಾಲುಗಳನ್ನು ಮೇಲೆತ್ತಿದಂತೆ ತೋರುತ್ತದೆ. ಅಲ್ಲಿ ಒಂದು ದೇವರು ಎಂಬಂತೆ ಕಪ್ಪು ಮುಖ, ಹೂವಿನ ತಲೆಯ ಅಲಂಕಾರ, ವಿಭೂತಿ, ಕೊರಳಲ್ಲಿ ಸರ ವಿನ್ಯಾಸಗೊಂಡಿರುವುದು ವಿಶಿಷ್ಟ. ಕೆಳಪಟ್ಟಿಯಲ್ಲಿ ನಾಲ್ಕು ಹೂವುಗಳ ವಿನ್ಯಾಸವಿದೆ. ವಿರುದ್ಧ ದಿಕ್ಕುಗಳಲ್ಲಿ ಹೂವಿನ ಪಕಳಿಗಳನ್ನು ಸೇರಿಸಿ ಎಂಟು ದಳಗಳ ವಿನ್ಯಾಸ ರಚಿಸಿ ಚೌಕಾಕಾರದಲ್ಲಿ ರಥದ ಮೇಲ್ಭಾಗವನ್ನು ವಿನ್ಯಾಸಗೊಳಿಸಲಾಗಿದೆ. ರಥಕ್ಕೆ ಹೂಡಿದ ಕುದುರೆಗಳ ಬೆನ್ನಿಗೆ ಹಾಕಿದ ಜೂಲ ಹಳದಿ ಬಣ್ಣದಲ್ಲಿ ವಿನ್ಯಾಸಗೊಂಡಿದ್ದು, ಕೆಂಪು ಕುದುರೆಯಲ್ಲಿ ಎದ್ದುತೋರುತ್ತದೆ. ಇನ್ನೊಂದು ಕುದುರೆ ಹಳದಿ ಬಣ್ಣದಲ್ಲಿದ್ದು ಮುಖ ಮತ್ತು ಮುಂಗಾಲು ಮಾತ್ರ ತೋರುವಂತಿದೆ. ಇಡೀ ಚಿತ್ರವು ಕೆಂಪು, ಹಳದಿ ಮತ್ತು ಕಪ್ಪು

ಬಣ್ಣದಲ್ಲಿ ರೂಪುಗೊಂಡಿದ್ದು ಅತ್ಯಂತ ಸಂಯೋಜನಾಬದ್ಧವಾದ ಚಿತ್ರ ಇದಾಗಿದೆ. ರಥದ ಗಾಲಿಗಳು ಬಾಣ ಬಿಡುವ ಚಿತ್ರಸೇನ ರಥದ ಕುದುರೆ ಮತ್ತು ಸಾರಥಿ ಸುತ್ತುವರಿದ ಅಲಂಕಾರಗಳಿಂದಾಗಿ ಒಟ್ಟು ಚಿತ್ರ ತನ್ನ ಅಂದವನ್ನು ಹೆಚ್ಚಿಸಿಕೊಂಡಿದೆ.

**೨೭. ರಾವಣ**

ಹತ್ತು ಮುಖಗಳ ರಾವಣನ ಚಿತ್ರಕ್ಕೆ ಮುಖ್ಯಮುಖದ ಬಲಬದಿಯಲ್ಲಿ ನಾಲ್ಕು ಮುಖಗಳು, ಎಡಬದಿಯಲ್ಲಿ ಐದು ಮುಖಗಳು ಒಟ್ಟು ಹತ್ತು ಮುಖಗಳಿದ್ದು, ಮುಖ್ಯ ಮುಖದ ಬಣ್ಣವು ತೆಳುನೀಲಿಯಾಗಿದೆ. ಅಗಲವಾದ ಕಣ್ಣುಗಳು, ತೆರದ ಹಲ್ಲು, ಕೋರೆ ಮೀಸೆ, ಹುಬ್ಬುಗಳು ಮತ್ತು ವಿಭೂತಿ, ಕಿವಿಗಳು ನಕ್ಷಾ ರೂಪವನ್ನು ಹೊಂದಿದ್ದು, ಅಲಂಕೃತವಾಗಿವೆ. ಮುಖದಿಂದ ಮುಖಕ್ಕೆ ಒಂದಾದ ಮೇಲೊಂದರಂತೆ ತೆಳುನೀಲಿ ಮತ್ತು ತೆಳುಗೆಂಪು ಬಣ್ಣದ ಮುಖಗಳಿದ್ದು, ಇತರ ಒಂಭತ್ತು ಮುಖಗಳಿಗೆ ಒಂದೊಂದೇ ಕಣ್ಣುಗಳಿರುವುದು ವಿಶೇಷ. ಎಲ್ಲಾ ಮುಖಗಳು ಒಂದೇ ರೂಪ, ಒಂದೇ ತರದ ಮೀಸೆ, ಕಣ್ಣು, ಚಿಕ್ಕ ಗಡ್ಡಗಳನ್ನು ಹೊಂದಿ ಕಿರೀಟಗಳಲ್ಲೂ ಒಂದೇ ತರದ ವಿನ್ಯಾಸವನ್ನು ಹೊಂದಿದೆ. ಮಧ್ಯದ ಮುಖವನ್ನು ಎದುರಿಗೆ ಚಿತ್ರಿಸಿದ್ದು, ಮೇಲಿನ ಕಿರೀಟದ ವಿನ್ಯಾಸದಲ್ಲಿ ಮನುಷ್ಯಾಕೃತಿಗಳಂತೆ ಇದ್ದು ಕೊನೆಯಲ್ಲಿ ಕಣ್ಣಿನಾಕಾರದ ಅಂತ್ಯವಿದೆ. ಕೈಗಳಲ್ಲಿ ಆಯುಧಗಳು ಮತ್ತು ಮುಖ್ಯ ದೇಹದ ಎಡಗೈಯಲ್ಲಿ ಖಡ್ಗ ಇದ್ದು, ಬಲಗೈಯಲ್ಲಿ ಗುರಾಣಿ ಹಿಡಿದಿರುವಂತೆ ತೋರುತ್ತದೆ. ಎಡಗೈ ಮೇಲೆ ಹಾಯ್ದುಬಂದ ದೊಡ್ಡ ಶೆಲ್ಯ ಹಳದಿವರ್ಣ ವಿನ್ಯಾಸದಲ್ಲಿ ಜೋತು ಬಿದ್ದಿದೆ. ಕೆಂಪು ನಿಲುವಂಗಿ, ಕೈಕಟ್ಟು, ಕೊರಳಲ್ಲಿ ಆಭರಣ, ಕತ್ತಿ ಇಡುವ ಸಾಧನ ಮೊದಲಾದ ಅಂಶಗಳಿಂದ ಚಿತ್ರವು ಪರಿಪೂರ್ಣ ಸಂಯೋಜನಾ ವಿನ್ಯಾಸವೆನಿಸುತ್ತದೆ. ಉಡಿಸಿದ ಧೋತ್ರ ಪಟ್ಟಿಪಟ್ಟಿಯಾಕಾರದಲ್ಲಿದ್ದು, ಕೆಂಪು ಮತ್ತು ಹಳದಿ ಬಣ್ಣಗಳನ್ನು ಹೊಂದಿದೆ. ಮಧ್ಯದಲ್ಲಿ ಜೋತುಬಿಟ್ಟ ನಡುವಿನ ಬಟ್ಟೆ ಅಡ್ಡಅಡ್ಡಲಾದ ಪಟ್ಟಿಗಳಿಂದ ಅಲಂಕೃತವಾಗಿವೆ. ಗೀಚಿ ಇಟ್ಟ ಕಾಲುಗಳು ಖಡ್ಗವನ್ನು ಹಿಡಿದು ಧುಮುಕುತ್ತಿರುವಂತೆ(ಮುನ್ನುಗ್ಗುತ್ತಿರುವಂತೆ) ಚಿತ್ರವು ರಚಿತವಾಗಿದೆ. ಪಾದಗಳು ಅಸ್ಪಷ್ಟವಾಗಿದ್ದು, ಖಡ್ಗವು ಚೂಪಾದ ಭಾಗವನ್ನು ಕಳೆದುಕೊಂಡಿದೆ. ಇಡೀ ತಲೆಗಳ ಹಿಂದೆ ನಕ್ಷಾ ವಿನ್ಯಾಸವೊಂದು ವರ್ತುಲಾಕಾರದಲ್ಲಿ ಕಾಣುತ್ತದೆ. ಹತ್ತುಮುಖದ ಈ ರಾವಣನ ಚಿತ್ರ ಅದ್ಭುತ ಹಾಗೂ ಕಲಾವಿದನ ಏಕತಾನತೆಯನ್ನು ಸಾಬೀತುಪಡಿಸುತ್ತದೆ.

**೨೮. ರಾಮ**

ದೈವೀ ಪುರುಷನಾದ ರಾಮನ ಮೈವರ್ಣವನ್ನು ತೆಳುನೀಲಿ ವರ್ಣದಲ್ಲಿ ಚಿತ್ರಿಸಲಾಗಿದ್ದು, ಇದು ರಾಮನ ಚಿತ್ರವೇ ಎನ್ನುವಂತಹ ನೈಜತೆಯನ್ನು ಕಲಾವಿದ ಸೃಷ್ಟಿಸಿದ್ದಾನೆ. ಕೆಂಪು ಮತ್ತು ಹಳದಿ ವರ್ಣಗಳಿಂದ ಸಂಯೋಜನೆಗೊಂಡ ಮೈಬಟ್ಟೆಯನ್ನು ಕಾಣಬಹುದಾಗಿದ್ದು, ಕಿರೀಟ ಮತ್ತು ಉಳಿದ ಆಭರಣಗಳನ್ನೂ ಇದೇ ವರ್ಣದಲ್ಲಿ ಚಿತ್ರಿಸಿದ್ದು ವಿಶೇಷ. ಎಡಗಾಲನ್ನು ಹಿಂದೆ ಮಾಡಿ, ಬಲಗಾಲನ್ನು ಮುಂದೆ ಇಟ್ಟು ಬಾಣವನ್ನು ಬಿಡುತ್ತಿರುವ ಭಂಗಿಯಲ್ಲಿ ರಾಮನನ್ನು ಚಿತ್ರಿಸಲಾಗಿದೆ. ಬಲಗೈಯನ್ನು ಮುಂದೆ ಮಾಡಿದ್ದು ಕಪ್ಪು ವರ್ಣದ ಬಿಲ್ಲನ್ನು ಕೈಯಲ್ಲಿ ಹಿಡಿದಿರುವ ರಾಮ ಎಡಗೈಯಿಂದ ಬಾಣವನ್ನು ಬಿಡುತ್ತಿರುವಂತೆ

ಚಿತ್ರಿಸಲಾಗಿದ್ದು, ಬಾಣದ ಚೂಪಾದ ತುದಿಯು ಇಲ್ಲವಾಗಿದೆ. ಬಾಣದ ಹಿಂಭಾಗವನ್ನು ತ್ರಿಕೋನಾಕಾರದಲ್ಲಿ ಕೆಂಪು ಮತ್ತು ಹಳದಿ ವರ್ಣಗಳ ಪಟ್ಟಿಗಳನ್ನು ಮಧ್ಯದಲ್ಲಿ ರಂಧ್ರಗಳನ್ನು ಚಿತ್ರಿಸುವ ಮೂಲಕ ರಾಮನ ಕೆಂಪು ವರ್ಣದ ಮೈಬಟ್ಟೆಯ ಮುಂಭಾಗದಲ್ಲಿ ರಚಿತವಾದ ಈ ಬಾಣ ಎದ್ದು ಕಾಣುವಂತೆ ಚಿತ್ರಿಸಿರುವುದು ವೈಶಿಷ್ಟ್ಯಪೂರ್ಣವಾಗಿದೆ. ರಾಮನ ಮುಖವನ್ನೂ ಬದಿಗೆ ನೋಡುತ್ತಿರುವಂತೆ ಚಿತ್ರಿಸಲಾಗಿದ್ದು, ಕಿರೀಟವನ್ನು ಕಪ್ಪು, ಕೆಂಪು, ಹಳದಿ ವರ್ಣಗಳೊಂದಿಗೆ ಅಲಂಕಾರಿಕವಾಗಿ ಚಿತ್ರಿಸಲಾಗಿದೆ. ನಡುವಿನಲ್ಲಿ ಕಪ್ಪು ವರ್ಣದ ಕತ್ತಿಯನ್ನು ಚಿತ್ರಿಸಲಾಗಿದ್ದು, ಇದರ ಹಿಡಿಕೆಯನ್ನು ಅಲಂಕಾರಿಕವಾಗಿ ಚಿತ್ರಿಸಲಾಗಿದೆ. ಕಾಲುಗಳಲ್ಲಿ ಎಡಗಾಲನ್ನು ನೈಜವಾಗಿ ಚಿತ್ರಿಸಿದ್ದು, ಬಲಗಾಲು ಮಾತ್ರ ನೈಜವಾಗಿಲ್ಲದೆ ಬೆರಳುಗಳು ತುಂಡಾದಂತಿದೆ. ತಲೆಯ ಹಿಂಭಾಗದಲ್ಲಿ ಜಡೆಯಂತೆ ರಚಿಸಲಾಗಿರುವ ಕಪ್ಪು ವರ್ಣದಲ್ಲಿ ಸಾಲಾಗಿ ಸೂಕ್ಷ್ಮ ರಂಧ್ರಗಳಿದ್ದು, ರಾಮನಾಕೃತಿಗೆ ವಿಶೇಷ ಅಲಂಕಾರವನ್ನು ಒದಗಿಸಿದೆ. ಒಟ್ಟು ರಾಮನ ಚಿತ್ರ ವಿನ್ಯಾಸವು ಕೆಂಪು ಮತ್ತು ಹಳದಿ ವರ್ಣದಲ್ಲಾಗಿದ್ದು, ಬಿಲ್ಲು ಮತ್ತು ಕತ್ತಿ ಎರಡೂ ಆಯುಧಗಳನ್ನು ಮಾತ್ರ ಕಪ್ಪು ವರ್ಣದಲ್ಲಿ ವಿನ್ಯಾಸಗೊಳಿಸಲಾಗಿದೆ. ಬಿಲ್ಲು ಮತ್ತು ಬಾಣಕ್ಕೆ ಹೊಂದಿಕೊಂಡಿರುವಂತೆ ಮೀನಿನಾಕೃತಿಯನ್ನು ಕೆಂಪು ವರ್ಣದಲ್ಲಿ ಚಿತ್ರಿಸಿದ್ದು ವಿಶೇಷ. ಒಟ್ಟು ಚಿತ್ರಕ್ಕೆ ಕಪ್ಪು ವರ್ಣದಿಂದ ಹೊರರೇಖೆಗಳನ್ನು ಹಾಕಲಾಗಿದ್ದು, ಕೈಬೆರಳು, ಕಾಲ್ಬೆರಳು ಮತ್ತು ಉಗುರುಗಳು ಸ್ಪಷ್ಟವಾಗಿ ಗೋಚರಿಸುವಂತೆ ಚಿತ್ರಿಸಿದ ಕಲಾವಿದನ ನೈಪುಣ್ಯತೆ ವಿಶೇಷವಾದದ್ದು.

**೨೯. ಸೀತೆ**

ಲೋಕಮಾತೆಯಾದ ಸೀತೆಯನ್ನು ಸರ್ವಾಲಂಕಾರ ಭೂಷಿತಯಂತೆ ಚಿತ್ರಿಸಿರುವ ಕಲಾವಿದ, ರಾಮನಂತೆಯೇ ಸೀತೆಯ ಮೈವರ್ಣವನ್ನು ತೆಳುನೀಲಿ ವರ್ಣದಲ್ಲಿ ಚಿತ್ರಿಸಿದ್ದಾನೆ. ಬದಿಯಲ್ಲಿ ನೋಡುತ್ತಿರುವಂತೆ ಚಿತ್ರಿಸಲಾಗಿರುವ ಸೀತೆಯ ಮುಖದಲ್ಲಿ ಮಾತ್ರ ಒಂದೇ ಕಣ್ಣನ್ನು ಚಿತ್ರಿಸಿದ್ದು ನೈಜವಾಗಿದೆ. ಸುಂದರಿಯಾದ ಸೀತೆಯನ್ನು ಚಿತ್ರಿಸುವಂತೆಯೇ ಚಿತ್ರಿಸಿದ ಕಲಾವಿದ ಸೀರೆಯನ್ನು ಕಡುಗೆಂಪು ವರ್ಣದಲ್ಲಿ ಅದರ ಅಂಚನ್ನು ತೆಳುಕೆಂಪು ವರ್ಣದಲ್ಲಿ ಸೀರೆಯ ಅಂಚಿನ ವರ್ಣವಾದ ತೆಳುಕೆಂಪು ವರ್ಣವನ್ನು ರವಿಕೆಯ ವರ್ಣವಾಗಿ ಬಳಸಿಕೊಂಡಿದ್ದಾನೆ. ರವಿಕೆಯ ತೋಳನ್ನು ಮೊಣಕೈ ಭಾಗದವರೆಗೂ ರಚಿಸಿದ್ದು, ಅಂಚಿಗೆ ಸೀರೆಯ ವರ್ಣದ ಕಡುಗೆಂಪು ವರ್ಣವನ್ನು ಚಿತ್ರಿಸಿರುವುದು ಕಲಾವಿದನ ವರ್ಣಸಂಯೋಜನಾ ನೈಪುಣ್ಯತೆಯನ್ನು ಸಾರುತ್ತದೆ. ಕಡುಗೆಂಪು, ತೆಳುಕೆಂಪು ಹಾಗೂ ಹಳದಿ ವರ್ಣದಲ್ಲಿ ಆಕೆಯ ಆಭರಣಗಳನ್ನು ಅಲಂಕಾರಿಕವಾಗಿ ವಿನ್ಯಾಸಗೊಳಿಸಿದ್ದಾನೆ. ಉದ್ದವಾದ ಜಡೆಯನ್ನು ಚಿತ್ರಿಸಿದ್ದು, ಜಡೆಯ ಹೆಣಿಕೆಗಳಿಗೆ ಕೆಂಪು ಮತ್ತು ಕಪ್ಪು ವರ್ಣದ ಸರಣಿ ವಿನ್ಯಾಸಗೊಳಿಸಿ ಜಡೆಯ ಅಂಚಿನಲ್ಲಿ ಕೆಂಪು ಮತ್ತು ಹಳದಿ ವರ್ಣದ ಗೊಂಡೆಯನ್ನು ರಚಿಸಿದ್ದಾನೆ. ತಲೆಯ ಮೇಲ್ಭಾಗದ ಕೂದಲನ್ನು ಸಂಪೂರ್ಣವಾಗಿ ಕಪ್ಪು ವರ್ಣದಲ್ಲಿ ಚಿತ್ರಿಸಿ ಸಣ್ಣ ಸಣ್ಣ ಗೋಲಾಕಾರದಲ್ಲಿ ಬೈತಾಲೆಮಣಿಯ ವಿನ್ಯಾಸ ಚಿತ್ರಿಸಲಾಗಿದೆ. ಜಡೆಯ ಮೇಲ್ಭಾಗಕ್ಕೆ ಅಲಂಕಾರಿಕವಾದ ಹೂದಂಡೆಯನ್ನು ಚಿತ್ರಿಸಲಾಗಿದೆ. ಸೀತೆಯು ಬಲಗೈಯಲ್ಲಿ ಚಿಕ್ಕದಾದ ಕೆಂಪು ಹೂವೊಂದನ್ನು ಹೆಬ್ಬೆರಳು ಮತ್ತು ತೋರುಬೆರಳುಗಳ ಮಧ್ಯದಲ್ಲಿ ಹಿಡಿದು ಹೂವಿನ

ಅಂದವನ್ನು ಸವಿಯುತ್ತಿರುವಂತೆ ಚಿತ್ರಿಸಲಾಗಿದೆ. ಎಡಗೈಯಲ್ಲಿ(ತಾಳೆಓಲೆ?) ಮುಷ್ಟಿಮಾಡಿ ಹಿಡಿದಿರುವಂತೆ ಚಿತ್ರಿಸಲಾಗಿದೆ. ಸೀತೆಯ ಸೆರಗನ್ನು ಹಳದಿ ವರ್ಣದ ಅಡ್ಡ ಪಟ್ಟಿಗಳಿಂದ ಚಿತ್ರಿಸಿದ್ದು, ಅಂಚನ್ನು ಅರ್ಧ ಗೋಲಾಕೃತಿಯಂತೆ ವಿನ್ಯಾಸಗೊಳಿಸಲಾಗಿದೆ. ಸೀರೆಯ ಸೆರಗಿನ ನೆರಿಗೆಗಳು ಕಾಣುವಂತೆ ಕಪ್ಪು ರೇಖೆಗಳನ್ನು ಚಿತ್ರಿಸಿರುವುದು ಕಾಲಿನಲ್ಲಿ ಬೆರಳುಗಳು ಬಿಡಿ ಬಿಡಿಯಾಗಿ ಕಾಣಲು ಸಣ್ಣ ಸಣ್ಣ ರಂಧ್ರಗಳನ್ನು ರಚಿಸಲಾಗಿರುವುದು. ಮೂಗಿನ ಮೇಲೆ ನತ್ತಿನಂತೆ ಹೊಳೆಯಲು ಸೂಕ್ಷ್ಮ ರಂಧ್ರವೊಂದನ್ನು ಹಾಕಿದ್ದು, ಕಲಾವಿದನ ಚಿತ್ರರಚನಾ ನೈಪುಣ್ಯವೆನಿಸಿದ್ದು, ಅದನ್ನು ಬೆಳಕಿನಲ್ಲಿ ಹಿಡಿದಾಗ ಹೊಳೆಯುವಂತೆ ಸುಂದರವಾಗಿ ಗೋಚರಿಸುತ್ತದೆ. ಕೊನೆಯಲ್ಲಿ ಗಲ್ಲದ ಮೇಲೆ ಕಪ್ಪು ವರ್ಣದ ದೃಷ್ಟಿ ಬೊಟ್ಟನ್ನು ಇಟ್ಟಿರುವುದು ಸೀತೆ ಸೌಂದರ್ಯವತಿ ಎಂಬುದಕ್ಕೆ ಉಪಮಾನದಂತಿದೆ.

**೩೦. ಲಕ್ಷ್ಮಣ**

ರಾಮನ ಸೋದರನಾದ ಲಕ್ಷ್ಮಣನನ್ನು ಯುದ್ಧಕ್ಕೆ ಸನ್ನದ್ಧನಾಗಿ ನಿಂತಿರುವ ಭಂಗಿಯಲ್ಲಿ ಚಿತ್ರಿಸಿದ್ದು, ಮೈ ವರ್ಣವನ್ನು ಯಥಾರೀತಿ ಹಳದಿ ವರ್ಣದಲ್ಲೇ ಚಿತ್ರಿಸಲಾಗಿದೆ. ಬದಿಗೆ ನೋಡುತ್ತಿರುವಂತೆ ಚಿತ್ರಿಸಲಾಗಿರುವ ಮುಖದಲ್ಲಿ ಎರಡೂ ಕಣ್ಣುಗಳು ಕಾಣುವಂತೆ ಚಿತ್ರಿಸಲಾಗಿದೆ. ಕಿವಿಯನ್ನು ನೈಜವಲ್ಲದ ರೀತಿಯಲ್ಲಿ ಅಲಂಕಾರಿಕವಾಗಿ ಚಿತ್ರಿಸಲಾಗಿದ್ದು, ಕೆಂಪು, ಹಳದಿ ವರ್ಣದ ಕಿವಿ ಓಲೆಯನ್ನು ರಚಿಸಲಾಗಿದೆ. ಮೇಲಂಗಿಯನ್ನು ಸಂಪೂರ್ಣ ಕೆಂಪು ವರ್ಣದಲ್ಲಿ ಚಿತ್ರಿಸಿದ್ದು, ಕೆಳ ಅಂಗಿಯನ್ನು ಕೆಂಪು ಮತ್ತು ಕಪ್ಪು ವರ್ಣದ ಪಟ್ಟಿಗಳಂತೆ ಚಿತ್ರಿಸಲಾಗಿದೆ. ಕಪ್ಪು ವರ್ಣದ ಪಟ್ಟಿಯಲ್ಲಿ ಚಿಕ್ಕ ಚಿಕ್ಕ ಹಳದಿ ವರ್ಣದ ಚೌಕಾನೆಯನ್ನು ಚಿತ್ರಿಸಿರುವುದು ಅಲಂಕಾರಿಕವಾಗಿದೆ. ಕೆಳ ಅಂಗಿಯ ಮೇಲು ಹೊದಿಕೆಯನ್ನು ತೆಳು ಹಳದಿ ವರ್ಣದಲ್ಲಿ ರಚಿಸಿ ಕೆಂಪು ಬೊಟ್ಟುಗಳಿಂದ ಅಲಂಕರಿಸಲಾಗಿದೆ. ಕೆಳ ಅಂಗಿಯ ಅಂಚನ್ನು ತೆಳುಕೆಂಪು ವರ್ಣದ ಪಟ್ಟಿಕೆಗಳ ಮಧ್ಯದಲ್ಲಿ ಕೆಂಪು ವರ್ಣದ ಪಟ್ಟಿಕೆಯಿದ್ದು, ಅದರಲ್ಲಿ ತ್ರಿಕೋನಾಕಾರದ ಸೂಕ್ಷ್ಮ ರಂಧ್ರಗಳನ್ನು ಹಾಕಿರುವುದು ವಿಶೇಷವಾಗಿದೆ. ಹಳದಿ, ಕೆಂಪು, ತೆಳುಕೆಂಪು, ಕಪ್ಪು ವರ್ಣದಲ್ಲಿ ಅಲಂಕಾರಿಕವಾಗಿ ಆಭರಣಗಳನ್ನು ಚಿತ್ರಿಸಲಾಗಿದ್ದು, ಒಂದು ಆಭರಣವು ಲಕ್ಷ್ಮಣನ ಭುಜದಿಂದ ಕಾಲಿನವರೆಗೆ ಜೋತುಬಿದ್ದಂತಿದೆ. ಬಲಗೈಯಲ್ಲಿ ಹಿಡಿದಿರುವ ಗುರಾಣಿಯನ್ನು ಕಪ್ಪು ವರ್ಣದಲ್ಲಿ ಚಿತ್ರಿಸಿ ಅಂಚನ್ನು ಕೆಂಪು, ತೆಳುಕೆಂಪು ವರ್ಣದಲ್ಲಿ ರಚಿಸಲಾಗಿದೆ.

ಮಧ್ಯದ ಕಪ್ಪು ಭಾಗದಲ್ಲಿ ಹಳದಿ ಮತ್ತು ಕೆಂಪು ವರ್ಣದಿಂದ ಅಲಂಕಾರಿಕ ಹೂ ನಕ್ಷೆಗಳನ್ನು ಚಿತ್ರಿಸಿದ್ದು, ಗುರಾಣಿಯ ಅಂದವನ್ನು ಹೆಚ್ಚಿಸಿವೆ. ಎಡಗೈಯಲ್ಲಿ ಮುಷ್ಟಿ ಮಾಡಿ ಹಿಡಿದಿರುವ ಖಡ್ಗವು ಕಪ್ಪು ಮಿಶ್ರಿತ ಹಳದಿ ವರ್ಣದಲ್ಲಿದ್ದು ಹಿಡಿಕೆಯನ್ನು ಅಲಂಕಾರಿಕವಾಗಿ ರಚಿಸಲಾಗಿದೆ. ಖಡ್ಗವನ್ನು ಹಿಡಿದಿರುವ ಕೈ ಬೆರಳುಗಳಲ್ಲಿ ನಾಲ್ಕು ಬೆರಳುಗಳು ಮಡಿಚಿದ್ದು, ಅದರ ಮೇಲೆ ಹೆಬ್ಬೆರಳು ಅಡ್ಡಲಾಗಿರುವಂತೆ ಚಿತ್ರಿಸಲಾಗಿದೆ. ಕಾಲ್ಬೆರಳುಗಳನ್ನು ಒಂದೇ ಸಮವಾಗಿ ಉದ್ದವಾಗಿ ರಚಿಸಲಾಗಿದ್ದು ನೈಜತೆಯಿಂದ ದೂರವಿದೆ. ಕೈ ಮತ್ತು ಕಾಲು ಬೆರಳುಗಳ ಉಗುರುಗಳನ್ನು ಕೆಂಪು ವರ್ಣದಲ್ಲಿ ರಚಿಸಿರುವುದು ವಿಶೇಷವಾಗಿದೆ. ರಾಮನ ಚಿತ್ರವನ್ನು ರಚಿಸಿರುವಂತೆಯೇ ಇಲ್ಲಿಯೂ ತಲೆ ಹಿಂಭಾಗದಲ್ಲಿ ಕಪ್ಪು ವರ್ಣದ ಜಡೆಯಂತಹ

ವಿನ್ಯಾಸವಿದ್ದು, ಸೂಕ್ಷ್ಮ ರಂಧ್ರಗಳ ಮೂಲಕ ವಿನ್ಯಾಸಗೊಳಿಸಲಾಗಿದೆ. ನಡುವಿಗೆ ಖಡ್ಗವನ್ನು ಸಿಕ್ಕಿಸಿಕೊಳ್ಳುವ ಪರಿಕರವನ್ನು ಹಳದಿ ವರ್ಣದಲ್ಲಿ ಅಲಂಕೃತವಾಗಿ ಚಿತ್ರಿಸಲಾಗಿದೆ. ಚಿತ್ರದ ಸಂಪೂರ್ಣ ಕೆಳಭಾಗದಲ್ಲಿ ಅಲಂಕಾರಿಕ ಹೂ ನಕ್ಷಾವಿನ್ಯಾಸವನ್ನು ಚಿತ್ರಿಸಲಾಗಿದೆ.

### ೩.೧. ಸುಗ್ರೀವ

ರಾಮಾಯಣದ ಪಾತ್ರಗಳಲ್ಲೊಂದಾದ ಕಿಷ್ಕಿಂಧೆಯ ವಾನರ ಮುಖಂಡನಾದ ಸುಗ್ರೀವನನ್ನು ನೇರಳೆ ವರ್ಣದ ಮೈಬಣ್ಣದಲ್ಲಿ ಚಿತ್ರಿಸಲಾಗಿದ್ದು, ಇವನ ಮುಖವೂ ಸಹ ಬದಿಯಲ್ಲಿ ನೋಡುತ್ತಿರುವಂತೆ ರಚನೆಗೊಂಡಿದೆ. ಮುಖದಲ್ಲಿ ಎರಡೂ ಕಣ್ಣುಗಳ ರಚನೆ ಇದ್ದು, ಮೂಗನ್ನು ಮೊಂಡವಾಗಿ ದಪ್ಪದಾದ ಬಾಯಿಯನ್ನು ಕೆಂಪು ವರ್ಣದಲ್ಲಿ ಚಿತ್ರಿಸಿದ್ದು, ಚೂಪಾದ ಹಲ್ಲುಗಳನ್ನು ಹಳದಿ ವರ್ಣದಲ್ಲಿ ರಚಿಸಲಾಗಿದೆ. ಬಾಯಿಯ ಅಂಚಿಗೆ ಕೋರೆ ಹಲ್ಲೊಂದನ್ನು ರಚಿಸಿದ್ದು, ಹಳದಿ ವರ್ಣದಲ್ಲಿ ಮೀಸೆಯನ್ನು ಚಿತ್ರಿಸಿರುವುದು ವಿಶೇಷ. ಕಿರೀಟವನ್ನು ಕೆಂಪು ಮತ್ತು ತೆಳುನೀಲಿ ವರ್ಣದ ತ್ರಿಕೋನಾಕೃತಿಯ ವಿನ್ಯಾಸದಲ್ಲಿ ರಚಿಸಲಾಗಿದೆ. ಎಡಗೈ ಮೇಲೆ ಎತ್ತಿದಂತಿದ್ದು, ಬಲಗೈಯಲ್ಲಿ ಕಮಲದ ಪುಷ್ಪವನ್ನು ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ಕೆಂಪು ಮತ್ತು ಹಳದಿ ವರ್ಣದ ಆಭರಣಗಳನ್ನು ಚಿತ್ರಿಸಲಾಗಿದ್ದು, ಕೆಂಪು ವರ್ಣದ ಹನುಮನಂತಹ ಚಡ್ಡಿಯನ್ನು ಚಿತ್ರಿಸಲಾಗಿದೆ. ಕಾಲುಗಳನ್ನು ದೇಹದಾಕಾರಕ್ಕೆ ತಕ್ಕಂತೆ ಚಿತ್ರಿಸಲಾಗಿದ್ದು, ಕಾಲ್ಬೆರಳುಗಳನ್ನು ವಾನರರಂತೆ ಉದ್ದವಾಗಿ ಹಳದಿ ವರ್ಣದಲ್ಲಿ ಚಿತ್ರಿಸಲಾಗಿದೆ. ಸುಗ್ರೀವನ ಬಾಲವು ಇಡೀ ದೇಹದ ಮೇಲೆ ಬಿಲ್ಲಿನಾಕಾರದಲ್ಲಿ ಅಲಂಕೃತವಾಗಿ ರಚನೆಗೊಂಡಿದೆ. ಬಾಲದುದ್ದಕ್ಕೂ ಕೆಂಪು ಮತ್ತು ತೆಳುಕೆಂಪು ವರ್ಣದ ಪಟ್ಟಿಗಳನ್ನು ಸರಣಿಯಾಗಿ ಚಿತ್ರಿಸಿ ಮಧ್ಯದಲ್ಲಿ ಹಳದಿ ವರ್ಣದ ಹೂಗಳನ್ನು ರಚಿಸಲಾಗಿದೆ. ಬಾಲದ ಕೊನೆಯನ್ನು ಸುರಳಿಯಾಗಿ ಚಿತ್ರಿಸಿದ್ದು, ಗಂಟೆಯೊಂದನ್ನು ಸಿಕ್ಕಿಸಿರುವಂತೆ ಚಿತ್ರಿತಗೊಂಡಿದೆ. ಎಡಭಾಗದಿಂದ ಬಲಭಾಗಕ್ಕೆ ಬಿಲ್ಲಿನಾಕಾರದಲ್ಲಿ ಮಣಿದ ಈ ಬಾಲವು ಸುಗ್ರೀವನ ಬಲಗೈಯಲ್ಲಿರುವ ಕಮಲದ ಹೂವಿಗೆ ತಾಗುವಂತೆ ಅಂತ್ಯಗೊಂಡಿದೆ. ಈ ಕಮಲದ ಹೂವಿನ ಕೆಳಭಾಗದಲ್ಲಿ ಚಿಕ್ಕದಾದ ಸೇವಕನ ಚಿತ್ರವೊಂದಿದ್ದು, ಸುಗ್ರೀವನ ಕಡೆಗೆ ಮುಖ ಮಾಡಿ ನಿಂತಿರುವಂತೆ ಚಿತ್ರಿಸಲಾಗಿದೆ. ನೀಲಿ ವರ್ಣದ ಬಟ್ಟೆಯನ್ನು ಹೊದ್ದಿರುವ ಈ ಸೇವಕನ ಮೈ ವರ್ಣವನ್ನು ತೆಳುಕೆಂಪು ವರ್ಣದಲ್ಲಿ ಚಿತ್ರಿಸಲಾಗಿದ್ದು, ಮುಖವು ಬದಿಯಲ್ಲಿ ನೋಡುವಂತಿದ್ದರೂ ಸಹ ಒಂದೇ ಕಣ್ಣನ್ನು ಚಿತ್ರಿಸಲಾಗಿದೆ. ಎರಡೂ ಕೈಗಳನ್ನು ಸುಗ್ರೀವನೆಡೆಗೆ ಮುಂದೆ ಚಾಚಿರುವಂತೆ ಚಿತ್ರಿಸಲಾಗಿದ್ದು, ಒಂದು ಕೈಯಲ್ಲಿ ಗಂಟೆ ಮತ್ತೊಂದು ಕೈಯಲ್ಲಿ ಧೂಪಾರತಿಯನ್ನು ಹಿಡಿದು ನಿಂತಿರುವಂತಿದೆ. ಎರಡೂ ಪಾತ್ರಗಳ ಸಂಯೋಜನೆಯಾಗಿರುವ ಒಟ್ಟು ಚಿತ್ರಕ್ಕೆ ಕೆಳಭಾಗದಲ್ಲಿ ಕೆಂಪು ಪಟ್ಟಿಯೊಂದನ್ನು ಚಿತ್ರಿಸಲಾಗಿದೆ.

### ೩.೨. ಶೂರ್ಪನಖಿ

ರಾಕ್ಷಸ ಕುಲದ ರಾಜನಾದ ರಾವಣನ ತಂಗಿ ಶೂರ್ಪನಖಿಯನ್ನು ವಿಕಾರ ರೂಪದಲ್ಲಿ ಚಿತ್ರಿಸಲಾಗಿದೆ. ದೇಹದ ಅಂಗಾಂಗಗಳು ಪ್ರಮಾಣಬದ್ಧವಾಗಿರದೆ ರಚನೆಗೊಂಡಿದೆ. ಬದಿಯನ್ನು ನೋಡುತ್ತಿರುವಂತೆ ರಚಿಸಲಾಗಿರುವ ಮುಖದಲ್ಲಿ ಎರಡೂ ಕಣ್ಣುಗಳನ್ನು ಚಿತ್ರಿಸಿದ್ದು, ದಪ್ಪದಾದ ಮೊಂಡುಮೂಗು,

ದೊಡ್ಡದಾದ ಕೋರೆ ಹಲ್ಲುಗಳನ್ನು ಹೊಂದಿದ ಬಾಯಿಯಿದ್ದು, ತುಟಿ ಹಾಗೂ ನಾಲಿಗೆಯನ್ನು ಕೆಂಪು ವರ್ಣದಲ್ಲಿ ಚಿತ್ರಿಸಲಾಗಿದೆ. ದಟ್ಟವಾದ ಕಪ್ಪು ತಲೆಗೂದಲನ್ನು ತುರುಬು ಕಟ್ಟಿ ಇಳಿಬಿಟ್ಟಂತೆ ರಚಿಸಿದ್ದು, ಕೆಂಪು ವರ್ಣದ ರವಿಕೆಯನ್ನು ಮಾತ್ರ ರಚಿಸಲಾಗಿದೆ. ಹಳದಿ ಮತ್ತು ಕೆಂಪು ವರ್ಣದ ಓಲೆ ಹಾಗೂ ಸರಗಳ ವಿನ್ಯಾಸವಿದ್ದು, ಎಡಗೈಯನ್ನು ಮೇಲೆತ್ತಿರುವಂತೆ, ಬಲಗೈಯನ್ನು ಮುಂದೆ ಚಾಚಿರುವಂತೆ ಚಿತ್ರಿಸಲಾಗಿದೆ. ಒಂದು ಕೈ ಬೆರಳುಗಳ ಮಧ್ಯೆ ಗೋಲಿಯಾಕಾರದ ವಸ್ತುಗಳನ್ನು ಹಿಡಿದಿರುವಂತಿದ್ದು, ಇನ್ನೊಂದು ಕೈಯ ಮುಂಭಾಗವು ಕತ್ತರಿಸಿ ಹೋಗಿದೆ. ದೇಹದ ಕೆಳಭಾಗವನ್ನು ನಗ್ನವಾಗಿ ಚಿತ್ರಿಸಿದ್ದು, ಕಾಲ್ಬೆರಳುಗಳು ಉದ್ದವಾಗಿ ಒಂದೇ ಸಮದಲ್ಲಿ ಇರುವಂತೆ ಚಿತ್ರಿಸಲಾಗಿದೆ.

**೩೩. ಮಂಚ ಹನುಮಂತ**

ಐರಾವಣ-ಮೈರಾವಣ ಎಂಬ ರಾಮಾಯಣದ ಕಥಾ ಸಂದರ್ಭದಲ್ಲಿ ಬರುವ ಈ ಮಂಚ ಹನುಮಂತನು ಹನುಮಂತನ ಮಗನಾಗಿದ್ದಾನೆ. ಬ್ರಹ್ಮಚಾರಿಯಾದ ಹನುಮಂತನು ಸಮುದ್ರವನ್ನು ದಾಟಿ ಲಂಕೆಯನ್ನು ಪ್ರವೇಶಿಸುವಾಗ ಸಮುದ್ರದಲ್ಲಿ ಚಲಿಸುತ್ತಿದ್ದ ಮೇನಕಾದೇವಿ ಎಂಬುವವಳ ಕೈಮೇಲೆ ಹನುಮಂತನ ಬೆವರಿನ ಹನಿಯು ಬೀಳುತ್ತದೆ. ಇದನ್ನು ಸೇವಿಸಿದ ಮೇನಕಾದೇವಿಯ ಗರ್ಭದಿಂದ ಮಂಚ ಹನುಮಂತನು ಜನಿಸುತ್ತಾನೆ. ರಾಮಾಯಣದ ಒಂದು ಪಾತ್ರವಾದ ಈ ಮಂಚ ಹನುಮಂತನನ್ನು ಹನುಮಂತನಂತೆಯೇ ಸಂಪೂರ್ಣ ಕಪ್ಪು ವರ್ಣದಲ್ಲಿ ರಚಿಸಲಾಗಿದ್ದು, ಕೆಂಪು ವರ್ಣದ ಹನುಮ ಚಡ್ಡಿಯನ್ನು ಚಿತ್ರಿಸಲಾಗಿದೆ. ಆಭರಣ ಮತ್ತು ಚಡ್ಡಿಯನ್ನು ಮಾತ್ರ ಕೆಂಪು ಮತ್ತು ಹಳದಿ ವರ್ಣದಲ್ಲಿ ಚಿತ್ರಿಸಿರುವುದು ಕಾಣಬಹುದು. ಬದಿಗೆ ನೋಡುತ್ತಿರುವಂತೆ ಚಿತ್ರಿಸಲಾಗಿರುವ ಮುಖದಲ್ಲಿ ಎರಡೂ ಕಣ್ಣುಗಳನ್ನು ರಚಿಸಿದ್ದು, ಹುಬ್ಬು, ಮೀಸೆ, ಹಲ್ಲು ಮತ್ತು ಕಿವಿಯನ್ನು ಹಳದಿ ವರ್ಣದಲ್ಲಿ ಚಿತ್ರಿಸಲಾಗಿದೆ. ಕೆಂಪು ವರ್ಣದ ತುಟಿಯನ್ನು ಚಿತ್ರಿಸಿದ್ದು, ನಾಲಿಗೆಯನ್ನು ಹೊರಹಾಕಿ ಬಾಯಿ ತೆರೆದು ನಗುತ್ತಾ, ಎಡಗೈಯನ್ನು ಮೇಲೆತ್ತಿ, ಬಲಗೈ ಮುಂದೆ ಮಾಡಿ, ಬಲಗಾಲನ್ನು ಎತ್ತಿ ಕುಣಿದಾಡುತ್ತಿರುವ ಭಂಗಿಯಲ್ಲಿ ಚಿತ್ರಿಸಲಾಗಿದೆ. ಕೆಂಪು, ನೀಲಿ, ಹಳದಿ ವರ್ಣದಿಂದ ಗೋಪುರದಾಕಾರದಲ್ಲಿ ಕಿರೀಟವನ್ನು ಚಿತ್ರಿಸಲಾಗಿದ್ದು, ಹಳದಿ ಮತ್ತು ನೀಲಿ ವರ್ಣಗಳ ನಕ್ಷಾ ವಿನ್ಯಾಸಗಳಿವೆ. ಭುಜದಿಂದ ಕಾಲಿನವರೆಗೂ ಇಳಿಬಿದ್ದಿರುವ ದೊಡ್ಡ ಆಭರಣವೊಂದನ್ನು ಕೆಂಪು ವರ್ಣದಲ್ಲಿ ಚಿತ್ರಿಸಿದ್ದು, ಮಧ್ಯದಲ್ಲಿ ರಂಧ್ರಗಳಿಂದ ವಿನ್ಯಾಸಗೊಳಿಸಲಾಗಿದೆ. ಇಡೀ ದೇಹದಾಕೃತಿಯನ್ನು ಕಪ್ಪು ವರ್ಣದಲ್ಲಿ ಚಿತ್ರಿಸಿರುವುದರಿಂದ ಮೊಣಕೈ, ಮೊಣಕಾಲು, ಬೆರಳುಗಳ ಸಂದಿಗಳು, ಹೊಟ್ಟೆಯ ಮಡಿಕೆಗಳು ಎದ್ದು ಕಾಣುವಂತೆ ಚಿಕ್ಕ ಚಿಕ್ಕ ರಂಧ್ರಗಳನ್ನು ರಚಿಸಿರುವುದು ವೈಶಿಷ್ಟ್ಯಪೂರ್ಣವಾಗಿದೆ.

**೩೪. ಲವ**

ರಾಮನ ಮಕ್ಕಳಾದ ಲವ-ಕುಶರಲ್ಲಿ ಲವನ ಆಕೃತಿಯನ್ನು ಹೆಚ್ಚು ಅಲಂಕಾರಿಕವಾಗಿ ರಚಿಸಿರುವುದನ್ನು ಕಾಣಬಹುದು. ಯುದ್ಧ ಅಭ್ಯಾಸದಲ್ಲಿ ನಿರತರಾಗಿರುವಂತೆ ಚಿತ್ರಿಸಲಾಗಿರುವ ಲವನ ಆಕೃತಿಯು ಹಳದಿ ವರ್ಣದ ಮೈಬಣ್ಣವನ್ನು ಹೊಂದಿದ್ದು, ಕೆಂಪು ವರ್ಣದ ಬಟ್ಟೆಯನ್ನು ಚಿತ್ರಿಸಲಾಗಿದೆ. ಬಟ್ಟೆಯ ಅಂಚಿನುದ್ದಕ್ಕೂ ಕೊಳವೆಯಾಕಾರದ, ಗೋಲಾಕಾರದ, ತ್ರಿಕೋನಾಕಾರದ, ಸೂಕ್ಷ್ಮ ರಂಧ್ರಗಳನ್ನು

ವಿನ್ಯಾಸಗೊಳಿಸಿರುವುದು ಆಕೃತಿಯು ಹೊಳೆಯುವಂತೆ ಗೋಚರಿಸುತ್ತದೆ. ಬದಿಗೆ ನೋಡುತ್ತಿರುವಂತೆಯೇ ಇರುವ ಮುಖದಲ್ಲಿ ಎರಡೂ ಕಣ್ಣುಗಳನ್ನು ಚಿತ್ರಿಸಿದ್ದು, ಹುಬ್ಬನ್ನು ಎತ್ತಿ ಮುಂದಿರುವುದನ್ನು ನೋಡುತ್ತಿರುವಂತೆ ಚಿತ್ರಿಸಲಾಗಿರುವುದು. ಕಿವಿಯನ್ನು ನೈಜವಾಗಿ ಚಿತ್ರಿಸದೆ ಇಲ್ಲಿಯೂ ಸಹ ಅಲಂಕಾರಿಕವಾಗಿ ಚಿತ್ರಿಸಿರುವುದು ವಿಶೇಷ. ಬಲಗೈಯಲ್ಲಿ ಬಿಲ್ಲು, ಎಡಗೈಯಲ್ಲಿ ಬಾಣವನ್ನು ಎಳೆದು ಬಿಡುತ್ತಿರುವಂತೆ ಚಿತ್ರಿಸಲಾಗಿರುವ ಈ ಚಿತ್ರದಲ್ಲಿ ಬಿಲ್ಲನ್ನು ಸಂಪೂರ್ಣ ಕಪ್ಪು ವರ್ಣದಲ್ಲಿ ಚಿತ್ರಿಸಿ ಅಲ್ಲಲ್ಲಿ ಕೆಂಪು ಪಟ್ಟಿಕೆಗಳೊಡನೆ ಸೂಕ್ಷ್ಮ ರಂಧ್ರಗಳ ವಿನ್ಯಾಸವನ್ನು ಮಾಡಲಾಗಿದೆ. ಎಡಗೈಯಿಂದ ಹಿಂದೆ ಹಾದು ಬಲಗೈ ಮುಂಭಾಗದಿಂದ ಕಾಲಿನವರೆಗೂ ಚಿತ್ರಿಸಲಾಗಿರುವ ಶೆಲ್ಯಯಲ್ಲಿ ಹಳದಿ ವರ್ಣದ ಪಟ್ಟಿಗಳ ಮಧ್ಯದಲ್ಲಿ ಕೆಂಪು ವರ್ಣದ ಪಟ್ಟಿಯನ್ನು ಚಿತ್ರಿಸಿ, ಅದರಲ್ಲಿ ತ್ರಿಕೋನಾಕೃತಿಯ ರಂಧ್ರಗಳನ್ನು ರಚಿಸಿ, ಪಕ್ಕದ ಹಳದಿ ಪಟ್ಟಿಕೆಗಳಲ್ಲಿ ಗೋಲಾದ ಸಣ್ಣ ರಂಧ್ರಗಳನ್ನು ವಿನ್ಯಾಸಗೊಳಿಸಿರುವುದು ಅದ್ಭುತವಾಗಿದೆ. ಚಿಕ್ಕದಾದ ಚಟ್ಟೆಯಾಕಾರದ ಕಿರೀಟದಲ್ಲಿಯೂ ಗೋಲಾಕಾರದ ಸಣ್ಣ ರಂಧ್ರಗಳನ್ನು ಚಿತ್ರಿಸಿರುವುದು ವಿಶೇಷ. ಬಿಲ್ಲು ಮತ್ತು ಬಾಣಕ್ಕೆ ಹೊಂದಿಕೊಂಡಿರುವಂತೆ ಗಂಟೆ ಮತ್ತು ಮೀನಿನಾಕೃತಿಯನ್ನು ಕೆಂಪು ಮತ್ತು ಕಪ್ಪು ವರ್ಣದಲ್ಲಿ ವಿನ್ಯಾಸಗೊಳಿಸಿದ್ದಾರೆ. ಕೆಳ ಅಂಗಿಯ ಮೇಲ್ ಹೊದಿಕೆಯ ಮೇಲೆ ಕಪ್ಪು ಮತ್ತು ಹಳದಿ ವರ್ಣದ ಪಟ್ಟಿಗಳನ್ನು ವಿನ್ಯಾಸಗೊಳಿಸಿ ಅಂಚಿಗೆ ಶೆಲ್ಯಯಂತೆಯೇ ಚಿತ್ತಾರಗೊಳಿಸಲಾಗಿದೆ. ಇಲ್ಲಿ ಕೆಂಪು ವರ್ಣದ ಪಾದರಕ್ಷೆಗಳನ್ನು ರಚಿಸಿದ್ದು, ಅದಕ್ಕೂ ಅಲಂಕಾರಿಕ ರಂಧ್ರವಿನ್ಯಾಸ ಮಾಡಿರುವುದು ವಿಶೇಷವಾಗಿದೆ. ಎಡಗೈ ಉಗುರುಗಳನ್ನು ಚಿತ್ರಿಸಲಾಗಿದ್ದು, ಬಲಗೈಯಲ್ಲಿ ಉಗುರುಗಳ ರಚನೆಯನ್ನು ಮರೆತಿರುವಂತಿದೆ.

**೩.೫. ಕುಶ**

ಲವನ ಭಂಗಿಯನ್ನೇ ಯಥಾವತ್ತಾಗಿ ಕುಶನ ಪಾತ್ರಕ್ಕೂ ಚಿತ್ರಿಸಲಾಗಿದ್ದು, ಬಟ್ಟೆ, ಆಭರಣ, ವರ್ಣವಿನ್ಯಾಸದಲ್ಲಿ ಮಾತ್ರ ಸಾಧಾರಣ ವಿಧಾನವನ್ನು ಅನುಸರಿಸಲಾಗಿದೆ. ಹಳದಿ ವರ್ಣದ ಧೋತ್ರಕ್ಕೆ ಕೆಂಪು ವರ್ಣದ ಉದ್ದವಾದ ನಿಲುವಂಗಿಯನ್ನು ಚಿತ್ರಿಸಿದ್ದು, ಯಾವುದೇ ಅಲಂಕಾರಿಕ ವಿನ್ಯಾಸವಿಲ್ಲದೇ ಚಪ್ಪಟೆ ವರ್ಣ ಲೇಪನವನ್ನು ಕಾಣಬಹುದು. ಕಿರೀಟದಲ್ಲಿಯೂ ಸಾಮ್ಯತೆ ಇದ್ದು, ಅಲಂಕಾರಿಕ ರಂಧ್ರವಿನ್ಯಾಸವನ್ನು ಕುಶನ ಚಿತ್ರದಲ್ಲಿ ಮಾಡಲಾಗಿದೆ. ತೆಳುಕೆಂಪು ವರ್ಣದ ಶೆಲ್ಯಯೊಂದು ಎಡಗೈಯಿಂದ ಹಿಂದೆ ಹಾಯ್ದು, ಬಲಗೈ ಮುಂಭಾಗದಿಂದ ಕಾಲಿನವರೆಗೂ ಉದ್ದವಾಗಿ ರಚನೆಗೊಂಡಿದೆ. ಕಪ್ಪು ವರ್ಣದ ಬಿಲ್ಲು ಕೆಂಪು ವರ್ಣದ ಭಾಣವನ್ನು ಕಾಣಬಹುದಾಗಿದೆ. ಲವನಿಗೆ ಕೆಂಪು ವರ್ಣದಲ್ಲಿ ರಚಿಸಲಾಗಿದ್ದ ಪಾದರಕ್ಷೆಯನ್ನು ಕುಶನಿಗೆ ಕಪ್ಪು ವರ್ಣದಲ್ಲಿ ರಚಿಸಿದ್ದು, ವರ್ಣದಲ್ಲಿಯೇ ಅಲಂಕಾರಿಕ ವಿನ್ಯಾಸ ಮಾಡಿರುವುದನ್ನು ಕಾಣಬಹುದು.

**೩.೬. ಬಲರಾಮ**

ಕೃಷ್ಣನ ಸಹೋದರ ಬಲರಾಮನ ಚಿತ್ರವು ಬಲಿಷ್ಠ ವ್ಯಕ್ತಿತ್ವ ಬಿಂಬಿಸುವಂತಿದೆ. ಮುಖದಲ್ಲಿ ಎರಡೂ ಕಣ್ಣುಗಳು ಇರುವುದು, ಹುಬ್ಬು ಮತ್ತು ವಿಭೂತಿ ವಿಶಿಷ್ಟವಾಗಿವೆ. ಅಗಲವಾದ ಕಪ್ಪು ಗುಡ್ಡೆಗಳುಳ್ಳ

ಕಣ್ಣು, ಮೇಲೆ ವಿಭೂತಿ ಮತ್ತು ಹಲ್ಲುಗಳಿಗೆ ಕೆಂಪು ಬಣ್ಣವನ್ನು ಲೇಪಿಸಿದ್ದು ವಿಶಿಷ್ಟವಾಗಿದೆ. ಕಿರೀಟದಲ್ಲಿ ಅನೇಕ ಸಂಗತಿಗಳನ್ನು ಚಿಕ್ಕ ಚಿಕ್ಕದಾಗಿ ವಿಂಗಡಿಸಿ ಕೂದಲಿನಿಂದ ಕೆಳಗೆ ಗಂಟೆಯಾಕಾರದಲ್ಲಿ ಜೋತುಬಿಡಲಾಗಿದೆ. ಎಡಗೈಯಲ್ಲಿ ತ್ರಿಶೂಲ, ಬಲಗೈಯಲ್ಲಿ ಪಂಚಾಂಗದಂತಹ ಅಂಕಿ-ಅಂಶಗಳುಳ್ಳ ಕಾಗದವನ್ನು ಹಿಡಿದು ಹೊರಟಿರುವಂತೆ ತೆಳುಗೆಂಪು ವರ್ಣದ ಮುಖ, ಕೈಕಾಲು ಹೊಂದಿದೆ. ಕೆಂಪು ಬಣ್ಣದ ಪಟ್ಟೆ ಪಟ್ಟೆ ಅಂಗಿಯನ್ನು ತೊಡಿಸಲಾಗಿದೆ. ಮೇಲೆ ಅದೇ ಬಣ್ಣದಲ್ಲಿ ತೆಳುನೀಲಿ ಬಣ್ಣದ ಅಂಚುಳ್ಳ ವರ್ತುಲಗಳನ್ನು ಹೊಂದಿದ ಶಾಲು ವಿರಾಜಮಾನವಾಗಿದೆ. ಬಲಗೈ ಕೆಳಗೆ ವಿಶಿಷ್ಟ ಆಕಾರದ ಬಟ್ಟೆಯನ್ನು ಜೋತುಬಿಡಲಾಗಿದೆ. ತೆಳುನೀಲಿ ಬಣ್ಣದ ಧೋತ್ರವನ್ನು ಉಡಿಸಿ ಅಂಚಿನಲ್ಲಿ ಕಪ್ಪು ಬಣ್ಣದ ತ್ರಿಕೋನಾಕಾರದ ನಕ್ಷೆಗಳನ್ನು ರಚಿಸಲಾಗಿದೆ. ಅಲ್ಲಿಯೂ ಕೂಡ ಕೆಂಪು ಮತ್ತು ಬಿಳಿ ಬಣ್ಣದ ಪಟ್ಟಿಯಿಂದ ಕೊನೆಗೊಳಿಸಲಾಗಿದೆ. ಬೂಟಿನಾಕಾರದ ಪಾದರಕ್ಷೆಯನ್ನು ತೊಡಿಸಲಾಗಿದೆ. ಒಟ್ಟಿನಲ್ಲಿ ಇತರ ವ್ಯಕ್ತಿತ್ವಗಳಿಗಿಂತ ಬಲರಾಮನ ಚಿತ್ರ ಬಲಶಾಲಿ ಎಂಬ ವಿಶೇಷವಾದ ಕಥನವನ್ನು ಹೇಳುವಂತೆ ಸೃಷ್ಟಿಸಿದ್ದು ಕಲಾವಿದನ ನೈಪುಣ್ಯತೆಯಾಗಿದೆ.

**೩.೭. ದುರ್ದಂಭಿ**

ರಾವಣನ ಇನ್ನೋರ್ವ ತಂಗಿ ಎಂದು ಹೇಳಲಾಗುವ ದುರ್ದಂಭಿಯ ಚಿತ್ರ ಈ ಒಟ್ಟು ಚಿತ್ರಗಳಲ್ಲಿ ತುಂಬಾ ವಿಶಿಷ್ಟವಾದ ಕೃತಿಯಾಗಿದೆ. ಬೆಳದಿಂಗಳ ಚಿತ್ರಗಳಲ್ಲಿರುವಂತೆ ಪ್ರಥಮವಾಗಿ ಹಿಂದಿನ ಸತ್ತಿಗೆಯಲ್ಲಿ ಸೂರ್ಯ-ಚಂದ್ರವಿರುವುದು ಒಂದು ವಿಶೇಷತೆಯಾದರೆ ಬಲಗೈಯಲ್ಲಿ ಕಮಲದ ಹೂವು ಇರುವುದು ಇನ್ನೊಂದು ವಿಶೇಷ. ಮುಖದಲ್ಲಿ ಎರಡು ಕಣ್ಣುಗಳನ್ನು ತೋರಿಸಿ ಹುಬ್ಬಿನ ವಿನ್ಯಾಸದಲ್ಲಿ ಸೂಕ್ಷ್ಮತೆಯನ್ನು ಮೆರೆದು ಕುಂಕುಮದ ಸ್ಥಳದಲ್ಲಿ ನಾಮದಂತಹ ಕಪ್ಪು ಸೂಕ್ಷ್ಮ ಗೆರೆಗಳಿಂದ ವಿನ್ಯಾಸಗೊಳಿಸಲಾಗಿದೆ. ತಲೆಯ ಮುಂಭಾಗದ ಕಿರೀಟದಂತಹ ಕೆಂಪು ಬಣ್ಣದ ಪಟ್ಟಿ, ಬಿಳಿ ಮತ್ತು ಕೆಂಪು ಬಣ್ಣದ ಮುತ್ತುಗಳಿಂದ ರಚಿತವಾಗಿದ್ದು, ಮುಂದಿನಿಂದ ಹಿಂದಿನವರೆಗೆ ಸಾಲಾಗಿ ಬಿಳಿಯ ಮುತ್ತುಗಳನ್ನು ಹಾಕಲಾಗಿದೆ. ಕಪ್ಪು ಕೂದಲನ್ನು ತಿರುವಿ ತುರುಬಿನಂತೆ ಕಟ್ಟಿ ಉಳಿದ ಕೂದಲನ್ನು ಮತ್ತೆ ಜೋತುಬಿಡಲಾಗಿದೆ. ಕೂದಲಿನ ಮಿಂಚುವಿಕೆಗೆ ಅಲ್ಲಲ್ಲಿ ತೊಗಲಿಗೆ ರಂಧ್ರಗಳನ್ನು ಹಾಕಲಾಗಿದೆ. ಕಿವಿಯಲ್ಲಿನ ಓಲೆ ಹೂವಿನಾಕಾರದಲ್ಲಿದೆ. ಕೊರಳಲ್ಲಿ ಕಪ್ಪು ಬಣ್ಣದ ಸರದಲ್ಲಿ ರಂಧ್ರಗಳನ್ನು ಹಾಕಿ ಮಿಂಚುವಂತೆ ಮಾಡಲಾಗಿದೆ. ಕಪ್ಪು ಬಣ್ಣದ ರವಿಕೆಯನ್ನು ತೊಡಿಸಿ ಅದರ ಮೇಲೆ ಬಿಳಿಯ ಚುಕ್ಕೆಗಳನ್ನು ಸೃಷ್ಟಿಸಿ ಅಂದ ಹೆಚ್ಚಿಸಲಾಗಿದೆ. ರವಿಕೆಯ ಅಂಚಿನಲ್ಲಿ ಮತ್ತೆ ಅಡ್ಡ ಅಡ್ಡದಾಗಿ ವಿನ್ಯಾಸಗಳನ್ನು ಮಾಡಿ ಅಂತ್ಯವನ್ನು ಬಿಂಬಿಸಲಾಗಿದೆ. ಇನ್ನು ಸೀರೆಯ ವಿಷಯದಲ್ಲಿ ತುಂಬಾ ಮುತುವರ್ಜಿ ವಹಿಸಿ ಇವಳೊಬ್ಬ ಸುಂದರಿ ಎಂಬ ಪರಿಕಲ್ಪನೆಗೆ ಸಾಕ್ಷಿಯಾಗುವಂತೆ ಅತ್ಯಂತ ಸುಂದರವಾಗಿ ಚಕ್ಕಾಮಣೆಗಳಂತೆ ಕಪ್ಪು ಚೌಕಡಿಗಳನ್ನು ರಚಿಸಿ ಸೀರೆಯ ಅಂಚಿನಲ್ಲಿ ಅದೇ ತೆಳುಗೆಂಪಿನಲ್ಲಿ ರಂಧ್ರಗಳನ್ನು ಹಾಕಿ ವಿನ್ಯಾಸಗೊಳಿಸಲಾಗಿದೆ.

ದುರ್ದಂಭಿಯ ಹಿಂದೆ ಸತ್ತಿಗೆಯನ್ನು ಹಿಡಿದ ವ್ಯಕ್ತಿ ಸೈನಿಕ ಪೋಷಾಕಿನಲ್ಲಿ ಕಾಣುತ್ತಾನೆ. ಒಂದೇ ಕಣ್ಣು ನಡುವಿನಲ್ಲಿ ಚಿಕ್ಕ ಕತ್ತಿ, ಪೇಟ, ನಿಲುವಂಗಿ, ಪೈಜಾಮು ಮತ್ತು ಪಾದರಕ್ಷೆ ಹೊಂದಿದ ವ್ಯಕ್ತಿ

ದುರ್ದುಂಭಿಗಿಂತ ಚಿಕ್ಕದಾಗಿ ಚಿತ್ರಿಸಲಾಗಿದೆ. ಒಟ್ಟು ಚಿತ್ರವು ಇತರೆ ಎಲ್ಲಾ ಚಿತ್ರಗಳಿಗಿಂತ ಹೆಚ್ಚು ಸೌಂದರ್ಯಪೂರ್ಣವಾಗಿ ಕಾಣುತ್ತದೆ.

**೩೮. ಬಕಾಸುರ**

ಮಹಾಭಾರತದಲ್ಲಿ ಬರುವ ಬಲಶಾಲಿ ರಾಕ್ಷಸ, ಮಲ್ಲಯುದ್ಧದಲ್ಲಿ ಭೀಮನಿಂದ ಹತನಾದ ಬಂಡಿ ಅನ್ನ ತಿನ್ನುವ ಬಕಾಸುರನನ್ನು ಪೂರ್ಣ ತೆಳುಕೆಂಪು ವರ್ಣದಲ್ಲಿ ರಚಿಸಲಾಗಿದೆ. ಕುತ್ತಿಗೆ ಹಾಗೂ ದೇಹ ಒಂದೇ ಆಗಿರುವಂತೆ ದೊಡ್ಡದಾದ ಮುಖವನ್ನು ಬದಿಗೆ ಹೊರಳಿರುವಂತೆ ಚಿತ್ರಿಸಿದ್ದು, ಮುಖದಷ್ಟು ಅಗಲವಾದ ಬಾಯಿಯನ್ನು ತೆರೆದಿರುವಂತೆ ಚಿತ್ರಿಸಲಾಗಿದೆ. ಕೆಂಪಾದ ನಾಲಿಗೆ ಹೊರಚಾಚಿರುವಂತಿದ್ದು, ಚೂಪಾದ ಉದ್ದನೆಯ ಹಲ್ಲುಗಳಿದ್ದು, ತುಟಿಯ ಸಂದಿಯಿಂದ ಕೋರೆ ಹಲ್ಲೊಂದು ಹೊರಚಾಚಿದಂತಿದೆ. ಹಲ್ಲುಗಳ ಮೇಲೆ ಕೆಂಪು ಬೊಟ್ಟುಗಳನ್ನು ಇರಿಸಿದ್ದು, ವಿಶೇಷವಾಗಿದೆ. ಮುಖಕ್ಕೆ ಚಪ್ಪಟೆಯಾಗಿರುವಂತ ಮೂಗು, ಒಂದೇ ಕಣ್ಣು, ಕಪ್ಪು ವರ್ಣದ ಮೀಸೆ ಮತ್ತು ಗಡ್ಡಗಳನ್ನು ರಚಿಸಲಾಗಿದೆ. ಕೆಂಪು ವರ್ಣದ ಹನುಮನಂತಹ ಚಡ್ಡಿಯನ್ನು ಚಿತ್ರಿಸಿದ್ದು, ಅಂಚುಗಳಿಗೆ ಕೆಂಪು, ತೆಳುಕೆಂಪು, ಹಳದಿ ವರ್ಣಗಳಿಂದ ವಿನ್ಯಾಸ ಮಾಡಲಾಗಿದೆ. ಮೈತುಂಬಾ ಕಪ್ಪು ಮತ್ತು ಕೆಂಪು ವರ್ಣಗಳ ಕಣ್ಣಿನಂತಹ ಆಕಾರಗಳನ್ನು ಬರೆಯಲಾಗಿದೆ. ತಲೆಗೂದಲನ್ನು ಮೂಗಿನಿಂದ ತೊಡೆಯವರೆಗೂ ಕಪ್ಪು ಮತ್ತು ಕೆಂಪು ವರ್ಣಗಳಿಂದ ಚಿತ್ರಿಸಲಾಗಿದೆ. ಮೀಸೆ, ಗಡ್ಡ, ತಲೆಗೂದಲುಗಳಲ್ಲಿ ಸಣ್ಣ ರಂಧ್ರಗಳನ್ನು ಕೊರೆದು ವಿನ್ಯಾಸ ಮಾಡಿರುವುದು ವಿಶೇಷವಾಗಿದೆ. ಖಡ್ಗ ಹಾಗೂ ಗುರಾಣಿಗಳನ್ನು ಹಿಡಿದು ನಿಂತಿರುವ ಬಕಾಸುರನ ದೇಹದಾರ್ಢ್ಯತೆಯನ್ನು ಇಳಿಬಿದ್ದಿರುವ ಹೊಟ್ಟೆ, ದುಂಡಾಗಿರುವ ಕೈಕಾಲುಗಳ ಮೂಲಕ ವಿಭಿನ್ನವಾಗಿ ಹೊರರೇಖೆಗಳನ್ನು ಹಾಕಿ ಚಿತ್ರಿಸಲಾಗಿದೆ. ಮೊಣಕಾಲು ಹಾಗೂ ಮೊಣಕೈಗಳಿಗೆ ಮುರುಗಿಯ ಹಾಗೆ ಕಪ್ಪು ಹೊರ ರೇಖೆಗಳನ್ನು ಚಿತ್ರಿಸಲಾಗಿದೆ. ಎಡಗಾಲಲ್ಲಿ ಆರು ಬೆರಳುಗಳನ್ನು, ಬಲಗಾಲಲ್ಲಿ ಐದು ಬೆರಳುಗಳನ್ನು ಚಿತ್ರಿಸಿದ್ದು, ಮುಂಗೈಯನ್ನು ಚಿತ್ರಿಸದೇ ಇರುವುದು ಅವಾಸ್ತವವಾಗಿದೆ.

**೩೯. ಸಂಜೀವಿನಿ ಪರ್ವತ ಹೊತ್ತ ಹನುಮಂತ**

ಈ ಹಿಂದೆ ಇರುವ ಹನುಮಂತನ ಚಿತ್ರದಂತೆ ಇಲ್ಲಿಯೂ ಮೈವಳಿಕೆಯನ್ನು ರಚಿಸಲಾಗಿದೆ. ಅದಕ್ಕಿಂತ ಭಿನ್ನವಾದ ವಿಷಯವೆಂದರೆ ಎರಡೂ ಕೈಗಳನ್ನು ಮೇಲೆತ್ತಿ ಸಂಜೀವಿನಿ ಪರ್ವತವನ್ನು ಹೊತ್ತುತಂದ ಸನ್ನಿವೇಶ ಇದಾಗಿದೆ. ಪರ್ವತದಲ್ಲಿ ಪ್ರಮುಖವಾಗಿ ಹುಲಿ, ಜಿಂಕೆ, ಹಾವು ಮೊದಲಾದ ಪ್ರಾಣಿಗಳನ್ನು ನಿಚ್ಚಳವಾಗಿ ಕಾಣುವಂತೆ ಚಿತ್ರಿಸಲಾಗಿದೆ. ಇದು ದೂರದ ಗುಡ್ಡ ಎನ್ನಿಸುವುದಿಲ್ಲ. ಗಿಡಮರಗಳು ದೊಡ್ಡ ದೊಡ್ಡ ಆಕಾರದಲ್ಲಿದ್ದು, ಹನುಮಂತ ಮೇಲ್ಮುಖವಾಗಿ ನೋಡಿದ್ದಾನೆ. ಈ ಚಿತ್ರದ ಒಟ್ಟು ವಿಶೇಷತೆ ಎಂದರೆ ಇಡೀ ಗುಡ್ಡಕ್ಕೆ ಸುತ್ತಿದ ಕಪ್ಪು ಬಣ್ಣದ ಬಾಲವು ಹನುಮಂತನಿಗಿಂತ ತುಂಬಾ ದೊಡ್ಡದಾಗಿ ವಿಶೇಷ ಎನಿಸುತ್ತದೆ.

### ೪೦. ದೇವೇಂದ್ರ ರಾಜ

ಕಪ್ಪು ಕುದುರೆಯನ್ನೇರಿ ಬಂದ ರಾಜ ಹಿಂದೆ ಸೇವಕ ಛತ್ರವನ್ನು ಹಿಡಿದಂತೆ ಮುಂದೊಬ್ಬ ಸೇವಕ ಚಾಮರವನ್ನು ಹಿಡಿದಿರುವ ಚಿತ್ರ ಇದಾಗಿದೆ. ಇಲ್ಲಿ ಮುಖವು ಬದಿಯದಾಗಿದ್ದರೂ ಎಲ್ಲಾ ಚಿತ್ರಗಳಂತೆ ಎರಡು ಕಣ್ಣುಗಳನ್ನು ತೋರಿ, ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಗುರಾಣಿ, ಛತ್ರದಿಂದ ಗಂಟೆಯಾಕಾರದ ಗೊಂಡೆಗಳು ಜೋತುಬಿದ್ದುದು ಸಾಮಾನ್ಯ ಚಿತ್ರ ಪರಿಚಯವಾಗಿದೆ. ರಾಜ ಖಡ್ಗವನ್ನು ಎಡಗೈಯಲ್ಲಿ ಹಿಡಿದು ಚೂಪನೆಯ ಖಡ್ಗ ಎಲ್ಲೂ ಮುಕ್ಕಾಗದೆ ಚಾಮರಕ್ಕೆ ಹೊಂದಿಕೊಂಡು ನೈಜತೆಯನ್ನು ಕಾಪಾಡಿಕೊಂಡಿದೆ. ಕುದುರೆಗೆ ತಕ್ಕ ಬಾಲವಿಲ್ಲದಿರುವುದು ಅವಾಸ್ತವವಾಗಿದೆ. ಛತ್ರಿಯು ರಾಜನ ಹಿಂದೆ ಇರುವುದು ಅವನಿಗೆ ನೆರಳಿಗಾಗಿ ಅಲ್ಲ ಎನಿಸುತ್ತಿದೆ. ಕೆಂಪು ಬಣ್ಣದ ಕುದುರೆಯ ಹೊದಿಕೆ ಎದ್ದು ಕಾಣುತ್ತದೆ. ಅದರಂತೆ ಕೆಂಪು ಬಣ್ಣದ ಛತ್ರಚಾಮರಗಳು ಕೆಂಪಿನಿಂದ ತುಂಬಿಹೋಗಿವೆ. ಅಲ್ಲಲ್ಲಿ ಹಳದಿ ಮತ್ತು ಕಪ್ಪು ರೇಖೆಗಳಿಂದ ಪೂರ್ಣಗೊಳಿಸಲಾಗಿದೆ.

### ೪೧. ಅಶ್ವಮೇಧದ ಕುದುರೆ

ಶ್ರೀರಾಮಚಂದ್ರ ಅಶ್ವಮೇಧ ಯಾಗಕ್ಕಾಗಿ ಸಿದ್ಧಗೊಳಿಸಿದ ಕುದರೆ ಇದಾಗಿದ್ದು, ತೆಳುಹಳದಿ ಬಣ್ಣದ ಮೈಕಾಂತಿಯನ್ನು ಹೊಂದಿದೆ. ಬೆನ್ನಮೇಲೆ ಹಾಕಿದ ಬಟ್ಟೆ ಕೆಂಪು ಮತ್ತು ಕಪ್ಪು ಬಣ್ಣಗಳಿಂದ ಅಡ್ಡಡ್ಡ ಗೆರೆಗಳನ್ನು ಹಾಕಿ ರಚಿಸಿರುವುದರಿಂದ ಕುದುರೆಗಿಂತ ಈ ಬಟ್ಟೆ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದೆ. ಸೇವಕರಿಬ್ಬರೂ ಹಿಂದೆ ಮುಂದೆ ಕುದುರೆಯನ್ನು ಬಿಟ್ಟುಕೊಂಡು ಹೊರಟಿರುವಂತೆ ಕಾಣುತ್ತದೆ. ಕುದುರೆಯ ಮೇಲ್ಭಾಗದಲ್ಲಿ ಛತ್ರ, ಚಾಮರದಂತ ಆಕಾರಗಳು ಸಂಭ್ರಮದ ವಾತಾವರಣವನ್ನು ಸೃಷ್ಟಿಸುತ್ತಿವೆ.

### ೪೨. ಗರುಡ

ಗರುಡ ಒಂದು ಪಕ್ಷಿಯಾದರೂ ಗರುಡರಾಜ ಅಥವಾ ಜಟಾಯು ಮುಂತಾಗಿ ಕರೆಯಲ್ಪಡುವ ಈ ಚಿತ್ರದಲ್ಲಿ ಗಿಣಿಯಂತಹ ಮೂಗು ಮಾತ್ರ ಮನುಷ್ಯನಂತೆ ಕಾಣುವುದಿಲ್ಲ. ಉಳಿದೆಲ್ಲಾ ಅಂಶಗಳು ಸಂಪೂರ್ಣ ಮನುಷ್ಯನನ್ನು ಹೋಲುವುದರಿಂದ ಇಲ್ಲಿ ಹೆಚ್ಚು ವಿವರಣೆ ಇಲ್ಲ. ಎಲ್ಲರೂ ಹಿಡಿದಂತೆ ಎಡಗೈಯಲ್ಲಿ ಖಡ್ಗ, ಬಲಗೈಯಲ್ಲಿ ಗುರಾಣಿ, ಕಿರೀಟದ ಕೆಳಗೆ ಪಕ್ಷಿಯಂತಹ ಪಕ್ಕಗಳನ್ನು ಕೆಂಪು ಬಣ್ಣದಲ್ಲಿ ವಿನ್ಯಾಸಗೊಳಿಸಿ ರಚಿಸಲಾಗಿದೆ. ಇಲ್ಲಿಯೂ ಸೌಂದರ್ಯ ಮೂಲಕ್ಕಾಗಿ ತೊಗಲಿನಲ್ಲಿ ರಂಧ್ರಗಳನ್ನು ತೆಗೆಯಲಾಗಿದೆ. ಕಾಲಲ್ಲಿ ಗೆಜ್ಜೆಯಂತಹ ವಸ್ತು, ಪಾದಗಳಲ್ಲಿ ಎಡಗಾಲು ಪೂರ್ತಿ ಕಂಡು, ಬಲಗಾಲು ಪಾದರಕ್ಷೆ ತೊಟ್ಟಂತೆ ಕಾಣುತ್ತದೆ. ಹಿಂಬದಿಯಲ್ಲಿ ರೆಕ್ಕೆಗಳೊಂದಿಗೆ ಬಟ್ಟೆಯನ್ನು ಗಂಟುಹಾಕಿ ಜೋತುಬಿಡಲಾಗಿದೆ.

### ೪೩. ಹಾವು

ನೋಡಲು ಕುಂಚಿಗೆಯಂತೆ ಕಾಣುವ ಈ ವಸ್ತು ತೊಗಲುಗೊಂಬೆಯಾಟದ ಏಳು ಹೆಡೆಯ ಸರ್ಪವು ಕಪ್ಪು ಬಣ್ಣದ್ದಾಗಿದೆ. ಮೇಲ್ಭಾಗದಲ್ಲಿ ಏಳು ಹೆಡೆಗಳನ್ನು ಹೊಂದಿದ್ದು, ಎರಡೆರಡು ನಾಲಿಗೆಗಳನ್ನು ಹೊರ ತೆಗೆದಿದೆ. ಮೇಲೆ ಮುತ್ತಿನ ಸಾಲುವಿನ್ಯಾಸ ಮಾಡಲಾಗಿದೆ. ಹಾವಿನ ಉದ್ದ ತಮಗೆಟುಕಿದ ತೊಗಲಿನಲ್ಲಿ

ಸೃಷ್ಟಿಸಿರುವುದರಿಂದ ಅಷ್ಟೊಂದು ಉದ್ದವಾಗಿಲ್ಲ. ದಪ್ಪದಾಗಿದ್ದು, ಹೆಡೆಗೆ ಮಾತ್ರ ಪ್ರಾಮುಖ್ಯತೆ ನೀಡಲಾಗಿದೆ. ಹೆಡೆಯ ಹಿಂದೆ ರತ್ನಖಚಿತವಾದ ವಿನ್ಯಾಸವನ್ನು ರಚಿಸಲಾಗಿದೆ. ಇದಾದ ಮೇಲೂ ಹಾವಿನ ಹೊಟ್ಟೆಯ ಭಾಗದಲ್ಲಿ ಅಡ್ಡಡ್ಡ ರೇಖೆಗಳಿಂದ ಪೂರ್ಣಗೊಳಿಸಿ ತಲೆಯ ಕೊನೆಯಲ್ಲಿ ಮುತ್ತಿನ ಸರದಂತೆ ಅಲಂಕೃತಗೊಳಿಸಲಾಗಿದೆ.

### iv. ತೊಗಲುಗೊಂಬೆ ಚಿತ್ರಗಳ ವಿಶೇಷತೆ

* ತೊಗಲುಗೊಂಬೆ ಚಿತ್ರಗಳು ಸಾಮಾನ್ಯವಾಗಿ ಮೂರು ಅಡಿ ಉದ್ದ, ಮೂರು ಅಡಿ ಅಗಲದಲ್ಲಿ ರಚನೆಗೊಂಡವುಗಳಾಗಿವೆ.

* ಎಲ್ಲಾ ಚಿತ್ರಗಳಲ್ಲಿಯೂ ಕೆಂಪು, ಕಪ್ಪು, ಹಳದಿ ವರ್ಣಗಳನ್ನು ಬಳಸಿ ಚಿತ್ರ ರಚಿಸಲಾಗಿದೆ. ಕೆಲವೆಡೆ ನೇರಳೆ ಮತ್ತು ಬೂದು ವರ್ಣಗಳನ್ನು ವಿರಳವಾಗಿ ಬಳಸಿಕೊಳ್ಳಲಾಗಿದೆ.

* ಬಿಳಿ ವರ್ಣದ ಬಳಕೆಯ ಬದಲಾಗಿ ಬಟ್ಟೆಯ ಅಂಚು, ಆಭರಣಗಳು ಹೊಳೆಯುವಂತೆ ಚಿತ್ರಿಸಲು ತೊಗಲನ್ನು ಕೊರೆದು ರಂಧ್ರಗಳನ್ನು ರಚಿಸಿ ಗೊಂಬೆಗಳನ್ನು ತಯಾರಿಸಿರುವುದು ತೊಗಲುಗೊಂಬೆಗಳ ಪ್ರಮುಖ ವೈಶಿಷ್ಟ್ಯತೆ.

* ಅರ್ಜುನ, ದುರ್ಯೋಧನ, ರಾಮನಂತಹ ಮುಖ್ಯ ಪಾತ್ರಗಳನ್ನು ದೊಡ್ಡದಾಗಿ ಚಿತ್ರಿಸಿ ಸೇವಕರು ಹಾಗೂ ಹಿಂಬಾಲಕರನ್ನು ಅತೀ ಚಿಕ್ಕದಾಗಿ ರಚಿಸಲಾಗಿದೆ.

* ಗಂಡು ಪಾತ್ರದ ಗೊಂಬೆಗಳಿಗೆ ಹೋಲಿಸಿದರೆ, ಹೆಣ್ಣು ಪಾತ್ರದ ಗೊಂಬೆಗಳು ಸಣ್ಣದಾಗಿವೆ.

* ಬದಿಗೆ ನೋಡುತ್ತಿರುವಂತಿರುವ ಮುಖದಲ್ಲಿ ಎರಡೂ ಕಣ್ಣುಗಳನ್ನು ಚಿತ್ರಿಸಿರುವುದು ವಿಶೇಷ.



ಮಹಾಭಾರತದ ಪಾತ್ರಗಳು



೩) ದ್ರೌಪದಿ



೪) ದುಶ್ಯಾಸನ



೫) ಧರ್ಮರಾಜ



೬) ಭೀಮ



೭) ದದಿಬಲ



೮) ಧುರ್ಯೋಧನ



೧೪) ಬನ್ನಿ ಮಹಾಂಕಾಳಿ



೧೫) ದ್ರೋಣಾಚಾರ್ಯ



೨೪) ಹನುಮಂತ



೨೫) ಮಹಿರಾವಣ



೨೮) ಚಿತ್ರಸೇನೆ



೧೮) ರಾವಣ



೩೨) ಶೂರ್ಪನಖಿ



೩೩) ಮಂಚ ಹನುಮಂತ



೩೮) ಬಕಾಸುರ



೪೦) ದೇವೇಂದ್ರರಾಜ

### ಆ. ಹಚ್ಚೆ ಚಿತ್ರಗಳು

ಸೌಂದರ್ಯೋಪಾಸನೆ ಎನ್ನುವುದು ಜಗತ್ತಿನ ಎಲ್ಲೆಡೆಯೂ ಎಲ್ಲ ಕಾಲದಲ್ಲಿಯೂ ಮಾನವನ ಅವಿಭಾಜ್ಯ ಅಂಗವೆಂಬಂತೆ ಬೆಳೆದುಬಂದಿದೆ. ಒಮ್ಮೊಮ್ಮೆ ಅದು ಧರ್ಮ, ನಂಬಿಕೆಗಳನ್ನು ಆಶ್ರಯಿಸಿಯೂ ಪ್ರಚಾರದಲ್ಲಿರುತ್ತದೆ. ಮಾನವನು ತನ್ನ ಜೀವನಾವಶ್ಯ ಕತೆಗಳನ್ನು ಪೂರೈಸಿಕೊಂಡಾದ ಮೇಲೆ ತನ್ನ ಹಾಗೂ ತನ್ನ ಪರಿಸರದ ಸೌಂದರ್ಯವನ್ನು ವೃದ್ಧಿಗೊಳಿಸಲು ಹಲವಾರು ಮಾರ್ಗಗಳನ್ನು ಕಂಡುಕೊಂಡನು. ಅಂಥವು ನಂಬಿಕೆ, ಆಚರಣೆಗಳನ್ನು ನಮ್ಮ ಪ್ರಚಾರದಲ್ಲಿ ಉಳಿದುಬಂದವು. ಮಾನವನ ಈ ನಂಬಿಕೆ, ಸೌಂದರ್ಯದ ಅರಿವು ಅಥವಾ ಪ್ರಜ್ಞೆಯೇ ತೊಗಲಿನ ಮೇಲೆ ಚಿತ್ತಾರಗಳು ಮೂಡಿಬರಲು ಪ್ರೇರಣೆಯಾಯಿತು. ತೊಗಲಿನ ಮೇಲೆ ಚಿತ್ತಾರಗೊಳ್ಳುವ ಹಚ್ಚೆ ಮತ್ತು ಮದರಂಗಿಗಳೇ ಸೌಂದರ್ಯ ಹಾಗೂ ನಂಬಿಕೆಗಳಿಗೆ ಮೂಲವಾಗಿರುವ ತೊಗಲಿನ ಚಿತ್ರಕಲೆಗಳು.

### ಹಚ್ಚೆ ಕಲೆ

ಚರ್ಮದ ಮೇಲೆ ಶಾಶ್ವತವಾಗಿ ಉಳಿಯುವಂತಹ ಹಸಿರು ಬಣ್ಣದ ಚಿತ್ತಾರವೇ 'ಹಚ್ಚೆ'. ಈ ಹಚ್ಚೆ ಪದವು ಸಂಸ್ಕೃತದ ಪಚ್ಚೆ ಎಂಬ ಪದ. "ಪಚ್ಚೆ" ಎಂದರೆ ಹಸಿರು ರತ್ನ, ಹಸಿರು ಕಲ್ಲು(ಪಚ್ಚೆಕಲ್ಲು) ಇಂಥ ಕಲಾ ಕ್ರಿಯೆಯನ್ನು ಆಂಗ್ಲಭಾಷೆಯಲ್ಲಿ Tattoo ಎಂದು ಕರೆಯುತ್ತಾರೆ. ಚರ್ಮದ ಮೇಲೆ ಸೂಜಿ ಚುಚ್ಚಿ ಮಾಡಿದ ಈ ಚಿತ್ತಾರಗಳು ಪಚ್ಚೆ ಅಥವಾ ಹಸಿರು ಬಣ್ಣಕ್ಕೆ ತಿರುಗುವುದರಿಂದ ಈ ಕಲೆಯನ್ನು ಹಚ್ಚೆ ಎಂದೇ ಗುರುತಿಸಿದ್ದಾರೆ.[೨೮]

ವಿಶ್ವವ್ಯಾಪಿ ಕಲೆಯಾಗಿರುವ ಈ ಹಚ್ಚೆಯ ಪ್ರಾಚೀನತೆಯನ್ನು ವಿವರಿಸುವುದು ಕಷ್ಟಸಾಧ್ಯ. ಜೆ.ಎಂ. ಕೆಂಪೆಬೆಲ್ ಎಂಬ ವಿದ್ವಾಂಸರ ಅಭಿಪ್ರಾಯಪಡುವಂತೆ ಕ್ರಿ.ಪೂ. ೨,೦೦೦ಕ್ಕೆ ಸೇರಿದ ಈಜಿಪ್ಟಿನ ಮಮ್ಮಿ(ರಕ್ಷಿತ)ಯೊಂದರ ಮೇಲೆ ಹಚ್ಚೆ ಇರುವುದು ಕಂಡುಬಂದಿದೆ ಎನ್ನಲಾಗುತ್ತದೆ. ಈ ಸಾಕ್ಷ್ಯಗಳ ಆಧಾರದ ಮೇಲೆ ಜಗತ್ತಿನಲ್ಲಿ ಹಚ್ಚೆ ಕಲೆಯು ಕ್ರಿ.ಪೂ.ದಿಂದಲೇ ಪ್ರಚಲಿತದಲ್ಲಿತ್ತು ಎನ್ನಬಹುದು. ಹೀಗೆ ಭಾರತದಲ್ಲಿಯೂ ಸಹ ಪ್ರಾಚೀನ ಕಾಲದಿಂದಲೇ "ಹಚ್ಚೆ" ಕಲೆ ಇದ್ದಿರಬಹುದಾಗಿದೆ. ಕ್ರಿ.ಪೂ. ೨ನೇ ಶತಮಾನದ ಶುಂಗ ಅರಸರ ಕಾಲದ "ಚಂದ್ರಯಕ್ಷಿ"ಯ ಶಿಲ್ಪವು ಸಾಕ್ಷ್ಯ ನೀಡುತ್ತದೆ.

ಇನ್ನೂ ಕರ್ನಾಟಕದಲ್ಲಿ ಹಚ್ಚೆ ಕಲೆಯ ಪ್ರಾಚೀನತೆ ಕುರಿತು ಲಿಖಿತ ಮಾಹಿತಿ ಸಿಕ್ಕುವುದು ವಿದೇಶಿ ಪ್ರವಾಶಿಗರು ಬರೆದ ಪ್ರವಾಸ ಕಥನಗಳಲ್ಲ. ಕ್ರಿ.ಶ. ೧೪೪೪ರಲ್ಲಿ ಹಂಪಿಗೆ ಭೇಟಿ ನೀಡಿದ ನಿಕೊಲೊಕೊಂಟಿ ಎಂಬ ವಿದೇಶಿ ಪ್ರವಾಸಿಗ "ಇಲ್ಲಿ ಹೆಂಗಸರು, ಗಂಡಸರೆಂಬ ಬೇಧವಿಲ್ಲದೇ ಹಚ್ಚೆ ಹಾಕಿಸಿಕೊಳ್ಳುತ್ತಾರೆ" ಎಂದು ಬರೆದಿದ್ದಾನೆ. ಅದಕ್ಕೂ ಹಿಂದಿನ ಮಾಹಿತಿ ಪಂಪಾದಿಗಳಲ್ಲಿ, ವಚನಕಾರರಲ್ಲಿ ಸಿಗುತ್ತದೆ. ಅದಕ್ಕೂ ಹಿಂದಿನ ಮಾಹಿತಿ ಪಂಪಾದಿಗಳಲ್ಲಿ, ವಚನಕಾರರಲ್ಲಿ ಸಿಗುತ್ತದೆ.

---

೨೮. ಡಾ.ಎಸ್.ಸಿ. ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪು. ೭೧.

೧೨ನೇ ಶತಮಾನದ ಬಸವಣ್ಣನವರು ತಮ್ಮ ಒಂದು ವಚನದಲ್ಲಿ "ಐದೆ ಅಣಚೆಯಿಲ್ಲದವಳಿಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ?" ಎಂದಿದ್ದಾರೆ. ಶಿಷ್ಟಪದದಲ್ಲಿ ಮಾತ್ರವಲ್ಲದೇ ಜಾನಪದ ಸಾಹಿತ್ಯದಲ್ಲಿಯೂ ಹಚ್ಚೆಯ ಉಲ್ಲೇಖಗಳನ್ನು ಕಾಣಬಹುದಾಗಿದೆ. ಜನಪದ ಸಾಹಿತ್ಯದಲ್ಲಿಯ ಹಚ್ಚೆಯ ಕುರಿತು;

ಹಣಚಿ ಬಟ್ಟಿನ ಮ್ಯಾಲ ಹರಿದಾಡುವ ಕುಂಕುಮ
ವಾರೀಗಿ ಪುರುಷ ಇದಿರ್‍ಗಿ ಕುಂತರ
ಹೆಚ್ಚಿನ ತವರ ಮರೆತೇನ[೨೯]

ಎನ್ನುವಲ್ಲಿ ಹಚ್ಚೆಯ ಪ್ರಸ್ತಾವ, ಮಹತ್ವ ಎರಡೂ ವ್ಯಕ್ತವಾಗಿವೆ.

ಹಚ್ಚೆ ಕಲೆಯು ಸೌಂದರ್ಯ ಮೂಲವಾಗಿದ್ದರೂ ಸಹ ಹಲವು ನಂಬಿಕೆಗಳ ಮೇಲೆ ಸಂಪ್ರದಾಯವೆಂಬಂತೆ ದಟ್ಟವಾಗಿ ಬೆಳೆದುಬಂದಿರುವುದು ಗಮನಾರ್ಹ. ಹಚ್ಚೆ ಕಲೆಯ ಕುರಿತು ಜನಪದರಲ್ಲಿರುವ ಕೆಲವು ನಂಬಿಕೆಗಳನ್ನು ಕೆಳಗಿನಂತಿವೆ.

೧. ಸತ್ತ ಮೇಲೂ ಜೊತೆಗೆ ಬರೋದು ಹಂಚಿ ಬೊಟ್ಟು ಒಂದೇ.
೨. ಹೆಣ್ಣುಮಗಳ ಬೆರಳಿನ ಮೇಲೆ ಹಂಚಿಬೊಟ್ಟಿದ್ದರೆ, ಅವರು ಮಾಡಿದ ಅಡುಗೆ ಹಾಳಾಗುವುದಿಲ್ಲ.
೩. ಹಚ್ಚೆಬೊಟ್ಟು ಇರುವವರು ಸ್ವರ್ಗಕ್ಕೇ ಹೋಗುತ್ತಾರೆ.
೪. ಹಂಚಿಬೊಟ್ಟು ಇದ್ದವರಿಗೆ ಕೆಟ್ಟ ಕನಸು ಬೀಳುವುದಿಲ್ಲ ಇತ್ಯಾದಿ.

ಕರ್ನಾಟಕದ ಆದ್ಯಂತ್ಯವೂ ಪ್ರಚುರವಾಗಿರುವ ಈ ಕಲೆಯನ್ನು ಜನಪದರು ಹಣಚಿ, ಅಣಚಿ, ಹಂಚಿಬೊಟ್ಟು, ಅಂಚಿಬೊಟ್ಟು ಎಂದೂ ಆಡುಭಾಷೆಯಲ್ಲಿ ಕರೆಯುವುದುಂಟು. ಹಚ್ಚೆಯನ್ನು ಹಿಂದೂ ಸಮುದಾಯದವರು ಮಾತ್ರ ಹಾಕಿಸಿಕೊಳ್ಳುತ್ತಾರೆ. ಹೆಣ್ಣುಮಕ್ಕಳ ಹಣೆಯ ಮೇಲೆ ಕುಂಕುಮ ಹಚ್ಚುವ ಭಾಗದಲ್ಲಿ ಹಾಕಿಸಿಕೊಳ್ಳುತ್ತಾರೆ. ವಿಶೇಷವಾಗಿ ಬೆರಳಿನ ಮೇಲೆ, ಕೈಮೇಲೆ, ಮುಂಗೈ ಮೇಲೆ, ಕಣ್ಣಿನ ಅಂಚಿಗೆ, ಗದ್ದಕ್ಕೆ, ಎದೆಯ ಭಾಗದಲ್ಲಿ, ಸೊಂಟದಲ್ಲಿ, ಕಾಲಿನ ಮೇಲೆ, ಭುಜದ ಮೇಲೆ, ಬೆನ್ನ ಮೇಲೆ, ಪಾದದ ಮೇಲೆ ಹೀಗೆ ದೇಹದ ಎಲ್ಲ ಅಂಗಗಳ ಮೇಲೂ ಹಚ್ಚೆ ಹಾಕಿಸಿಕೊಳ್ಳುವುದನ್ನು ಕಾಣಬಹುದಾಗಿದೆ.

ಹಚ್ಚೆ ಹಾಕಿಸಿಕೊಳ್ಳುವುದು ಆಯಾ ಸಮುದಾಯ, ಅವರ ನಂಬಿಕೆ, ಸಂಪ್ರದಾಯ, ಆಸಕ್ತಿಗಳಿಗನುಗುಣವಾಗಿ ನಿರ್ಧಾರವಾಗುತ್ತದೆ. ಲಂಬಾಣಿ ಸಮುದಾಯದಲ್ಲಿ ಹೆಚ್ಚಾಗಿ ಹಚ್ಚೆ ಹಾಕಿಸಿಕೊಳ್ಳುವುದನ್ನು ಕಾಣಬಹುದು. ಕರ್ನಾಟಕದಲ್ಲಿ ಕಿಳ್ಳಿಕ್ಯಾತರು, ಜೋಗೇರು, ಗೊಂದಲಿಗರು, ಹೊಲೆಯರು, ಮಾದರು, ಕೊರವರು ಹೆಚ್ಚಾಗಿ ಹಚ್ಚೆ ಹಾಕುವ ಮತ್ತು ಹಾಕಿಸಿಕೊಳ್ಳುವ ಸಮುದಾಯದವರಾಗಿದ್ದಾರೆ. ಹಣೆಯ ಮೇಲೆ ದುಂಡಾದ ಬೊಟ್ಟು, ಚೇಳು, ಕಮಲ, ಶಂಕ, ಚಕ್ರ, ಸೂರ್ಯ, ಚಂದ್ರ, ಹೂ, ದುಂಡುಮಲ್ಲಿಗೆ, ಶಿವನ ಬಾಸಿಂಗ, ಪರುಬಳ್ಳಿ, ಬಾಳಿಗಿಡ, ರಾಮನ ತೊಟ್ಟಿಲು,

---

೨೯. ಡಾ.ಎಸ್.ಸಿ. ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪು. ೭೯.

ಮುತ್ತಿನ ಸಾಲು, ಹನುಮಂತ, ಸೀರೆ ಸೆರಗು, ತೊಂಡೆಚಪ್ಪರ, ಗೋಧಿಮನೆ, ಗೌರಿಕಣ್ಣು, ಕೇದಿಗೆ ಹೂ, ಕಿರೀಟ ಇತ್ಯಾದಿ ವಿನ್ಯಾಸದ ಹಚ್ಚೆ ಚಿತ್ತಾರಗಳನ್ನು ಹಾಕಿಸಿಕೊಳ್ಳುತ್ತಾರೆ. ತಾವು ಆರಾಧಿಸುವ ದೇವರ ಚಿತ್ರಗಳನ್ನು ನಾಗರ, ಗಣಪತಿ, ಸಾಯಿಬಾಬಾ ಮುಂತಾಗಿ ಅಂತೆಯೇ ತಮ್ಮ ಪ್ರೀತಿ ಪಾತ್ರರ ಹೆಸರುಗಳನ್ನು ಬರೆಯಿಸಿಕೊಳ್ಳುವುದುಂಟು.

**i. ಜಿಲ್ಲೆಯಲ್ಲಿ ಹಚ್ಚೆ ಕಲೆಯ ನೆಲೆ**

ಇಡೀ ಜಿಲ್ಲೆಯ ತುಂಬೆಲ್ಲವೂ ಹಚ್ಚೆ ಹಾಕಿಸಿಕೊಂಡವರನ್ನು ಕಾಣಬಹುದು. ಕಾರಣ ಜಿಲ್ಲೆಯ ಎಲ್ಲೆಡೆಯೂ ಹಚ್ಚೆ ಕಲೆಯನ್ನು ಆರಾಧಿಸುವುದು ತಿಳಿದುಬರುತ್ತದೆ. ಆದರೆ ಜಿಲ್ಲೆಯಲ್ಲಿ ಹಚ್ಚೆ ಹೊಯ್ಯುವ ಕಲಾವಿದರನ್ನು ಮಾತ್ರ ಕೆಲವೆಡೆಗಳಲ್ಲಿ ಕಂಡುಬರುತ್ತದೆ. ಅವರು ಒಂದು ಊರಲ್ಲಿ ನೆಲೆ ನಿಂತಿದ್ದರೂ ಸುತ್ತಲ ಊರು, ಪ್ರದೇಶಗಳಿಗೆ ಸಂಚರಿಸಿ ಹಚ್ಚೆ ಹಾಕುತ್ತಾರೆ. ಜಿಲ್ಲೆಯಲ್ಲಿ ಹಚ್ಚೆ ಹೊಯ್ಯುವ ಕಲಾವಿದರನ್ನು ಗುಳೇದಗುಡ್ಡ, ತೇರದಾಳ, ಸಾವಳಗಿ, ತೊದಲಬಾಗಿ, ಜಮಖಂಡಿ ತಾಲ್ಲೂಕಿನ ಹೊಸುರು ಮಹಾಲಿಂಗಪುರ, ಹುನಗುಂದ ತಾಲ್ಲೂಕಿನ ಕೋಡಿಹಾಳಗಳಲ್ಲಿ ಕಾಣಬಹುದಾಗಿದೆ. ಪರಂಪರಾಗತವಾಗಿ ಹಚ್ಚೆ ಹಾಕುವವರು ಮಾತ್ರ ಹೆಣ್ಣುಮಕ್ಕಳೇ ಎಂಬುದು ವಿಶೇಷ. ಆಧುನಿಕ ಸಂದರ್ಭದಲ್ಲಿ ಹಚ್ಚೆ ಕಲೆಯನ್ನು ಆರೋಗ್ಯ ಹಾಗೂ ಫ್ಯಾಶನ್‌ಗಳ ರೂಪದಲ್ಲಿ ಕಾಣುವುದಿದೆ.

**ii. ಹಚ್ಚೆ ಚಿತ್ರಗಳ ರಚನೆಯ ತಂತ್ರ ವಿಧಾನಗಳು**

ಇತ್ತೀಚಿನ ದಿನಗಳಲ್ಲಿ Tattoo ಎನ್ನುವ ಹೊಸ ಮಜಲಿನೊಂದಿಗೆ ಯಾಂತ್ರಿಕ ಉಪಕರಣಗಳ ಬಳಕೆಯನ್ನು ಕಾಣುತ್ತಿದ್ದೇವೆ. ಆದರೆ ಹಚ್ಚೆ ಎನ್ನುವುದು ತನ್ನದೇಯಾದ ವೈಶಿಷ್ಟ್ಯವನ್ನು ಹೊಂದಿರುವ ಒಂದು ಪ್ರಾಚೀನ ಜನಪದ ಕಲೆ. ಈ ಹಚ್ಚೆಯನ್ನು ಹೊಯ್ಯಲು ಬಳಸಲಾಗುವ ಸಾಂಪ್ರದಾಯಿಕ ಸಾಮಗ್ರಿಗಳ ವಿವರಣೆ ಕೆಳಗಿನಂತಿದೆ.

**೧. ಸೂಜಿಕಟ್ಟು**

ಹಚ್ಚೆ ಹೊಯ್ಯಲು ಬೇಕಾಗಿರುವ ಮೊದಲ ಸಾಮಗ್ರಿ ಈ ಸೂಜಿಯ ಕಟ್ಟು. ಸೂಜಿಯ ಕಟ್ಟು ಎನ್ನುವುದು ಹಲವಾರು ಚೂಪಾದ ಸೂಜಿಗಳನ್ನು ಕಟ್ಟಿರುವ ಕಟ್ಟಾಗಿದೆ. ಒಂದರಿಂದ ಒಂದೂವರೆ ಇಂಚಿನಷ್ಟಿರುವ ಒಂದೇ ಸಮನಾದ ಹಲವಾರು ಸೂಜಿಗಳನ್ನು ಒಂದೇ ಸಮನಾಗಿ ಜೋಡಿಸಿ ಅವುಗಳ ಎರಡೂ ಬದಿಯಲ್ಲೂ ಬಿದಿರಿನ ಕಡ್ಡಿಯ ಪಟ್ಟಿಗೆಗಳನ್ನಿಟ್ಟು ಕಟ್ಟಲಾಗಿರುತ್ತದೆ ಇದೇ ಸೂಜಿಯ ಕಟ್ಟು. ಇನ್ನು ಚಿತ್ರದ ಗಾತ್ರಗಳಿಗನುಸಾರವಾಗಿ ಮೂರು, ಐದು, ಆರು, ಏಳು ಸೂಜಿಗಳಿರುವ ಕಟ್ಟಿನಿಂದ ಹಚ್ಚೆಯನ್ನು ಹೊಯ್ಯುತ್ತಾರೆ.

**೨. ಹಚ್ಚೆಯ ಮಸಿ**

ಕರ್ನಾಟಕದೆಲ್ಲೆಡೆಯೂ ಕೂಡ ಕಪ್ಪು, ಹಸಿರು ಬಣ್ಣದ ಹಚ್ಚೆಯನ್ನೇ ಹೊಯ್ಯುತ್ತಾರೆ. ಈ ಹಚ್ಚೆಗೆ ಬೇಕಾಗುವ ಮಸಿಯನ್ನು ಹಚ್ಚೆ ಹಾಕುವವರೇ ತಯಾರಿಸಿಕೊಳ್ಳುತ್ತಾರೆ. ಪ್ರದೇಶದಿಂದ ಪ್ರದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ ಹಚ್ಚೆ ಮಸಿಯನ್ನು ತಯಾರಿಸುವ ವಿಧಾನ ಭಿನ್ನವಾಗುತ್ತದೆ.

ಹೆಚ್ಚಾಗಿ ಹೊನಗನ್ನ, ಹಾಲಕಾಯಿ ರಸ, ತುಂಬೆ ಎಲೆ ರಸ, ಚಪ್ಪರದ ಅವರೆ ರಸ, ಕಿರುಗೋಣಿ ಸೊಪ್ಪು, ಹಚ್ಚೆ ಗಿಡದ ಸೊಪ್ಪನ್ನು ಬಳಸಿಕೊಂಡು ಹಚ್ಚೆಯ ಮಸಿಯನ್ನು ತಯಾರಿಸಲಾಗುತ್ತದೆ. ಅಲ್ಲದೇ ಕೆಲವೆಡೆ ಜೋಳದ ತೆನೆಯಲ್ಲಿರುವ ಕಾಡಿಗೆ, ನೀರು, ಸೊಪ್ಪಿನ ರಸಗಳನ್ನು ಬೆರೆಸಿ, ಮಸಿಯನ್ನು ತಯಾರಿಸಿಕೊಳ್ಳುತ್ತಾರೆ.

ವೀಳ್ಯೆದೆಲೆಯ ರಸವನ್ನು ಹೊಸ ಹಂಚಿಗೆ ಹಚ್ಚಿ, ಹರಳೆಣ್ಣೆಯ ದೀಪಕ್ಕೆ ಹಿಡಿಯುವುದರಿಂದ ಕಪ್ಪು ಬಣ್ಣ ದೊರೆಯುತ್ತದೆ. ಇದಕ್ಕೆ ಆಕಳ ಹಾಲನ್ನು ಬೆರೆಸಿ ಬಣ್ಣವನ್ನು ತಯಾರಿಸಲಾಗುತ್ತದೆ. ಈ ರೀತಿಯಾಗಿ ತಮಗೆ ದೊರೆಯುವ ವಸ್ತುಗಳಿಗನುಗುಣವಾಗಿ ಒಂದು ವರ್ಷಕ್ಕಾಗುವಷ್ಟು ಮಸಿಯನ್ನು ಒಮ್ಮೆಲೇ ತಯಾರಿಸಿಕೊಳ್ಳುತ್ತಾರೆ.

ಹೀಗೆ ತಯಾರಿಸಿಕೊಂಡ ಮಸಿಯನ್ನು ಒಣಗಿಸಿ ಒಂದು ಪಾತ್ರೆಯಲ್ಲಿ ತೆಗೆದಿರಿಸಿಕೊಳ್ಳುತ್ತಾರೆ. ಈ ಪಾತ್ರೆಗೆ ಮಸಿ ಕುಡಿಕೆ ಎಂತಲೂ ಕರೆಯುವುದುಂಟು.

**೩. ಸೂಜಿಗಳನ್ನಿಡುವ ಕುಡಿಕೆ**

ಹಚ್ಚೆ ಹೊಯ್ಯುವ ಕಾರ್ಯ ಮುಗಿದ ಮೇಲೆ ಆ ಸೂಜಿಗಳನ್ನು ಚಿಮಣಿ ಎಣ್ಣೆಯಲ್ಲಿ ತೊಳೆದು, ಸ್ವಚ್ಛವಾಗಿ ಬರೆಸಿ, ಅರಳಿಯಲ್ಲಿ ಸುತ್ತಿ, ಅರಿವೆಯಲ್ಲಿ ಕಟ್ಟಿ, ಕುಡಿಕೆಯಲ್ಲಿಡುತ್ತಾರೆ. ಇವು ಮಣ್ಣು, ಬಿದಿರು, ಹಿತ್ತಾಳೆಯಿಂದ ಮಾಡಿದ ಕುಡಿಕೆಗಳಾಗಿರುತ್ತವೆ.

ಇನ್ನು ಹಲವು ಸಲ ಕುಡಿಕೆಗಳಲ್ಲಿ ಚಿಮಣಿ ಎಣ್ಣೆಯನ್ನು ಹಾಕಿ ಅದರಲ್ಲಿ ಸೂಜಿಗಳನ್ನಿಡುವುದುಂಟು. ಇದರಿಂದ ಸೂಜಿಗಳು ತುಕ್ಕು ಹಿಡಿಯುವುದಿಲ್ಲವಾದ್ದರಿಂದ ಈ ವಿಧಾನವನ್ನೂ ಅನುಸರಿಸಲಾಗುತ್ತದೆ.

ಇವು ನಾಲ್ಕು ಮುಖ್ಯವಾಗಿ ಬಳಸಲಾಗುವ ಸಾಮಗ್ರಿಗಳಾಗಿದ್ದು, ಹಚ್ಚೆಯ ಚಿತ್ರವನ್ನು ಬಿದಿರಿನ ಕಡ್ಡಿ ಅಥವಾ ದೀಪದ ಕಡ್ಡಿಗಳಿಂದ ಕೈ ಮೇಲೆ ರಚಿಸಿ, ಅನಂತರ ಅದರ ಮೇಲೆ ಸೂಜಿಯಿಂದ ಹಚ್ಚೆ ಹೊಯ್ಯುತ್ತಾರೆ. ಕೆಲವೊಮ್ಮೆ ಸೂಜಿಯಿಂದಲೇ ನೇರವಾಗಿ ಚಿತ್ತಾರವನ್ನು ಮೂಡಿಸಲಾಗುತ್ತದೆ.

ಇನ್ನು ತೀರಾ ಇತ್ತೀಚಿನ ದಿನಗಳಲ್ಲಿ ತಾವೇ ರಚಿಸಿಟ್ಟುಕೊಂಡಿರುವ ವಿವಿಧ ವಿನ್ಯಾಸದ ಚಿತ್ರಗಳ ಪುಸ್ತಕವನ್ನು, ಹಚ್ಚೆ ಹಾಕಿಸಿಕೊಳ್ಳುವವರಿಗೆ ತೋರಿಸಿ, ಅವರ ಇಚ್ಛೆಗನುಸಾರವಾಗಿ ಹಚ್ಚೆಯನ್ನು ಹೊಯ್ಯುವುದನ್ನು ಕಾಣಬಹುದಾಗಿದೆ. ಹೀಗೆ ಅವಶ್ಯತೆಗಳಿಗನುಗುಣವಾಗಿ ಈ ವಸ್ತುಗಳನ್ನೂ ಬಳಸಿಕೊಳ್ಳುವುದುಂಟು.

**ಹಚ್ಚೆ ಹೊಯ್ಯುವ ವಿಧಾನ**

ಹಚ್ಚೆ ಹೊಯ್ಯುವವರು ಊರುರು ಅಲೆದಾಡಿ, ಮನೆ ಮನೆಗೆ ಹೋಗಿ ಹಚ್ಚೆಯನ್ನು ಹೊಯ್ಯುತ್ತಾರೆ. ತಮ್ಮ ಮೈಮೇಲಿನ ಹಚ್ಚೆ ಚಿತ್ತಾರಗಳನ್ನು ತೋರಿಸುತ್ತ, ಭಾವನಾತ್ಮಕವಾದ ಕತೆಗಳನ್ನು ಹೇಳುತ್ತ, ಒಪ್ಪವಾಗಿ ಮಾತನಾಡುವುದರೊಂದಿಗೆ ಹೆಣ್ಣುಮಕ್ಕಳು ಹಚ್ಚೆ ಹಾಕಿಸಿಕೊಳ್ಳುವಂತೆ ಆಕರ್ಷಿಸುತ್ತಾರೆ.

ಹಚ್ಚೆ ಹಾಕಿಸಿಕೊಳ್ಳುವವರು ಇಷ್ಟ ಪಡುವ ಲಿಂಗದ ಮೇಲೆ ಅವರಿಗಿಷ್ಟವಾಗುವ ವಿನ್ಯಾಸವನ್ನು ಹೊಯ್ಯಲಾಗುತ್ತದೆ. ಮೊದಲು ಹಚ್ಚೆ ಹಾಕಿಸಿಕೊಳ್ಳುವ ಲಿಂಗದ ಮೇಲೆ ಕೊಬರಿ ಎಣ್ಣೆಯನ್ನು ಸವರಲಾಗುತ್ತದೆ. ಸ್ವಲ್ಪ ಸಮಯದ ನಂತರ ನೀರಲ್ಲಿ ಅದ್ದಿದ ಕಡ್ಡಿಯಿಂದ ನೀರಿನ ಗೆರೆ ಮೂಡುವಂತೆ ಚಿತ್ತಾರ ಬರೆಯುತ್ತಾರೆ. ಇಲ್ಲವೇ ಕೆಲವೊಮ್ಮೆ ಹಚ್ಚೆ ಮಸಿಯಿಂದಲೇ ರೇಖೆಗಳನ್ನು ಮೂಡಿಸಿ, ಆ ರೇಖೆಗಳಗುಂಡಿ ಸೂಜಿಯಿಂದ ಹಚ್ಚೆ ಹೊಯ್ಯಲಾರಂಭಿಸುತ್ತಾರೆ.

ತಯಾರಿಸಿಟ್ಟುಕೊಂಡ ಮಸಿಯನ್ನು ದ್ರವರೂಪಗೊಳಿಸಿ, ಒಂದು ಸಣ್ಣ ಕುಡಿಕೆಯಲ್ಲಿ ಹಾಕಿಟ್ಟುಕೊಂಡು, ಸೂಜಿಯ ಕಟ್ಟನ್ನು ಮಸಿಯಲ್ಲಿ ಅದ್ದಿ ಚಿತ್ತಾರ ಮೂಡಿಸಿದ ಭಾಗದ ಮೇಲೆ ಕ್ರಮವಾಗಿ ಚುಚ್ಚುತ್ತಾ ಹೋಗುತ್ತಾರೆ. ಚರ್ಮದ ಮೇಲ್ಪದರವನ್ನು ಛೇದಿಸಿ ಒಳಪದರಿಗೆ ಮುಟ್ಟುವಷ್ಟು ಮಾತ್ರ ಸೂಜಿ ಚುಚ್ಚಲ್ಪಡುತ್ತಿರುತ್ತದೆ. ಈ ಚುಚ್ಚುವಿಕೆಯನ್ನು ಸಮಾನಗತಿಯಲ್ಲಿ ಮಾಡಬೇಕಾದ್ದರಿಂದ ಸಂಯಮದಿಂದ ಹೊಯ್ಯುತ್ತಿರುತ್ತಾರೆ. ಹಚ್ಚೆ ಚಿತ್ತಾರದ ವಿನ್ಯಾಸದ ಗಾತ್ರದ ಆಧಾರದ ಮೇಲೆ ಹೊಯ್ಯುವಿಕೆಯ ಸಮಯ ನಿರ್ಧಾರವಾಗುತ್ತದೆ. ಸುಮಾರು ಅರ್ಧಗಂಟೆಯಿಂದ ಒಂದೆರೆಡು ಗಂಟೆಯತನಕವೂ ಹಚ್ಚೆಯ ಹೊಯ್ಯುವಿಕೆ ಸಾಗಿರುತ್ತದೆ. ಹಚ್ಚೆಯ ಚಿತ್ತಾರದ ಆಧಾರದ ಮೇಲೆ ಸೂಜಿಯ ಕಡ್ಡಿನ ಗಾತ್ರ ನಿರ್ಧಾರವಾಗುತ್ತದೆ.

ಹೊಯ್ಯುವಿಕೆ ಮುಕ್ತಾಯವಾದ ನಂತರ ನೀರು ಹಾಕಿ, ಹಚ್ಚೆ ಹೊಯ್ದ ಭಾಗವನ್ನು ತೊಳೆಯುತ್ತಾರೆ. ನಂತರ ಅದರ ಮೇಲೆ ದಟ್ಟವಾಗಿ ಕಪ್ಪನ್ನು ಸವರುತ್ತಾರೆ. ಬಹಳಷ್ಟು ನೋವು ಕಾಣಿಸಿಕೊಂಡಿರೆ ಆ ಗಾಯದ ಮೇಲೆ ಕೊಬ್ಬರಿ ಎಣ್ಣೆ ಅಥವಾ ಅರಿಶಿಣಪುಡಿ ಲೇಪಿಸಲಾಗುತ್ತದೆ. ಈ ರೀತಿಯಾಗಿ ಹಚ್ಚೆ ಚಿತ್ತಾರ ತೊಗಲಿನ ಮೇಲೆ ಸುಂದರವಾಗಿ ಮೂಡುತ್ತದೆ. ತದನಂತರದಲ್ಲಿ ಆ ಗಾಯ ಮಾಯುವವರೆಗೂ ಸ್ವಲ್ಪ ದಿನದ ಮಟ್ಟಿಗೆ ಪಥ್ಯೆ ಮಾಡಲಾಗುತ್ತದೆ.

ಹೀಗೆ ಮೂಡುವ ಈ ಹಚ್ಚೆ ಚಿತ್ತಾರ, ಮನುಷ್ಯನ ಜೀವ ಇರುವ ತನಕವೂ ಶಾಶ್ವತವಾಗಿ ಉಳಿಯುವಂತಹ ತೊಗಲಿನ ಮೇಲಿನ ಚಿತ್ರಕಲೆಯಾಗಿದೆ.

ಹುನುಗುಂದ ತಾಲ್ಲೂಕಿನ ಕೋಡಿಹಾಳ ಗ್ರಾಮದಲ್ಲಿ ಹಚ್ಚೆ ಹಾಕಿಸಿಕೊಂಡವರ ಸಂಖ್ಯೆ ಜಿಲ್ಲೆಯ ಎಲ್ಲಾ ಪ್ರದೇಶಗಳಿಗಿಂತ ಹೆಚ್ಚಾಗಿದೆ. ಹಚ್ಚೆ ಹಾಕುವವರೂ ಅಲ್ಲಿಯೇ ಇರುವುದರಿಂದ ೪೦ ವಯಸ್ಸಿನ ಮೇಲ್ಪಟ್ಟವರೆಲ್ಲಾ ಹಚ್ಚೆ ಹಾಕಿಸಿಕೊಂಡಿದ್ದಾರೆ. ಅದರಲ್ಲಿ ಒಂದಕ್ಕಿಂತ ಒಂದು ಭಿನ್ನವಾದವುಗಳನ್ನು ಮಾತ್ರ ಇಲ್ಲಿ ವಿಶ್ಲೇಷಿಸಲಾಗಿದೆ.

**iii. ಹಚ್ಚೆ ವಸ್ತು-ವಿಷಯಗಳು**

**೧. ಬಳ್ಳಿ ಮತ್ತು ಮನುಷ್ಯಾಕೃತಿ**

ಕೋಡಿಹಾಳದ ಯಮುನಾಬಾಯಿ ಅವರು ೧೧ ವರ್ಷ ವಯಸ್ಸಿನವರಿದ್ದಾಗ ಇಷ್ಟಪಟ್ಟು ಚುಚ್ಚಿಸಿಕೊಂಡ ಹಚ್ಚೆ ಮುಂಗೈ ಮೇಲೆ ತುಂಬಾ ವಿಭಿನ್ನವಾಗಿದೆ. ಒಳ ಮೊಣಕೈ ಸಮೀಪದಲ್ಲಿ ಸಾಲಾಗಿ

ನಿಂತ ನಾಲ್ಕು ಮನುಷ್ಯಾಕೃತಿಗಳು ಒಂದನ್ನೊಂದು ಕೈಕೈ ಹಿಡಿದುಕೊಂಡಿರುವಂತೆ ಹಚ್ಚೆ ಹಾಕಿಸಿಕೊಳ್ಳಲಾಗಿದೆ. ಇದರ ಕೆಳಗೆ ಸುಳುವಿನಾಕಾರದ ಬಳ್ಳಿ ಮೇಲಿನ ಆಕೃತಿಯಲ್ಲಿ ಸೂರ್ಯನ ಥರ ಕಿರಣಗಳನ್ನು ಚಾಚಲಾಗಿದೆ. ಅದಾದ ನಂತರ ಸ್ವಸ್ತಿಕ್‌ನ್ನು, ಶ್ರೀಯನ್ನು ಹಾಕಿಸಿಕೊಳ್ಳಲಾಗಿದೆ. ಅದರ ನಂತರ ಚಿಕ್ಕದಾಗಿ ಬಳ್ಳಿಯೊಂದನ್ನು ಚಿತ್ರಿಸಲಾಗಿದೆ. ಹೀಗೆ ಒಂದಾದ ಮೇಲೊಂದು ಸಾಲಾಗಿ ಬೇರೆ ಬೇರೆ ಉದ್ದೇಶಕ್ಕಾಗಿ ಚುಚ್ಚಿಸಿಕೊಂಡಿದ್ದೆಂದು ಹೇಳುತ್ತಾರೆ. ಆದರೆ ನಿಖರ ಕಾರಣ ಲಭ್ಯವಾಗಿಲ್ಲ.

**೨. ಬಾಸಿಂಗ**

ಕೋಡಿಹಾಳದ ಇನ್ನೋರ್ವ ವಯೋವೃದ್ಧೆ ಶಾರವ್ವ ಬಹಳ ದಿನಗಳವರೆಗೆ ಮದುವೆಯಾಗದ ಕಾರಣಕ್ಕಾಗಿ ಬಾಸಿಂಗದ ಚಿತ್ರವನ್ನು ಮುಂಗೈ ಮೇಲೆ ಹಾಕಿಸಿಕೊಂಡರೆ ಮದುವೆಯಾಗುತ್ತದೆ ಎಂಬ ನಂಬಿಕೆಯಿಂದ ಹಚ್ಚೆ ಹಾಕಿಸಿಕೊಂಡಿದ್ದಾಳೆ. ಅದರ ಕೆಳಗೆ ಹೂಗುಚ್ಛದಂತಹ ಇನ್ನೊಂದು ಆಕೃತಿ ನಿಚ್ಚಳವಾಗಿ ಕಾಣುತ್ತದೆ. ಒಳ ಮೊಣಕೈ ಮೇಲ್ಭಾಗದಲ್ಲಿ ಚಿಕ್ಕ ಸುಳುವೊಂದನ್ನು ಹಾಕಿಸಿಕೊಂಡಿದ್ದಾಳೆ.

**೩. ಅಲಂಕಾರಿಕ ಬಾಸಿಂಗ**

ಗುಳೇದಗುಡ್ಡದ ತಾಯವ್ವ ಇವರು ಈಗ ರಾಯಚೂರು ಜಿಲ್ಲೆಯಲ್ಲಿ ನೆಲೆಸಿರುವರು. ಇವರೂ ಕೂಡ ಬಾಸಿಂಗದ ಚಿತ್ರವನ್ನು ಮುಂಗೈ ಮೇಲೆ ಚಿತ್ರಿಸಿಕೊಂಡು ಮದುವೆಯಾದರು. ಅದರ ಮೇಲ್ಭಾಗದಲ್ಲಿ ವಿಮಾನಾಕಾರದಲ್ಲಿ ನಕ್ಷೆಯೊಂದಿದ್ದು, ಅದರ ನಾಲ್ಕೂ ಬದಿಗಳಲ್ಲಿ ಬಳ್ಳಿಯನ್ನು ಇಡಲಾಗಿದೆ. ಇಂತಹ ಅಪರೂಪದ ಚಿತ್ರಗಳ ಸಂಗ್ರಹ ಮತ್ತು ಚುಚ್ಚಿಸಿಕೊಳ್ಳುವಾಗ ಆಗುವ ಏಳು ಪದರುಗಳಲ್ಲಿ ಸೂಜಿ ಹೋಗುವ ರೀತಿಯನ್ನು ವಿವರಿಸುತ್ತಾರೆ. ತೀರ ಚಿಕ್ಕವರಿದ್ದಾಗ ಹಚ್ಚೆ ಹಾಕಿಸಿಕೊಂಡ ನೆನಪನ್ನು ನೆನೆಯುತ್ತಾರೆ.

**೪. ನವಿಲು**

ಹುನುಗುಂದದ ಸಿದ್ದವ್ವ ತನ್ನ ಮುಂಗೈಗಳ ಮೇಲೆ ಒಂದು ತಾಸಿನವರೆಗೆ ಚುಚ್ಚಿಸಿಕೊಂಡ ಬಾಲ್ಯದ ನೆನಪನ್ನು ಹಂಚಿಕೊಳ್ಳುತ್ತಾರೆ. ಹಚ್ಚೆ ಹಾಕುವವರು ಮನೆಯ ಸಮೀಪ ಬರುವುದನ್ನು ಕಾಯುತ್ತ ಕುಳಿತು ಮೂರ್ನಾಲ್ಕು ದಿನಗಳ ನಂತರ ಅವರು ಬಂದಾಗ ಖುಷಿಪಟ್ಟು ನೋವು ಅನಭವಿಸಿದ ಐವತ್ತು ವರ್ಷದ ಹಿಂದಿನ ನೆನಪನ್ನು ಹಂಚಿಕೊಂಡರು. ಎಷ್ಟೇ ನೋವಾದರೂ ಸತ್ತ ಮೇಲೂ ನಮ್ಮೊಂದಿಗೆ ಬರುವುದೆಂಬ ನಂಬಿಕೆಯಿಂದ ಪ್ರಿಯವಾದ ನವಿಲನ್ನು ಚುಚ್ಚಿಸಿಕೊಂಡಿದ್ದೇನೆ. ಎದುರುಬದುರು ನಿಂತ ನವಿಲುಗಳು, ಕೆಳಗಡೆ ದೊಡ್ಡ ನಕ್ಷೆ, ಅದರ ಕೆಳಗೆ ಮತ್ತೆ ಬಾಸಿಂಗವು ಮದುವೆಯಾಗಲಿ ಬಿಡಲಿ ಎಲ್ಲರಿಗೂ ಚುಚ್ಚುವುದು ಹಚ್ಚೆ ಹಾಕುವವರ ವೈಶಿಷ್ಟ್ಯ. ಹೀಗೆ ಹಚ್ಚೆ ಹಾಕುವವರು ಇಂದು ಇಲ್ಲದೇ ಹಾಕಿಸಿಕೊಳ್ಳುವವರೂ ಇಲ್ಲದೆ ಈ ಕಲೆ ನಶಿಸಿಹೋಗಿದೆ ಎಂದು ವಿಶಾದಿಸುತ್ತಾರೆ.

**೫. ಪಟ್ಟಿ ಹಚ್ಚೆ**

ರಟ್ಟೆಯ ಸುತ್ತಲೂ ನಾಲ್ಕೂ ನಿಟ್ಟಿನಲ್ಲಿ ಪಟ್ಟಿ ಹಚ್ಚೆಯನ್ನು ಚುಚ್ಚಿಸಿಕೊಳ್ಳುವುದು ಬಹಳ ಹಿಂದೆಯೇ ರೂಢಿಯಲ್ಲಿತ್ತು. ಬನಹಟ್ಟಿಯ ಬಾಗವ್ವ ಎಂಬುವವರು ಪಟ್ಟಿ ಹಚ್ಚೆಯನ್ನು ಮೂರು ದಿನಗಳ ಕಾಲ

ಚುಚ್ಚಿಸಿಕೊಂಡು ದಾಖಲೆ ನಿರ್ಮಿಸಿದ್ದನ್ನು ನೆನೆಯುತ್ತಾರೆ. ಈಗ ಅವರಿಗೆ ೭೨ ವರ್ಷ ವಯಸ್ಸು. ಹದಿನೈದು ವರ್ಷದವರಿದ್ದಾಗ ಅವರ ಅಜ್ಜಿ ಈ ಸಾಹಸಕ್ಕೆ ಮೊಮ್ಮಗಳನ್ನು ಬಳಸಿದ್ದು, ಈ ಕಲೆ ಇಂದಿಗೂ ಛಾಯಾಚಿತ್ರದಲ್ಲಾದರೂ ನೋಡಲು ಸಿಗುವುದು ಭಾಗ್ಯ. ಸೂರ್ಯ, ಹೂವು, ಅಲಂಕಾರಿಕ ನಕ್ಷೆಗಳನ್ನು ಹೊಂದಿದ ಈ ಪಟ್ಟಿ ಕೈಯ ಎಲ್ಲಾ ಮಗ್ಗಲುಗಳಲ್ಲಿ ಕಾಣಸಿಗುತ್ತದೆ.

### ೬. ಝುರಿ ಹಚ್ಚೆ

ಮುಂಗೈ ಮೇಲೆ ಚಿಕ್ಕ ವಯಸ್ಸಿನಲ್ಲಿ ಹಾವಿಗೆ ಹೆದರುವವರಿಗೆ ಹಾಕಿಸುವ ಝುರಿ ಹಚ್ಚೆಯು ಹುನುಗುಂದ ತಾಲ್ಲೂಕಿನ ಕೋಡಿಹಾಳ ಗ್ರಾಮದಲ್ಲಿ ಸಿದ್ದವ್ವನ ಕೈಮೇಲೆ ಹಾಕಿಸಿಕೊಂಡಿದ್ದಾಳೆ. ಇಪ್ಪತ್ತೆಂಟು ಕಾಲುಗಳುಳ್ಳ ಝುರಿ ಚಿತ್ರ ಮುಂಗೈ ಮೇಲೆ ಹಾಕಿಸಿಕೊಂಡರೆ ಭಯ ನಿವಾರಣೆಯಾಗುವುದೆಂಬ ವಾಡಿಕೆ. ಝುರಿ ಹಚ್ಚೆ ಸಾವಿರಕ್ಕೊಂದು ಸಿಗುವ ಅಪರೂಪದ ಹಚ್ಚೆ. ಇದೇ ಮಹಿಳೆ ಮುಂಗೈ ಮೇಲೆ ಮೂರು ಕಡೆ ಹಚ್ಚೆ ಹಾಕಿಸಿಕೊಂಡ ಇನ್ನೊಂದು ಉದಾಹರಣೆ. ಹಾಗೆಯೇ ಬೆರಳಿನ ಮೇಲೆ ಚಿಕ್ಕ ಚಿಕ್ಕ ಚುಕ್ಕೆಗಳನ್ನು ಚುಚ್ಚಿಸಿಕೊಳ್ಳಲಾಗಿದೆ.

### ೭. ಹನುಮಂತ

ಗುಳೇದಗುಡ್ಡ ಮೂಲದ ಬಾಗವ್ವ ತನ್ನ ಕೈಮೇಲೆ ಬಹುದಿನಗಳ ಹಿಂದೆ ಬಾಸಿಂಗವನ್ನು ಚುಚ್ಚಿಸಿಕೊಂಡು ಮುಂದೆ ತಾನೇ ಹಚ್ಚೆ ಚುಚ್ಚುವವಳಾಗಿ ರೂಪುಗೊಂಡವಳು. ಅವಳದೇ ರಟ್ಟೆಯ ಮೇಲೆ ಹನುಮಂತನ ಚಿತ್ರ ಇರುವುದು ಒಂದು ವಿಶೇಷ.

### ೮. ಕೈ ಬಳೆಗಳ ಒಳಗಿನ ಹಚ್ಚೆ

ಜಮಖಂಡಿ ತಾಲ್ಲೂಕಿನ ತೇರದಾಳದಲ್ಲಿ ಲಕ್ಕವ್ವ ಪೂಜಾರಿ ಎಂಬುವರು ತಮ್ಮ ಕೈಬಳೆಗಳ ಸಂದಿಯಲ್ಲಿ ಅಂದರೆ ಬಳೆಗಳನ್ನು ಇಟ್ಟುಕೊಳ್ಳುವ ಸ್ಥಳದಲ್ಲೇ ಸಂಪೂರ್ಣವಾಗಿ ಹಚ್ಚೆ ಹಾಕಿಸಿಕೊಳ್ಳುವ ಪದ್ಧತಿಯನ್ನು ತಿಳಿಸಿದರು. ಬಳೆಗಳನ್ನು ಆಕಡೆ ಈಕಡೆ ಓರೆ ಮಾಡಿ ಚಿತ್ರಗಳನ್ನು ತೋರಿದರು. ಸಾಮಾನ್ಯವಾದ ನಕ್ಷೆ ತ್ರಿಕೋನಾಕಾರದ ನಕ್ಷಾ ವಿನ್ಯಾಸಗಳು ಇದರ ತುಂಬಾ ತುಂಬಿಕೊಂಡಿವೆ.

### ೯. ಪುರುಷನ ಕೈಮೇಲಿನ ಹಚ್ಚೆ

ಬಾದಾಮಿಯ ಮಹೇಶ್ ಎಂಬುವರ ಕೈಮೇಲೆ ಇತ್ತೀಚೆಗೆ ಅಮ್ಮ ಎಂದು ಹಾಕಿಸಿಕೊಂಡ ಹಚ್ಚೆ ಕಂಡುಬಂತು. ಪುರುಷರು ಹೆಚ್ಚಾಗಿ ಪ್ರಿಯವಾದವರ ಹೆಸರನ್ನು ಹಚ್ಚೆ ಹಾಕಿಸಿಕೊಳ್ಳುವುದು ಸಹಜ ಹಾಗೂ ಸ್ವಸ್ತಿಕ್, ಹನುಮಂತ, ದುರ್ಗಿ ಮೊದಲಾದ ದೈವೀ ಅಂಶಗಳನ್ನು ಹಾಕಿಸಿಕೊಳ್ಳುವುದು ವಾಡಿಕೆ. ಹೆಚ್ಚಾಗಿ ಕುರಿ ಕಾಯುವವರ ಕೈಗಳ ಮೇಲೆ ಕಾಣಬಹುದಾಗಿದೆ.

### ೧೦. ಕಣ್ಣುಬದಿಯ ಹಚ್ಚೆ

ಹಣೆಯ ಮೇಲೆ ಭಾರತೀಯ ಸಂಪ್ರದಾಯದಂತೆ ಹಿಂದೂ ಹೆಣ್ಣುಮಕ್ಕಳು ಹಣೆಯ ಮೇಲೆ ಹಚ್ಚೆ ಹಾಕಿಸಿಕೊಳ್ಳುವಂತೆಯೇ ಕಣ್ಣ ಮಗ್ಗಲಲ್ಲಿ, ಬೆರಳ ತುದಿಯಲ್ಲಿ, ಗದ್ದದಲ್ಲಿ ಹಲವಾರು ಸಂದರ್ಭಗಳಲ್ಲಿ ಬೇರೆ ಬೇರೆ ಕಾರಣ ಮತ್ತು ದೇವರ ಶಕ್ತಿಗನುಗುಣವಾಗಿ ಹಚ್ಚೆಗಳನ್ನು ಹಾಕಿಸಿಕೊಳ್ಳುವುದು ವಾಡಿಕೆಯಾಗಿತ್ತು.

೧೧. ಹಣೆಯ ಮೇಲಿನ ಹಚ್ಚೆ

ಮುತ್ತೈದೆ ಹೆಣ್ಣುಮಗಳು ಭಾರತೀಯ ಸಾಂಪ್ರದಾಯಿಕ ಪ್ರಕಾರ ಹಣೆಯ ಮೇಲೆ ಕುಂಕುಮ ಇಡುವುದು ವಾಡಿಕೆ. ಈ ನಿಯಮವು ಗಂಡ ಬದುಕಿರುವರೆಗೆ ಮಾತ್ರ. ಗಂಡ ಸತ್ತ ಮೇಲೂ ಖಾಲಿ ಹಣೆ ಕಾಣಬಾರದೆಂಬ ಮತ್ತು ಅಲ್ಲಿ ಏನಾದರೊಂದು ಕುರುಹು ಇರುವುದು ಪದ್ಧತಿ. ಇದಾದ ಮೇಲೆ ಸ್ತ್ರೀಯರು ಮೊದಲು ಬಳಸುತ್ತಿದ್ದ ಪುಡಿ ಕುಂಕುಮ ಹಣೆಯ ಮಧ್ಯದಲ್ಲಿ ದುಂಡಗೆ ಹಚ್ಚಿಕೊಳ್ಳಲು ಹರಸಾಹಸಪಡುತ್ತಿದ್ದರು. ಆ ಕಾಲದಲ್ಲಿ ನೆರವಿಗೆ ಬಂದಿದ್ದೇ ಹಣೆಯ ಮೇಲಿನ ಹಚ್ಚೆ.





ಹಚ್ಚೆ ಹಾಕುವ ಸಾಮಗ್ರಿಗಳು



ಹಚ್ಚೆ ಚಿತ್ರಗಳು ೧) ಬಳ್ಳಿ ಮತ್ತು ಮನುಷ್ಯಾಕೃತಿ



೫) ಪಟ್ಟೆ ಹಚ್ಚೆ



೮) ಕೈ ಬಳೆಗಳ ಒಳಗಿನ ಹಚ್ಚೆ



೯) ಪುರುಷನ ಕೈಮೇಲಿನ ಹಚ್ಚೆ



ಬೇರೆ ಬೇರೆ ವಯೋಮಾನದ ಮಹಿಳೆಯರ ಕೈಮೇಲಿನ ಹಚ್ಚೆ

### ೩. ಮದರಂಗಿ ನಕ್ಷೆಗಳು

ತೊಗಲಿನ ಮೇಲಿನ ಚಿತ್ರಕಲೆಗಳಲ್ಲಿ ಹಚ್ಚೆ ಶಾಶ್ವತವಾದ ಚಿತ್ರಕಲೆಯಾದರೆ, ಮದರಂಗಿಯು ಅಶಾಶ್ವತವಾದ ಚಿತ್ರಕಲೆಯಾಗಿದೆ. ಈ ಮದರಂಗಿಯನ್ನು ಹಿಂದಿಯಲ್ಲಿ "ಮೆಹಂದಿ", ಮರಾಠಿಯಲ್ಲಿ "ಮಂದಿಯಾಚೆ", ತೆಲುಗಿನಲ್ಲಿ ಗೌರಿಂಟಾಡು, ಇಂಗ್ಲಿಷ್‌ನಲ್ಲಿ "Henna" ಎಂದು ಕರೆಯುತ್ತಾರೆ.[೩೦]

ಹಚ್ಚೆ ಕಲೆಯು ಹಿಂದೂಗಳದ್ದಾಗಿದ್ದರೆ, ಮದರಂಗಿ ಕಲೆಯು ಹೆಚ್ಚಾಗಿ ಮುಸಲ್ಮಾನರಲ್ಲಿ ಕಂಡುಬರುತ್ತದೆ. ೧೨ನೆಯ ಶತಮಾನದಲ್ಲಿ ಪರ್ಶಿಯಾದಿಂದ ಮದರಂಗಿಯು ಭಾರತವನ್ನು ಪ್ರವೇಶಿಸಿತು ಎಂಬ ಅಭಿಪ್ರಾಯವಿದೆ.[೩೧] ಇದಕ್ಕೆ ಪುಷ್ಟಿ ನೀಡುವಂತೆ ಇಂದಿಗೂ ಮುಸಲ್ಮಾನರಲ್ಲಿಯೇ ಇಂದು ಸಂಪ್ರದಾಯವೆಂಬಂತೆ ಬೆಳೆದುಬಂದಿದೆ. ಹಲವಾರು ಸಾಹಿತ್ಯಿಕ ಉಲ್ಲೇಖಗಳು, ಬಹಳ ಪ್ರಾಚೀನ ಕಾಲದಿಂದಲೇ ಮದರಂಗಿ ಗಿಡ ಹಾಗೂ ಮದರಂಗಿ ಕಲೆಗಳೂ ಬೆಳೆದುಬಂದಿರುವುದಕ್ಕೆ ಸಾಕ್ಷ್ಯ ಒದಗಿಸುತ್ತವೆ.

ಹಚ್ಚೆ ಚಿತ್ರಕಲೆಯು ಸೌಂದರ್ಯಕ್ಕಿಂತ ಹೆಚ್ಚಾಗಿ ಸಂಪ್ರದಾಯವನ್ನೇ ಮೂಲವಾಗಿರಿಸಿಕೊಂಡು ಬೆಳೆದುಬಂದರೆ, ಮದರಂಗಿಯು ಸಂಪ್ರದಾಯಕ್ಕಿಂತ ಹೆಚ್ಚಾಗಿ ಸೌಂದರ್ಯವನ್ನು ಮೂಲವಾಗಿರಿಸಿ ಕೊಂಡಿರುವುದಾಗಿದೆ. ಇಂದಿಗೂ ಮದರಂಗಿ ಕಲೆಯ ಬಗೆಗೆ ಆಸಕ್ತಿ ಉಳಿದು ಬೆಳೆಯುತ್ತ ಬಂದಿದ್ದು ದೇಶ, ಭಾಷೆ, ಜನಾಂಗ, ಸಂಸ್ಕೃತಿಗಳನ್ನು ಮೀರಿ ಈ ಮದರಂಗಿ ಕಲೆಯು ವಿಶ್ವವ್ಯಾಪಿಯಾಗಿದೆ. ಉತ್ತರ ಭಾರತದ ಎಲ್ಲಾ ಸಮುದಾಯಗಳಲ್ಲಿಯೂ ಮದರಂಗಿ ಕಲೆಯು ಸೌಭಾಗ್ಯದ ಸಂಪ್ರದಾಯವಾಗಿ ಬೆಳೆದುಬಂದಿದೆ.

#### i. ನೆಲೆಗಳು

ಮದರಂಗಿ ಕಲೆಯನ್ನು ಜಿಲ್ಲೆಯ ಎಲ್ಲೆಡೆಯೂ ಕಾಣಬಹುದಾಗಿದ್ದು, ಹಳ್ಳಿಗಳಲ್ಲಿ ಈ ಕಲೆ ವಿರಳ ಎನ್ನಬಹುದು. ಮುಸ್ಲಿಮರು, ಮರಾಠರು, ಮಾರವಾಡಿಗಳು ಮದರಂಗಿಯನ್ನು ಹಚ್ಚುವುದರಲ್ಲಿ ನಿಷ್ಣಾತರಾಗಿರುತ್ತಾರೆ. ಹೆಚ್ಚು ಕಡಿಮೆ ಮನೆಯ ಎಲ್ಲಾ ಹೆಣ್ಣುಮಕ್ಕಳೂ ಈ ಕಲೆಯನ್ನು ಬಲ್ಲವರಾಗಿರುತ್ತಾರೆ. ಲಿಂಗಾಯತ, ಬ್ರಾಹ್ಮಣ ಜನಾಂಗದಲ್ಲಿ ಈ ಕಲೆಯನ್ನು ಕಾಣುವುದಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಈ ಸಂಪ್ರದಾಯಸ್ಥ ಕುಟುಂಬದ ಹೆಣ್ಣುಮಕ್ಕಳೂ ಕೂಡ ಮದರಂಗಿ ಹಾಕಿಸಿಕೊಳ್ಳುವ ಹಾಗೂ ಕಲಿಯುವುದರಲ್ಲಿ ಆಸಕ್ತಿ ಬೆಳಸಿಕೊಂಡಿದ್ದಾರೆ.

ಈ ಹಿಂದೆ ಕೇವಲ ಕಡ್ಡಿಯಿಂದ ವಿನ್ಯಾಸಗೊಳಿಸಲಾಗುತ್ತಿದ್ದ ಈ ಮದರಂಗಿ ಕಲೆ ಇಂದು ಆಧುನಿಕತೆಯನ್ನು ಮೈಗೂಡಿಸಿಕೊಂಡು ಒಂದು ರೀತಿಯ ಶಿಷ್ಟಕಲೆ ಎಂಬಂತೆ ಬೆಳೆದು ನಿಂತಿದೆ. ಹೂವುಗಳು,

---

೩೦. ಡಾ.ಎಸ್.ಸಿ. ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪು. ೧೧೨.

೩೧. ಯು.ಬಿ. ರಾಜಲಕ್ಷ್ಮಿ, ತರಂಗ, ೨ ಸೆಪ್ಟೆಂಬರ್, ೧೯೯೦, ಮಾದಕ ಚಲುವಿನ ಮದರಂಗಿ, ಪು. ೨೫

ದುಂಡಾದ ಬೊಟ್ಟುಗಳ ವಿನ್ಯಾಸಕ್ಕಷ್ಟೇ ಸೀಮಿತವಿತ್ತು. ಕಲೆ ಇಂದು ಹಲವಾರು ಕಲಿಕಾಕೇಂದ್ರಗಳನ್ನು ತೆರೆದು, ಶಿಷ್ಟಕಲೆಯಂತೆ ಮದರಂಗಿ ಕಲೆಯನ್ನು ಕಲಿಯುತ್ತಿರುವವರ ಸಂಖ್ಯೆ ನಗರ ಪ್ರದೇಶಗಳಲ್ಲಿ ಹೆಚ್ಚಿದೆ.

**ii. ಮದರಂಗಿ ಚಿತ್ರಕಲೆ ರಚನೆಯ ತಂತ್ರ-ವಿಧಾನ**

ಮದರಂಗಿಯನ್ನು ಹಾಕುವುದು ಎಂತಲೇ ಕರೆಯುತ್ತಾರೆ. ಮದರಂಗಿಯನ್ನು ಹಾಕಬೇಕಾದರೆ ಮೊದಲು ಮದರಂಗಿಯನ್ನು ತಯಾರಿಸಿಕೊಳ್ಳಬೇಕಾಗುತ್ತದೆ. ಮೊದಲು ಮದರಂಗಿ ಸಸ್ಯದ ಎಲೆಯನ್ನು ಬಿಸಿಲಿನಲ್ಲಿ ಒಣಗಿಸಿ, ಅನಂತರ ಕುಟ್ಟಿ ಪುಡಿಮಾಡಿ, ಅದನ್ನು ಸೋಸಿ, ಒಂದು ಪಾತ್ರೆಯಲ್ಲಿ ಸಂಗ್ರಹಿಸಿಕೊಳ್ಳುತ್ತಾರೆ.

ಹಚ್ಚಿಕೊಳ್ಳಬೇಕಾದ ಸಂದರ್ಭದಲ್ಲಿ ಮದರಂಗಿ ಪುಡಿಯನ್ನು ಹಲವಾರು ಬೇರೆ ಬೇರೆ ದ್ರಾವಣಗಳಲ್ಲಿ ಬೆರೆಸಿ, ತಯಾರಿಸಿಕೊಳ್ಳುತ್ತಾರೆ. ಮದರಂಗಿ ಪುಡಿಯಲ್ಲಿ ನಿಂಬೆರಸ, ನೀಲಗೆರೆ ಎಣ್ಣೆಯನ್ನು ಹಾಕಿ ನೀರಿನೊಂದಿಗೆ ಬೆರೆಸಿ, ಹದವಾಗಿ ತಯಾರಿಸಿಕೊಳ್ಳುತ್ತಾರೆ.

ಒಮ್ಮೊಮ್ಮೆ ಕುದಿಸಿದ ಚಹಾಪುಡಿಯ ರಸ ಹಾಗೂ ನಿಂಬೆಹಣ್ಣಿನ ರಸವನ್ನು ಪ್ರಮಾಣಬದ್ಧವಾಗಿ ಹಾಕಿ, ನೀರಿನೊಂದಿಗೆ ಹದವಾಗಿ ಕಲಿಸಿ, ಮದರಂಗಿಯನ್ನು ತಯಾರಿಸಿಕೊಳ್ಳುತ್ತಾರೆ.

ಎಲ್ಲಾ ಕಾಲಕ್ಕೂ ಕೂಡ ಮದರಂಗಿ ತಯಾರಿಕೆ ಒಂದೇ ರೀತಿಯಲ್ಲಿದ್ದು, ಹಚ್ಚುವ ವಿಧಾನದಲ್ಲಿ ಮಾತ್ರ ಕಾಲ ಕಾಲಕ್ಕೆ ಬದಲಾವಣೆಗಳಾಗಿರುವುದನ್ನು ಕಾಣಬಹುದು. ಮೊದಲಿನ ಕಾಲದಲ್ಲಿ ಕಲಿಸಿಟ್ಟ ಮದರಂಗಿಯಲ್ಲಿ ಒಂದು ಕಡ್ಡಿಯನ್ನು ಅದ್ದಿ, ಅದರಿಂದ ಕೈಗಳ ಮೇಲೆ ವಿವಿಧ ಚಿತ್ತಾರಗಳನ್ನು ಚಿತ್ರಿಸಲಾಗುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಪ್ಲಾಸ್ಟಿಕ್ ಹಾಳೆಗಳನ್ನು ಕೋನಾಕಾರದಲ್ಲಿ ಸುತ್ತಿ, ಅದರಲ್ಲಿ ಕಲಿಸಿ ತಯಾರಿಸಿದ ಮದರಂಗಿಯನ್ನು ತುಂಬಿ ಮೇಲ್ಭಾಗವನ್ನು ಜಿಗಟುಪಟ್ಟಿಯಿಂದ ಭದ್ರಗೊಳಿಸಲಾಗುತ್ತದೆ. ತದನಂತರ ಕೋನಿನ ತುದಿಯನ್ನು ಸೂಕ್ಷ್ಮವಾಗಿ ಕತ್ತರಿಸಿಕೊಂಡು, ವಿವಿಧ ವಿನ್ಯಾಸಗಳನ್ನು ಚಿತ್ರಿಸಿಕೊಳ್ಳಲಾಗುತ್ತದೆ. ಕೋನಿನ ಮೇಲ್ಭಾಗವನ್ನು ಒತ್ತುತ್ತಾ ಹೋದಂತೆ ಕೆಳಗಿನ ರಂಧ್ರದಿಂದ ಮದರಂಗಿಯ ಒಂದೇ ಪ್ರಮಾಣದಲ್ಲಿ ಹೊರಬರುತ್ತಿರುತ್ತದೆ. ಅದರಿಂದ ವಿವಿಧ ವಿನ್ಯಾಸಗಳನ್ನು ರೂಪಗೊಳಿಸಲಾಗುತ್ತದೆ.

ಹಾಕಿಕೊಳ್ಳುವ ಚಿತ್ರಗಳ ವಿನ್ಯಾಸದ ಆಧಾರದ ಮೇಲೆ ಸಮಯ ನಿರ್ಧಾರವಾಗುತ್ತದೆ. ಮದರಂಗಿಯ ಕಲೆ ಗೊತ್ತಿದ್ದವರು ತಾವೇ ಬಿಡಿಸಿಕೊಳ್ಳುತ್ತಾರೆ. ಇಲ್ಲವೇ ಗೊತ್ತಿರುವ ಕಲಾವಿದರಿಂದ ಹಾಕಿಸಿಕೊಳ್ಳುತ್ತಾರೆ. ಉತ್ತರಭಾರತ ಹಾಗೂ ಮುಸಲ್ಮಾನರಲ್ಲಿ ಕಂಡುಬರುವ ವಿವಿಧ ರೀತಿಯ ವಿನ್ಯಾಸಗಳು ಜಿಲ್ಲೆಯಲ್ಲಿ ಕಾಣಸಿಗುವುದು ವಿರಳ. ಹೆಚ್ಚಾಗಿ ಹೂಬಳ್ಳಿ, ನಕ್ಷೆ, ಜ್ಯಾಮಿತಿ ನಕ್ಷೆ, ಅಲಂಕಾರಿಕವಾಗಿ ವಿನ್ಯಾಸಗೊಳಿಸಿ ಅಂಗಾಂಗಗಳಿಗನುಗುಣವಾಗಿ ಚಿತ್ರ ಬಿಡಿಸುತ್ತಾ ಹೋಗುತ್ತಾರೆ.

ಮದರಂಗಿಯನ್ನು ಹಾಕಿದ ನಂತರ ಕನಿಷ್ಠ ಆರುಗಂಟೆಗಳವರೆಗೂ ಬಿಟ್ಟು ಅನಂತರ ಕೊಬ್ಬರಿಎಣ್ಣೆ ಲೇಪಿಸಿ ಹತ್ತು ನಿಮಿಷ ಬಿಟ್ಟು ನೀರಿನಿಂದ ಸ್ವಚ್ಛವಾಗಿ ತೊಳೆದುಕೊಂಡಾಗ ಹಚ್ಚಿದ ಭಾಗವು ಕೆಂಪಾಗಿ, ಸುಂದರವಾಗಿ ಕಾಣುತ್ತದೆ.

ಹೀಗೆ ಹೆಣ್ಣುಮಕ್ಕಳ ಸೌಂದರ್ಯವನ್ನು ಇಮ್ಮಡಿಗೊಳಿಸುವಲ್ಲಿ ಮದರಂಗಿಯು ಪ್ರಮುಖ ಸ್ಥಾನದಲ್ಲಿದೆ. ಅಲ್ಲದೇ ಇಂದು ಹೆಣ್ಣುಮಕ್ಕಳ ಪ್ರಮುಖ ಉದ್ಯೋಗವಾಗಿಯೂ ಕೂಡ ಈ ಕಲೆ ಪ್ರಮುಖ ಸ್ಥಾನದಲ್ಲಿದೆ.

ಮದುವೆಯಲ್ಲಿ ವಧುವಿನ ಗೆಳತಿಯರು ಮತ್ತು ಸಂಬಂಧಿಕ ಹುಡುಗಿಯರು ಸಾಮೂಹಿಕವಾಗಿ ಮದರಂಗಿ ಹಾಕಿಕೊಳ್ಳುವುದು ಇತ್ತೀಚೆಗೆ ಫ್ಯಾಶನ್ ಆಗಿದೆ. ಹಾಗೆ ಬೇರೆ ಬೇರೆ ನಕ್ಷೆಗಳನ್ನು ಹಾಕಿಕೊಂಡ ಹತ್ತಾರು ಹುಡುಗಿಯರ ಬೇರೆ ಬೇರೆ ನಕ್ಷೆಗಳುಳ್ಳ ಚಿತ್ರ ಇದಾಗಿದೆ. ಅವರವರ ಇಷ್ಟಾನುಸಾರ ಬೇರೆ ಬೇರೆ ನಕ್ಷೆಗಳು ಹಾಕಿಸಿಕೊಂಡು ಸಂತೋಷಪಡುತ್ತಾರೆ.

**iii. ವಸ್ತುವಿಷಯ**

**೧. ಮುಂಗೈ ಮೇಲೆ ಮದರಂಗಿ**

ಮದುವೆ ಮತ್ತು ಹಬ್ಬದ ಸಂದರ್ಭಗಳಲ್ಲಿ ಮಾರ್ವಾಡಿ ಮಹಿಳೆಯರು ಕೈಕಾಲುಗಳ ತುಂಬೆಲ್ಲಾ ಮದರಂಗಿಯನ್ನು ಹಾಕಿಕೊಳ್ಳುವ ವಾಡಿಕೆಯನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಚಿತ್ರದಲ್ಲಿ ರಟ್ಟೆಯಿಂದ ಆರಂಭವಾಗುವ ಚಿತ್ರ 'ಶ' ಅಕ್ಷರದಂತೆ ಆರಂಭವಾಗುವ ಚಿತ್ರ ಹೂಮಾಲೆಯ ಸರದಂತೆ ಇರುವ ನಕ್ಷೆಯ ಒಳಗೆ ಸೇರಿಕೊಂಡಂತೆ ಅದಾದನಂತರ ಒಂದಿಷ್ಟು ಗೀರುಗೀರುಗಳನ್ನು ಹಾಕಿ ಮತ್ತೊಂದು ನಕ್ಷಾ ಚಿತ್ರಕ್ಕೆ ಬರುತ್ತಾರೆ. ಇಲ್ಲಿ ಹೂಬಳ್ಳಿ ಮೊದಲಾದ ಆಕೃತಿಗಳಿಂದ ಒಳ ಮೊಣಕೈಗಳಿಗೆ ಚಿತ್ರಗಳನ್ನು ರಚಿಸಿ ತದನಂತರ ಚೌಕಡಿಗಳನ್ನು ಹಾಕಿ ಮೂಲೆ ಮೂಲೆಯಲ್ಲಿ ಹೂವಿನ ಅಲಂಕೃತ ಚಿತ್ರವನ್ನು ರಚಿಸಿ ಮತ್ತೆ ಗಾಢವಾದ ಚಿಕ್ಕ ಚಿಕ್ಕ ಚುಕ್ಕೆಗಳುಳ್ಳ ಕೃತಿಗೆ ಬರುತ್ತಾರೆ. ಅದಾದ ಮೇಲೆ ಮತ್ತೆ ಅರ್ಧವರ್ತುಲಾಕಾರದ ನಕ್ಷಾ ಚಿತ್ರವನ್ನು ರಚಿಸಿ ಮತ್ತೆ ಸಣ್ಣ ಚೌಕಗಳ ಗೀರುಗಳನ್ನು ಹಾಕಿ ಹೂವಿನೊಂದಿಗೆ ಬೆರಳು ಸಮೀಪಕ್ಕೆ ಬಂದು ನಿಲ್ಲುತ್ತಾರೆ. ಮತ್ತೆ ಮೇಲೆ ಕೊನೆಯ ಭಾಗದಲ್ಲಿ ಹಾಕಿದ ನಕ್ಷೆಯೇ ಬೆರಳುಗಳ ಸಮೀಪ ರಚಿತಗೊಂಡು ಪ್ರತೀ ಬೆರಳಿನ ಮೇಲೆ ಒಂದೊಂದು ಆಕೃತಿಯನ್ನು ಹಾಕಿಕೊಳ್ಳುತ್ತಾರೆ. ಬೆರಳಿನ ತುದಿ ಮತ್ತು ಉಗುರುಗಳ ಸುತ್ತಲೂ ಮದರಂಗಿಯನ್ನು ಮೆತ್ತಿಕೊಂಡು ಒಟ್ಟು ತುದಿಯ ಬೆರಳು ಕೆಂಪಾಗಿ ಕಾಣುವಂತೆ ಮಾಡಿಕೊಳ್ಳುತ್ತಾರೆ. ಇದು ಎರಡು ಕೈಗಳಿಗೆ ವಿರುದ್ಧ ದಿಕ್ಕುಗಳಲ್ಲಿ ಫ್ರೀಹ್ಯಾಂಡ್ ಡ್ರಾಯಿಂಗ್‌ನಂತೆ ಇರುವುದು ವಿಶೇಷ.

**೨. ಕಾಲು ಮತ್ತು ಪಾದಗಳ ಮೇಲೆ ಮದರಂಗಿ**

ಮೊಣಕಾಲಿನಿಂದ ಕೆಳಗೆ ಚಿಕ್ಕ ಚಿಕ್ಕ ಚೌಕಾಕಾರಗಳಿಂದ ಆರಂಭವಾಗುವ ಚಿತ್ರ ಸಣ್ಣ ಸಣ್ಣ ರೇಖೆಗಳೊಂದಿಗೆ ದೊಡ್ಡ ಹೂವೊಂದನ್ನು ರಚಿಸಿ ಅದರ ಮುಂದೆ ಬಳ್ಳಿಗಳಂತೆ ಅಲ್ಲಲ್ಲಿ ಕೊಂಡೊಯ್ಯಲಾಗುತ್ತದೆ. ಬೇರೆ ಬೇರೆ ತರಹದ ಹೂವುಗಳ ವಿನ್ಯಾಸ ಒಂದರಲ್ಲೊಂದು ಅರ್ಧಅರ್ಧ ಸೇರಿದಂತೆ ರಚಿಸಲಾಗಿದೆ. ಅದಾದ ಮೇಲೆ ನಕ್ಷೆಯ ಒಳಬದಿಯಲ್ಲಿ ಚಕ್ರವೊಂದನ್ನು ರಚಿಸಿ ಅಲ್ಲಿಯೇ

ಮತ್ತೆ ಸಣ್ಣ ಸಣ್ಣ ಚೌಕಡಿಗಳ ಚಿತ್ರವನ್ನು ರಚಿಸಿ ಉದ್ದನೆಯ 'ಶಿ' ಆಕಾರದ ಚಿತ್ರವನ್ನು ರಚಿಸಿ ಮತ್ತೆ ಸರಳಗೈ ಚಿತ್ರಗಳಿಂದ ಪಾದದವರೆಗೂ ನಕ್ಷೆಗಳನ್ನು ಚುಕ್ಕಿಗಳೊಂದಿಗೆ ಹಾಕುತ್ತಾ ಬಂದು ಪಾದಕ್ಕೆ ಮತ್ತೆ ಹೂವಿನೊಂದಿಗೆ ವಿನ್ಯಾಸಗೊಳಿಸಿ ಪ್ರತೀ ಬೆರಳಿಗೆ ಬೇರೆ ಬೇರೆಯಾಕಾರದ ನಕ್ಷೆಗಳನ್ನು ರಚಿಸಿ ಕೈಯಂತೆ ಕಾಲಿಗೂ ಉಗುರಿನೊಂದಿಗೆ ಮದರಂಗಿಯನ್ನು ಮೆತ್ತಿಕೊಂಡು ಕೆಂಪಾಗಿ ಕಾಣುವಂತೆ ಮದರಂಗಿಯನ್ನು ಹಾಕಿಕೊಳ್ಳುತ್ತಾರೆ. ಇದು ಎರಡು ಕಾಲುಗಳಿಗೆ ವಿರುದ್ಧ ದಿಕ್ಕುಗಳಲ್ಲಿ ಫ್ರೀಹ್ಯಾಂಡ್ ಡ್ರಾಯಿಂಗ್‌ನಂತೆ ಇರುವುದು ವಿಶೇಷ.





೨) ಕಾಲು ಮತ್ತು ಪಾದದ ಮೇಲೆ ಮದರಂಗಿ



೪) ಮದರಂಗಿ ಪಾದ



ಅಧ್ಯಾಯ ಆರು

**ಬಾಗಲಕೋಟೆ ಜಿಲ್ಲೆಯ ಬಟ್ಟೆ ಮಾಧ್ಯಮ ಚಿತ್ರಕಲೆ**

ಅ. ರಂಗಪರದೆಗಳು

ಆ. ಇತರೆ: ೧. ಜನಪದ

೨. ಶಿಷ್ಟ

# ಬಾಗಲಕೋಟೆ ಜಿಲ್ಲೆಯ ಬಟ್ಟೆ ಮಾಧ್ಯಮ ಚಿತ್ರಕಲೆ

ಭಿತ್ತಿ, ಹಸ್ತಪ್ರತಿ, ತೊಗಲು ಮಾಧ್ಯಮಗಳಂತೆಯೇ ಬಟ್ಟೆ ಒಂದು ಪ್ರಮುಖ ಮಾಧ್ಯಮವಾಗಿದೆ. ಇಂದಿಗೂ ಕೂಡ ಬಟ್ಟೆ ಮಾಧ್ಯಮದ ಚಿತ್ರಕಲೆ ಅಭ್ಯುದಯ ಸ್ಥಿತಿಯಲ್ಲಿದೆ. ಈ ಬಟ್ಟೆ ಮಾಧ್ಯಮವು ರಂಗಪರದೆಗಳಿಂದ ಹಿಡಿದು ಇಂದಿನ ಯುವ ಕಲಾವಿದರು ರಚಿಸುವ ಅಕಾಡೆಮಿಕ್ ಶೈಲಿಯ ಚಿತ್ರಗಳವರೆಗೂ ತನ್ನ ವ್ಯಾಪ್ತಿಯನ್ನು ಹೊಂದಿದೆ. ಈ ಕಾರಣಕ್ಕಾಗಿ ಈ ಬಟ್ಟೆ ಮಾಧ್ಯಮವನ್ನು ಅಧ್ಯಯನದ ದೃಷ್ಟಿಯಿಂದ ರಂಗಪರದೆಗಳು ಹಾಗೂ ಇತರೆ ಜನಪದ ಹಾಗೂ ಶಿಷ್ಟ ಕಲಾವಿದರ ಕಲಾಕೃತಿಗಳಾಗಿ ವಿಭಜಿಸಿ ಅಭ್ಯಸಿಸಲಾಗಿದೆ.

### ಅ. ರಂಗಪರದೆಗಳು

ಶತಮಾನದ ಇತಿಹಾಸವಿರುವ ಇಲಕಲ್ಲಿನ ರಂಗಪರದೆಗಳು ನಾಡಿನಾದ್ಯಂತ ಎಲ್ಲಾ ಹವ್ಯಾಸಿ ಕಂಪನಿ ನಾಟಕಗಳ ಹಿನ್ನೆಲೆ ವಿನ್ಯಾಸವಾಗಿರುವುದು ಈಗ ಇತಿಹಾಸ. ಇಂದಿನ ಆಧುನಿಕ ಮಾಧ್ಯಮಗಳ ಭರಾಟೆಯಲ್ಲಿಯೂ ರಂಗಭೂಮಿ ಕಲೆ ಜಾಗೃತವಾಗಿದೆ. ಊರಿನ ಜಾತ್ರೆ, ಹಬ್ಬ-ಹರಿದಿನಗಳಲ್ಲಿ ನಡೆಯುವ ಸಾಮಾಜಿಕ, ಪೌರಾಣಿಕ ನಾಟಕಗಳ ಹಿನ್ನೆಲೆ ಪರದೆಗಳ ರೂಪದಲ್ಲಿ ಉಳಿದುಕೊಂಡಿದೆ ಈ ಕಲೆ. ಇಂದಿಗೂ ವೃತ್ತಿರಂಗಭೂಮಿಯಾಗಲಿ ಅಥವಾ ಹವ್ಯಾಸಿ ರಂಗಭೂಮಿಯಾಗಲಿ ಕೆಲವು ಸಾಮಾನ್ಯ ಸ್ವರೂಪದ ರಂಗಸಜ್ಜಿಕೆಗಳನ್ನು ಹೊಂದಿರಲೇಬೇಕಾಗುತ್ತದೆ. ನಾಟಕ ಪ್ರದರ್ಶನವೆಂದರೆ ಇಂತಿಷ್ಟು ಸೀನರಿ, ಸೆಟ್ಟಿಂಗ್ ಮುಂತಾದ ಪರಿಕರಗಳು ಇರಲೇಬೇಕು ಎಂಬ ಅಲಿಖಿತ ನಿಯಮವಿದೆ. ನಾಟಕಗಳಲ್ಲಿ ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕವೆಂದು ಮೂರು ಪ್ರಕಾರಗಳು. ಅದರಲ್ಲಿ ಸಾಮಾಜಿಕಕ್ಕಿಂತ ಪೌರಾಣಿಕ ಮತ್ತು ಐತಿಹಾಸಿಕ ಇವೆರಡರಲ್ಲಿ ರಂಗಸಜ್ಜಿಕೆಗಳದು ಅತಿ ಹೆಚ್ಚಿನ ಅಬ್ಬರ. ವಾತಾವರಣದ ನಿರ್ಮಾಣದಲ್ಲಿ ಒಂದು ಸನ್ನಿವೇಶದ ಹಿನ್ನೆಲೆ ಮುಖ್ಯ ಪಾತ್ರ ವಹಿಸುತ್ತವೆ.

### i. ರಂಗಪರದೆ ತಯಾರಿಕಾ ನೆಲೆಗಳು

ರಂಗಭೂಮಿಯ ಕಲಾವಿದ ಕಲಾವಿದೆಯರನ್ನು ನೀಡಿದ ಇಲಕಲ್ಲ ಇಂದಿಗೂ ರಂಗಭೂಮಿಯ ನಂಟನ್ನು ಒಂದು ವೃತ್ತಿಯಾಗಿ ಸ್ವೀಕರಿಸಿ ಹಲವಾರು ಜನ ಜೀವಿಸುತ್ತಿದ್ದಾರೆ. ಇಲಕಲ್ಲಿನ ನೆಲೆಯೊಂದನ್ನು ಬಿಟ್ಟರೆ ಅರ್ಧಶತಮಾನದ ನಂತರ ಮಹಾಲಿಂಗಪ್ಪ ಕೋಲಾರ ಅವರು ಯಾವುದೇ ಅಧಿಕೃತ ಕಲಾ

ಶಿಕ್ಷಣವಿಲ್ಲದೇ ಪರದೆಗಳನ್ನು ಬರೆಯುವ ಪ್ರಯತ್ನ ನಡೆಸಿದ್ದು, ಇಲಕಲ್ಲಿನ ಜೊತೆಗೆ ಜಿಲ್ಲೆಯಲ್ಲಿ ಹುನ್ನೂರು ಒಂದು ನೆಲೆಯಾಗಿ ಪರಿಗಣಿಸಲಾಗಿದೆ.

ಜಿಲ್ಲೆಯಲ್ಲಿ ಸಮೃದ್ಧವಾಗಿ ಬೆಳೆದ ರಂಗ ಪರದೆ ಕಲಾಕೃತಿಗಳಂತೆ ಇತರೆ ದೇವರ ಮತ್ತು ದಾರ್ಶನಿಕರ, ಋಷಿಮುನಿಗಳ ಕಾಲ್ಪನಿಕ ಚಿತ್ರಗಳು ಮತ್ತು ನಕಲು ಚಿತ್ರಗಳನ್ನು ಇಲ್ಲಿಯ ಕಲಾವಿದರು ಜಾನಪದ ಶೈಲಿಯಲ್ಲಿ ಕೃತಿ ರಚಿಸಿದ್ದಾರೆ. ಇವರ್‍ಯಾರೂ ಅಧಿಕೃತ ಕಲಾಶಿಕ್ಷಣ ಪಡೆಯದ ಕಲಾವಿದರಾಗಿದ್ದಾರೆ. ಜಿಲ್ಲೆಯ ಜಮಖಂಡಿ, ಹುನ್ನೂರು, ಬಾಗಲಕೋಟೆ, ತೇರದಾಳ, ಕಡಪಟ್ಟಿ, ಕಂದಗಲ್ಲು, ಕೋಡಿಹಾಳ, ಕಂಬಳಿಹಾಳ, ನಾಗೂರ, ಬಿಂಜೆವಾಡಿಗಿ, ಹಿರೇಸಿಂಗನಗುತ್ತಿ, ಹಿರೇಓತಿಗೇರಿ, ಗುಳೇದಗುಡ್ಡ, ಬಾದಾಮಿ, ಯಂಡಿಗೇರಿ, ಲೋಕಾಪುರ ಮೊದಲಾದ ಊರುಗಳನ್ನು ರಂಗಪರದೆ ತಯಾರಿಕಾ ನೆಲೆಗಳೆಂದು ಹೆಸರಿಸಬಹುದು.

ಇಲಕಲ್ಲಿನ ರಂಗಪರದೆಗಳಿಗೆ ಮೂಲ ಜೀವವಿತ್ತವರು ಇಲಕಲ್ಲನ್ನು ರಂಗಪರದೆಯ ರಚನೆ ಅಥವಾ ತಯಾರಿಕಾ ಕೇಂದ್ರದಾಗಿಸಿದವರು ಚಿಲಕದ ವೆಂಕಣ್ಣ. ಆರಂಭದ ದಿನಗಳಲ್ಲಿ ಹ್ಯಾಗೋ ನಾಟಕಗಳನ್ನು ಆಡುತ್ತಿದ್ದ ಸಂದರ್ಭಗಳಲ್ಲಿ ಮನೆಯ ಸೀನನ್ನು ಚಿಕ್ಕ ಬಾಗಿಲಿನಂತೆ ಕತ್ತರಿಸಿ, ಕಲ್ಲುಗಳನ್ನು ಗೋಡೆಗಳಂತೆ ಬರೆದು ಕೊಡುತ್ತಿದ್ದ. ಈ ಕಲೆ ಬರಬರುತ್ತಾ ವಿಧಾನಸೌಧ ಪಾರ್ಲಿಮೆಂಟ್‌ಗಳ ಚಿತ್ರ ಬರೆದು ಅದರ ಮುಂದೆಯೇ ಪಾತ್ರಧಾರಿಗಳು ನಿಂತಿರುವ ಪರಿಕಲ್ಪನೆ ನೋಡಿದರೆ ನಾವು ನಿಶ್ಚಿತವಾಗಿ ವಿಧಾನಸೌಧದ ಮುಂದೆಯೇ ಇದ್ದೇವೆ ಎಂಬ ಕಲ್ಪನೆಯನ್ನು ಕೊಡುವಷ್ಟರಮಟ್ಟಿಗೆ ಕಲಾವಿದರು ಇಂದು ಬೆಳೆದು ನಿಂತಿದ್ದಾರೆ. ಚಿಕ್ಕಂದಿನಿಂದಲೇ ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿದ್ದ ತುಕಾರಾಮಪ್ಪ ಚಿಲ್ಲಾಳ ಅವರು ಇಲಕಲ್ಲಿನ ಗರಡಿ ಮನೆಗಳ ಗೋಡೆ, ಬಾಸಿಂಗದ ಕಟ್ಟೆಗಳ ಮೇಲೆ ಚಿತ್ರ ಬರೆಯುತ್ತಾ ತಮ್ಮ ಪ್ರೌಢಿಮೆಯನ್ನು ವಿಸ್ತರಿಸಿಕೊಂಡವರು. ಅವರು ರಚಿಸಿದ ನಾಟಕದ ಪರದೆಗಳು ಇಂದಿಗೂ ಕಾಪಾಡಿಕೊಂಡು ಬಂದ ಕಂಪನಿಗಳು ಜೀವಂತ ಇವೆ. ಕೇವಲ ನಾಲ್ಕನೇ ತರಗತಿಯವರೆಗೆ ಓದಿಕೊಂಡ ಈ ಕಲಾವಿದ ಚಿಲಕದ ವೆಂಕಣ್ಣನವರ ಕಲಾದೃಷ್ಟಿಗೆ ಬಿದ್ದು, ಅದ್ಭುತವಾದ, ಇತಿಹಾಸ ನಿರ್ಮಿಸಬಹುದಾದ ಪರದೆ ಕಲಾಕೃತಿಗಳ ಹುಟ್ಟಿಗೆ ಕಾರಣರಾದ ಇವರ ಚಿತ್ರ ಗರಡಿಯಲ್ಲಿಯೇ ಶ್ರೀ ಮರೋಳ, ಶ್ರೀ ಕೆ.ಎಂ. ರಾಜ್ ಕೆಂಧೂಳಿ, ಶ್ರೀ ಮಲ್ಲೇಶಪ್ಪ ಧೋತ್ರೆ ಎಂಬ ಶಿಷ್ಯವರ್ಗ ಸೃಷ್ಠಿಯಾಯಿತು. ಇಂಥ ಮಹಾನ್ ಕಲಾವಿದರು ಯಾವುದೇ ಅಧಿಕೃತ ಚಿತ್ರಕಲೆಗೆ ಸಂಬಂಧಿಸಿದ ಶಿಕ್ಷಣವಿಲ್ಲದೆ ಕೇವಲ ಒಬ್ಬರನ್ನೊಬ್ಬರು ನೋಡಿ ಮುದ್ರಿತ ಚಿತ್ರಗಳನ್ನು ನಕಲು ಮಾಡುತ್ತಾ ಬೆಳೆದುಬಂದ ಇವರಾಗಿದ್ದಾರೆ. ಕೆ. ಸಿದ್ದರಾಮ ಮತ್ತು ಯಲ್ಲಪ್ಪ ಕಾಂಬ್ಳೆ, ಗೋಖುರಸಾಬ ಕೊಡಗಲಿ ಶಿಕ್ಷಕರು, ಎ.ಎಚ್. ಪಾನಿಭಾತೆ, ಅಬ್ದುಲ್ ಅಮೀದ್ ಕಟಂಬ್ಲಿ, ಸಂಗಪ್ಪ ಹಡಪದ ಈ ಕಲಾವಿದರು ಪರದೆ ಮತ್ತು ಇತರೆ ಚಿತ್ರ ನಿರ್ಮಾಣದಲ್ಲಿ ಸಿದ್ಧಹಸ್ತರೆನ್ನಬಹುದು. ಇಲ್ಲಿ ಹಿರಿಕಿರಿ ಎಂಬ ಬೇಧ ಅರ್ಧ ಶತಮಾನದಷ್ಟು ಅವಧಿ ಯಿಂದಲೂ ಇಲಕಲ್ಲು ರಂಗಭೂಮಿ ಪರದೆಗಳ ನೆಲೆಯಾಗಿ ಶಾಶ್ವತ ಸ್ಥಾನ ಸಂಪಾದಿಸಿದೆ.

೧೯೪೦ರ ಸುಮಾರಿಗೆ ಈ ಗುರುಶಿಷ್ಯರ ಪರದೆ ಬರೆಯುವ ಕಲೆಯ ಕೆರೂರಿನ ಗೌಡರ ಕಂಪನಿ, ಈರಪ್ಪನವರ ಕಂಪನಿ, ಗೋಗೇಶ್ವರ ಕಂಪನಿ ಮತ್ತು ರಡ್ಡಿ ಕಂಪನಿ ಇನ್ನೂ ಹಲವಾರು ಸಂಸ್ಥೆಗಳಿಗೆ

ಪರದೆ ತಯಾರಿಸಿಕೊಟ್ಟ ಹೆಗ್ಗಳಿಕೆ ಇವರದಾಗಿದೆ. ಪ್ರೇಕ್ಷಕರ ಮನದಲ್ಲಿ ಪರದೆಗಳ ಮೂಲಕ ಸನ್ನಿವೇಶಗಳನ್ನು ಪಡಿಮೂಡಿಸುವಲ್ಲಿ ತಮ್ಮ ಕಲಾ ಪರಿಪೂರ್ಣತೆ ಮೆರೆದಿದ್ದಾರೆ. ದೃಶ್ಯಾವಳಿಗೆ ತಕ್ಕಂತೆ ಕಣ್ಣಿಗೆ ಹಿತ ಕೊಡುವ ಸೌಮ್ಯ ವರ್ಣಗಳಿಂದ ವಿನ್ಯಾಸಗೊಳಿಸುವುದು ಇವರ ವಿಶೇಷ ಶೈಲಿಯಾಗಿತ್ತು. ಸಾಂಪ್ರದಾಯಿಕ ಸುಳಿವುಗಳು, ಬೇಲೂರಿನ ಶಿಲಾ ಬಾಲಕಿಗಳು, ದರ್ಬಾರ್‌ಸೀನ್, ದೇವಾಲಯಸೀನ್, ಸ್ಮಶಾನ, ಜೈಲು ಮೊದಲಾದ ಆಯಾ ನಾಟಕದ ಅಗತ್ಯಕ್ಕೆ ಅನುಗುಣವಾಗಿ ಪರದೆಗಳನ್ನು ರಚಿಸಿದ್ದರು. ಆನಂತರ ಛಾಯಾಚಿತ್ರ ಕಲೆಯನ್ನು ಚಿಲ್ಲಾಳ ಅವರು ರೂಢಿಸಿಕೊಂಡು ಸ್ಟುಡಿಯೋ ಒಂದನ್ನು ಕಟ್ಟಿಕೊಂಡರು. ಇವರ ಜೊತೆಗೆ ಶ್ರೀ ರಾಮಮೂರ್ತಿ ಗಜೇಂದ್ರ ಗಡ ಅವರು ಕೂಡ ಪರದೆ ಬರೆಯುವ ಕಲೆಯನ್ನು ರೂಢಿಸಿಕೊಂಡು ಪ್ರಾರಂಭಿಸಿದರು.

ಮುಂದಿನ ಅವರ ಶಿಷ್ಯ ಪೀಳಿಗೆಗಾಗಿ ತುಕರಾಮ ಬೋರೆ ಚಿಕ್ಕ ವಯಸ್ಸಿನಲ್ಲಿ ಚಿತ್ರಕಲೆಯ ಬಗ್ಗೆ ಆಸಕ್ತಿ ಹೊಂದಿದ ಇವರು ಇಲಕಲ್ಲಿನಲ್ಲಿ ಸ್ಟುಡಿಯೋ ಒಂದನ್ನು ಇಟ್ಟುಕೊಂಡು ಹಿರಿಯ ಕಲಾವಿದರ ಚಿತ್ರಗಳ ನಕಲು ಮಾಡುತ್ತಾ ಪರದೆ ಕಲೆಯನ್ನು ಅರಗಿಸಿಕೊಂಡವರು. ಇನ್ನೋರ್ವ ಕಲಾವಿದ ಕೆ. ಅಮೀನ ಧರ್ಮದಿಂದ ಮುಸ್ಲಿಮ್‌ನಾದರೂ ಹಿಂದೂ ದೇವತೆಗಳ ಚಿತ್ರ ರಚನೆಯಲ್ಲಿ ಸಿದ್ಧಹಸ್ತರು. ಹಿರಿಯ ಕಲಾವಿದ ಖೇಮರಾಜ ಕೆಂಧೂಳಿಯವರ ಮಾರ್ಗದರ್ಶನದಲ್ಲಿ ನೂರಾರು ಸೀನರಿಗಳನ್ನು ಅಚ್ಚುಕಟ್ಟಾಗಿ ಬರೆದು ಇಲಕಲ್ಲಿನ ಹೆಸರನ್ನು ರಂಗಭೂಮಿ ಪರದೆ ಕ್ಷೇತ್ರದಲ್ಲಿ ಅಜರಾಮರವಾಗಿಸಿದ ಕೀರ್ತಿ ಕೆ. ಅಮೀನರಿಗೆ ಸಲ್ಲುತ್ತದೆ. ಅತೀ ಹೆಚ್ಚು ಕಂಪನಿಗಳಿಗೆ ಚಿತ್ರ ಬರೆದ ಖ್ಯಾತಿಯೂ ಇವರದು. ಮುಖರಂಗಸಜ್ಜಿಕೆಯ ಪಾರ್ಶ್ವ ಚಿತ್ರಗಳಲ್ಲಿ ಬರುವ ಭಾವ ಚಿತ್ರವನ್ನು ನಾಡಿನ ಹಿರಿಯ ಕಲಾವಿದ ರಾಜ ರವಿವರ್ಮರಂತೆ ಚಿತ್ರಿಸಿ, ಆದಿಲ್‌ಶಾಹಿಯ ಶಿಲ್ಪಕಲೆಯಲ್ಲಿ ಕಂಡುಬರುವ ಪರ್ಶಿಯನ್ ಮಾದರಿಯ ಸುಳುವು ಚಿತ್ರಗಳನ್ನು ರಚಿಸಿ ಮೆರಗಿನ ಬಣ್ಣವನ್ನು ನೀಡುವಲ್ಲಿ ನೈಪುಣ್ಯತೆ ಪಡೆದವರಾಗಿದ್ದಾರೆ. ದರ್ಬಾರ್ ಹಾಗೂ ಮಹಲ್ ಸೀನುಗಳನ್ನು ಸೃಷ್ಟಿಸುವಲ್ಲಿ ಸಿದ್ಧಹಸ್ತರು. ಇಲಕಲ್ಲಿನ ಇನ್ನೋರ್ವ ಕಲಾವಿದ ಸನ್ನೂರ್ ಪೇಂಟರ್ ಎಂದೇ ಹೆಸರಾದ ಸೋಮಣ್ಣ ಸನ್ನೂರ್ ಅವರು ಮೂರನೇ ತರಗತಿಯಿಂದಲೇ ಚಿತ್ರ ಬರೆಯುವ ಹವ್ಯಾಸ ರೂಢಿಸಿಕೊಂಡ ಇವರಿಗೆ ಕಲೆ ದೈವದತ್ತವಾಗಿ ಬಂತು. ತುಕರಾಮ್ ಚಿಲ್ಲಾಳ ಖೇಮ್‌ರಾಜ ಕೆಂಧೂಳಿ ಇವರ ಗುರುಗಳಾಗಿದ್ದರು. ಪೂರ್ಣ ಪ್ರಮಾಣದ ಅನುಭವವನ್ನು ಪಡೆದು ಇಂದಿಗೂ ಪರದೆ ಮತ್ತು ದೈವದತ್ತವಾದ ಚಿತ್ರಗಳನ್ನು ಹಾಗೂ ಭಾವ ಚಿತ್ರಗಳನ್ನು ರಚಿಸುತ್ತಾ ಆಧುನಿಕ ಕ್ಯಾಮರವನ್ನೂ ಇಟ್ಟುಕೊಂಡು ಸ್ಟುಡಿಯೋದಲ್ಲಿ ಕಾರ್ಯನಿರತರಾಗಿರುತ್ತಾರೆ.

ಇವರಂತೆ ಇಲಕಲ್ಲಿನ ಇನ್ನೊಂದು ಪ್ರತಿಭೆ ಜಗದೀಶ್ ಕೊಪ್ಪರದ ಕೆ. ಅಮೀನ ಪೇಂಟರ್‌ರಂತೆ ಮೂಲತಃ ಮೇಕಪ್ ಕಲಾವಿದರಾದ ಕೆ. ಜಗದೀಶ್ ಎಂಬ ನಾಮಾಂಕಿತದಿಂದ ನಟನೆಯೊಂದಿಗೆ ರಂಗಸಜ್ಜಿಕೆ ಗ್ರೀನ್ ರೂಮ್‌ಗಳ ಕಾರ್ಯನಿರ್ವಹಿಸುತ್ತಿದ್ದ ಪರದೆಗಳ ಬೇಡಿಕೆ ಬಂದಾಗಲೆಲ್ಲ ತಾನೂ ಬರೆಯಬೇಕೆಂಬ ಹಂಬಲದಿಂದ ರೂಢಿಸಿಕೊಂಡವರು. ರಂಗ ಪರದೆಗಳ ಕಲೆ ಬರುಬರುತ್ತಾ ಇವರ ಕೈವಶವಾಯಿತು. ಇಂದಿಗೂ ಪರದೆಗಳನ್ನು ಬರೆಯುವ ಮತ್ತು ಇತರೆ ಚಿತ್ರಗಳನ್ನು ಬರೆಯುವ ಉದ್ಯೋಗದಲ್ಲಿ ತೊಡಗಿಕೊಂಡಿದ್ದಾರೆ.

ಬರೀ ಪರದೆಗಳಲ್ಲದೆ ಈ ಕಲಾವಿದರು, ಅನಕ್ಷರಸ್ಥರು ಹಲವರು ಶಿಷ್ಟ ಕಲಾವಿದರಂತೆ ಚಿತ್ರ ರಚಿಸಿರುವ ಉದಾಹರಣೆಗಳು ಇಲ್ಲಿವೆ. ಕಂದಗಲ್ಲಿನ ಚಿತ್ರಗಾರ ಮನೆತನದ ನರಸಮ್ಮ ಹಿರೇಸಿಂಗನಗುತ್ತಿಯ ಹನುಮಂತಪ್ಪ ಬಡಿಗೇರ, ಕಂಬಳಿಹಾಳದ ಶರಣಗೌಡ ಪಾಟೀಲ, ಕರಡಿಯ ಸಿದ್ರಾಮಯ್ಯ ನಂದಿಕೋಲ ಮಠ, ನಾಗೂರಿನ ಚನ್ನಮಲ್ಲಪ್ಪ ಬಡಿಗೇರ, ಬಿಂಜವಾಡಿಗಿಯ ಸುಭಾಶ್ ಗುರುಸಿದ್ದಪ್ಪ ಬತಗುನಕೇರಿ, ಹಿರೇಓತಗೇರಿಯ ಈಶ್ವರಪ್ಪ ಪತ್ತಾರ, ಮುಧೋಳ ತಾಲ್ಲೂಕಿನ ಮಾಲಾಪುರದ ಗಿರಿಮಲ್ಲಯ್ಯ ಹಿರಿಮಠ, ಜಿನಗಾರ ಪಿ.ಮೋಹನ ಜಮಖಂಡಿ ತಾಲ್ಲೂಕಿನ ಮದರಖಂಡಿಯ ಅಪ್ಪಯ್ಯ ಕೂಗ್ಯೆಗೋಳ, ಮೃತ್ಯುಂಜಯ ತಳವಾರ, ಸಲಬಣ್ಣ ಬಡಿಗೇರ, ಮಲ್ಲಯ್ಯ ಹಿಡಕಲ್ಲ, ದೇವೇಂದ್ರ ಬಡಿಗೇರ, ಹುನ್ನೂರಿನ ಶ್ರೀ ಸಿದ್ರಾಮಪ್ಪ, ಕಾಮಗೊಂಡ, ಬನಹಟ್ಟಿಯ ಶ್ರೀ ಚಿಂಡಕ, ಜಮಖಂಡಿಯ ಶ್ರೀ ಸಾಲಿಮಠ ಪೇಂಟರ್, ಶಂಭುಲಿಂಗ ಕರ್ಜಿಗಿಮಠ, ಎ. ರಜಾಕ್, ಸ್ವಾಮಿ ಮತ್ತು ಕಡಪಟ್ಟಿಯ ಶ್ರೀ ರಾಮಪ್ಪ ಕಡಪಟ್ಟಿ ಅಲ್ಲದೆ ಛಾಯಾಚಿತ್ರದಲ್ಲಿ ಅಪ್ರತಿಮರಾದ ಶ್ರೀ ಹರಕಂಗಿ ಮತ್ತು ಬ್ಯಾಂಕ್ ನೌಕರರಾಗಿದ್ದು, ಚಿತ್ರಕಲೆಯಲ್ಲಿ ಯಾವುದೇ ತರಬೇತಿ ಪಡೆಯದೆ ಶಿಷ್ಟ ಚಿತ್ರಗಳಂತೆ ಅಪರೂಪದ ಚಿತ್ರಗಳನ್ನು ರಚಿಸಿದ ಅಮೃತಶ್ರೀ ಅಂಕಿತ ನಾಮವನ್ನು ಹೊಂದಿದ ಶ್ರೀ ಕುಲಕರ್ಣಿಯವರನ್ನು ಹೆಸರಿಸಬಹುದು.

**ii. ಚಿತ್ರರಚನಾ ತಂತ್ರ-ವಿಧಾನ**

ಬಟ್ಟೆಯ ಮಾಧ್ಯಮದ ಎಪ್ಪತ್ತು ವರ್ಷಗಳ ಹಿಂದೆ ಆರಂಭಗೊಂಡ ಈ ಕಲೆಯ ಆಧಾರ ಸಾಮಗ್ರಿ ಮ್ಯಾನ್ಸಿಸ್ಟರ್‌ನ ಬಟ್ಟೆ. ಮಂಜರಪಾಟ ಎಂಬುದು ಅದರ ಗ್ರಾಮ್ಯ ಶಬ್ದ. ಬ್ರಿಟಿಷ್‌ರ ಕಾಲದಿಂದ ಮ್ಯಾನ್ಸಿಸ್ಟರ್ ತಂತ್ರದೊಂದಿಗೆ ಸಿದ್ದಗೊಂಡ ಈ ಬಟ್ಟೆ ತೆಳುವಾದ, ದಪ್ಪ ಮತ್ತು ಅತೀ ದಪ್ಪ ಮೂರು ಬಗೆಯ ದಪ್ಪಗಳಲ್ಲಿ ಸಿಗುತ್ತಿತ್ತು. ಪರದೆಗಳನ್ನು ಬರೆಯಲು ಮಧ್ಯಮ ಗಾತ್ರದ ದಪ್ಪ ಬಟ್ಟೆಯನ್ನು(ಇಂದಿನ ಡಕ್ ಬಟ್ಟೆ) ಕ್ಯಾನ್ವಾಸ್‌ನಂತೆ ಬಳಸಿಕೊಳ್ಳುತ್ತಾರೆ. ಕಡಿಮೆ ಬೆಲೆಯಲ್ಲಿ ಲಭ್ಯವಿರುವ ಈ ಮಂಜರ್‌ಪಾಟ್ ಬಟ್ಟೆಯು ಇಂದಿಗೂ ನಾಡಿನ ಎಲ್ಲಾ ಅಂಗಡಿಗಳಲ್ಲಿ ಇತರ ಬಟ್ಟೆಗಳಿಗಿಂತ ಕಡಿಮೆ ದರದಲ್ಲೇ ಸಿಗುತ್ತದೆ. ಹಾಗಾಗಿ ಇಂದಿಗೂ ಸುಧಾರಿತ ಪರದೆಗಳು ಇದೇ ಮಂಜರ್‌ಪಾಟ್ ಬಟ್ಟೆಗಳಲ್ಲಿ ರಚಿನೆಗೊಳ್ಳುತ್ತವೆ. ಹಿರಿಯ ಕಲಾವಿದ ಚಿಲ್ಲಾಳ ಅವರು ಬದುಕಿದ್ದಾಗ ನಡೆಸಿದ್ದ ಸಂದರ್ಶನದಲ್ಲಿ ಹೇಳಿದಂತೆ ಕೇವಲ ಮೂರು ರೂಪಾಯಿಗೆ ಮೀಟರ್‌ನಂತೆ ಸಿಗುತ್ತಿದ್ದ ಬಟ್ಟೆ ಅಂದು ೪೨ ಇಂಚಿನ ಪನ್ನಾ ಹೊಂದಿತ್ತಂತೆ ಬರುಬರುತ್ತಾ ಅವರ ಬದುಕಿನ ಸಂಧ್ಯಾಸಮಯದಲ್ಲಿ ೧೫ ರೂಪಾಯಿಗಳಿಗೆ ಒಂದು ಮೀಟರ್ ಆಯ್ತಂತೆ ಇಂದು ಅದೇ ಸುಧಾರಿತ ಕ್ರಮದ ಬಟ್ಟೆ ಆಧುನಿಕ ಕ್ಯಾನ್ವಾಸ್‌ನ್ನು ಹೋಲುವ ಬಟ್ಟೆ ೫೫ ರೂಪಾಯಿಗೆ ಮೀಟರ್‌ನಂತೆ ಸಿಗುತ್ತದೆ. ಇಂದಿಗೂ ಇದೇ ಬಟ್ಟೆಯಲ್ಲಿ ಪರದೆ ಚಿತ್ರಗಳನ್ನು ಬರೆಯಲಾಗುತ್ತದೆ. ತಂತ್ರ ವಿಧಾನದಲ್ಲಿ ಬಟ್ಟೆಯ ಮೇಲಿರುವ ನೇಯ್ಗೆಯ ಗೆರೆಗಳು ದಾರದಿಂದ ದಾರಕ್ಕೆ ಇರುವ ಅಂತರದಲ್ಲಿ ಮಧ್ಯಮಧ್ಯ ಕುಂಚದಿಂದ ಆಡಿಸುವ ಪರಿಯಿಂದಾಗಿ ವರ್ಣವು ಬಣ್ಣದಿಂದ ಬಣ್ಣಕ್ಕೆ ಮಿಶ್ರಣ ಹೊಂದಿ ರಮ್ಯ ನೋಟವನ್ನು ಕೊಡುತ್ತದೆ.

ಬ್ರಿಟಿಶ್ ಕಾಲದಿಂದ ಬಳಕೆಯಲ್ಲಿದ್ದ ಶತಮಾನಗಳ ಇತಿಹಾಸ ಹೊಂದಿದ ಲೇಕ್ ಕಲರ್ ಕಣ್ಣೆ ಕಣ್ಣೆಯಾಗಿ ರಟ್ಟಿನ ಡಬ್ಬಿಯಲ್ಲಿ ತುಂಬಿ ಮಾರುಕಟ್ಟೆಗೆ ಬರುತ್ತಿತ್ತು. ಇಂಥ ಬಣ್ಣಗಳನ್ನು ತೈಲವರ್ಣ ಬಳಕೆಗೆ ಸಾಧ್ಯವಾಗದ ಪರದೆ ಕಲೆ ಈ ನೀರಿನೊಂದಿಗೆ ಕಲಿಸಿಕೊಂಡು ಬಳಸಬೇಕಿತ್ತು. ಅಂದರೆ ಜಲವರ್ಣದಲ್ಲಿಯೇ ರಚಿಸಬೇಕಾಗಿತ್ತು. ಏಕೆಂದರೆ ಹಗ್ಗದ ಸಹಾಯದಿಂದ ಮೇಲಕ್ಕೆತ್ತುವ ಪರದೆ ಬಣ್ಣ ಬಳಿದ ನಂತರವೂ ಮೃದುವಾಗಿರಬೇಕಾಗಿತ್ತು. ಏಕೆಂದರೆ ಏರಿಳಿತದಲ್ಲಿ ಬಟ್ಟೆ ಬಿರುಸಾಗಿದ್ದರೆ ಮೇಲಕ್ಕೇರಲು ಕಷ್ಟವಾಗುತ್ತಿತ್ತು. ಚಿತ್ರ ಬರೆದ ಪರದೆಯನ್ನು ಒತ್ತಾಯ ಪೂರ್ವಕವಾಗಿ ಜಗ್ಗಿ ಮೇಲೇರಿಸಲು ಪ್ರಯತ್ನಿಸಿದರೆ ಬಣ್ಣ ಬಿರುಕು ಬಿಡುವ ಮತ್ತು ಬಟ್ಟೆ ಹರಿದುಹೋಗುವ ಸಾಧ್ಯತೆಗಳಿದ್ದವು. ಹೀಗಾಗಿ ಹೆಚ್ಚಾಗಿ ನೀರಿನ ಬಣ್ಣಗಳ ಬಳಕೆಯನ್ನೇ ಮಾಡಲಾಗುತ್ತದೆ.

ಇತ್ತೀಚೆಗೆ ಬಣ್ಣದ ಡಿಸ್ಟಂಪರ್ ನೇರವಾಗಿ ದೊರಕುತ್ತಿದ್ದು, ಈಗ ಅದನ್ನು ಹೇರಳವಾಗಿ ಬಳಸಲಾಗುತ್ತದೆ. ಹಿಂದಿನ ಕಾಲದಲ್ಲಿ ಅದರ ಪ್ರಮಾಣ ಕಡಿಮೆ ಇತ್ತು. ಕುಂಚಗಳನ್ನು ತೊಳೆಯಲು ಬಕೆಟ್‌ನ ಆಕಾರದ ದೊಡ್ಡ ಪಾತ್ರೆಗಳನ್ನೇ ಬಳಸಲಾಗುತ್ತಿತ್ತು.

ಇತ್ತೀಚಿನ ಸ್ಟೀಲ್, ತಾಮ್ರ, ಹಿತ್ತಾಳೆ ಹಾಗೂ ಅಲ್ಯುಮಿನಿಯಂ ಪಾತ್ರೆಗಳ ಕಾಲದಲ್ಲೂ ಕಲಾವಿದರು ಮಣ್ಣಿನ ತಗ್ಗುಳ್ಳ ಹರಿವಾಣವನ್ನು ಬಳಸುವುದು ವಾಡಿಕೆ. ಕಾರಣ ಮಣ್ಣಿನ ಪಾತ್ರೆಗಳಲ್ಲಿ ನೀರು ಇಂಗುತ್ತಾ ಫ್ರಿಜ್‌ನಂತೆ ಬಣ್ಣವನ್ನು ಒಣಗಲು ಬಿಡದೆ ಹೆಚ್ಚು ಸಮಯದವರೆಗೆ ಕಾಯ್ದುಕೊಂಡು ಬರುತ್ತದೆ. ಹಾಳಾಗುವ ಬಣ್ಣದ ಪ್ರಮಾಣವನ್ನು ತಡೆಯಲು ಮಣ್ಣಿನ ಪಾತ್ರೆಗಳನ್ನು ಬಳಸುತ್ತಾರೆ. ಚಿತ್ರದಲ್ಲಿರುವ ಕುಂಚಗಳು ಹಾಗ್‌ಹೇರ್ ಬಿರುಸಾದ ಬಿಳಿಯ ಕೂದಲುಗಳುಳ್ಳ ಕಾಡೆತ್ತಿನ ಕೂದಲುಗಳನ್ನು ಬಳಸಿ ಸಿದ್ದಪಡಿಸಿದ ಕುಂಚಗಳನ್ನು ಬಳಸುತ್ತಾರೆ. ನಾಲ್ಕು ಇಂಚಿನಿಂದ ಹಿಡಿದು ಆರು ನಂಬರಿನವರೆಗೆ ಎಲ್ಲಾ ತರಹದ ಪ್ಲಾಟ್ ಹಾಗೂ ರೌಂಡ್ ಬ್ರಶ್‌ಗಳನ್ನು ಉಪಯೋಗಿಸುತ್ತಾರೆ.

ಇನ್ನು ಬಟ್ಟೆ ತೋಯ್ದರೂ ಅಳುಕದಂತೆ ನೀರಿನೊಂದಿಗೆ 'ಮೆನಿಸರಿ'ಯನ್ನು ಬಳಸಲಾಗುತ್ತಿತ್ತು. ಇಂದಿಗೂ ಮೆನಿಸರಿಯಿಂದಲೇ ಲೇಕ್ ಬಣ್ಣಗಳನ್ನು ತಿಕ್ಕಿ ತಿಕ್ಕಿ ಮಣ್ಣಿನ ಹರಿವಾಣದಲ್ಲಿ ನೀರಿನೊಂದಿಗೆ ಹದ ಮಾಡಿಕೊಳ್ಳಲಾಗುತ್ತದೆ. ಈ ಮೆನಿಸರಿಯು ದುರ್ಗಮ ವಾಸನೆಯಿಂದ ತುಂಬಿರುತ್ತದೆ. ಮೀನು ಪರೆಯಿಂದ ರಚಿತಗೊಂಡ ಈ ವಸ್ತು ಅಂಟು ಮತ್ತು ರಾಳದ ಎಲ್ಲ ಗುಣಗಳನ್ನು ಹೊಂದಿರುತ್ತದೆ. ಬಣ್ಣದಿಂದ ಬರೆದ ಪರದೆಯು ನೀರಿಗೆ ತೋಯ್ದಾಗ ಅದರ ಮೇಲೆ ಕೈಯಾಡಿಸಿದರೆ ಮಾತ್ರ ಅಥವಾ ಯಾವುದೇ ಅನ್ಯ ವಸ್ತು ತಾಕಿದರೆ ಮಾತ್ರ ಅಳಿಸಿ ಹೋಗುತ್ತಿತ್ತು. ಆದರೆ ತೋಯ್ದ ನಂತರ ಹಾಗೆಯೇ ಒಣಗಿಸಿಬಿಟ್ಟರೆ ಯಾವುದೇ ಕಾರಣಕ್ಕೂ ಅದು ಅಳುಕುವುದಾಗಲಿ, ನಾಶ ಹೊಂದುವುದಾಗಲಿ ಆಗುತ್ತಿರಲಿಲ್ಲ. ಹೀಗಾಗಿ ಕಲಾವಿದರು ಮೆನಿಸರಿಯೊಂದಿಗೆ ಲೇಕ್ ಕಲರ್‌ನ್ನು ಬಳಸಿ ಅರ್ಧ ಶತಮಾನಗಳಷ್ಟು ಕಾಲ ಅದೇ ಬಣ್ಣ ಮತ್ತು ವಸ್ತುಗಳು ಆಯಾ ಕಂಪನಿಗಳಿಂದ ಸುಧಾರಣೆ ಹೊಂದುತ್ತಾ ನವೀನತೆಯನ್ನು ಕಂಡುಕೊಳ್ಳುತ್ತಾ ನಡೆದಿದೆ. ವರ್ಣಗಳ ಮಿಶ್ರಣ ತುಂಬ ವಿಶೇಷವಾಗಿದ್ದು, ಲೇಕ್ ಬಣ್ಣವು ಕೆಂಪು, ಹಳದಿ, ನೀಲಿ, ನೇರಳೆ, ಕೇಸರಿ, ಪಿಂಕ್, ತೆಳುಹಸಿರು, ಪಿಕಾಕ್ ಬ್ಲ್ಯೂನಂತಹ ವಿಶೇಷ ಬಣ್ಣಗಳಲ್ಲೂ

ಲಭ್ಯವಿರುವುದರಿಂದ ಪ್ರತೀ ಬಣ್ಣಕ್ಕೊಂದೊಂದು ಮಣ್ಣಿನ ಹರಿವಾಣಗಳಲ್ಲಿ ಕಲಿಸಿಕೊಳ್ಳುತ್ತಿದ್ದರು(ಚಿತ್ರ ೨). ೨೫ x ೨೦ ಅಡಿ ಜಾಗದ ಕನಿಷ್ಟ ಶೆಡ್‌ನ್ನು ಹಾಕಿಕೊಂಡ ಕಲಾವಿದರು ೨೦ x ೧೫ ಅಡಿಯ ಬಟ್ಟೆಯನ್ನು ನೆಲಕ್ಕೆ ಹಾಸಿ ಮೇಲಿನಿಂದ ಚಿತ್ರ ರಚಿಸುತ್ತಾ ಬರುತ್ತಾರೆ. ಆ ಚಿತ್ರದ ಬಟ್ಟೆಯ ಮೇಲೆಯೇ ಕುಳಿತು ಚಿತ್ರವನ್ನು ರಚಿಸಲಾಗುತ್ತದೆ. ಚಿಕ್ಕ ಚಿತ್ರವೊಂದನ್ನು ನಕಲಿಗಾಗಿಟ್ಟುಕೊಂಡು ಅದಕ್ಕೆ ಒಂದು ಸೆಂಟಿಮೀಟರ್‌ನ ಸ್ಕೇಲ್‌ನ್ನು ಹಾಕಿಕೊಂಡು ದೊಡ್ಡದಾದ ಬಟ್ಟೆಯ ಮೇಲೆ ಚೌಕಾಕಾರದ ಒಂದು ಅಡಿಯಿಂದ, ಒಂದುವರೆ ಅಡಿಯವರೆಗೆ ಚೌಕನೆಯ ಸ್ಕೇಲ್‌ನ್ನು ಹಾಕಿಕೊಂಡು ಇಡೀ ಚಿತ್ರದ ರೇಖಾಚಿತ್ರ ಪೂರ್ಣಗೊಳಿಸಲಾಗುತ್ತದೆ. ಸ್ಕೇಲ್ ಹಾಕುವಾಗ ಬಟ್ಟೆಗೆ ಹಾಕುವ ನೀಲಿ ಬಣ್ಣದ ಪುಡಿಯಲ್ಲಿ ದಾರವನ್ನು ಅದ್ದಿ ಎರಡು ಬದಿಯಲ್ಲಿ ಜಗ್ಗಿ ಹಿಡಿದು ಮಧ್ಯದಲ್ಲಿ ದಾರವನ್ನು ಎತ್ತಿ ಬಿಡಲಾಗುತ್ತದೆ. ಅಲ್ಲಿ ಸರಳ ರೇಖೆ ಸಿದ್ಧಗೊಳ್ಳುತ್ತದೆ. ಹೀಗೆ ಉದ್ದುದ್ದ ಮತ್ತು ಅಡ್ಡಡ್ಡ ಗೆರೆಗಳನ್ನು ಹಾಕಿಕೊಂಡು ಮೂಲಚಿತ್ರದ ಸಣ್ಣ ಗೆರೆಗಳನ್ನು ತಾಂತ್ರಿಕವಾಗಿ ದೊಡ್ಡ ಸೈಜಿನಲ್ಲಿ ತಾನಾಗಿಯೇ ಚೌಕು ಲೆಕ್ಕಾಚಾರಗಳಲ್ಲಿ ರೇಖಾಚಿತ್ರ ರಚಿಸಲಾಗುತ್ತದೆ. ಅದಾದ ನಂತರ ಮೇಲ್ಭಾಗದ ಆಕಾಶಕ್ಕೆ ಮೊದಲು ಬಣ್ಣವನ್ನು ನಂತರ ಕಟ್ಟಡಕ್ಕೆ ಬಣ್ಣ ತುಂಬಲಾಗುತ್ತದೆ. ಉದಾಹರಣೆಗೆ ವಿಧಾನಸೌಧದ ಚಿತ್ರವಿರುವ ಪರದೆ ಚಿತ್ರವಾದಲ್ಲಿ ಮೇಲಿರುವ ಮೂರು ಮುಖದ ಸಿಂಹವನ್ನು ಮೊದಲು ಬಣ್ಣದಿಂದ ಪೂರ್ಣಗೊಳಿಸಿ ಬಟ್ಟೆಯ ಮೇಲೆಯೇ ಕುಳಿತ ಕಲಾವಿದ ಮೇಲಿನಿಂದ ಚಿತ್ರ ರಚಿಸುತ್ತಾ ರಚಿಸುತ್ತಾ ಕೆಳಕ್ಕೆ ಸರಿಯುತ್ತಾ ಹೋಗುತ್ತಾನೆ. ಹೀಗೆ ನೆಲಕ್ಕೆ ಹಾಸಿಯೇ ಅದ್ಭುತವಾದ ಸೀನರಿಯೊಂದನ್ನು ರಚಿಸಲು ಕಲಾವಿದ ಈ ತಂತ್ರವನ್ನು ಬಳಸುತ್ತಾನೆ.

ಇನ್ನು ಕಾಲ್ಪನಿಕ ಅರಣ್ಯ(ಜಂಗಲ್ ಸೀನ್) ಆದಲ್ಲಿ ಯಾವುದೇ ನಕಲು ಚಿತ್ರವಿಲ್ಲದೇ ನೇರವಾಗಿ ಕಲಾವಿದನು ತನ್ನ ಕಲ್ಪನಾಶಕ್ತಿಯಿಂದ ತಾನು ಕಂಡರಿದ ತನ್ನ ಮಸ್ತಕದಲ್ಲಿ ಹೊಳೆದ ಗಿಡಮರಗಳನ್ನು, ಕಲ್ಲುಬಂಡೆಗಳನ್ನು, ಅಲ್ಲಿರುವ ಕಾಲುದಾರಿಗಳನ್ನು, ಬಳ್ಳಿಗಳನ್ನು, ಅದರ ಮೇಲೆ ಹೂವುಗಳನ್ನು ಅಲ್ಲಲ್ಲಿ ಮೃದು ಮನದ ಪ್ರಾಣಿಗಳನ್ನು ಚಿತ್ರಿಸಿ ಮೇಲಿನ ತಂತ್ರದಂತೆಯೇ ಕಲಾವಿದನು ರಚಿಸುತ್ತಾ ಹೋಗುತ್ತಾನೆ. ಎತ್ತಿ ಹಿಡಿದು ಮತ್ತೆ ಮತ್ತೆ ನೋಡಿ ಯಥಾದರ್ಶನವನ್ನು ಸರಿಪಡಿಸುತ್ತಾ ಕಲ್ಪನೆಗೆ ಮೀರಿದ ಕಲಾಕೃತಿಯೊಂದನ್ನು ನೀಡಿ ಯಶಸ್ವಿಯಾಗುತ್ತಾನೆ. ಅದರ ಮುಂದೆ ನಿಂತ ಮನುಷ್ಯ ಅರಣ್ಯದಲ್ಲಿಯೇ ಇದ್ದಾನೆ, ಸಂಚರಿಸುತ್ತಿದ್ದಾನೆ ಎಂಬ ಭಾವನೆಯನ್ನು ಪ್ರೇಕ್ಷಕರಲ್ಲಿ ಉಂಟು ಮಾಡುವುದೇ ಈ ಬೃಹತ್ ಪರದೆಯ ಮೂಲ ಉದ್ದೇಶ.

ಪೌರಾಣಿಕ ನಾಟಕಗಳಿಗಾಗಿ ರೂಪುಗೊಳ್ಳುವ ಪರದೆಗಳನ್ನು ಅತೀ ಜಾಗರೂಕತೆಯಿಂದ ಕಲಾವಿದನು ರಚಿಸಬೇಕಾಗುತ್ತದೆ. ಯಾವುದೋ ಒಂದು ಕಾಲದ ರಾಜನ ಓಲಗದ ಚಿತ್ರವನ್ನು ರಚಿಸಿ ಅದರ ಮುಂದೆ ಸಿಂಹಾಸನವನ್ನು ಹಾಕಿಕೊಂಡು ಕುಳಿತ ರಾಜ ಪೋಷಾಕುಧಾರಿ ಮನುಷ್ಯನು ಅರಮನೆಯ ಅಷ್ಟೊಂದು ಕಂಬಗಳ ಮಧ್ಯೆ ಎತ್ತರದ ಮಜಲಿನಲ್ಲಿ ಕುಳಿತಂತೆ ಭಾಸವಾಗುವಂತೆ ರಚಿಸುವ ಪರದೆಯ ಚಿತ್ರರಚನೆ ಸಾಮಾನ್ಯವಲ್ಲ. ಅರಮನೆಯಲ್ಲಿರುವ ಪ್ರತಿ ಮೂಲೆ ಮೂಲೆಯ ವಸ್ತುಗಳನ್ನು ಗಮನಿಸಿ ಅಲ್ಲಲ್ಲಿ ಬಟ್ಟೆಯ

ನೆರೆಗೆಗಳನ್ನು ಬಿಟ್ಟು ಕಟ್ಟಿ ಕಂಬಕ್ಕೆ ಬಂಗಾರದ ಪಟ್ಟಿಗಳನ್ನು ಸೃಷ್ಟಿಸಿ ವಿದ್ಯುತ್‌ದೀಪದ ಬೆಳಕಿನಲ್ಲಿ ಅವೆಲ್ಲವು ಮಿಂಚುವಂತೆ ಮಾಡಿ ಇಡೀ ವಾತಾವರಣವನ್ನು ಅರಮನೆಯಲ್ಲಿಯೇ ಕಳೆದಂತೆ ಪ್ರೇಕ್ಷಕರಿಗೆ ನೀಡುವ ಮಾನಸಿಕ ಅನುಭವ ಕಲಾವಿದನ ಚಿತ್ರರಚನಾ ತಂತ್ರದ ಸಮೃದ್ಧತೆಯಾಗುತ್ತದೆ. ಇಲ್ಲಿ ಕಲಾವಿದನು ಪಾತ್ರಧಾರಿ ಪ್ರೇಕ್ಷಕರ ಮಧ್ಯ ಚಿತ್ರದ ಮೂಲಕ ನೀಡುವ ಅನುಭವ ಎಲ್ಲಾ ಸಾಧ್ಯತೆಗಳನ್ನು ಹೊಂದಿರುತ್ತವೆ. ಹಾಗಾಗಿ ಚಿತ್ರ ಪರದೆಯು ನಾಟಕದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

ಪರದೆ ಚಿತ್ರಗಳ ವಸ್ತು ವಿಷಯಗಳು ಹವ್ಯಾಸಿ ಮತ್ತು ವೃತ್ತಿರಂಗ ಭೂಮಿಯಲ್ಲಿ ಪ್ರದರ್ಶನಗೊಳ್ಳುವ ಸಾಮಾಜಿಕ, ಪೌರಾಣಿಕ, ಐತಿಹಾಸಿಕ ನಾಟಕಗಳ ಅಗತ್ಯಕ್ಕೆ ಅನುಗುಣವಾಗುತ್ತವೆ. ಅನುಕ್ರಮವಾಗಿ ರಸ್ತೆ, ಮನೆ, ಎರಡು ಮಜಲಿನ ಮನೆ, ಜೈಲು, ಸ್ಮಶಾನ, ರಣರಂಗ, ದೇವಸ್ಥಾನದ ಸನ್ನಿವೇಶಗಳು ಹೇರಳವಾಗಿ ಚಿತ್ರಿಸಲ್ಪಡುತ್ತವೆ. ಸಾಮಾಜಿಕ ನಾಟಕಗಳ ಅಗತ್ಯ ಪರದೆಗಳೆನಿಸಿದರೆ ಅರಮನೆ, ದರ್ಬಾರು, ಹೂದೋಟ ಅರಣ್ಯ ಮುಂತಾದವುಗಳ ಐತಿಹಾಸಿಕ ನಾಟಕಗಳ ಅಗತ್ಯವಾಗುತ್ತವೆ. ಈ ಐತಿಹಾಸಿಕ ಅಗತ್ಯಗಳೊಂದಿಗೆ ಸ್ವರ್ಗಲೋಕ, ಆಕಾಶ, ಚಂದ್ರಲೋಕ, ದೇವಲೋಕ ಮುಂತಾದವು ಪೌರಾಣಿಕ ನಾಟಕಗಳ ಅಗತ್ಯಗಳಾಗುತ್ತವೆ. ಇನ್ನು ಆಧುನಿಕ ರಂಗಭೂಮಿಯಲ್ಲೂ ಕೆಲವು ನಾಟಕಗಳಲ್ಲಿ ಮನೆ, ಶಾಲೆ ಮುಂತಾದ ಸನ್ನಿವೇಶಗಳನ್ನು ಭಾಗಶ್ಯ ಬಳಸಿಕೊಳ್ಳುವುದು ನೀನಾಸಂ, ಶಿವಸಂಚಾರ, ಜಮುರಾ ತಂಡಗಳಲ್ಲಿ ತೀರಾ ಆಧುನಿಕವಾಗಿ ಶಿಷ್ಟ ಪದದಲ್ಲೂ ರಂಗ ಪರದೆಗಳನ್ನು ಅಲ್ಪಸ್ವಲ್ಪ ಕಾಣಬಹುದು.

### iii. ರಂಗಪರದೆ ಚಿತ್ರಗಳ ವಸ್ತುವಿಷಯ

#### ೧. ದರ್ಬಾರ ಸನ್ನಿವೇಶ

ಕಲಾವಿದ ಖೇಮರಾಜ ಕೆಂಧೂಳಿ ಅವರು ರಚಿಸಿದ ಬೃಹದಾಕಾರದ ಅರಮನೆಯ ಒಳಾಂಗಣ ಇದಾಗಿದೆ. ಪರದೆಯ ಕೊನೆಗೆ ಇಕ್ಕೆಲೆಗಳಲ್ಲಿ ನೀಲಿ ಬಣ್ಣದ ಕಟ್ಟೆಯ ಮೇಲೆ ಕೆಂಪು ಬಣ್ಣದ ಎತ್ತರವಾದ ಕಂಬಗಳು ಛತ್ತಿನವರೆಗೂ ಎತ್ತರವಾಗಿದ್ದು ನೆರಳು, ಬೆಳಕುಗಳ ಪ್ರತಿಫಲನೆಯಿಂದಾಗಿ ದುಂಡನೆಯ ಕಂಬಗಳಿವೆ ಎನ್ನುವ ಕಲ್ಪನೆ ಕೊಡುವಂತಿವೆ. ಮಧ್ಯದಲ್ಲಿ ಕೆಂಪು, ಕೊನೆಯಲ್ಲಿ ಕಡುಗೆಂಪು ಇನ್ನೊಂದು ಕೊನೆಯಲ್ಲಿ ಹೆಚ್ಚು ಬಿಳಿಮಿಶ್ರ ಕೆಂಪು ವರ್ಣವನ್ನು ಲೇಪಿಸಿ ದುಂಡಗಿರುವ ಕಂಬಗಳ ಕಲ್ಪನೆಯನ್ನು ನೀಡಲಾಗಿದೆ. ಇದಾದ ನಂತರದ ಕಂಬವು ಅದಕ್ಕೆ ಹೊಂದಿಕೊಂಡು ಯಥಾದರ್ಶನದ ಪ್ರಕಾರ ಮುಂದಿನ ಕಂಬಕ್ಕಿಂತ ಸ್ವಲ್ಪ ಚಿಕ್ಕದಾಗಿದೆ. ಎಲ್ಲಾ ಕಂಬಗಳು ಬಂಗಾರ ಬಣ್ಣದ ಗದ್ದುಗೆಯನ್ನು, ಮೇಲ್ಛಾವಣೆಯನ್ನು ಹೊಂದಿವೆ. ಕಂಬದ ಒಳಭಾಗದಲ್ಲಿ ನಕ್ಷೆ ಇದ್ದು, ಹಳದಿ ಬಣ್ಣದಿಂದ ಸಣ್ಣ ಸಣ್ಣ ರೇಖೆಗಳನ್ನು ಎಳೆದು ಮಿಂಚುವಂತೆ ಮಾಡಲಾಗಿದೆ. ಮೂರನೇ ಕಂಬವು ಇನ್ನಷ್ಟು ಚಿಕ್ಕದಾಗಿದೆಯಾದರೂ ಮೊದಲ ಕಂಬದಂತಹ ಎಲ್ಲಾ ವಿನ್ಯಾಸವನ್ನು ಹೊಂದಿದೆ. ಆದರೆ ಕಟ್ಟೆ ಮಾತ್ರ ಕಂದು ಬಣ್ಣದ್ದಾಗಿದೆ. ಎದುರು ಭಾಗವನ್ನು ಕಪ್ಪಾಗಿ ಚಿತ್ರಿಸಿ ಬದಿಯ ನೋಟವನ್ನು ಬೆಳಕಿನ ವರ್ಣದೊಂದಿಗೆ ಪೂರ್ಣಗೊಳಿಸಲಾಗಿದೆ. ಹಾಗಾಗಿ ಕಟ್ಟೆ ಚೌಕಾಕಾರವಾಗಿದ್ದು, ಕಂಬ ಅದರ ಮೇಲೆ ಪ್ರತಿಷ್ಠಾಪನೆಗೊಂಡಂತೆ ಕಾಣುತ್ತದೆ. ಕಂಬಗಳ ಮುಂಭಾಗದಲ್ಲಿ ನೀಲಿ ಬಣ್ಣದ ಮತ್ತು ತೆಳು ಹಸಿರು ಬಣ್ಣದ ಬಟ್ಟೆ ಪರದೆಗಳನ್ನು ಚಿತ್ರಿಸಿದ್ದು, ಮೂರನೇ ಕಂಬದ ಮೇಲೆ

ಬೃಹದಾಕಾರದ ಗೋಡೆ ಕಮಾನೊಂದನ್ನು ಚಿತ್ರಿಸಲಾಗಿದೆ. ಮೇಲಿನ ಈ ಎಲ್ಲಾ ಅಂಶಗಳು ಪರದೆಯ ಎಡಬದಿಗೂ ಸಮಾನಾಂತರದಲ್ಲಿದೆ. ಇಲ್ಲಿಗೆ ಮೊದಲ ಹಂತವು ಮುಕ್ತಾಯಗೊಳ್ಳುತ್ತದೆ. ಒಟ್ಟು ಪರದೆಯು ಅರಮನೆಯ ಒಳ ಹೋದರೆ ಸುಮಾರು ೫೦ ಅಡಿಗಳಷ್ಟು ಒಳ ಹೋಗಬಹುದಾದ ಪರಿಕಲ್ಪನೆಗಳನ್ನು ನೀಡುತ್ತದೆ. ನೀಲಿ ಹೊರ ರೇಖೆಯೊಂದಿಗೆ ಹಾಸಿದ ಕೆಂಪು ಬಣ್ಣದ ರತ್ನಗಂಬಳಿ ಮೊದಲ ಕಂಬಗಳಿಂದ ಆರಂಭಗೊಂಡು ೫೦ ಅಡಿಗಳಷ್ಟು ದೂರಕ್ಕೆ ಹೋದಂತೆ, ಚಿಕ್ಕದಾಗುತ್ತದೆ. ಹಾಗಾಗಿ ರಾಜ ಕುಳಿತುಕೊಳ್ಳಬಹುದಾದ ಸ್ಥಳಕ್ಕೂ, ಪ್ರೇಕ್ಷಕನ ಕಣ್ಣಿನ ನೇರಕ್ಕೂ ಸಮನಾಂತರವನ್ನು ಕಾಯ್ದುಕೊಂಡು ಚಿತ್ರ ರಚಿಸಲಾಗಿದೆ. ಈ ಮೂರು ಕಂಬಗಳು ಆಚೆ ಈಚೆಯಿಂದ ಒಳಹೊಕ್ಕು ಕಮಾನಿನವರೆಗೆ ಸುಮಾರು ೨೦ ಅಡಿಗಳಷ್ಟು ಒಳಹೋದ ಪರಿಣಾಮವನ್ನು ನೀಡುತ್ತದೆ.

ಅದಾದ ನಂತರ ನೀಲಿ ಬಣ್ಣದ ಕಮಾನೊಂದು ವರ್ಣರಂಜಿತವಾಗಿ ನಕ್ಷಾ ಚಿತ್ರಗಳಿಂದ ನೆರಳು, ಬೆಳಕುಗಳ ಪ್ರತಿಫಲನದಿಂದ ರಚಿತಗೊಂಡು ಮಧ್ಯದಲ್ಲಿ ಬಂಗಾರ ಬಣ್ಣದ ವರ್ತುಲಾಕಾರದ ತಟ್ಟೆಯಂತೆ ನಕ್ಷಾಚಿತ್ರ ರಚಿಸಲಾಗಿದ್ದು, ಮುಂದಿನ ಅಂಕಣಕ್ಕೆ ಕರೆದೊಯ್ಯುತ್ತದೆ. ಅದಾದ ಮೇಲೆ ಮತ್ತೆ ನೀಲಿ ಬಣ್ಣದ ಕಟ್ಟೆ, ಕಟ್ಟೆಗೊಂದು ಕಂಬ, ಅದೇ ಗದ್ದುಗೆ ಮತ್ತು ಮೇಲ್ಭಾವಣೆಗಳಿವೆ. ಕಂಬ ಮತ್ತು ಕಮಾನಿನ ನಡುವೆ ಹೂಕುಂಡವನ್ನು ಇಟ್ಟು ಅಲಂಕೃತಗೊಳಿಸಲಾಗಿದೆ. ಅದರ ಹಿಂದೆ ಮುಂದಿನ ಆರಂಭದ ಪರದೆಗಿಂತ ತೆಳುವಾದ ತಿಳಿ ಹಸಿರು ಬಣ್ಣದಲ್ಲಿ ಮತ್ತೆ ಬಟ್ಟೆ ಪರದೆಯೊಂದನ್ನು ಜೋತುಬಿಡಲಾಗಿದೆ. ಕಂಬದ ಪ್ರಮಾಣವು ಮೊದಲ ಕಂಬಗಳಿಗಿಂತ ಶೇಕಡ ೨೫ರಷ್ಟು ಚಿಕ್ಕದಾದ್ದರಿಂದ ಒಳಹೊಕ್ಕ ಪರಿಣಾಮ ಬೀರುತ್ತದೆ. ಹೀಗೆಯೇ ಮತ್ತೆ ೧೦ ಅಡಿಗಳಷ್ಟು ಒಳಗೆ ಹೋದಂತೆ ಭ್ರಮಿಸಬಹುದಾದ ಕಂದು ಬಣ್ಣದ ಕಟ್ಟೆ ಅದರ ಮೇಲೆ ಮೊದಲ ಕಂಬದ ಅರ್ಧದಷ್ಟು ಎತ್ತರವಾದ ಕಂಬ ಮುಂದಿನ ಹೂದಾನಿಗಿಂತ ಚಿಕ್ಕದಾದ ಅದೇ ಆಕಾರದ ಹಾದಾನಿ ಮತ್ತೆ ಕೆಂಪು ಬಣ್ಣದ ಬಟ್ಟೆ ಪರದೆ ಇಲ್ಲಿ ಕಟ್ಟೆಯು ಮೊದಲ ಕಂದುಬಣ್ಣದ ಕಟ್ಟೆಗಿಂತ ಅತೀ ತೆಳುವಾದ ಕಂದುಬಣ್ಣದ ಕಟ್ಟೆಯಾದ್ದರಿಂದ ದೂರದ ಕಲ್ಪನೆಯನ್ನು ಕೊಡುತ್ತದೆ.

ನಂತರ ಇದೇ ಆಕಾರದ ಎಲ್ಲಾ ಅಂಶಗಳು ಎಡಭಾಗದಲ್ಲಿವೆ. ಇದಾದ ಮೇಲೆ ಮೊದಲಿನ ನೀಲಿ ಕಮಾನಿನಂತೆ ತೆಳುನೀಲಿ ಬಣ್ಣದ ಮತ್ತೊಂದು ಕಮಾನು ಇಡೀ ಪರದೆಯ ಮಧ್ಯಭಾಗದಲ್ಲಿ ಚಿಕ್ಕದಾಗಿ ನಕ್ಷಾ ಮಾದರಿಯೊಂದಿಗೆ ಹೆಚ್ಚು ಬಿಳಿಯ ಬಣ್ಣದ್ದಾಗಿ ರಚಿತಗೊಂಡಿದೆ. ಇಲ್ಲಿಯೂ ಮಧ್ಯದಲ್ಲಿ ಬಂಗಾರ ಬಣ್ಣದ ದುಂಡನೆಯ ತಟ್ಟೆಯೊಂದನ್ನು ಚಿತ್ರಿಸಲಾಗಿದೆ. ಇದಾದ ಮೇಲೆ ರಾಜ ಕುಳಿತುಕೊಳ್ಳುವ ಸ್ಥಳವನ್ನು ಖಾಲಿ ಇಡಲಾಗಿದೆ. ಅಲ್ಲಿಯೂ ಕೂಡ ಇಕ್ಕೆಲೆಗಳಲ್ಲಿ ಎರಡು ಕಂಬಗಳು, ಎರಡು ಹೂದಾನಿಗಳು, ತೆಳು ಹಸಿರು ಬಣ್ಣದ ಎರಡೂ ಬದಿಗಳಲ್ಲಿ ಬಟ್ಟೆ ಪರದೆ ಎದುರಿಗೆ ಮೇಲ್ಭಾಗದಲ್ಲಿ ಕೆಂಪು ಬಣ್ಣದ ಅರ್ಧ ವರ್ತುಲಾಕಾರದ ಸ್ಥಳದಲ್ಲಿ ನಕ್ಷೆಗಳು ಕೆಳಗೆ ೫ ಮಂಟಪದ ಕಂಬಗಳು, ನೆಲ ಇತ್ಯಾದಿ ಅರಮನೆಯ ಭಾಗಗಳಿಂದ ಇಡೀ ಚಿತ್ರವು ಆರಂಭದಿಂದ ಅಂತ್ಯದವರೆಗೆ ನೋಡುಗನ ಮನಸ್ಸು ಅರಮನೆಯಲ್ಲಿ ಒಳಹೋಗುವ ಭ್ರಮೆಯನ್ನುಂಟು ಮಾಡುತ್ತದೆ. ಚಿತ್ರವು ಅಭಾಸದ ನೈಜತೆಯಿಂದ ಕೂಡಿದ್ದು, ನಿಜವಾದ ಅರಮನೆಯೇ ಎಂಬ ಕಲ್ಪನೆಯನ್ನು ಕೊಡುತ್ತದೆ.

೨. ಸ್ಮಶಾನ ಸನ್ನಿವೇಶ

ಕೆ. ಅಮೀನ ಅವರು ರಚಿಸಿದ ಸ್ಮಶಾನ ಚಿತ್ರದ ಶುಲ್ಕ ವರ್ಣಗಳು ಕಡುವಾಗಿದ್ದು ದೂರದ ಆಕಾಶದ ನೀಲಿ ಬಣ್ಣದಲ್ಲಿ ಬಿಳಿಯ ಮೋಡಗಳು ಅನಾಥವಾಗಿ ತೇಲಾಡುತ್ತಿವೆ. ದೂರದಲ್ಲಿ ಗುಡ್ಡ, ಅಸ್ಪಷ್ಟವಾದ ದೂರದ ತೆಂಗಿನ ಮರ, ಮಿನುಕು ಮಿನುಕು ಮನೆಗಳನ್ನು ತೋರಿಸಿ ಊರಿಂದ ದೂರದಲ್ಲಿ ಸ್ಮಶಾನ ಇದೆ ಎಂಬಂತೆ ಚಿತ್ರಿಸಲಾಗಿದೆ. ಚಿತ್ರದ ಮುಂದುಗಡೆ ಬಲಬದಿಯಲ್ಲಿ ಬಂಡೆಗಲ್ಲುಗಳ ಮಧ್ಯ ಒಣ ಮರವೊಂದು ನಿಂತಿದೆ. ಎಲೆಗಳಿಲ್ಲದ ಒಣಗಿದ ಟೊಂಗೆಗಳನ್ನು ಬಿಳಿಯ ಬಣ್ಣಗಳ ಸಮಾಧಿಗಳಿಗೆ ತಾಗುವಂತೆ ಚಿತ್ರಿಸಲಾಗಿದೆ. ಗದ್ದುಗೆಗಳ ಯಥಾದರ್ಶನಕ್ಕೆ ಬದ್ಧವಾಗಿ ಅದರ ನಂತರ ಇರುವ ಇನ್ನೊಂದು ಗದ್ದುಗೆ ಅದಕ್ಕಿಂತ ಚಿಕ್ಕದಾಗಿದೆ. ಮೊದಲ ಭಾಗದಲ್ಲಿಯೂ ಗೋರಿಗಳ ಮೇಲೆ ಬೆಳೆದ ಸಣ್ಣ ಸಣ್ಣ ಕಂಠಿ, ಕಲ್ಲುಗಳೊಂದಿಗೆ ಹೆಣವನ್ನು ಹೊತ್ತೊಯ್ದ ಸಿದಿಗೆಯನ್ನು ಬಿಡಸಲಾಗಿದೆ. ದೂರದಲ್ಲಿ ತಲೆಬುರುಡೆಗಳು ಮನುಷ್ಯನ ಎಲುಬುಗಳನ್ನು ಚಿತ್ರಿಸಲಾಗಿದೆ. ಇನ್ನು ಎಡಬದಿಯಲ್ಲಿ ನೀಲ ಬಣ್ಣದ ಎಲೆಗಳ ಮಧ್ಯ ಈಚಲ ಗಿಡವೊಂದು ದಟ್ಟ ಹಸಿರು ಬಣ್ಣದ ಪೊರಕೆಗಳನ್ನು ಹೊತ್ತು ನಿಂತಂತೆ ಚಿತ್ರಿಸಲಾಗಿದೆ. ನಂತರ ದೂರದಲ್ಲಿ ಮತ್ತೊಂದು ಒಣ ಮರವನ್ನು ಚಿತ್ರಿಸಲಾಗಿದೆ. ದೂರದಲ್ಲಿ ಮತ್ತೊಂದು ಹೆಣದ ಚಟ್ಟ ಎಸೆಯಲಾಗಿದೆ. ಅದಕ್ಕೂ ಮುನ್ನ ಇನ್ನೊಂದು ಚಿಟಪಾಲಿಕೆಯನ್ನು ಇಡಲಾಗಿದೆ. ಅದಕ್ಕೆ ಕಳಶ ಹೊತ್ತೊಯ್ಯುವ ಬಡಿಗೆ ಇತ್ಯಾದಿಗಳನ್ನು ಚಿತ್ರಿಸಲಾಗಿದೆ. ಪರದೆಯ ಮಧ್ಯಭಾಗದಲ್ಲಿ ಒಡಗಟ್ಟಿಗೆಗಳನ್ನು ಒಟ್ಟಿ ಹೆಣವನ್ನು ಸುಡುತ್ತಿರುವಂತೆ ಉರಿಯನ್ನು ನಿರ್ಮಿಸಲಾಗಿದೆ. ಗದ್ದುಗೆಗಳ ಹಿಂಭಾಗದಲ್ಲಿ ಹಸಿರು ಎಲೆಗಳನ್ನು ಹೊಂದಿದ ಒಂದು ಮರ ಎರಡೂ ಭಾಗಗಳಲ್ಲಿ ಕಪ್ಪನೆಯ ನೆಲ ದೂರದಲ್ಲಿ ಗುಡ್ಡ ಮತ್ತು ಗಿಡಗಳನ್ನು ಚಿತ್ರಿಸಲಾಗಿದೆ. ಅದರ ಮುಂದೆ ನಿಂತ ಪಾತ್ರಧಾರಿಗಳೆಲ್ಲರೂ ನಿಜವಾಗಿಯೂ ಸ್ಮಶಾನದಲ್ಲಿ ನಿಂತಿದ್ದಾರೆ ಎಂಬ ಕಲ್ಪನೆ ಬರುವಂತೆ ಒಟ್ಟು ಚಿತ್ರವನ್ನು ವಿನ್ಯಾಸಗೊಳಿಸಲಾಗಿದೆ.

೩. ಮನೆ ಸನ್ನಿವೇಶ

ಕೆ. ಸಿದ್ದರಾಮ ಅವರು ರಚಿಸಿರುವ ನಗರ ಹಾಗೂ ಹಳ್ಳಿಗಳಲ್ಲಿನ ಪಾಡೆ ಉಳ್ಳವರ ಮನೆ ಎಂಬಂತೆ ಕಲ್ಲುಗಳಿಗೆ ಪ್ರಾಮುಖ್ಯತೆ ಕೊಟ್ಟು ಮನೆಯ ಬಾಗಿಲು, ಕಿಟಕಿಗಳಿಗೆ ಕಟ್ಟಿಗೆಗಳ ಚೌಕಟ್ಟುಗಳನ್ನು ಅವುಗಳ ಮಧ್ಯ ಕಬ್ಬಿಣದ ಸಲಾಕೆಗಳನ್ನು ಮಾಡಲಾಗಿದೆ. ಮನೆಗೆ ಮೂರು ಅಂಕಣಗಳನ್ನು ತೋರಿಸಿ ಪ್ರಮುಖ ಅಂಕಣದ ಮಧ್ಯದಲ್ಲಿ ದೊಡ್ಡ ಬಾಗಿಲೊಂದನ್ನು ಚಿತ್ರಿಸಿ ಅಲ್ಲಿಯೂ ಕಬ್ಬಿಣದ ಸಲಾಕೆಗಳನ್ನು ತೋರಿಸಿ ಬಾಗಿಲನ್ನು ಮುಚ್ಚಿ ಕೀಲಿ ಹಾಕಿದಂತೆ ಚಿತ್ರಿಸಲಾಗಿದೆ. ಇದನ್ನು ನಾಟಕದ ಸಂದರ್ಭಕ್ಕೆ ಅನುಗುಣವಾಗಿ ವಾಸ ತೊರೆದುಕೊಂಡ ಮನೆ ಹಾಗೆ ಕಾರಾಗೃಹ ಎಂಬಂತೆಯೂ ಬಳಸಲು ಬರುವಂತಿದೆ. ಬಾಗಿಲದ ಮೇಲೆ ಅರ್ಧ ವರ್ತುಲಾಕಾರದ ಕಿಡಕಿಯಿದ್ದು, ಮಧ್ಯದಲ್ಲಿ ವರ್ತುಲಾಕಾರದ ಹಿತ್ತಾಳೆ ಬಣ್ಣದ ಗಂಡಭೇರುಂಡ ಚಿತ್ರವನ್ನು ಬರೆಯಲಾಗಿದೆ. ಬಾಗಿಲಿನ ಸುತ್ತಲೂ ಕಂದುಬಣ್ಣದ ಕಲ್ಲುಗಳನ್ನು ಒಂದು ಹೊರಗೆ, ಒಂದು ಒಳಗೆ ಇಟ್ಟು ಕಟ್ಟಿದಂತೆ ವಿನ್ಯಾಸಗೊಳಿಸಲಾಗಿದೆ. ಅದೇ ರೀತಿ ಕಮಾನಿನಂತಿರುವ ಕಿಟಕೆಗೂ ಕಲ್ಲುಗಳ ವಿನ್ಯಾಸವನ್ನು ರಚಿಸಲಾಗಿದೆ. ಅಂಕಣವನ್ನು ವಿಭಾಗಿಸಲು ಕೆಂಪು ಬಣ್ಣದ ಕಂಬ

ಮತ್ತು ಅದಕ್ಕೆ ತಳ ಗದ್ದುಗೆ ಮತ್ತು ಮೇಲ್ಹಾವಣೆಗಳನ್ನು ರಚಿಸಿ ಮೇಲೆ ಹೋದಂತೆಲ್ಲಾ ಕಮಾನುಗಳನ್ನು ಚಿತ್ರಿಸಲಾಗಿದೆ. ಕಂಬ, ಬಾಗಿಲುಗಳ ಮಧ್ಯ ಉಳಿದೆಲ್ಲಾ ಗೋಡೆಗೆ ನೀಲಿ ಬಣ್ಣದ ಚಪ್ಪಟೆಯಾಕಾರದ ಕಲ್ಲುಗಳನ್ನು ತೋರಿಸಲಾಗಿದೆ. ಅಲ್ಲಿ ಕೇವಲ ರೇಖೆಯಿಂದ ಜೋಡಿಸಿದ ಕಲ್ಲಿನ ಸಂದುಗಳೆಂಬಂತೆ ಜಾಗವನ್ನು ಕಪ್ಪಾಗಿ ಚಿತ್ರಿಸಲಾಗಿದೆ. ಇನ್ನು ಗೋಡೆಯ ಕೆಳಭಾಗವು ಸಾಲಾಗಿ ನಾಲ್ಕು ಕಲ್ಲುಗಳ ವಿನ್ಯಾಸವನ್ನು ರಚಿಸಿ ನೇರಳೆ ಬಣ್ಣದಲ್ಲಿ ಪೂರ್ಣಗೊಳಿಸಲಾಗಿದೆ. ಕಲ್ಲುಗಳ ಉಬ್ಬಿದ ಕಲ್ಪನೆಯನ್ನು ನೀಡಲು ಒಂದು ಕಡೆ ಕಪ್ಪು ಇನ್ನೊಂದು ಕಡೆ ಬಿಳಿಯ ಚುಕ್ಕೆಗಳನ್ನು ಬಳಸಿ ಏರುಪೇರಿನ ಕಲ್ಪನೆಯನ್ನು ನೀಡಲಾಗಿದೆ. ಒಟ್ಟು ಚಿತ್ರವು ಸಂಯೋಜನಾ ಬದ್ಧವಾಗಿದ್ದು, ವಿವಿಧ ಬಣ್ಣಗಳಿಂದ ಅಲಂಕೃತವಾಗಿದೆ.

**೪. ಮೈಸೂರು ಅರಮನೆ ಸನ್ನಿವೇಶ**

ಕಲಾವಿದ ತುಕಾರಾಮ ಚಿಲ್ಲಾಳ ಅವರು ರಚಿಸಿದ ದರ್ಬಾರು ಚಿತ್ರವು ಥೇಟ್ ಮೈಸೂರು ಅರಮನೆಯನ್ನು ಹೋಲುತ್ತಿದ್ದು, ನೆಲ ಮತ್ತು ಮೇಲ್ಹಾವಣೆಗಳನ್ನು ಅಲಂಕೃತಗೊಳಿಸದಂತೆ ಚಿತ್ರಿಸಲಾಗಿದೆ. ಹಸಿರು ಬಣ್ಣದ ಪರದೆಗಳನ್ನು ಕೆಂಪು ಬಣ್ಣದ ಕಂಬಗಳನ್ನು ನೆರಳು, ಬೆಳಕುಗಳ ಪ್ರತಿಫಲನೆಯಿಂದಾಗಿ ಮಿಂಚಿ ದುಂಡನೆಯ ಕಂಬ ಎನ್ನುವ ಕಲ್ಪನೆ ಕೊಡುವಂತೆ ಮಧ್ಯದಲ್ಲಿ ಕೆಂಪು, ಕೊನೆಯಲ್ಲಿ ಕಡುಗೆಂಪು ಇನ್ನೊಂದು ಕೊನೆಯಲ್ಲಿ ಹೆಚ್ಚು ಬಿಳಿದಾದ ಕೆಂಪು ವರ್ಣವನ್ನು ಲೇಪಿಸಿ ಮೂರೂ ವರ್ಣಗಳನ್ನು ಉದ್ದುದ್ದಾಗಿ ಮಿಶ್ರಣ ಮಾಡಿ ಕಂಬಕ್ಕೆ ದುಂಡಗಿರುವ ಕಲ್ಪನೆಯನ್ನು ನೀಡಲಾಗಿದೆ. ಇದಾದ ನಂತರ ಪ್ರತಿಯೊಂದು ಕಂಬವು ಒಂದಕ್ಕಿಂತ ಒಂದು ಚಿಕ್ಕದಾಗಿ ಯಥಾದರ್ಶನದ ಎಲ್ಲಾ ಕಂಬಗಳು ಬಂಗಾರ ಬಣ್ಣದ ಗದ್ದುಗೆಯನ್ನು, ಮೇಲ್ಹಾವಣೆಯನ್ನು ಹೊಂದಿವೆ. ಪ್ರತೀ ಕಂಬದಿಂದ ಒಳಭಾಗದಲ್ಲಿ ನಕ್ಷೆ ಇದ್ದು ಕಮಾನುಗಳನ್ನು ಹೊಂದಿದೆ.

ಹಳದಿ ಬಣ್ಣದಿಂದ ಸಣ್ಣ ಸಣ್ಣ ರೇಖೆಗಳನ್ನು ಎಳೆದು ಮಿಂಚುವಂತೆ ಮಾಡಲಾಗಿದೆ. ಎದುರು ಭಾಗವನ್ನು ಕಪ್ಪಾಗಿ ಚಿತ್ರಿಸಿ ಬದಿಯ ನೋಟವನ್ನು ಬೆಳಕಿನ ವರ್ಣದೊಂದಿಗೆ ಪೂರ್ಣಗೊಳಿಸಲಾಗಿದೆ. ಹಾಗಾಗಿ ಕಟ್ಟೆ ಚೌಕಾಕಾರವಾಗಿದ್ದು, ಕಂಬ ಅದರ ಮೇಲೆ ಪ್ರತಿಷ್ಠಾಪನೆಗೊಂಡಂತೆ ಕಾಣುತ್ತದೆ. ಕಂಬಗಳ ಮುಂಭಾಗದಲ್ಲಿ ಕೇಸರಿ ಬಣ್ಣದ ಮತ್ತು ತೆಳು ಕೆಂಪು ಬಣ್ಣದ ಬಟ್ಟೆ ಪರದೆಗಳನ್ನು ಚಿತ್ರಿಸಿದ್ದು, ಒಟ್ಟು ಪರದೆಯ ಆಳವು ಅರಮನೆಯ ಒಳ ಹೋದರೆ ಸುಮಾರು ೫೦ ಅಡಿಗಳಷ್ಟು ಒಳ ಹೋಗಬಹುದಾದ ಪರಿಕಲ್ಪನೆಗಳನ್ನು ನೀಡುತ್ತದೆ. ಕೇಸರಿ ಬಣ್ಣದ ಹಾಸಿದ ರತ್ನಗಂಬಳಿ ಮೊದಲ ಕಂಬಗಳಿಂದ ಆರಂಭಗೊಂಡು ೫೦ ಅಡಿಗಳಷ್ಟು ದೂರಕ್ಕೆ ಹೋದಂತೆ, ಚಿಕ್ಕದಾಗುತ್ತಾ ಹೋಗಿದೆ. ಹಾಗಾಗಿ ರಾಜ ಕುಳಿತುಕೊಳ್ಳಬಹುದಾದ ಸ್ಥಳಕ್ಕೂ, ಪ್ರೇಕ್ಷಕನ ಕಣ್ಣಿನ ನೇರಕ್ಕೂ ಸಮನಾಂತರವನ್ನು ಕಾಯ್ದುಕೊಂಡು ಚಿತ್ರ ರಚಿಸಲಾಗಿದೆ. ಈ ಎಲ್ಲಾ ಕಂಬಗಳು ಆಚೆ ಈಚೆಯಿಂದ ಒಳಹೊಕ್ಕು ಕಮಾನಿನವರೆಗೆ ಸುಮಾರು ೨೦ ಅಡಿಗಳಷ್ಟು ಒಳಹೋದ ಪರಿಣಾಮವನ್ನು ನೀಡುತ್ತದೆ. ಚಿತ್ರದಲ್ಲಿ ಕಾರ್ಯನಿರತ ಕಲಾವಿದರು ಕುಳಿತಿದ್ದು, ಪರದೆಯ ಅಗಲ, ದಪ್ಪ ಮತ್ತು ಒಳಹೊಕ್ಕ ಪರಿಣಾಮಗಳನ್ನು ನಿಚ್ಚಳವಾಗಿ ತೋರ್ಪಡಿಸುತ್ತದೆ. ಅಲ್ಲಲ್ಲಿ ಹಸಿರು ಬಣ್ಣದ ಎಲೆಗಳಲ್ಲಿ ಕುಂಡವಿಲ್ಲದ ಹೂಗಳುಳ್ಳ ಬಳ್ಳಿಗಳು ಕಂಡುಬರುತ್ತವೆ. ಸಿಂಹಾಸನ ಇರುವ ಸ್ಥಳವನ್ನು

ಮೆಟ್ಟಿಲುಗಳಿಂದ ಅಲಂಕರಿಸಿ ಹಸಿರು ಬಣ್ಣದ ಬಟ್ಟೆ ಪರದೆಯನ್ನು ಹಾಕಲಾಗಿದ್ದು, ಬಂಗಾರ ಬಣ್ಣದ ವರ್ತುಲಾಕಾರದ ವಿನ್ಯಾಸವನ್ನು ರಚಿಸಲಾಗಿದೆ.

**೫. ರಸ್ತಾ ಸನ್ನಿವೇಶ**

ಕಲಾವಿದ ಕೆ. ಸಿದ್ದರಾಮ ಅವರು ರಚಿಸಿದ ರಸ್ತಾಸೀನ್ ವಿದಾನಸೌಧದಂತಹ ಕಟ್ಟಡವುಳ್ಳ ರಸ್ತೆಯಲ್ಲಿ ಜನ ಕುಳಿತು ಮಾತನಾಡುತ್ತಿರುವುದರಿಂದ ಒಟ್ಟು ಪರದೆಯ ಉದ್ದಗಲವು ಕಲ್ಪನೆಗೆ ಬರುತ್ತದೆ. ಕುಳಿತ ಮನುಷ್ಯನ ನಾಲ್ಕು ಪಟ್ಟು ಎತ್ತರವಾಗಿರುವ ಪರದೆಯು ಸುಮಾರು ೨೦ ಅಡಿ ಅಗಲವಾಗಿದೆ. ಆರಂಭದಲ್ಲಿ ಆಚೆ ಈಚೆ ಎರಡು ಸುಂದರವಾದ ಕಟ್ಟಡಗಳನ್ನು ಚಿತ್ರಿಸಲಾಗಿದೆ. ದೀಪಸ್ಥಂಭ, ಮಹಾದ್ವಾರ ಅಲ್ಲಲ್ಲಿ ಪುಟ್ಟ ಪುಟ್ಟ ಕೈತೋಟ ವಿನ್ಯಾಸಗೊಳಿಸಲಾಗಿದೆ. ಪ್ರಥಮ ಹಂತದ ಕಟ್ಟಡಕ್ಕಿಂತ ಮುಂದಿನ ಎಲ್ಲಾ ಕಟ್ಟಡಗಳು ಚಿಕ್ಕದಾಗುತ್ತಾ ಹೋಗಿ ಕೊನೆ ಅಂಚನ್ನು ತಲುಪುತ್ತವೆ. ಅದರೆ ಮುಂದೆ ನಿಂತು ಪಾತ್ರ ಮಾಡುವ ಮನುಷ್ಯ ಸಾಕ್ಷಾತ್ ಆ ಕಟ್ಟಡದಲ್ಲಿ ನಿಂತಂತೆಯೇ ಭಾಸವಾಗುತ್ತದೆ. ಹಸಿರು ಮತ್ತು ಕೇಸರಿ ವರ್ಣಗಳನ್ನು ಹೆಚ್ಚಾಗಿ ಬಳಸಿ ಕಟ್ಟಡಗಳ ಚಿತ್ರಗಳನ್ನು ರೂಪಿಸಲಾಗಿದೆ. ಬಲಬದಿಯ ಕಟ್ಟಡವು ಸುಂದರವಾದ ಮೂರು ಮಜಲುಗಳನ್ನು ಹೊಂದಿದ್ದು, ಬಾಗಿಲು, ಕಿಟಕಿಗಳಿಗಾಗಿ ಅಂದವಾದ ನಕ್ಷಾ ವಿನ್ಯಾಸವನ್ನು ರಚಿಸಲಾಗಿದೆ. ಒಟ್ಟು ರಸ್ತೆ ಎನ್ನುವುದಕ್ಕೆ ಇದಕ್ಕಿಂತ ಹೆಚ್ಚಿನ ಉದಾಹರಣೆ ಇಲ್ಲ ಎನ್ನಬಹುದು. ಅಷ್ಟರಮಟ್ಟಿಗೆ ನೈಜವಾಗಿ ರಸ್ತಾಸೀನ್‌ನ್ನು ಸೃಷ್ಟಿಸಲಾಗಿದೆ.

**೬. ರಂಗವೇದಿಕೆಯ ಹೊರವಿನ್ಯಾಸ**

ಕವಾಟುಗಳು ಈ ರಚನೆಯ ಮುಖ್ಯ ಭಾಗಗಳು. ಸುಮಾರು ೩೦ ಅಡಿ ಉದ್ದದ, ೨೦ ಅಡಿ ಎತ್ತರದ ಕವಾಟುಗಳನ್ನು ಎತ್ತರಕ್ಕೆ ಎರಡು ಭಾಗ, ಅಗಲಕ್ಕೆ ಎರಡು ಭಾಗ, ಒಟ್ಟ ಚೌಕಕ್ಕೆ ಆರು ಭಾಗಗಳುಳ್ಳ ಕವಾಟು ಚಿತ್ರಗಳನ್ನು ಕಟ್ಟಿಗೆಯ ಚೌಕಟ್ಟಿಗೆ ಬಿಗಿದು ನಟ್ಟು ಬೋಲ್ಟುಗಳಿಂದ ಬಿಗಿಗೊಳಿಸಿ ಅಂದದ ಹೊರವಿನ್ಯಾಸವನ್ನು ರಚಿಸಲಾಗಿರುತ್ತದೆ. ಚಿತ್ರದ ಪ್ರಮುಖ ಆಕರ್ಷಣೆ ಮೇಲ್ಭಾಗದ ಮಧ್ಯದಲ್ಲಿ ಯಾವುದಾದರೂ ಒಂದು ದೇವರ ಚಿತ್ರ. ಇಲ್ಲಿ ಬಿಳಿಯ ಕಮಲದ ಮೇಲೆ ಕುಳಿತ ಲಕ್ಷ್ಮಿಯ ಚಿತ್ರವನ್ನು ಇರಿಸಲಾಗಿದೆ. ಬಿಳಿಯ ಕಮಲದಲ್ಲಿ ಲಕ್ಷ್ಮಿ ಕುಳಿತಿರುವುದು ಅವಾಸ್ತವಿಕ ಎನಿಸುತ್ತದೆ. ಒಟ್ಟು ನೀಲಿ ಹಚ್ಚಿರುವ ಈ ಚೌಕಟ್ಟುಗಳಲ್ಲಿ ನೀಲಿಯಲ್ಲಿಯೇ ನಕ್ಷಾ ವಿನ್ಯಾಸಗಳು, ಉಬ್ಬು ತಗ್ಗುಗಳಿಂದ ಅಲಂಕೃತವಾಗಿ ವಿನ್ಯಾಸಗೊಂಡಿವೆ. ಲಕ್ಷ್ಮಿಯ ಎತ್ತರವಾದ ಚಿತ್ರಕ್ಕೆ ಆಯಾತಾಕರದ ಫ್ರೇಮ್ ಇದ್ದು, ಅದರ ಎರಡೂ ಬದಿಗಳಲ್ಲಿ ಬಿಳಿಯ ಬಣ್ಣದ ನಕ್ಷಾ ವಿನ್ಯಾಸಗಳು ಮೂಲೆ ವಿನ್ಯಾಸಗಳಾಗಿ ರಾರಾಜಿಸುತ್ತಿವೆ. ನಂತರದಲ್ಲಿ ಒಂದು ವರ್ತುಲದಲ್ಲಿ ಜಟಾಧಾರಿ ಶಿವ, ಕೊರಳಲ್ಲಿ ಹಾವು ಅದಕ್ಕೂ ಕೂಡ ಮೂಲೆ ವಿನ್ಯಾಸದಲ್ಲಿ ಬಿಳಿಯ ಬಣ್ಣದ ನಕ್ಷೆಯನ್ನು ಅಲಂಕೃತಗೊಳಿಸಲಾಗಿದೆ. ಸರಸ್ವತಿಯ ಎಡಬದಿಯಲ್ಲಿ ಅಂತಹದೇ ವರ್ತುಲದಲ್ಲಿ ಗಣಪತಿಯ ಚಿತ್ರವನ್ನು ರಚಿಸಿದ್ದು, ಇಲ್ಲಿ ಶಿವನ ಚಿತ್ರಕ್ಕಿರುವ ಎಲ್ಲಾ ವಿನ್ಯಾಸಗಳು ಮರುಕಳಿಸಿವೆ. ಮೇಲ್ ಕವಾಟಿನ ಮೂಲೆಯಲ್ಲಿ ಬಂಗಾರ ಬಣ್ಣದ ನಕ್ಷಾ ವಿನ್ಯಾಸದ ಪಟ್ಟಿಯನ್ನು ರಚಿಸಿ ನೀಲ ವರ್ತುಲ ಮಧ್ಯದಲ್ಲಿ ಬಿಳಿಯ ಬಣ್ಣದ ಬೆಳಕನ್ನಿಟ್ಟು ಎರಡೂ ಬದಿಗಳಲ್ಲಿ ವಿನ್ಯಾಸಗೊಳಿಸಲಾಗಿದೆ.

ಅದರ ಕೆಳಗೆ ಮತ್ತೊಂದು ಬಂಗಾರ ವರ್ಣದ ನಕ್ಷಾ ವಿನ್ಯಾಸವಿದೆ. ಕೆಳಗೆ ಬದಿಯ ಕವಾಟದ ಮೂಲವಿನ್ಯಾಸವಾಗಿ ನರ್ತಕಿಯೊಬ್ಬಳು ಕೆಂಪು ಸೀರೆಯನ್ನುಟ್ಟು ನೃತ್ಯ ಭಂಗಿಯಲ್ಲಿ ಎಡಗೈಯನ್ನು ಮೇಲೆ ಮಾಡಿ, ಬಲಗೈಯನ್ನು ಕೆಳಗೆ ಬಿಟ್ಟು, ಬಲಗಾಲನ್ನು ಮುಂದಿಟ್ಟು, ಎಡಗಾಲನ್ನು ಹಿಂದಿಟ್ಟು ಕೆಳಮುಖವಾಗಿ ನರ್ತಿಸುವಂತೆ ಚಿತ್ರಿಸಲಾಗಿದೆ. ಕೆಳಗೆ ಇನ್ನೊಂದು ಬದಿಯಲ್ಲಿ ಕವಾಟದ ಮೂಲವಿನ್ಯಾಸವಾಗಿ ಅಂತಹದೇ ನರ್ತಕಿಯೊಬ್ಬಳು ಕೆಂಪು ಸೀರೆಯನ್ನುಟ್ಟು ನೃತ್ಯ ಭಂಗಿಯಲ್ಲಿ ಬಲಗೈಯನ್ನು ಮೇಲ್ ಮಾಡಿ, ಎಡಗೈಯನ್ನು ಕೆಳಗೆ ಬಿಟ್ಟು, ಎಡಗಾಲನ್ನು ಮುಂದಿಟ್ಟು, ಬಲಗಾಲನ್ನು ಹಿಂದಿಟ್ಟು ಕೆಳಮುಖವಾಗಿ ನರ್ತಿಸುವಂತೆ ಚಿತ್ರಿಸಲಾಗಿದೆ.

ಈ ಚೌಕು ಕವಾಟದ ಅಂಚಿನಲ್ಲಿ ವೇದಿಕೆ ಕಡೆಗೆ ಮುಖ ಮಾಡಿದ ಕುದುರೆಯನ್ನೇರಿ ಬಲಗೈ ಖಡ್ಗವನ್ನು ಮೇಲೆ ಮಾಡಿ ನಿಂತ ಅಶ್ವಾರೂಢ ಕಿತ್ತೂರು ಚೆನ್ನಮ್ಮನ ಚಿತ್ರವನ್ನು ರಚಿಸಲಾಗಿದೆ. ಚೆನ್ನಮ್ಮನ ಕುದುರೆ ಬಲಗಾಲುಗಳನ್ನು ಮೇಲೆತ್ತಿಕೊಂಡು ನಿಂತಿದೆ. ಹಿನ್ನೆಲೆ ವಿನ್ಯಾಸದಲ್ಲಿ ಕಿತ್ತೂರಿನ ಕೋಟೆ, ಗಿಡಮರಗಳು ಮುನ್ನೆಲೆ ವಿನ್ಯಾಸದಲ್ಲಿ ನೆಲ ಮತ್ತು ಕಲ್ಲುಗಳು ಇದ್ದು, ಕೋಟೆ ದೂರದಲ್ಲಿರುವ ಪರಿಕಲ್ಪನೆಯನ್ನು ನೀಡುತ್ತದೆ. ವೇದಿಕೆಯ ಇನ್ನೊಂದು ಬದಿಯಲ್ಲಿ ವೇದಿಕೆ ಕಡೆಗೆ ಮುಖ ಮಾಡಿದ ಅಶ್ವಾರೂಢ ಶಿವಾಜಿಯ ಭಾವಚಿತ್ರವನ್ನು ಚಿತ್ರಿಸಲಾಗಿದೆ. ಕಪ್ಪು ಬಣ್ಣದ ಕುದುರೆಯನ್ನೇರಿದ ಶಿವಾಜಿ ಕೈಯಲ್ಲಿ ಖಡ್ಗವನ್ನು ಹಿಡಿದು ಮೇಲ್ಮುಖವಾಗಿ ನೋಡುತ್ತಿದ್ದಾನೆ. ಹಿನ್ನೆಲೆ ವಿನ್ಯಾಸವಾಗಿ ಶಿವನೇರಿಯ ಬೆಟ್ಟ, ನೆಲ ಹಾಗೂ ಗಿಡಮರಗಳನ್ನು ಯಥಾದರ್ಶನಕ್ಕನುಗುಣವಾಗಿ ಸಂಯೋಜನಾಬದ್ಧವಾಗಿ ರಚಿಸಲಾಗಿದೆ. ಮಧ್ಯದಲ್ಲಿ ನೀಲಿ ಬಣ್ಣದ ದೊಡ್ಡ ಪರದೆಯನ್ನು ಹಾಕಲಾಗಿದೆ. ಎರಡೂ ಬದಿಗೆ ಸ್ವಸ್ತಿಕ್‌ನ ಚಿತ್ರವನ್ನು ಬರೆಯಲಾಗಿದೆ. ಮಧ್ಯದಲ್ಲಿ ಶ್ರೀ ಲಕ್ಷ್ಮಿ ಡ್ರಾಮಾ ಸೀನರೀಸ್ ಎಂದು ಬರೆಯಲಾಗಿದೆ. ಕೆಳಗೆ ಹಳದಿ ಬಣ್ಣದ ಮೂರು ಪಟ್ಟಿಗಳು ಕಾಣುತ್ತದೆ. ಇದು ವೇದಿಕೆಯ ಮುಂಭಾಗದ ಎಲ್ಲಾ ಸಾಮಾನ್ಯ ಲಕ್ಷಣಗಳನ್ನು ಹೊಂದಿದೆ.

**೭. ಕವಾಟ**

ಕವಾಟುಗಳು ಬದಿಯಲ್ಲಿ ಅಡ್ಡಾಡುವ, ನಿಂತಿರುವ ಕಲಾವಿದರು ಕಾಣಲಾರದೆಂಬ ಉದ್ದೇಶದಿಂದ ಮಾಡಿದವುಗಳು. ಅವು ರಂಗದ ಬೇರೆ ಬೇರೆ ಹಂತಗಳನ್ನು ಸೂಚಿಸುತ್ತವೆ. ಕಲಾವಿದ ಎ.ಎಚ್. ಪಾನಿಭಾತೆ ಅವರು ರಚಿಸಿದ ವಿಶಿಷ್ಟವಾದ ಕವಾಟಿನ ಚಿತ್ರ ಇದಾಗಿದ್ದು ವೇದಿಕೆಯ ಎಡಭಾಗದಲ್ಲಿ ಇರಿಸಬಹುದಾದ ಈ ಕವಾಟಿನಲ್ಲಿ ರಾಜವೈಭವದ ಸುಂದರಿಯೊಬ್ಬಳನ್ನು ತರುಣನೊಬ್ಬನು ಅವಳ ಎಡಗೈಯನ್ನು ಹಿಡಿದು ಎಳೆದಂತೆ ಚಿತ್ರಿಸಲಾಗಿದೆ. ರಾಣಿ ಆಭರಣಗಳು, ಉದ್ದವಾಗಿ ಬಿಟ್ಟ ಹಿಂಬಟ್ಟೆ ನೆಲಕ್ಕೆ ಬಿದ್ದಿದ್ದು, ನಡುಪಟ್ಟಿ, ಅಲ್ಲಿ ಒಂದು ಕೆಂಪನೆಯ ಬಟ್ಟೆಯ ಚುಂಗು ನಿರಿಗೆಗಳು ಇಳಿಬಿದ್ದಿದ್ದು, ಒಟ್ಟು ವಸ್ತ್ರವಿನ್ಯಾಸವೇ ಆಕರ್ಷಣೀಯವಾಗಿದೆ. ಮುಖದಲ್ಲಿ ಹತಾಶೆ ಭಾವನೆ ಅವಳಿಗಿದ್ದು, ತೊಳಲಾಟದಲ್ಲಿರುವಂತೆ ಭಾವನೆಗಳನ್ನು ಚಿತ್ರಿಸಲಾಗಿದೆ. ಕತ್ತಲೆಯಲ್ಲಿ ಕುಳಿತ ಮನುಷ್ಯ ಕಟ್ಟುಮಸ್ತಾಗಿದ್ದು ರಟ್ಟೆಯಲ್ಲಿ ತೋಳುಬಂದಿ, ಕೈಕಡಗ, ಬಾಚಿದ ಉದ್ದನೆಯ ಕೂದಲು, ಕಿವಿಯಲ್ಲಿ ಓಲೆ, ಕಿರೀಟವಿಲ್ಲ ಎಂಬುದು ತೋರುತ್ತದೆ. ಹಿನ್ನೆಲೆ ವಿನ್ಯಾಸವು

ವೈಭವಪೂರ್ಣವಾಗಿದ್ದು ಕಂಬಗಳು, ನಕ್ಷಾ ವಿನ್ಯಾಸಗಳು, ಮೆಟ್ಟಿಲುಗಳು, ಇಳಿಬಿಟ್ಟ ಬಟ್ಟೆಯ ಮಾದರಿಗಳು ಆಕರ್ಷಕವಾಗಿವೆ. ಒಟ್ಟು ಚಿತ್ರವು ಸಂಯೋಜನಾಬದ್ಧವಾಗಿದ್ದು, ರಾಜಮನೆತನದ ವರ್ಣರಂಜಿತ ಅನುಭವವನ್ನು ನೀಡುತ್ತದೆ. ಇಂಥ ಕವಾಟುಗಳು ಬಹುಶಃ ಸ್ಥಿರವಾಗಿ ಜೋಡಿಸಿದವುಗಳು. ಇವುಗಳು ರಂಗಸಜ್ಜಿಕೆಯ ಒಟ್ಟು ಸುಂದರತೆ ಹೆಚ್ಚಿಸಲು ಬಳಸುವಂಥವು. ರಂಗ ಪರದೆಗಳ ಬಳಕೆಗಿಂತ ಭಿನ್ನವಾದ ಪ್ರಯೋಜನ ಇವುಗಳಿಗಿರುತ್ತದೆ.





ಪರದೆಚಿತ್ರ ರಚನೆಯಲ್ಲಿ ಕಲಾವಿದ



ರಂಗ ಪರದೆ ಚಿತ್ರಗಳು

೧) ದರ್ಬಾರ ಸನ್ನಿವೇಶ



೪) ಮೈಸೂರು ಅರಮನೆ ಸನ್ನಿವೇಶ



೬) ರಂಗ ವೇದಿಕೆಯ ಹೊರವಿನ್ಯಾಸ

ಆ. ಇತರೆ: i. ಜನಪದ

ಇಲ್ಲಿ ಯಾವುದೇ ಶಿಷ್ಟ ಶಿಕ್ಷಣವನ್ನು ಪಡೆಯದೇ ಜನಪದ ಕಲಾವಿದರು ಬಟ್ಟೆ ಮಾಧ್ಯಮದಲ್ಲಿ ಹಲವಾರು ಉನ್ನತಮಟ್ಟದ ಕಲಾಕೃತಿಗಳನ್ನು ರಚಿಸಿರುವುದು ವಿಶಿಷ್ಟ. ಇಂತಹ ಜನಪದ ಕಲಾವಿದರನ್ನು ಜಿಲ್ಲೆಯು ಅಪಾರ ಸಂಖ್ಯೆಯಲ್ಲಿ ಹೊಂದಿದೆ. ಇಲ್ಲಿ ಹೆಚ್ಚಾಗಿ ದೇವರು ಮತ್ತು ದಾರ್ಶನಿಕರಿಗೆ ಸಂಬಂಧಿಸಿದ ಚಿತ್ರಗಳನ್ನು ಜನಪದ ಕಲಾವಿದರು ರಚಿಸಿರುವುದು ವಿಶಿಷ್ಟ. ಆದ್ದರಿಂದ ಜನಪದ ಕಲಾವಿದರಿಂದ ರಚಿತಗೊಂಡ ರಂಗಪರದೆಗಳನ್ನು ಹೊರತುಪಡಿಸಿದ ಕಲಾಕೃತಿಗಳ ವಸ್ತುವಿಷಯ, ವಿಶ್ಲೇಷಣೆಯನ್ನು ಕೆಳಗಿನಂತೆ ವಿವರಿಸಲಾಗಿದೆ.

೧. ಇಲಕಲ್ಲ ಮಠದ ಪವಾಡ

ಕಲಾವಿದ ತುಕಾರಮ ಬೋರೆ ಅವರು ರಚಿಸಿದ ಇಲಕಲ್ಲಿನ ಶ್ರೀ ವಿಜಯಮಹಾಂತ ಶಿವಯೋಗಿಗಳ ಲೀಲೆಗಳ ಸರಣಿ ಚಿತ್ರಗಳು ಸುಮಾರು ೧೦ ಇದ್ದು ಇಲ್ಲಿ ವಿಜಯಮಹಾಂತ ಶಿವಯೋಗಿಗಳು ಕಲ್ಬೆಟ್ಟಕ್ಕೆ ತೆರಳುವ ಮುನ್ನ  ಗುರುಹಿರಿಯರು, ಮಹಿಳೆಯರು ಅವರೊಂದಿಗೆ ಸಂವಾದ ನಡೆಸುತ್ತಿರುವ ಚಿತ್ರವನ್ನು ಚಿತ್ರಿಸಲಾಗಿದೆ. ಶಿವಯೋಗಿಗಳು, ಗಡ್ಡ ಮತ್ತು ಜಟಾಧಾರಿಗಳಾಗಿದ್ದು, ಮೊಣಕಾಲಿನ ಮೇಲೆ ಕಾವಿಯನ್ನು ಧರಿಸಿದ್ದಾರೆ. ಬಗಲಿಗೆ ಜೋಳಿಗೆ, ಎಡಗೈ ಮೇಲೆ ಎತ್ತಿ ಏನನ್ನೋ ಹೇಳುತ್ತಿರುವಂತೆ ಚಿತ್ರಿಸಲಾಗಿದೆ. ಹಿರಿಯನೊಬ್ಬ ಬೇಡವೆನ್ನುವಂತೆ ಕೈ ಮಾಡಿದ್ದಾರೆ. ಊರ ಪ್ರಮುಖ ವ್ಯಕ್ತಿಯೆಂಬಂತೆ ಕೋಟನ್ನು ಕೆಂಪು ಬಣ್ಣದ ಪಟಕ, ಬಿಳಿಯ ಧೋತ್ರವನ್ನು ಉಟ್ಟುಕೊಂಡಿದ್ದಾನೆ. ಬಳಿಯಲ್ಲಿ ನಿಂತ ಇಬ್ಬರು ಮಹಿಳೆಯರು ಇಲಕಲ್ಲಿನ ಸಾಂಪ್ರದಾಯಿಕ ಸೀರೆಯನ್ನುಟ್ಟು ಬೇಡಿಕೊಳ್ಳುವಂತೆ ಚಿತ್ರಿಸಲಾಗಿದೆ. ಸೀರೆಯ ಅಂಚು, ಸೆರಗುಗಳನ್ನು ತುಂಬ ನೈಜವಾಗಿ ಚಿತ್ರಿಸಲಾಗಿದೆ. ಇನ್ನೊಬ್ಬ ಸ್ತ್ರೀ ಬೂದು ಬಣ್ಣದ ಸೀರೆಯನ್ನುಟ್ಟಿದ್ದು, ಕೆಂಪು ಅಂಚನ್ನು ಹಾಕಲಾಗಿದೆ. ಹಿನ್ನೆಲೆ ವಿನ್ಯಾಸದಲ್ಲಿ ದೋಮಜಲಿನ ಮನೆ ಅದಾದ ನಂತರ  ಚಿಕ್ಕ ಚಿಕ್ಕ ಮನೆಗಳನ್ನು ರಚಿಸಿ, ಇಲಕಲ್ಲಿನ ದೊಡ್ಡ ಓಣಿಯೊಂದರ ದೃಶ್ಯವೆಂಬಂತೆ ಚಿತ್ರಿಸಲಾಗಿದೆ. ಸವಾರಿ ಕಟ್ಟಿದ ಟಾಂಗಾವನ್ನು ನಿಲ್ಲಿಸಿ, ಕುದುರೆಯನ್ನು ಬದಿಯಲ್ಲಿ ನಿಲ್ಲಿಸಲಾಗಿದೆ. ಒಟ್ಟು ಚಿತ್ರವು ವಾಸ್ತವ ಘಟನೆಯೊಂದರ ಎನಾಮಲ್ ವರ್ಣರಂಜಿತ ಸಂಯೋಜನೆಯಾಗಿದೆ.

೨. ಸೀತೆಯನ್ನು ಕದ್ದೊಯ್ಯುವ ರಾವಣ

ಕಲಾವಿದ ರಾಮಮೂರ್ತಿ ಗಜೇಂದ್ರಗಡ ಅವರ ಈ ಚಿತ್ರದಲ್ಲಿ ಅರಣ್ಯದ ಹಿನ್ನೆಲೆಯಲ್ಲಿ ಕಪಟ ಸನ್ಯಾಸಿ ವೇಷದಲ್ಲಿ ಬಂದು ಸೀತೆಯನ್ನು ಕದ್ದೊಯ್ಯುವ ರಾವಣನನ್ನು ಚಿತ್ರಿಸಲಾಗಿದೆ. ಭಿಕ್ಷೆ ನೀಡಿಸಿಕೊಳ್ಳುತ್ತಿರುವ ರಾವಣನು ಮುಖದಲ್ಲಿ ಕುಹಕ ನಗೆಯನ್ನು ಬೀರಿದ್ದಾನೆ. ಬಗಲಲ್ಲಿ ಬೆತ್ತ, ಜೋಳಿಗೆ, ಕಾಲಲ್ಲಿ ಆವಿಗೆಯನ್ನು ಧರಿಸಿದ ರಾವಣ ಸೀತೆಯನ್ನು ಲಕ್ಷ್ಮಣ ರೇಖೆಯಿಂದ ಈಚೆಗೆ ಬಂದು ನೀಡು ಎಂಬಂತೆ ಸೂಚಿಸಿ ನಿಂತಿದ್ದಾನೆ. ಸೀತೆಯು ಹಳದಿ ವರ್ಣದ ನಾರುಡುಗೆಯನ್ನುಟ್ಟು ಹೂವು ಮುಡಿದು, ಕೊರಳಲ್ಲಿ ಹೂವಿನ ಮಾಲೆ, ತೆಳು ಹಸಿರು ಬಣ್ಣದ ರವಿಕೆ ತೊಟ್ಟು ಆದರದಿಂದ ಭಿಕ್ಷೆ ನೀಡಲು

ಬರುತ್ತಿರುವಂತೆ ಚಿತ್ರಿಸಲಾಗಿದೆ. ಒಟ್ಟು ಚಿತ್ರವು ಕಾಡಿನ ವನವಾಸದ ಸುಂದರವಾದ ಹಿನ್ನೆಲೆ ವಿನ್ಯಾಸದಲ್ಲಿ ಮಹಾಕಾವ್ಯದ ಒಂದು ಚಿಕ್ಕ ಕಥೆಯನ್ನು ಸಾರುವ ಕಲಾಕೃತಿಯಾಗಿದೆ.

**೩. ಸೀತೆ**

ಕಲಾವಿದ ತುಕಾರಾಮ ಚಿಲ್ಲಾಳ ಅವರ ತೈಲವರ್ಣ ಚಿತ್ರ ೧೯೯೦ರಲ್ಲಿ ರಚಿಸಿದ್ದಾಗಿದೆ. ಹಿನ್ನೆಲೆಯಲ್ಲಿ ನಟರಾಜನ ದೊಡ್ಡ ವಿಗ್ರಹವೊಂದಿದ್ದು, ಪ್ರಿಯಕರನ ಆಗಮನ ನಿರೀಕ್ಷೆಯಲ್ಲಿರುವ ಸೀತೆ ಚಿತ್ರದ ಪ್ರಧಾನ ವಸ್ತುವಿನ ಆಕೃತಿಯಾಗಿದ್ದಾಳೆ. ಎಡಗೈಯನ್ನು ತೊಡೆಯ ಮೇಲಿಟ್ಟುಕೊಂಡು, ಕಾಲು ಮಡಚಿ, ಬಲಗೈಯನ್ನು ನೆಲಕ್ಕೆ ಊರಿ, ಚಿಕ್ಕ ಕಿರೀಟವೊಂದನ್ನು ಧರಿಸಿ, ಕೆಳಮುಖ ಮಾಡಿ ಚಿಂತೆಯಲ್ಲಿರುವಂತೆ ಚಿತ್ರಿಸಲಾಗಿದೆ. ಸ್ವಲ್ಪ ಹಿಂದೆ ದೊಡ್ಡ ದೀಪದ ಬೆಳಕು, ಅರಮನೆಯಂತಹ ಸನ್ನಿವೇಶದ ಹಿನ್ನೆಲೆಯಿದೆ. ಅವಳು ಕಂಬವೊಂದಕ್ಕೆ ಆತುಕೊಂಡು ಕುಳಿತಿದ್ದು, ಕಂಬಕ್ಕೆ ಸೂಕ್ಷ್ಮವಾದ ನಕ್ಷಾ ವಿನ್ಯಾಸಗಳನ್ನು ರಚಿಸಲಾಗಿದ್ದು, ಐಹೊಳೆ, ಬಾದಾಮಿ, ದೇಗುಲದ ಕಂಬಗಳನ್ನು ನೆನಪಿಗೆ ತರುತ್ತದೆ. ಕಟ್ಟೆಯ ಮೇಲೆ ಕುಳಿತ ಯುವತಿ ತನ್ನ ಮುಂದಿರುವ ಸರೋವರದ ಮುಂಭಾಗದಲ್ಲಿ ಸಣ್ಣ ಸಣ್ಣ ಕಮಲದ ಹೂಗಳು, ವಿಸ್ತಾರವಾದ ಎಲೆಗಳು, ನೀಲ ಬಣ್ಣದ ನೀರಿನಲ್ಲಿ ಸೊಗಸಾಗಿ ಚಿತ್ರಿತವಾಗಿದೆ. ಒಟ್ಟು ಚಿತ್ರವು ಸ್ತ್ರೀಯ ಪಾರದರ್ಶಕ ಬಟ್ಟೆಗಳಿಂದ ಕಂಗೊಳಿಸುವ ರಾಜ ನರ್ತಕಿಯ ವಿಭಿನ್ನ ಮಾದರಿಯ ಚಿತ್ರ ಇದಾಗಿದೆ.

**೪. ರಾಧಾಕೃಷ್ಣ**

ಕಲಾವಿದ ಶ್ರೀ ಸೋಮಣ್ಣ ಸನ್ನೂರ ಅವರು ರಚಿಸಿದ ರಾಧಾಕೃಷ್ಣ ಚಿತ್ರವು ಕೃಷ್ಣನು ಬೇರೆ ಕಡೆ ದೃಷ್ಟಿಯನ್ನಿಟ್ಟು ರಾಧೆ ಕರೆಯುವುದನ್ನು ಅಲಕ್ಷಿಸುವಂತೆ ತೋರುತ್ತದೆ. ಸುಂದರವಾದ ಕಿರೀಟ ಧರಿಸಿದ ಕೃಷ್ಣ ಹಿಂದೆ ಕೇಸರಿ ಬಣ್ಣದ ಪ್ರಭಾವಳಿ, ನವಿಲು ಗರಿಗಳಿವೆ. ದಯನೀಯವಾಗಿ ಬೇಡಿಕೊಳ್ಳುತ್ತಿರುವ ರಾಧೆ ಕೃಷ್ಣನ ಎಡ ಮೊಣಕೈಯನ್ನು ತನ್ನ ಎಡಗೈಯಿಂದ ಹಿಡಿದು ಮಂಡೆಗಾಲೂರಿ ಕುಳಿತಿದ್ದಾಳೆ. ಅವಳ ತಲೆಯಲ್ಲಿ ಬಂಗಾರದ ಆಭರಣ, ತಲೆಯ ಹಿಂದೆ ಬಿಟ್ಟ ಪಾರದರ್ಶಕ ಬಿಳಿಯ ಬಣ್ಣದ ಬಟ್ಟೆ ಎದೆಯ ಮೇಲಿಂದ ಹೋಗಿ ಮೈಗೆಲ್ಲಾ ಸುತ್ತಿಕೊಂಡ ಕೇಸರಿ ಬಣ್ಣದ ಬಟ್ಟೆ ಅದರ ಮೇಲೊಂದು ನೀಲಿ ವರ್ಣದ ಬಟ್ಟೆಗಳಿಂದಾಗಿ ಒಟ್ಟು ರಾಧೆಯ ಚಿತ್ರವು ವರ್ಣಮಯವಾಗಿದೆ. ಇಲ್ಲಿ ಕೃಷ್ಣ ತೆಳುನೀಲಿ ಬಣ್ಣದ ಮೈಬಣ್ಣವನ್ನು ಹೊಂದಿದ್ದು, ಕೆಂಪು ಶೆಲ್ಯಯೊಂದನ್ನು ಹೆಗಲ ಮೇಲೆ ಹೊದ್ದುಕೊಂಡಿದ್ದಾನೆ. ಹಿನ್ನೆಲೆ ವಿನ್ಯಾಸದಲ್ಲಂತೂ ಸುಂದರವಾದ, ಕಪ್ಪು ಮಿಶ್ರಿತ, ಕೆಂಪು ಬಣ್ಣದ ಮರದ ದೊಡ್ಡ ಬೊಡ್ಡೆಯು ಅದಕ್ಕೆ ಅಲಂಕೃತ ಕೆಂಪು, ಹಸಿರು, ನೀಲಿ ಬಣ್ಣದ ಎಲೆ, ಹೂಗಳು ಹಿಂದೆ ಜುಳು ಜುಳು ಹರಿಯುವ ನೀರು ಈ ಪ್ರಣಯ ಸಂದರ್ಭದ ಚಿತ್ರಕ್ಕೆ ಹೇಳಿ ಮಾಡಿಸಿದಂತಿದೆ. ಚಿತ್ರದಲ್ಲಿ ಕೃಷ್ಣನಿಗೆ ಹಳದಿ ಬಣ್ಣದ ಧೋತ್ರವನ್ನು ಉಡಿಸಲಾಗಿದೆ. ಎಡಗೈಯಲ್ಲಿ ಕೊಳಲನ್ನು ಹಿಡಿದುಕೊಂಡಿದ್ದಾನೆ. ಬಲಗೈಯನ್ನು ನೆಲಕ್ಕೆ ಊರಿದ್ದಾನೆ. ಕೊರಳಲ್ಲಿ ಆಭರಣಗಳಿವೆ. ಒಟ್ಟು ಚಿತ್ರವು ಸುಂದರವಾದ ಸಂಯೋಜನೆಯಾಗಿದ್ದು, ಶ್ರೀ ಸೋಮಣ್ಣ ಸನ್ನೂರು ಅವರ ಕಲಾಪ್ರತಿಭೆಗೆ ಸಾಕ್ಷಿಯಾಗಿದೆ.

## ೫. ಲಿಂಗಪೂಜಾನಿರತ ಬಸವಣ್ಣ

ಇಷ್ಟಲಿಂಗಪೂಜಾನಿರತ ಬಸವಣ್ಣನವರ ಚಿತ್ರವನ್ನು ಬಾಗಲಕೋಟೆಯ ಹಿರಿಯ ಕಲಾವಿದ ವಿ.ಸಿ. ನಾವಲಗಿ ಅವರು ಬಾಗಲಕೋಟೆಯ ಚರಂತಿ ಮಠಕ್ಕೆ ರಚಿಸಿಕೊಟ್ಟಿದ್ದಾರೆ. ಮಂದ ಬೆಳಕಿನ ಹಿನ್ನೆಲೆ ವಿನ್ಯಾಸವನ್ನು ಹೊಂದಿದ ಪೂಜಾ ಕೊಠಡಿಯಲ್ಲಿ ಮಿನುಕು ಮಿನುಕು ಬೆಳಕು ಸಮೇ ಇದೆ. ಬಸವಣ್ಣನವರು ಪೂಜಾಮನೆಯ ಕಟ್ಟಿಗೆಯ ಕಮಾನುಳ್ಳ ಫಲಕಕ್ಕೆ ಆಧಾರವಾಗಿ, ಸ್ಥಿರವಾಗಿ ಕುಳಿತಿದ್ದು ಎಡಗೈಯಲ್ಲಿ ಇಷ್ಟಲಿಂಗವನ್ನು ಕಣ್ಣಿನೆತ್ತರಕ್ಕೆ ಹಿಡಿದು ಬಲಗೈಯಿಂದ ಪತ್ರಿ, ಪುಷ್ಪಾರ್ಚನೆಯನ್ನು ಮಾಡುತ್ತಿರುವಂತೆ ಚಿತ್ರಿಸಲಾಗಿದೆ. ಗುಲಾಬಿ ಬಣ್ಣದ ಹೆಗಲ ಮೇಲಿನ ಶೆಲ್ಯ, ನೆರಳು ಬೆಳಕುಗಳಿಂದ ವರ್ಣರಂಜಿತವಾಗಿದೆ. ಬಿಳಿಯ ಧೋತ್ರವನ್ನು ಉಟ್ಟುಕೊಂಡ ಬಸವಣ್ಣನವರಿಗೆ ಪೂಜಾ ಸಾಮಗ್ರಿಗಳ ವಿನ್ಯಾಸ ಅದ್ಭುತವಾಗಿದೆ. ತಟ್ಟೆ, ಬೆಳ್ಳಿ ತಂಬಿಗೆ, ಗಂಟೆ ಧೂಪಾರತಿ, ವಿಭೂತಿ, ಫಲಪುಷ್ಪಗಳಿವೆ. ಅವರ ಆವಿಗೆಗಳನ್ನೂ ಅಲ್ಲಿಯೇ ಇರಿಸಲಾಗಿದೆ. ಬಸವಣ್ಣನವರ ಮೈತುಂಬಾ ಮೂರು ಬೆರಳುಗಳ ವಿಭೂತಿಯನ್ನು ಹಚ್ಚಿ ಅಲಂಕೃತಗೊಳಿಸಲಾಗಿದೆ. ಕೊರಳು, ಕೈ ಮತ್ತು ರಟ್ಟೆಗಳಲ್ಲಿ ರುದ್ರಾಕ್ಷಿ ಸರವನ್ನು ಹಾಕಲಾಗಿದೆ. ಮುಖಭಾವವು ಅರೆಗಣ್ಣನ್ನು ತೆರೆದ ಭಕ್ತಿಭಾವವನ್ನು ಸೂಚಿಸುತ್ತದೆ. ಅಷ್ಟು ಪ್ರಮಾಣಬದ್ಧವಲ್ಲದ ಚಿತ್ರವಾದರೂ ಎಲ್ಲಾ ಮೂಲಗಳಿಂದ ನೆರಳು ಬೆಳಕು, ವಸ್ತ್ರವಿನ್ಯಾಸ, ಹಿನ್ನೆಲೆ ಮುನ್ನೆಲೆಗಳ ಸಂಯೋಜನೆ ಅದ್ಭುತವೆನಿಸುತ್ತದೆ.

## ೬. ಚರಂತಿಮಠ ಪೂಜ್ಯರು

ಕಲಾವಿದ ವಿ.ಸಿ. ನಾವಲಗಿ ಅವರ ಇನ್ನೊಂದು ಚಿತ್ರ ಅವರ ಕಲಾ ಪ್ರೌಢಿಮೆಯನ್ನು ಎತ್ತಿ ತೋರುವಂತದ್ದು. ಈಗಿರುವ ಪೂಜ್ಯಶ್ರೀ ಪ್ರಭು ಸ್ವಾಮಿಗಳು ಸುಮಾರು ೬೦ ವರ್ಷದವರು. ಅವರು ಪಟ್ಟಾಧಿಕಾರಕ್ಕೆ ಬಂದ ಸಂದರ್ಭ ಅಂದರೆ ಸುಮಾರು ೩೦ ವರ್ಷಗಳ ಹಿಂದಿನ ಪೂಜ್ಯರ ಭಾವಚಿತ್ರ ಇದಾಗಿದ್ದು, ಅತೀ ಸುಂದರವಾಗಿ ಚಿತ್ರಿತವಾಗಿದೆ. ಮೈತುಂಬ ಕಾವಿಬಟ್ಟೆ, ಕಾವಿಪಟಗ, ಕೈಯಲ್ಲಿ ಬೆತ್ತ, ಆವಿಗೆ, ಹಣೆಯ ಮೇಲೆ ಮೂರು ಬೆರಳಿನ ಸ್ಪಷ್ಟವಾದ ವಿಭೂತಿ, ಬಟ್ಟೆನಿರಿಗೆಗಳು ನೈಜವೂ, ಕಲಾತ್ಮವೂ ಆಗಿವೆ. ಹಿನ್ನೆಲೆ ವಿನ್ಯಾಸ ದಟ್ಟ ಹಸಿರು ಬಣ್ಣದ್ದಾಗಿದ್ದು, ಕಾವಿ ಬಣ್ಣವು ಎದ್ದು ಕಾಣುವಂತೆ ಸಂಯೋಜಿಸಲಾಗಿದೆ. ಬಲಗಡೆಯಿಂದ ತೂರಿ ಬರುವ ಬೆಳಕು ದೂರದಲ್ಲಿ ಕಾಣುವ ನೆಲ, ಬೆಟ್ಟ ಮತ್ತು ಆಕಾಶಗಳನ್ನು ಕಂಡೂ ಕಾಣದಂತೆ ಚಿತ್ರಿಸಿ ರಮ್ಯ ನೋಟವನ್ನು ನೀಡುವ ಚಿತ್ರ ಇದಾಗಿದೆ.

## ೭. ಅನುಭವ ಮಂಟಪ

ಕಲಾವಿದ ಕೆ. ಅಮೀನ ತೇರದಾಳದ ಅಲ್ಲಮಪ್ರಭು ದೇವಸ್ಥಾನದಲ್ಲಿ ಚಿತ್ರಿಸಿದ ಅಲ್ಲಮಪ್ರಭುಗಳು ನಡೆಸಿದ ಅನುಭವ ಮಂಟಪದ ಕಾಲ್ಪನಿಕ ಚಿತ್ರ ಅದ್ಭುತವಾಗಿದೆ. ಇವರು ಹೀಗೆಯೇ ಇದ್ದರು, ಹೀಗೆ ಹೀಗೆಯೇ ಕುಳಿತಿದ್ದರು, ಇಂತಹ ಮಾತುಗಳನ್ನಾಡಿದರು ಎಂಬ ಪರಿಕಲ್ಪನೆಗಳನ್ನು ಚಿತ್ರದಲ್ಲಿ ಸಮರ್ಥವಾಗಿ ತೋರಿ ಬಂದಿದೆ. ಬಟ್ಟೆಯ ಸಮತಲದಲ್ಲಿ ಹಿಂದು-ಮುಂದುಗಳ ಕಲ್ಪನೆ, ಒಬ್ಬರಿಂದ ಒಬ್ಬರಿಗೆ ಕಾಣಬರುವ ವ್ಯತ್ಯಾಸ, ವೇಷಭೂಷಣದ ವ್ಯತ್ಯಾಸ, ದೊಡ್ಡವರು ಸಣ್ಣವರ ಕಲ್ಪನೆ ಇವು ಕಲಾವಿದನ ರಚನಾತಂತ್ರದ

ಅನಂತ ಅನುಭವವನ್ನು ಸೂಚಿಸುತ್ತವೆ. ಮಧ್ಯದಲ್ಲಿ ಕಡು ಕಾವಿ ಬಟ್ಟೆ ಧರಿಸಿದ ಅಲ್ಲಮಪ್ರಭುಗಳು ದಪ್ಪನೆಯ ಹೂವಿನ ಹಾರವನ್ನು ಧರಿಸಿಕೊಂಡು ಮುಖವನ್ನು ಎಲ್ಲರ ಕಡೆಗೆ ತಿರುಗಿಸಿ ಮಾತನಾಡುತ್ತಿರುವಂತೆ ಚಿತ್ರಿಸಲಾಗಿದೆ. ಬಸವಣ್ಣ ಒಂದು ಬದಿಯಲ್ಲಿ, ಸಿದ್ದರಾಮ ಇನ್ನೊಂದು ಬದಿಯಲ್ಲಿ, ಸಿದ್ದರಾಮನ ಜೊತೆಗೆ ಮಡಿವಾಳ ಮಾಚದೇವ, ಬಸವಣ್ಣನ ಜೊತೆಗೆ ಚನ್ನಬಸವಣ್ಣ ಕುಳಿತಿದ್ದಾರೆ. ಅಕ್ಕ ನಾಗಮ್ಮ ಇತರ ಮಹಿಳೆಯರೊಂದಿಗೆ ಪೂರ್ಣ ಕುಂಭ ಹಿಡಿದು ಸ್ವಾಗತಿಸುತ್ತಿರುವಂತಿದೆ. ಕಡುಗೆಂಪು, ತೆಳುನೀಲಿ ಬಣ್ಣದ ಸೀರೆಯನ್ನು ಉಟ್ಟ ಮಹಿಳೆಯರು ಕೈಮುಗಿದು ನಿಂತಿದ್ದಾರೆ. ಇನ್ನಿಬ್ಬರು ಮಹಿಳೆಯರು ಕೈಮುಗಿದು ನಿಂತಿದ್ದಾರೆ. ಬಸವಣ್ಣನವರಿಗೆ ಹಳದಿ ಬಣ್ಣದ ಮೇಲು ಹೊದಿಕೆಯನ್ನು ಹೊದಿಸಿ, ಬಿಳಿಯ ಧೋತ್ರವನ್ನು ಉಡಿಸಲಾಗಿದೆ. ಚನ್ನಬಸವಣ್ಣನನ್ನು ಸಣ್ಣವನನ್ನಾಗಿ ಚಿತ್ರಿಸಿ ಕೆಂಪು ಬಣ್ಣದ ಮಡಿಯನ್ನು ಉಡಿಸಿ ಹೆಗಲ ಮೇಲೆ ಬಿಳಿಯ ಶೆಲ್ಯವನ್ನು ಹಾಕಲಾಗಿದೆ. ಇನ್ನು ಸಿದ್ದರಾಮರಿಗೆ ಕೇಸರಿ ಬಣ್ಣದ ಧೋತ್ರವನ್ನು ಉಡಿಸಿ, ಹೆಗಲ ಮೇಲೆ ಕಡು ಹಸಿರು ಬಣ್ಣದ ಶೆಲ್ಯವನ್ನು ಹೊದಿಸಲಾಗಿದೆ. ಕೈಯಲ್ಲಿ ವಚನದ ಕಟ್ಟನ್ನು ಚಿತ್ರಿಸಲಾಗಿದೆ. ಗಡ್ಡದಾರಿ ಉದ್ದ ಕೂದಲಿನ ಮಡಿವಾಳ ಮಾಚದೇವ ತನ್ನ ಖಡ್ಗ ಮತ್ತು ಗಂಟೆಗಳನ್ನು ಬದಿಯಲ್ಲಿಟ್ಟುಕೊಂಡು ಕೇಸರಿ ಬಣ್ಣದ ಧೋತ್ರವನ್ನು ಉಟ್ಟು, ಬಿಳಿಯ ಬಣ್ಣದ ಶೆಲ್ಯವನ್ನು ಹೊದ್ದು ಕುಳಿತಿದ್ದಾನೆ. ಸಿದ್ದರಾಮನ ಕಮಂಡಲವನ್ನು ಮುಂದೆ ಇಡಲಾಗಿದೆ.

ಬಸವಣ್ಣನವರ ಮುಂದೆ ತುಂಬಿದ ತಂಬಿಗೆ, ತಟ್ಟೆಯಲ್ಲಿಡಲಾಗಿದೆ. ಒಂದು ತೆಂಗಿನಕಾಯಿ, ಹೂಬುಟ್ಟಿಯನ್ನು, ಊದುಬತ್ತಿ ಅದರ ಹೊಗೆಯನ್ನು ಚಿತ್ರಿಸಲಾಗಿದೆ. ಕಾವಿದಾರಿ ಶಿಷ್ಯರು ಅಲ್ಲಮಪ್ರಭುಗಳ ಹಿಂದೆ ನಿಂತು ಚಾಮರವನ್ನು ಬೀಸುತ್ತಿರುವುದು ಶರಣೆಯರು ಕಾವಿ ಸೀರೆಗಳನ್ನು ಉಟ್ಟು ನಿಂತಿರುವುದು. ಮತ್ತೊಬ್ಬ ಕಾವಿದಾರಿ ಶಿಷ್ಯ ಚಾಮರವನ್ನು ಎತ್ತಿ ಹಿಡಿದದ್ದು, ಹಿಂಬದಿಯಲ್ಲಿ ಇನ್ನೋರ್ವ ಕಹಳೆಯನ್ನು ಊದುತ್ತಿರುವುದು, ಕೊನೆಯಲ್ಲಿ ಗಡ್ಡದಾರಿ ಸಾಧು ಒಬ್ಬ ಎಡಗೈಯನ್ನು ಮುಂದೆ ಮಾಡಿ, ಬಲಗೈಯಲ್ಲಿ ಕಮಂಡಲವನ್ನು ಹಿಡಿದು ಏನನ್ನೋ ಪ್ರಶ್ನಿಸುವಂತೆ ಚಿತ್ರಿಸಲಾಗಿದೆ. ಚಿತ್ರದ ಎರಡೂ ಬದಿಗೆ ದಪ್ಪನೆಯ ಕಂಬಗಳನ್ನು ಬೂದು ವರ್ಣದಲ್ಲಿ ಚಿತ್ರಿಸಲಾಗಿದೆ. ಕಂಬಗಳ ಮೇಲೆ ಹಾರ ತರುವ ಆನೆ ವಿವಿಧ ನಕ್ಷಾ ಚಿತ್ರವನ್ನು ಚಿತ್ರಿಸಲಾಗಿದೆ. ಹಿನ್ನೆಲೆಯಾಗಿ ಎರಡು ಕೆಂಪು ಬಣ್ಣದ ಕಂಬಗಳು ಅದಕ್ಕೆ ಬಂಗಾರ ಬಣ್ಣದ ಮೇಲ್ಛಾವಣೆ, ಕೆಂಪು ಬಟ್ಟೆಯ ಪರದೆ, ಅರಮನೆಯಂತಹ ನೀಲಿ ಗೋಡೆ, ಬಾಗಿಲು ಮತ್ತು ಕಿಟಕಿಗಳಿಗೆ ಹಸಿರು ಬಣ್ಣದ ನಕ್ಷಾವಿನ್ಯಾಸ ರಚಿಸಲಾಗಿದೆ. ಒಟ್ಟು ಚಿತ್ರವು ಒಂದು ಅದ್ಭುತವಾದ ಸಂಯೋಜನಾ ಚಿತ್ರವಾಗಿದೆ.

### ೮. ನಿಡುಮಾಮಿಡಿ ಪೂಜ್ಯರು

ಜಮಖಂಡಿಯ ಹಿರಿಯ ಕಲಾವಿದ ಶ್ರೀ ಸಾಲಿಮಠ ಅವರು ಕಡಪಟ್ಟಿ ಬಸವೇಶ್ವರ ದೇವಾಲಯದಲ್ಲಿ ಚಿತ್ರಿಸಿದ ಚಿತ್ರ ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಚಂದ್ರಗುಂಡ ದೇಶಿಕೇಂದ್ರ ಶಿವಾಚಾರ್ಯರದು. ಕ್ರಿ.ಶ. ೧೦೦೦ನೇ ಸಾಲಿನಲ್ಲಿ ಪವಾಡ ಮೆರೆದ ಪೂಜ್ಯರ ಭಾವಚಿತ್ರ ಇದಾಗಿದೆ. ಇಷ್ಟಲಿಂಗಾಪೂಜಾ ಸಂದರ್ಭದಲ್ಲಿ ತೆಂಗಿನ ಮರವೊಂದು ಬಾಗಿ ಫಲ ನೀಡಿದ ಚಿತ್ರ ಇದಾಗಿದ್ದು, ೧೯೭೨ನೇ ಇಸ್ವಿಯಲ್ಲಿ ಚಿತ್ರಿಸಲಾಗಿದೆ.

ದಂಡ, ಕಮಂಡಲ, ಗಂಟೆ, ದೂಪಾರತಿ, ಪೂಜಾ ಸಾಮಗ್ರಿ, ಮುಂದೆ ಒಂದು ಹುತ್ತ ಇದ್ದು, ಹುತ್ತದಲ್ಲಿ ನಾಗರ ಹಾವು ಹೆಡೆ ಎತ್ತಿಕೊಂಡು ಮೇಲೆ ಬಂದ ದೃಶ್ಯ, ಬಾಗಿದ ಮರದ ಹಿಂದೆ ಇನ್ನೊಂದು ಮರ ಚಿತ್ರಿಸಲಾಗಿದೆ. ಅಲ್ಲಿ ತೆಂಗಿನ ಫಲಗಳಿಲ್ಲ. ಕೆಂಪು ಮಣ್ಣಿನ ನೆಲದಲ್ಲಿ ಹಸಿರು ವರ್ಣದ ನಿಸರ್ಗದ ಹಿನ್ನೆಲೆ ವಿನ್ಯಾಸದಲ್ಲಿ ನೀಲಿ ಆಕಾಶವನ್ನು ರಚಿಸಲಾಗಿದೆ. ಒಟ್ಟು ಚಿತ್ರವು ಕಾವಿ ವೇಷದಾರಿ ಗಡ್ಡ, ಮೀಸೆಗಳಿಂದ ಅಲ್ಲಮಪ್ರಭುವಿನಂತೆ ಕೇಶ ವಿನ್ಯಾಸ ಹೊಂದಿದ ಶ್ರೀಗಳ ಒಟ್ಟು ಸ್ವರೂಪವು ಒಂದು ಪ್ರಮಾಣಬದ್ಧವಾದ ಚಿತ್ರವಾಗಿದೆ.

### ೯. ಗಣೇಶ

ಜಮಖಂಡಿಯ ಹಿರಿಯ ಕಲಾವಿದ ಶಂಭುಲಿಂಗ ಕರ್ಜಗಿಮಠ ಅವರ ಗಣೇಶನ ಚಿತ್ರ ಕ್ಯಾಲೆಂಡರ್‌ನಂತಹ ಆಕರ್ಷಕ ವಿನ್ಯಾಸವನ್ನು ಹೊಂದಿದೆ. ನೀಲಿ ಬಣ್ಣದ ಹಿನ್ನೆಲೆ ಕೆಂಪು ಬಟ್ಟೆಯ ಇಳಿಬಿಟ್ಟ ಪರದೆಗಳು, ಸಿಂಹಾಸನದ ಮೇಲೆ ಗಣೇಶ ದಿಂಬಿಗೆ ಆತು ಕುಳಿತು ಬಲಗೈಯಿಂದ ಆಶೀರ್ವಾದ, ಎಡಗೈಯಲ್ಲಿ ಕಮಲದ ಹೂ ಹಿಡಿದಿದ್ದಾನೆ. ಮೇಲಿನ ಎಡಗೈಯಲ್ಲಿ ಕಪ್ಪು ಬಣ್ಣದ ಹಾವೊಂದನ್ನು ಹಿಡಿದು, ಮೇಲಿನ ಬಲಗೈಯಲ್ಲಿ ಕೊಡಲಿ ಮತ್ತು ಪಾಶವನ್ನು ಹಿಡಿದಿದ್ದಾನೆ. ದೊಡ್ಡದಾದ ತ್ರಿಶೂಲವೊಂದನ್ನು ಹೆಗಲಿಗೆ ಆಧಾರವಾಗಿ ಇಡಲಾಗಿದೆ. ಹಳದಿ ಬಣ್ಣದ ಧೋತ್ರ, ನೀಲಿ ಬಣ್ಣದ ಶೆಲ್ಯ, ಪಾದವಿಡಲು ನಕ್ಷಾ ವಿನ್ಯಾಸದ ತಟ್ಟೆ ಇಲ್ಲಿ ನೀಲಿ, ಕೆಂಪು ವರ್ಣಮಿಶ್ರಿತ ಕಪ್ಪು ಬಣ್ಣದ ನೆಲವನ್ನು ವಿನ್ಯಾಸಗೊಳಿಸಲಾಗಿದೆ. ಇದೊಂದ ಆಕರ್ಷಕ ನೈಜ ಚಿತ್ರವಾಗಿದೆ.

### ೧೦. ರವೀಂದ್ರನಾಥ ಟ್ಯಾಗೋರ್

ಜಮಖಂಡಿ ತಾಲ್ಲೂಕಿನ, ಹುನ್ನೂರಿನ ಚನ್ನಮಲ್ಲಪ್ಪ ಚಿನ್ನಪ್ಪ ಕಾಮಗೊಂಡ ಅವರು ರಚಿಸಿದ ರವೀಂದ್ರನಾಥ ಟ್ಯಾಗೋರ್ ಅವರ ಭಾವಚಿತ್ರವಿದಾಗಿದೆ. ಅತ್ಯಂತ ಸೂಕ್ಷ್ಮವಾಗಿ ಅವರ ಗಡ್ಡ, ಮೀಸೆ ಮತ್ತು ಕೂದಲುಗಳನ್ನು ಯಥಾವತ್ತಾಗಿ ಚಿತ್ರಿಸಲು ಪ್ರಯತ್ನಿಸಿದ್ದಾರೆ. ದಿವಂಗತ ಕಾಮಗೊಂಡ ಅವರು ರಚಿಸಿದ ಅನೇಕ ಚಿತ್ರಗಳು ಇಂದು ಜಮಖಂಡಿ ತಾಲ್ಲೂಕಿನಾದ್ಯಂತ ಎಲ್ಲ ಗುಡಿ ಗುಂಡಾರಗಳಲ್ಲಿ ಕಾಣಸಿಗುತ್ತವೆ. ಮುಖಭಾವದಲ್ಲಿ ಸೂಕ್ತವಾದ ಬಣ್ಣಗಳನ್ನು ಬಳಸಿ ಕಣ್ಣು, ಮೂಗುಗಳನ್ನು ತಿದ್ದಿ, ತೀಡಿ ಅಪರೂಪದ ಕಲಾಕೃತಿಯನ್ನು ರಚಿಸಿದ್ದಾರೆ. ನೀಲಿ ಬಣ್ಣದ ಕೋಟು, ಕೈಯಲ್ಲಿ ಪುಸ್ತಕ ಹಿಡಿದ ಅಪರೂಪದ ಕಾಲ್ಪನಿಕವಾದ ಭಾವಚಿತ್ರ ಇದಾಗಿದೆ.

### ೧೧. ಕನಕದಾಸರು

ಜಮಖಂಡಿ ತಾಲ್ಲೂಕಿನ, ಕಡಪಟ್ಟಿ ಗ್ರಾಮದ ರಾಮಪ್ಪ ಕಡಪಟ್ಟಿ ಅವರು ೧೯೭೯ರಲ್ಲಿ ರಚಿಸಿದ ಕನಕದಾಸರ ಚಿತ್ರ ಇದಾಗಿದ್ದು, ಮುಖದಲ್ಲಿ ಭಕ್ತಿ-ಭಾವ ಎದ್ದು ಕಾಣುತ್ತದೆ. ಬಲಗೈಯಲ್ಲಿ ತಂಬೂರಿಯನ್ನು ಹಿಡಿದು ತಂತಿಯನ್ನು ಮೀಟುತ್ತಿರುವಂತೆ, ಎಡಗೈಯಲ್ಲಿ ತಾಳವನ್ನು ಹಿಡಿದು ಬಾರಿಸುತ್ತಿರುವಂತೆ ಹಿಂದೆ ಬಿಳಿಯ ಬಣ್ಣದ ಪ್ರಭಾವಳಿ, ಹೆಗಲ ಮೇಲೆ ಕರಿ ಕಂಬಳಿ, ಬಿಳಿಯ ತುಂಡು ಪಂಜೆ, ಎಡಗಾಲನ್ನು ಎತ್ತಿ ಕುಣಿಯುವಂತೆ ಚಿತ್ರಿಸಿದರೆ, ಅವರ ಭಕ್ತಿಗೆ ಒಲಿದ ಕೃಷ್ಣ ಪ್ರತ್ಯಕ್ಷನಾಗಿದ್ದು, ಗುಡಿಯ ಕಲ್ಲುಗಳು ಸೀಳಿ

ಕೆಳಗೆ ಬಿದ್ದಂತೆ ಚಿತ್ರಿಸಲಾಗಿದೆ. ಒಂದು ಮರ ಸುಂದರವಾದ ಎಲೆಗಳು, ಕಪ್ಪು ಕಲ್ಲಿನ ಗೋಡೆ, ಕಪ್ಪಾದ ನೆಲ ಚಿತ್ರಿಸಲಾಗಿದೆ. ಒಟ್ಟು ಕನಕದಾಸರ ಭಕ್ತಿಯ ಬದುಕಿನ ಪವಾಡ ಸದೃಶ ಕನಕನ ಕಿಂಡಿಯ ಸಂದರ್ಭವನ್ನು ಚಿತ್ರಿಸುವ ಕೃತಿ ಇದಾಗಿದೆ.

### ೧೨. ಸಿದ್ಧನಕೊಳ್ಳದ ಶ್ರೀಗಳು

ಇಲಕಲ್ಲಿನ ದಿವಂಗತ ಶ್ರೀ ಮಲ್ಲೇಶಪ್ಪ ಧೋತ್ರೆ ಅವರು ರಚಿಸಿದ ಅಪರೂಪದ ಭಾವಚಿತ್ರಗಳಲ್ಲಿ ಸಿದ್ಧನಕೊಳ್ಳದ ಸಿದ್ದಪ್ಪಜ್ಜನವರ ಲೈಫ್‌ಸೈಜ್ ಚಿತ್ರವು ತುಂಬಾ ಆಕರ್ಷಕವಾದ ಚಿತ್ರ. ಸಿದ್ಧನಕೊಳ್ಳದ ಮಠದ ಸನ್ನಿವೇಶವನ್ನು ಹಿಂಭಾಗದಲ್ಲಿಟ್ಟುಕೊಂಡು ಬಿಳಿಯ ಗಡ್ಡದ, ಬಿಳಿಯ ಕೂದಲಿನ ಅಜ್ಜನವರು ಶ್ವೇತ ವಸ್ತ್ರಧಾರಿಯಾಗಿ ಕೈಮೇಲೆ ಕೈ ಊರಿಕೊಂಡು ಪರಧ್ಯಾನದಲ್ಲಿ ಕುಳಿತಿರುವ ಭಾವಚಿತ್ರ ಇದಾಗಿದೆ. ಸಿದ್ಧನ ಕೊಳ್ಳದ ಸುಂದರವಾದ ಪರಿಸರದ ಪೂಜ್ಯರ ನೈಜವಾದ ಚಿತ್ರ ಇದಾಗಿದ್ದು, ಒಂದು ಉತ್ತಮ ಸಂಯೋಜನೆಯಾಗಿದೆ.

### ೧೩. ದೇವಲ ಮಹರ್ಷಿ

ಇಲಕಲ್ಲಿನ ಹಿರಿಯ ಕಲಾವಿದ ದೇವಾಂಗ ಸಮಾಜದ ಗುರು ಶ್ರೀ ವಿವೇಕಾನಂದ ದೇವಾಂಗಮಠ ಅವರು ರಚಿಸಿದ ದೇವಲ ಮಹರ್ಷಿಗಳ ಜೀವನ ದರ್ಶನ ಕುರಿತು ರಚಿಸಿದ ಚಿತ್ರಗಳಲ್ಲಿ ಶ್ರೀ ಫನಿಗೌಡರು ತಮ್ಮ ಮನೆಗೆ ಬಂದು ದೇವರ ಮನೆಯಲ್ಲಿ ಧ್ಯಾನಮಗ್ನವಾಗಿ ಕುಳಿತಾಗ ಗಂಗಾವತಿಯ ನೈರುತ್ಯ ದಿಕ್ಕಿನಲ್ಲಿ ಇರುವ ಗುಡ್ಡದ ಗವಿಯಲ್ಲಿ ಶ್ರೀ ದೇವಲ ಮಹರ್ಷಿಗಳು ಶ್ರೀ ಮುದ್ದುಸಂಗ ಮಹಾಮುನಿಗಳ ರೂಪದಲ್ಲಿರುವಂತೆ ಅವರಿಗೆ ಗೋಚರವಾದ ಚಿತ್ರ ಇದಾಗಿದ್ದು, ವರ್ಣಮಯ ಸಂಯೋಜನೆಯಲ್ಲಿ ಗೌಡರು ಮನೆಯಲ್ಲಿ ಧ್ಯಾನಕ್ಕೆ ಕುಳಿತ ಭಂಗಿ ಕೂರುವ ಮಣೆಯ ಮೇಲೆ ಪದ್ಮಾಸನದಲ್ಲಿ ಧ್ಯಾನಾಸಕ್ತರಾಗಿ ಕುಳಿತಿದ್ದಾರೆ. ತಲೆಯ ಮೇಲೆ ರುಮಾಲು, ಬಗಲು ಕಸಿಯ ಅಂಗಿ, ಹೆಗಲ ಮೇಲೆ ಕೆಂಪು ಬಣ್ಣದ ಶ್ಯಾಲು ಹೊದ್ದು, ಪೂಜಾ ಸಾಮಗ್ರಿಗಳನ್ನೂ, ಹಣ್ಣು, ಕಾಯಿ, ಸಮೇಯ ದೀಪ, ಮಂಟಪದಲ್ಲಿ ಶಿವಲಿಂಗ ಕಪ್ಪು ವರ್ಣದಿಂದ ಛಾಯಾಲಂಕೃತವಾಗಿ ಕಾಣುತ್ತದೆ. ಅವರ ಹಿಂದೆ ದೊಡ್ಡ ಕಿಟಕಿ, ಬಲಬದಿಯಲ್ಲಿ ಬಾಗಿಲು, ದೇವರ ಮನೆಯ ಅಲಂಕಾರ, ತಲೆಯ ಎಡಭಾಗದಿಂದ ನೀಲಿ, ಹಸಿರು ಮತ್ತು ಹಳದಿ ವರ್ಣಗಳ ಕಿರಣಗಳು ಚಾಚುತ್ತಾ ಹೋಗಿ ಕಲ್ಲುಬಂಡೆಗಳಿಂದ ಸೀಳಿ ಬಂದಂತೆ ಮುದ್ದುಸಂಗ ಮಹಾಮುನಿಗಳು ದೇವಲ ಮಹರ್ಷಿ ಹಿಂಬದಿಯಲ್ಲಿ ಪ್ರತ್ಯಕ್ಷರಾಗಿ ಆಶೀರ್ವಾದ ಮಾಡುವ ಬಲಗೈ ಭಂಗಿಯಲ್ಲಿ ಗೋಚರಿಸುತ್ತಾರೆ. ಕೆಳಗೆ ದೇವಲ ಮಹರ್ಷಿಗಳು ಬಲಗೈ ಹಸ್ತವನ್ನು ಮುಂದೆ ಮಾಡಿ, ಎಡಗೈಯನ್ನು ತೊಡೆಯ ಮೇಲೆ ಇಟ್ಟುಕೊಂಡು ಪದ್ಮಾಸನಾಸೀನರಾಗಿ ಕಣ್ಣು ಮುಚ್ಚಿ ಕುಳಿತಿದ್ದಾರೆ. ಸುತ್ತಲೂ ಕೇಸರಿ ವರ್ಣದ ಕಲ್ಲು ಬಂಡೆಗಳಂತೆ ಚಿತ್ರಿಸಲಾಗಿದೆ. ಅವುಗಳ ಒಳಗೆ ಇಬ್ಬರೂ ಮಹರ್ಷಿಗಳು ಎದ್ದು ಕಾಣುವಂತೆ ಕಪ್ಪು ವರ್ಣದಿಂದ ಅಲಂಕೃತಗೊಳಿಸಲಾಗಿದೆ.

ಒಟ್ಟು ಚಿತ್ರವು ಮಹರ್ಷಿಗಳ ಜೀವನ ಚರಿತ್ರೆ ಸಾರುವ ಚಿತ್ರಗಳಲ್ಲಿ ಗಮನ ಸೆಳೆಯುವ ಕಾಲ್ಪನಿಕ ಸಂಯೋಜನಾತ್ಮಕ ಚಿತ್ರ ಇದಾಗಿದೆ. ಆಧುನಿಕ ಮಾನವ ಅವನ ಮನೆ ಅಲ್ಲಿಯೇ ದೈವ ಸ್ವರೂಪಿಗಳು

ಪ್ರತ್ಯಕ್ಷರಾದ ಕಲ್ಪನೆಯನ್ನು ನೀಡುವ ಎರಡೂ ಕಾಲಗಳನ್ನು ಒಂದೇ ಸ್ತರದಲ್ಲಿ ಸೃಷ್ಟಿಸಿದ ಅವರ ಕಲಾಪ್ರತಿಭೆಯನ್ನು ಪ್ರಶಂಸಿಸಬೇಕು.

**೧೪. ಮಹಾಭಾರತ**

ಮುಧೋಳದ ಹಿರಿಯ ಕಲಾವಿದ ಪಿ. ಮೋಹನ್ ಅವರ ಹಲವಾರು ಧಾರ್ಮಿಕ ಸಂದರ್ಭದ ಚಿತ್ರಗಳಲ್ಲಿ ಮಹಾಭಾರತದ ಚಿತ್ರವೂ ಒಂದು. ರಥದಲ್ಲಿ ಕೃಷ್ಣ ಸಾರಥಿಯಾಗಿ ಅರ್ಜುನ ಮೇಲೆ ಯುದ್ಧಕ್ಕೆ ಸನ್ನದ್ಧನಾಗಿರುವುದು ಬಿಳಿಯ ವರ್ಣದ ನಾಲ್ಕು ಕುದುರೆಗಳು ರಥದ ಮೇಲೆ ಛತ್ರಿ, ಧ್ವಜ ಎದುರಾಳಿಗಳಲ್ಲಿ ಆನೆ, ಕುದುರೆ, ರಥ, ಅಪಾರ ಸೈನಿಕರು ಇದ್ದು ಸಂಜೆ ಸನ್ನಿವೇಷವನ್ನು ತೋರಲು ಕಲಾವಿದರು ಕಡುನೀಲಿ ಬಣ್ಣದ ಆಕಾಶವನ್ನು ರಚಿಸಿದ್ದಾರೆ. ಒಟ್ಟಿನಲ್ಲಿ ಮಹಾಭಾರತದ ಯುದ್ಧದ ಸನ್ನಿವೇಶ ಇದಾಗಿದ್ದು ಉತ್ತಮ ಸಂಯೋಜನೆಯಾಗಿದೆ.





ಜನಪದ ಕಲಾವಿದರ ಚಿತ್ರಗಳು

೧) ಇಲಕಲ್ಲ ಮಠದ ಪವಾಡ



೨) ಸೀತೆಯನ್ನು ಕದ್ದೊಯ್ಯುವ ರಾವಣ



೨) ಸೀತೆ



೫) ಲಿಂಗ ಪೂಜಾನಿರತ ಬಸವಣ್ಣ

ii. ಶಿಷ್ಯ

ಜಿಲ್ಲೆಯ ಅಕೆಡೆಮಿಕ್ ಶೈಲಿಯ ಸೃಜನಶೀಲ ಕಲಾವಿದರು ದೇಶಾದ್ಯಂತ ಹೆಸರು ಮಾಡಿ ದೃಶ್ಯ ಕಲಾಕ್ಷೇತ್ರಕ್ಕೆ ಉತ್ಕೃಷ್ಟವಾದ ಕಲಾಕೃತಿಗಳನ್ನು ನೀಡುವ ಮೂಲಕ ಜಿಲ್ಲೆಯ ದೃಶ್ಯಕಲಾಕ್ಷೇತ್ರಕ್ಕೆ ಮೌಲಿಕತೆಯನ್ನು ಹೆಚ್ಚಿಸಿದ್ದಾರೆ. ನಾಡಿನ ಸೃಜನಶೀಲ ಪ್ರತಿಭೆಗೆ ಅವಕಾಶ ಕಲ್ಪಿಸಿ ಕೊಟ್ಟ ಕರ್ನಾಟಕ ಲಲಿತಕಲಾ ಅಕೆಡೆಮಿ ೧೯೬೪ರಲ್ಲಿ ರೂಪುಗೊಂಡಾಗ ಈ ಜಿಲ್ಲೆಯ ಮುತ್ಸದ್ದಿ ರಾಜಕಾರಣಿ ಅಂದಿನ ಶಿಕ್ಷಣ ಮಂತ್ರಿ ಇಲಕಲ್ಲಿನ ಶ್ರೀ ಎಸ್.ಆರ್. ಕಂಠಿ ಅವರು ಅಕೆಡೆಮಿಯ ಮೊದಲ ಅಧ್ಯಕ್ಷರಾದ ಹೆಮ್ಮೆಯೂ ಬಾಗಲಕೋಟೆ ಜಿಲ್ಲೆಯದಾಗಿದೆ. ಆಗ ನಾಟಕ, ಸಾಹಿತ್ಯ, ಸಂಗೀತ, ನೃತ್ಯ ಎಲ್ಲಾ ಲಲಿತಕಲೆಗಳು ಸೇರಿ ಅಕಾಡೆಮಿಯಾಗಿತ್ತು. ನಂತರ ಲಲಿತಕಲೆಗಳು ಪ್ರತ್ಯೇಕ ಅಕೆಡೆಮಿಗಳಾದವು. ೧೯೭೭ರಲ್ಲಿ ಕೇವಲ ಚಿತ್ರಕಲೆ ಒಂದೇ ಪ್ರತ್ಯೇಕ ಅಕೆಡೆಮಿಯಾಗಿ ಉಳಿಯಿತು. ಆಗ ಬಾಗಲಕೋಟೆಯ ಹಿರಿಯ ಕಲಾವಿದ ದಿವಂಗತ ಸೋಮಶೇಖರ ಸಾಲಿಯವರು ಅಕಾಡೆಮಿಯ ಅಧ್ಯಕ್ಷರಾಗಿದ್ದರು. ನಂತರ ಮತ್ತೊಬ್ಬ ಮಹಾನ್ ಕಲಾವಿದ ಬೆಂಗಳೂರಿನ ಕೆನ್ ಕಲಾ ಶಾಲೆಯ ಸಂಸ್ಥಾಪಕ ಬಾದಾಮಿಯ ನಾಡೋಜ ಆರ್.ಎಂ. ಹಡಪದ ಅವರು ಲಲಿತಕಲಾ ಅಕೆಡೆಮಿಯ ಅಧ್ಯಕ್ಷರಾಗಿದ್ದರು. ಹೀಗೆ ಪ್ರಥಮ ಅಧ್ಯಕ್ಷರಿಂದ ಹಿಡಿದು ಹಡಪದ ಅವರವರೆಗೆ ಮೂರು ಜನ ಕಲಾಸಕ್ತ, ಕಲಾವಿದರು ಜಿಲ್ಲೆಯ ಅಧ್ಯಕ್ಷರಾಗಿದ್ದರು. ಇದಲ್ಲದೇ ಮೂರು ಮೂರು ಅವಧಿಗಳಿಗೆ ಕರ್ನಾಟಕ ಲಲಿತಕಲಾ ಅಕೆಡೆಮಿಯ ಸದಸ್ಯರಾದವರು ಜಮಖಂಡಿಯ ಶ್ರೀ ವಿಜಯಸಿಂಧೂರ ಅವರು. ಅದರಂತೆ, ಬಾಗಲಕೋಟೆಯ ಹಿರಿಯ ಕಲಾವಿದರಾದ ಬಿ.ಕೆ. ಹಿರೇಮಠ ರಬಕವಿಯ ಮಹಾದೇವ ಕವಿಶೆಟ್ಟಿ, ಬಾದಾಮಿಯ ಶಿಲಾಕಾಂತ ಪತ್ತಾರ, ಇಲಕಲ್ಲಿನ ಬಸವರಾಜ ಗವಿಮಠ, ರಬಕವಿಯ ರಾಜೇಂದ್ರ ಅಷ್ಟಗಿ, ಬಾದಾಮಿ ತಾಲ್ಲೂಕಿನ ಜಲಗೇರಿಯ ಈರಣ್ಣ ದಂಡಿನ, ಬೀಳಗಿ ತಾಲ್ಲೂಕಿನ ಕೊರ್ತಿಯ ಕಲ್ಲಪ್ಪ ಕೆ. ಮಕಾಳಿ ಮೊದಲಾದವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ ಜಿಲ್ಲೆಯ ಖ್ಯಾತಿಯನ್ನು ಹೆಚ್ಚಿಸಿದ್ದಾರೆ. ಕಲಾಕ್ಷೇತ್ರಕ್ಕೆ ಮೆರಗು ತಂದಿದ್ದಾರೆ.

ಬೇರೆ ಜಿಲ್ಲೆಯ ಕಲಾವಿದರು ನಾಡಿನಾದ್ಯಂತ ಹೆಸರು ಮಾಡಿದವರ ಕಲಾಕೃತಿಗಳು ಜಿಲ್ಲೆಯಲ್ಲಿ ಸಂಗ್ರಹಗೊಂಡು ಗ್ಯಾಲರಿಯಲ್ಲಿನ ಕೃತಿಗಳನ್ನು ಆಯ್ಕೆ ಮಾಡಿ ವಸ್ತುವಿಷಯ ವಿಮರ್ಶೆಗೆ ಒಳಪಡಿಸುವುದು ಹಾಗೂ ಹೆಸರಾಂತ ಕಲಾವಿದರ ಕೃತಿಗಳು ಜಿಲ್ಲೆಯ ವ್ಯಕ್ತಿ, ಸಂಸ್ಥೆ ಮುಂತಾದ ಕಡೆಗಳಲ್ಲಿ ಸಂಗ್ರಹಗೊಂಡು ಕೇವಲ ವ್ಯಾಪಾರೀಕರಣಕ್ಕಾಗಿ ಸಂಗ್ರಹಗೊಂಡ ಕೃತಿಗಳೆಂದು ಪರಿಗಣಿಸಿ ಅವುಗಳ ಸ್ಥಳ ಮತ್ತು ಕಲಾವಿದರನ್ನು ಮಾತ್ರ ಗುರುತಿಸಲಾಗಿದೆ.

ಜಿಲ್ಲೆಯ ಚಿತ್ರಕಲಾ ಪ್ರತಿಭೆಗಳಿಗೆ ಪೋಷಕ ನೆಲೆಯಾಗಿ ನಿಂತವು ಮುಂಬಯಿ ಮತ್ತು ಪುಣೆ ಶಹರಗಳಲ್ಲಿದ್ದ ಕಲಾಶಾಲೆಗಳು. ಸರ್.ಜೆ.ಜೆ. ಸ್ಕೂಲ್ ಆಫ್ ಆರ್ಟ್ ಮತ್ತು ಜಿ.ಎಸ್. ದಂಡಾವತಿ ಮಠರ ನೂತನ ಕಲಾಮಂದಿರಗಳು ಈ ದಿಸೆಯಲ್ಲಿ ಮಹತ್ವದ ಪಾತ್ರ ವಹಿಸಿವೆ. ನಂತರದಲ್ಲಿ ಧಾರವಾಡದ ಹಾಲಭಾವಿಯವರ ಹಾಗೂ ಗದುಗಿನ ಟಿ.ಪಿ. ಅಕ್ಕಿಯವರ ವಿಜಯಕಲಾ ಶಾಲೆಗಳು ಈ ನಿಟ್ಟಿನಲ್ಲಿ ಕೆಲಸ ಮಾಡಿದ ಕಲಾ ಸಂಸ್ಥೆಗಳು. ಇತ್ತೀಚೆಗೆ ಅವಿಭಜಿತ ವಿಜಾಪುರ ಹಾಗೂ ಪ್ರತ್ಯೇಕಗೊಂಡ

ಬಾಗಲಕೋಟೆಯಲ್ಲಿಯೂ ಅನೇಕ ಕಲಾ ಶಾಲೆಗಳು ಜಿಲ್ಲೆಯ ಚಿತ್ರಕಲಾ ಪರಂಪರೆಯನ್ನು ಕಾಯ್ದುಕೊಂಡು ಬರುವಲ್ಲಿ, ಬೆಳೆಸುವಲ್ಲಿ ಮಹತ್ವ ಪಡೆದುಕೊಳ್ಳುತ್ತಲಿವೆ. ಕನ್ನಡ ವಿಶ್ವವಿದ್ಯಾಲಯದ ಕಲಾ ನಿಕಾಯದ ಬಾದಾಮಿಯ ಕಲಾ ವಿಭಾಗವು ಈಚಿನ ಮಹತ್ವದ ಸೇರ್ಪಡೆಯಾಗುತ್ತದೆ.

ಬಾಗಲಕೋಟೆ ಜಿಲ್ಲೆಯನ್ನೇ ಕೇಂದ್ರೀಕರಿಸಿ ಹೇಳುವುದಾದರೆ-ಜಿಲ್ಲೆಯ ನಾಲ್ಕೂ ನಿಟ್ಟಿನಲ್ಲಿ ಆರಂಭಗೊಂಡ ಚಿತ್ರಕಲಾ ವಿದ್ಯಾಲಯದಲ್ಲಿ ಮುಧೋಳದ ಜಯ, ವಿಜಯ ಮಹಿಳಾ ವಿವಿದೋದ್ದೇಶ ಶೈಕ್ಷಣಿಕ ಮಹಾಸಂಸ್ಥೆ ಹಿರಿಯ ಕಲಾ ಶಿಕ್ಷಕರಾಗಿದ್ದ ಶ್ರೀ ಎಸ್.ಬಿ. ಹಿರೇಮಠರ ಸಾರಥ್ಯದಲ್ಲಿ ೧೯೮೩ರಲ್ಲಿ ಮುಧೋಳದಲ್ಲಿ ಆರಂಭಗೊಂಡ ಮಹೇಶ ಚಿತ್ರಕಲಾ ಮಹಾವಿದ್ಯಾಲಯ ಮುಧೋಳದಲ್ಲಿ ಆರಂಭಗೊಂಡಿತು. ಈಗ ಅದು ಜಮಖಂಡಿಗೆ ಸ್ಥಳಾಂತರಗೊಂಡಿದೆ. ನಂತರ ಹಿರಿಯ ಕಲಾವಿದ ಬಿ.ಎಸ್. ಗರಡಿಯವರ ನೇತೃತ್ವದಲ್ಲಿ ಶ್ರೀ ಅನ್ನದಾನೇಶ್ವರ ಔದ್ಯೋಗಿಕ ಕಲಾಸಂಘದ ಆಶ್ರಯದಲ್ಲಿ ಹಿರಿಯ ಕಲಾ ಶಿಕ್ಷಕ ಬಸವರಾಜ ಸಣ್ಣಬಸಪ್ಪ ಗರಡಿ ಅವರ ಸಾರಥ್ಯದಲ್ಲಿ ಅಮೀನಗಡದಲ್ಲಿ ಪ್ರಭುರಾಜೇಂದ್ರ ಚಿತ್ರಕಲಾ ವಿದ್ಯಾಲಯ ೧೯೯೧ರಲ್ಲಿ ಆರಂಭಗೊಂಡಿತು. ಈಗ ಕಳೆದ ಆರು ವರ್ಷಗಳಿಂದ ಕಾರ್ಯ ನಿರ್ವಹಿಸುತ್ತಿಲ್ಲ. ನಂತರ ಬಾಗಲಕೋಟೆಯಲ್ಲಿ ಬಿ.ಸಿ. ಬಿರಾದರ ಅವರ ನೇತೃತ್ವದಲ್ಲಿ ವಿಶ್ವನೂತನ ಚಿತ್ರಕಲಾ ವಿದ್ಯಾಲಯ, ೧೯೯೧ರಲ್ಲಿ ಆರಂಭಗೊಂಡಿತು. ೧೯೯೨ರಲ್ಲಿ ಶ್ರೀ ಹೊಳಿಬಸವೇಶ್ವರ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ, ಇಲಕಲ್ಲಿನಲ್ಲಿ ವಿಜಯ ಚಿತ್ರಕಲಾ ಶಾಲೆ ಹಾಗೂ ೧೯೯೨ರಲ್ಲಿ ಬಾದಾಮಿಯಲ್ಲಿ ಶ್ರೀ ಮಡಿವಾಳ ಮಾಚಿದೇವ ವಿದ್ಯಾಸಂಸ್ಥೆ, ರೋಣ ಅವರ ಆಶ್ರಯದಲ್ಲಿ ಚಾಲುಕ್ಯ ಚಿತ್ರಕಲಾ ಶಾಲೆ ಆರಂಭಗೊಂಡವು. ಇದಲ್ಲದೆ ೨೦೦೪ರಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರ ವ್ಯಾಪ್ತಿಗೆ ಬಂದ ಕಲಾಶಾಲೆಗಳು ಇಂದು ಕಲಾ ಮಹಾವಿದ್ಯಾಲಯ ಬಿ.ವಿ.ಎ(ಬ್ಯಾಚುಲರ್ ಆಫ್ ವಿಜುವಲ್ ಆರ್ಟ್) ಎಂಬ ಪದವಿಯನ್ನು ನೀಡುತ್ತಿವೆ. ಬಾದಾಮಿಯ ಬನಶಂಕರಿಯಲ್ಲಿ ವಿಶ್ವವಿದ್ಯಾಲಯದ ಚಿತ್ರ ಮತ್ತು ಶಿಲ್ಪಕಲಾ ವಿಭಾಗವೊಂದು ಆರಂಭಗೊಂಡು ಒಟ್ಟು ೬ ಕಲಾಶಾಲೆಗಳು ಇದ್ದು ಈಗ ೫ ಕಲಾಶಾಲೆಗಳು ಕಾರ್ಯ ನಿರ್ವಹಿಸುತ್ತಿವೆ. ಇನ್ನು ಜಿಲ್ಲೆಯಲ್ಲಿನ ಕಲಾಕೃತಿಗಳ ಸಂಗ್ರಹಾಲಯಗಳು ಇತ್ತೀಚಿನ ದಿನಗಳಲ್ಲಿ ಧಾರ್ಮಿಕ ಕ್ಷೇತ್ರವಾದ ಶಿವಯೋಗ ಮಂದಿರದ ಶತಮಾನೋತ್ಸವ ಸಂದರ್ಭದಲ್ಲಿ ನಾಡಿನ ಖ್ಯಾತ ಕಲಾವಿದ ನಾಡೋಜ ವಿ.ಟಿ. ಕಾಳೆ ಅವರು ಸುಮಾರು ೪೦ ಕಲಾಕೃತಿಗಳು ಸಂಗ್ರಹಗೊಂಡಿವೆ. ಹಾನಗಲ್ ಕುಮಾರ ಸ್ವಾಮಿಗಳ ಜೀವನಾಧಾರಿತ ಕೃತಿಗಳ ಗ್ಯಾಲರಿಯೊಂದನ್ನು ನಿರ್ಮಿಸಿ ಅಲ್ಲಿ ಆ ಕಲಾಕೃತಿಗಳ ಶಾಶ್ವತ ಪ್ರದರ್ಶನಕ್ಕೆ ವ್ಯವಸ್ಥೆ ಕಲ್ಪಿಸಲಾಗಿದೆ. ಇದಲ್ಲದೆ ಇನ್ನೊಂದು ಧಾರ್ಮಿಕ ಕ್ಷೇತ್ರ ಕೂಡಲಸಂಗಮದಲ್ಲಿ ಮಾತೆ ಮಹಾದೇವಿಯವರ ಬಸವಾಶ್ರಮದ ಗ್ಯಾಲರಿಯಲ್ಲಿ ಗುಲಬರ್ಗಾ ಜಿಲ್ಲೆಯ ಹುಡುಗಿಯ ಕಲಾವಿದರು ರಚಿಸಿದ ಬಸವಾದಿ ಶರಣರ ಕಾಯಕ ನಿರತ ಭಾವಚಿತ್ರಗಳ ಕಲಾಕೃತಿಗಳು ಸಂಗ್ರಹಗೊಂಡಿದ್ದು, ಪ್ರದರ್ಶನ ನಡೆಸಲಾಗುತ್ತಿದೆ. ಇದಲ್ಲದೇ ಐತಿಹಾಸಿಕ ಪಟ್ಟಣ ಬಾದಾಮಿಯಲ್ಲಿ ಅಂತರಾಷ್ಟ್ರೀಯ ಹೋಟೆಲ್‌ಗಳಾದ ಬಾದಾಮಿ ಕೋರ್ಟ್‌ನಲ್ಲಿ ಬೆಂಗಳೂರಿನ ಕಲಾವಿದ ಲಿಂಗದೇವರ ನಿಸರ್ಗದ ೬ ಚಿತ್ರಗಳು ಹಾಗೂ ಬೆಂಗಳೂರಿನ ಖ್ಯಾತ ಭೂದೃಶ್ಯ ಕಲಾವಿದ ಎಂ.ಎಸ್. ಚಂದ್ರಶೇಖರ್

ಅವರ ೩ ಲ್ಯಾಂಡ್‌ಸ್ಕೇಪ್‌ಗಳು ವಿರಾಜಮಾನವಾಗಿವೆ. ಹೀಗೆ ಜಿಲ್ಲೆಯಾದ್ಯಂತ ಹೆಸರಾಂತ ಕಲಾವಿದರ, ಕಲಾಕೃತಿಗಳು ಸಂಗ್ರಹಗೊಂಡಿವೆ. ಇಲ್ಲಿ ಸ್ಥಳೀಯ ಕಲಾವಿದರ ಕಲಾಕೃತಿಗಳನ್ನು ಲಭ್ಯವಿರುವ ಪ್ರಸಿದ್ಧ ಕಲಾವಿದರ ಕೆಲವು ಕಲಾಕೃತಿಗಳನ್ನು ಲಕ್ಷಿಸಿ, ಆಯ್ದ ಕಲಾಕೃತಿಗಳ ವಸ್ತುವಿಷಯಗಳ ಬಗೆಗೆ ಅಧ್ಯಯನ ನಡೆಸಲಾಗಿದೆ.

ಅದರಂತೆ ಈ ಜಿಲ್ಲೆಯಲ್ಲಿ ಹುಟ್ಟಿ ಬೇರೆ ಕಡೆ ನೆಲೆ ಕಂಡುಕೊಂಡ ಪ್ರಸಿದ್ಧ ಕಲಾವಿದರಾದ ದಾವಣಗೆರೆಯ ದಿವಂಗತ ಶ್ರೀ ಕಾಳಿದಾಸ ಪತ್ತಾರ(ಅವರು ಹುಟ್ಟಿದ್ದು ಹುನಗುಂದ ತಾಲ್ಲೂಕಿನ ಕೆರೂರಿನಲ್ಲಿ) ಹಾಗೆಯೇ ಅವರ ಸಹೋದರ ಕಲಾಶಿಕ್ಷಕ ಎ.ಡಿ. ಪತ್ತಾರ್ ಅವರು ಸದ್ಯ ಗುಲಬರ್ಗಾದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಸದ್ಯ ಬೆಳಗಾವಿಯಲ್ಲಿದ್ದು ಹೆಸರು ಮಾಡಿದ್ದ ಹಿರಿಯ ಕಲಾವಿದ ವಿ.ಸಿ. ಮಾಲಗತ್ತಿ(ಅವರು ಹುಟ್ಟಿದ್ದು ಇಲಕಲ್ಲಿನಲ್ಲಿ). ಸಂಡೂರಿನ ನಾಡೋಜ ವಿ.ಟಿ. ಕಾಳೆಯವರು(ಹುಟ್ಟಿದ್ದು ಹುನಗುಂದದಲ್ಲಿ). ಕೋಲಾರದ ಶಿವನ ಸಮುದ್ರದಲ್ಲಿ ಕಲಾ ಶಿಕ್ಷಕರಾಗಿರುವ ಈರಣ ದಂಡಿನ್ ಬಾದಾಮಿಯ ಜಲಗೇರಿಯವರು, ಹಿರಿಯ ಕಲಾವಿದರಾದ ನಾರಾಯಣ ಕುಲಕರ್ಣಿ ಲಕ್ನೋ ನಗರದ ಸರ್ಕಾರಿ ಕಲಾಶಾಲೆಯಲ್ಲಿ ಪ್ರಾಧ್ಯಾಪಕರು(ಅವರ ಹುಟ್ಟೂರು ಬಾದಾಮಿ). ಈಶ್ವರ್ ಜೋಶಿಯವರು ಇಲಕಲ್ಲಿನಲ್ಲಿ ಹುಟ್ಟಿದರು. ಸರ್ಕಾರಿ ಮಹಿಳಾ ತರಬೇತಿ ಕೇಂದ್ರ ಉಡುಪಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವರು. ಬೆಂಗಳೂರಿನ ಫ್ರಿಲಾನ್ಸ್ ಆರ್ಟಿಸ್ಟ್ ಅಮರೇಶ್ ಬಿಜ್ಜಳ(ಅವರು ಹುಟ್ಟಿದ್ದು ಇಲಕಲ್ಲಿನಲ್ಲಿ). ಸರ್ಕಾರಿ ಪಠ್ಯಪುಸ್ತಕ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಬಿ.ಜಿ. ವಾರಿಯವರು ಹುಟ್ಟಿದ್ದು ಬಾದಾಮಿಯಲ್ಲಿ. ಸದ್ಯ ಬೆಂಗಳೂರಿನ ಡಿ.ಎಸ್.ಇ.ಆರ್.ಟಿ.ಯಲ್ಲಿ ಕಲಾವಿದರಾಗಿ ಸರ್ಕಾರಿ ಪಠ್ಯಪುಸ್ತಕಗಳ ವಿನ್ಯಾಸಕಾರರಾಗಿ ಕಾರ್ಯ ನಿರ್ವಹಿಸುತ್ತಿರುವ ಜಿ.ಎಂ. ಜಂಗಿಯವರ ಹುಟ್ಟೂರು ಜಮಖಂಡಿ ತಾಲ್ಲೂಕಿನ ಬನಹಟ್ಟಿ. ಗೋಕಾಕದ ಕರ್ನಾಟಕ ಲಲಿತಕಲಾ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿರುವ ವಿನಾಯಕ ಪತ್ತಾರ್ ಅವರ ಹುಟ್ಟೂರು ಜಮಖಂಡಿ ತಾಲ್ಲೂಕಿನ ಆಸಂಗಿ. ಶಿವಮೊಗ್ಗದ ಸರ್ಕಾರಿ ಪ್ರೌಢಶಾಲೆಯ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿರುವ ಬಸವರಾಜ ಹೊಸಮನಿ ಅವರು ಹುಟ್ಟೂರು ಹುನಗುಂದ ತಾಲ್ಲೂಕಿನ ಬನ್ನಿಹಟ್ಟಿ.

ಕಲಾ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಾ ಸತತವಾಗಿ ಕಲಾಕೃತಿಯ ರಚನೆಯತ್ತ ಆಸಕ್ತಿ ವಹಿಸಿದವರು ಅಮೀನಗಡದ ಬಿ.ಎಚ್. ತುಂಬಗಿ, ಇಲಕಲ್ಲಿನ ಶ್ರೀ ಸರಗಣಾಚಾರಿ, ಎಂ.ಎಂ. ಹಣಗಿ, ಸಿ.ಜೆ. ಬಿಜ್ಜಳ, ಮಲ್ಲಿಕಾರ್ಜುನ ಟಂಕಸಾಲಿ, ಎಂ.ಎಂ. ಶಿರೂರ, ಕಾಸಿಂ ಕನಸ್ವಾಮಿ, ಚಂದ್ರಕಾಂತ ಸರೋಜ, ತಿರುಪತಿ ಚಲವಾದಿ, ಬಾಗಲಕೋಟೆಯ ರಾಜು ಯಾದವ್, ಮಂಜುಳ ಪತ್ತಾರ, ಬಾದಾಮಿಯ ಎಂ.ಐ. ಬಾರವಾಲಿ, ಶಕೀಲ್ ಪಿಂಜಾರ್, ದಿನೇಶ್, ವಾಚ್‌ಮೇಕರ್, ಹುನಗುಂದ ಜಿ.ಬಿ. ಕಂಬಾಳಿಮಠ, ಗುಳೇದಗುಡ್ಡದ ಮಹಾದೇವ ಜಗತಾಪ, ಜಮಖಂಡಿ ತಾಲ್ಲೂಕಿನ ಮರೇಗುದ್ದಿಯ ನಾಗರಾಜ ಪತ್ತಾರ, ಬೀಳಗಿ ತಾಲ್ಲೂಕಿನ ಅನಗವಾಡಿಯ ಎಸ್.ಬಿ. ಹಿರೇಮಠ ಮೊದಲಾದವರು ಕಲಾ ಶಿಕ್ಷಕರಾಗಿ ಕಲಾವಿದರಾಗಿ ಗುರುತಿಸಿಕೊಂಡವರಾಗಿದ್ದಾರೆ. ಯುವ ಕಲಾವಿದರಲ್ಲಿ ಹುನ್ನೂರಿನ ರವಿ ಕೋಳಿ, ತೇರದಾಳದ ಬಸವರಾಜ

ಬಾಳೆಕಾಯಿ, ಕಲಾದಗಿಯ ಪ್ರಕಾಶಬಾಬು ಪತ್ತಾರ, ಬಾಗಲಕೋಟೆಯ ಕೇದರನಾಥ ಮನ್ಸಾಬಾರ್, ಮೀರಾ ಕಾಂಬ್ಳೆ, ಬಸವರಾಜ ಅನಗವಾಡಿ ಮೊದಲಾದವರು ಹೆಸರಿಸಬೇಕಾದವರು.

**ಚಿತ್ರದ ವಸ್ತು ವಿಷಯಗಳು**

ದಿವಂಗತ ಶ್ರೀ ಸೋಮಶೇಖರ ಸಾಲಿ ಅವರು ಬೀಳಗಿ ತಾಲ್ಲೂಕಿನ ಚಿಕ್ಕಾಲಗುಂಡಿಯಲ್ಲಿ ೧೯೩೨ರಲ್ಲಿ ಜನಿಸಿದರು. ಸಂಘಟನೆ ದೇಶಪ್ರೇಮದಲ್ಲಿ ಆಸಕ್ತಿ. ೧೯೪೪ರಿಂದ ೧೯೪೯ರವರೆಗೆ ಧಾರವಾಡದ ಕಲಾಮಂದಿರ ಹುಬ್ಬಳ್ಳಿಯ ವಿಜಯಮಹಾಂತೇಶ ಕಲಾಮಂದಿರ, ಮುಂಬೈಯ ನೂತನ ಕಲಾಮಂದಿರದಲ್ಲಿ ವ್ಯಾಸಂಗ, ಜೆ.ಜೆ. ಕಲಾಶಾಲೆ ಮುಂಬೈನಿಂದ ಡಿಪ್ಲೋಮೊ ಪದವಿ. ಬೆಂಗಳೂರಿನ ಚಿತ್ರಕಲಾ ಪರಿಷತ್ತಿಗೆ ೧೯೬ಅರಿಂದ ಆಜೀವ ಸದಸ್ಯರು, ೧೯೬೭ರಿಂದ ೧೯೭೧ರವರೆಗೆ ರಾಜ್ಯ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ ೧೯೭೪ರಿಂದ ೧೯ಅ೭ರವರೆಗೆ ಅದರ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ೧೯ಅ೫ರಲ್ಲಿ ದೆಹಲಿಯ ಐಫೆಕ್ಸ್‌ನಲ್ಲಿ ರಾಷ್ಟ್ರದ ಹಿರಿಯ ಕಲಾವಿದರಾಗಿ ಸನ್ಮಾನ. ಕರ್ನಾಟಕ ಚಿತ್ರಕಲಾ ಪರಿಷತ್ತಿನ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದವರು. ಈ ಕಲಾವಿದರ ಆಯ್ದ ಕಲಾಕೃತಿಗಳ ವಸ್ತು ಇಂತಿವೆ.

**೧. ಅಕ್ಕಮಹಾದೇವಿ**

ಶಾಸ್ತ್ರಬದ್ಧವಾದ ಚಿತ್ರ ರಚನೆಯಲ್ಲಿ ಶರೀರಶಾಸ್ತ್ರ ಅತೀ ಪ್ರಮುಖವಾದದ್ದು. ಅದರಲ್ಲೂ ಅಕ್ಕಮಹಾದೇವಿ ಚಿತ್ರ ಬರೆಯುವವರು ವೀರವಿರಾಗಿನಿಯ ಬಗೆಗೆ ಸಾಕಷ್ಟು ತಿಳುವಳಿಕೆಯನ್ನು ಹೊಂದಿರಬೇಕಾಗುತ್ತದೆ. ಕವಿ ಹೃದಯದ ಕಲಾವಿದ ಅಕ್ಕನ ವಚನಗಳನ್ನು ಬಲ್ಲವರಾಗಿದ್ದು, ಬಸವಣ್ಣ ಮತ್ತು ಬೇರೆ ಶರಣರು ಅಕ್ಕನ ಬಗೆಗಿನ ಆಡಿದ ಮಾತುಗಳನ್ನು ಸಾರುವ, ಆಕೆಯ ವ್ಯಕ್ತಿತ್ವ ಶಿವನಲೀಲಾ ವಿನೋದದಲ್ಲಿ ಅಕ್ಕನ ಪಾತ್ರ ಚನ್ನಮಲ್ಲಿಕಾರ್ಜುನನ್ನು ಪತಿ ಎಂದು ಭಾವಿಸುವ ಅಕ್ಕನ ಅನನ್ಯ ವ್ಯಕ್ತಿ ಚಿತ್ರವನ್ನು ಸೋಮಶೇಖರ ಸಾಲಿಯಂತವರು ಮಾತ್ರ ಬಿಡಿಸಲು ಸಾಧ್ಯ. ಮುಖ್ಯ ರೂಪಾಕೃತಿಯಾಗಿ ದೇಹದ ಮೋಹವನ್ನೇ ತೊರೆದ ನಗ್ನ ಅಕ್ಕಮಹಾದೇವಿಯ ಪೂರ್ಣ ಚಿತ್ರವಿದ್ದು, ಎಲ್ಲಿಯೂ ಮನ ವಿಚಲಿತಗೊಳಿಸುವ ಅಂಶಗಳಿಲ್ಲ. ಹಾಗೆಯೇ ಬೇರೆಡೆ ದೃಷ್ಟಿಗಳನ್ನು ಸೆಳೆಯುವ ಪೂರಕ ಅಂಶಗಳಾದ ಕದಳಿ, ಗಿಡ, ಮರ, ಹೂಬಳ್ಳಿ, ಜಿಂಕೆಗಳೇ ಅಕ್ಕನ ಕಾನನ ಸಂಗಾತಿಗಳು. ಪರ್ಶನ್‌ಬ್ಲ್ಯೂನಲ್ಲಿ ನೀರು, ಆ ಕಪ್ಪು ನೀಲಿಯಲ್ಲಿ ಶ್ವೇತವರ್ಣದ ಎರಡು ಹಂಸಗಳು ಚಿತ್ರದ ಅತೀ ಮುಂಭಾಗದ ನೀಲಿಯಲ್ಲಿ ಕಂಡೂಕಾಣದಷ್ಟು ಸೌಮ್ಯವಾದ ಒಂದು ಅರಳಿದ, ಒಂದು ಮೊಗ್ಗಾಗಿರುವ ಕಮಲಗಳು ಕೋಬಾಲ್ಟ್ ಬ್ಲ್ಯೂನಲ್ಲಿ ಆಕಾಶ ಅಲ್ಲಿಯೂ ಕೂಡ ಕೆಳಗಿನ ಹಂಸಗಳಿಗೆ ಸಮತೋಲನವಾಗಿ ಹಾರಿಬಂದ ಹಂಸಗಳು, ಮರದಲ್ಲಿ ಕುಳಿತ ನವಿಲಿಗೆ ನೀಡಿದ ಪ್ರಖರ ನೀಲಿ, ಕಪ್ಪು ಬಣ್ಣದ ಮರದಲ್ಲಿ ಕಂಡೂ ಕಾಣದಂತಿದೆ. ಜಿಂಕೆಯೊಂದು ಅಕ್ಕನ ಬಲಗೈ ಕೆಳಗೆ ನಿಂತು ಅವಳ ಕೈಯಿಂದ ಸಂತೈಸಿಕೊಳ್ಳುತ್ತಿರುವಂತೆ ನಿಂತಿದೆ.

ಅಕ್ಕನ ಬಲಬದಿಯಲ್ಲಿ ಯಾವ ಚಿತ್ರದಲ್ಲೂ ಇರದಂತಹ ದೊಡ್ಡ ಎಲೆಗಳುಳ್ಳ ನೇರವಾಗಿ ಬೊಡ್ಡೆಗೇ ಎಲೆಗಳು ಮೂಡಿರುವ ವಿಭಿನ್ನ ಮರವಿದ್ದು, ಅಲ್ಲಲ್ಲಿ ಕಡು ಹಸಿರು ಬಣ್ಣದ ಎಲೆಗಳು, ಮರದ ಬೊಡ್ಡೆಗಳು

ಅಲ್ಲಲ್ಲಿ ಕಾಣುತ್ತವೆ. ಅಕ್ಕನನ್ನು ಬಿಟ್ಟು ಉಳಿದೆಲ್ಲಾ ನೆಲದ ಭಾಗವು ಚಪ್ಪಟೆಯಾದ ತೆಳು ಹಸಿರು ಹುಲ್ಲಿನಂತಹ ಬಣ್ಣವನ್ನು ಲೇಪಿಸಿದ್ದು ಎಲ್ಲಿಯೂ ದೂರ, ಸಮೀಪಗಳ ಪರಿಕಲ್ಪನೆ ನೀಡಿಲ್ಲ. ಎಲ್ಲ ಕಡೆಗೂ ಸಮ ಪ್ರಮಾಣದ ವರ್ಣ ಸಂಯೋಜನೆಯನ್ನು ಕಾಪಾಡಿಕೊಂಡು ಅಕ್ಕನ ಮೈಬಣ್ಣವಿರುವ ಮರದ ಬೊಡ್ಡೆ, ಹೂವುಗಳು ಚಿಕ್ಕ ಚಿಕ್ಕ ಬಂಡೆಗಲ್ಲುಗಳು ಇಡೀ ಚಿತ್ರವನ್ನು ಬ್ಯಾಲೆನ್ಸ್ ಮಾಡುತ್ತವೆ. ಹಾಗಾಗಿ ನೇರವಾದ ದೃಷ್ಟಿ ಮೂಲರೂಪಾಕೃತಿ ಅಕ್ಕನ ಮೇಲೆ ಬೀಳದಂತೆ ನೋಡಿಕೊಂಡಿರುವುದೂ ಇಲ್ಲಿನ ವೈಶಿಷ್ಟ್ಯ. ಹಣೆಯ ತುಂಬಾ ವಿಭೂತಿ, ಉದ್ದನೆಯ ಕೂದಲುಗಳನ್ನು ಹಿಂಬದಿಯಿಂದ ಮೊಣಕಾಲುವರೆಗೆ ಜೋತುಬಿಟ್ಟು, ಕಿವಿಯ ಹತ್ತಿರದಿಂದ ಎರಡು ಎಳೆ ಕೂದಲುಗಳನ್ನು ಭುಜದ ಮೇಲಿಂದ ಶರೀರದ ಮುಂಭಾಗಕ್ಕೆ ಬಿಟ್ಟಿರುವುದು, ಎಡಗೈಯಲ್ಲಿ ಇಷ್ಟಲಿಂಗವನ್ನಿರಿಸಿ ಎರಡೂ ಕಾಲುಗಳನ್ನು ನೃತ್ಯ ತವಕದಿಂದ ಚಲಿಸುವ ಭಂಗಿಯಲ್ಲಿ ಇರಿಸಲಾಗಿದೆ. ಸಮಗ್ರ ಚಿತ್ರದ ಅನುಭವವು ಶರಣರ ತತ್ವಾದರ್ಶಗಳಿಗೆ ಪೂರಕವೆಂಬಂತೆ ರಚಿತವಾಗಿದೆ. ಒಟ್ಟಿನಲ್ಲಿ ಪರಿಪೂರ್ಣ ವರ್ಣ ಸಂಯೋಜನೆ ಅಲ್ಲಲ್ಲಿ ನೀಡಿರುವ ಕಪ್ಪು ಬಣ್ಣಗಳು ಎಷ್ಟು ನೇರವಾಗಿವೆಯೋ ಅಷ್ಟೇ ಪ್ರಮಾಣದಲ್ಲಿ ಬೆಳಕು ವರ್ಣಗಳಿರುವುದೂ ವಿಶೇಷ. ಮಧ್ಯಮ ವರ್ಗದ ಬಣ್ಣದಲ್ಲಿ ಅಕ್ಕನ ಶರೀರಾಕೃತಿ ಇದ್ದು, ಎಲ್ಲವನ್ನು ಏಕಕಾಲಕ್ಕೆ ನೋಡುವಂತೆ ಮಾಡಿದರೂ ಎಲ್ಲಿಯೂ ಅಭಾಸವೆನಿಸುವುದಿಲ್ಲ.

**೨. ಕಲಾರಾಧನೆ**

ಇಲ್ಲಿಯೂ ಕೂಡ ಸಾಲಿಯವರ ಶಾಸ್ತ್ರಬದ್ಧ ಶೈಲಿಯ ಪರಿಕಲ್ಪನೆಗಳನ್ನು ನೀಡುತ್ತದೆ. ಮೊದಲನೆ ಚಿತ್ರಕ್ಕಿಂತ ಇದು ತೀರಾ ಭಿನ್ನವಾಗಿದೆ. ಭಾರತದಲ್ಲಿ ಕಲೆ ಎಂದರೆ ದೇವರೆಂದೇ ಅರ್ಥ. ದಾರ್ಶನಿಕರ ಪ್ರಕಾರ ಕಲೆ ಈಶ್ವರ, ಉಳಿದೆಲ್ಲಾ ನಶ್ವರ ಎಂಬ ಉಕ್ತಿಯಂತೆ ಇಲ್ಲಿ ಸಾಲಿಯವರು ನಾಟ್ಯಕ್ಕಾಗಿ ನಟರಾಜನನ್ನು ಕಡು ವರ್ಣದಲ್ಲಿ ಮಧ್ಯದಲ್ಲಿರಿಸಿ ಮುಂದಿನ ಅಕೃತಿ ಯಾವಾಗಲೂ ಹೆಚ್ಚು ಕಡುಪಾಗಿರುವಂತೆ ನೋಡಿಕೊಂಡು ನೃತ್ಯ ತಾರೆಯೊಬ್ಬಳು ನಟರಾಜನನ್ನು ಕಾಲೂರಿ ಕುಳಿತು ಬೇಡಿಕೊಳ್ಳುವಂತೆ ಚಿತ್ರಿಸಲಾಗಿದೆ. ನೆಲಕ್ಕೆ ಬಿದ್ದ ಅವಳ ಉದ್ದವಾದ ಜಡೆ, ಕಡು ನೀಲಿ ಬಣ್ಣದ ಲಂಗ, ನೃತ್ಯಗಾರ್ತಿಯ ರವಿಕೆ, ತಲೆಯಲ್ಲಿ ಹೂವು, ಕೈಯಲ್ಲಿ ಕಡಗದಂತೆ ಬಳೆ, ನಟರಾಜ ಮತ್ತು ಮುಂದೆ ಕುಳಿತ ಮಹಿಳೆ ಇಡೀ ಚಿತ್ರದ ಪ್ರಥಮ ಆಕರ್ಷಣೆಯಾಗಿ ಕಡುಬಣ್ಣದಲ್ಲಿ ಚಿತ್ರಿಸಲಾಗಿದೆ. ಅದಕ್ಕೂ ಮುನ್ನ ಬಲಬದಿ ಮೂಲೆಯಲ್ಲಿ ಸಾಹಿತ್ಯವೂ ಕಲೆಯನ್ನು ಬಿಟ್ಟು ಇಲ್ಲ ಎಂಬಂತೆ ವ್ಯಾಸಪೀಠದಲ್ಲಿ ಸಾಹಿತ್ಯ ಕೃತಿಯನ್ನು ಇರಿಸಲಾಗಿದೆ. ಇನ್ನೊಂದು ಬದಿಯಲ್ಲಿ ಹೂದಾನಿಯೊಂದರಲ್ಲಿ ಕುಂಚಗಳನ್ನಿಟ್ಟು ಚಿತ್ರಕಲೆಗೆ ಸಂಬಂಧಿಸಿದ ಕಡುವರ್ಣದ ಆರಂಭವನ್ನು ನೀಡಲಾಗಿದೆ.

ಬಲಬದಿಯಲ್ಲಿ ವಾಸ್ತು ತಜ್ಞನೊಬ್ಬ ಹಾಳೆಗಳಲ್ಲಿ ವಾಸ್ತು ಚಿತ್ರಗಳನ್ನು ರಚಿಸಿ, ಸುತ್ತಿಟ್ಟು ವಾಸ್ತುವಿನ ಮಾದರಿಯೊಂದನ್ನು ಆಕಾಶದಲ್ಲಿರುವ ಕಲಾದೇವಿ ಅಥವಾ ಸರಸ್ವತಿಗೆ ಅರ್ಪಿಸುತ್ತಿರುವಂತೆ ಚಿತ್ರಿಸಲಾಗಿದೆ. ಇನ್ನೊಂದು ಕಡೆ ಸ್ತ್ರೀಯೊಬ್ಬಳು ಆಕಾಶದಲ್ಲಿರುವ ಕಲಾದೇವಿಯತ್ತ ನೋಡುತ್ತ ಎಡಗೈಯಲ್ಲಿ ಬಣ್ಣ ಕಲೆಸುವ ಪ್ಯಾಲೆಟ್‌ನ್ನು ಹಿಡಿದುಕೊಂಡು ನೋಡುತ್ತಿದ್ದಾಳೆ. ಆಕಾಶದಲ್ಲಿ ಮುಖ ಮಾತ್ರ ಕಂಡು ಮುಂದಿನ

ಬಾಲದ ಗರಿಗಳು ಕಾಣದಂತೆ ಆಕಾಶದಲ್ಲಿ ಅಮೂರ್ತವಾಗಿರುವ ನವಿಲೊಂದು ಗೋಚರಿಸುತ್ತದೆ. ಅದರ ಮೇಲ್ಭಾಗದಲ್ಲಿ ಹಳದಿ ಬಣ್ಣದ ಆಕಾಶದಲ್ಲಿ ವೀಣಾಪಾಣಿ ಸರಸ್ವತಿ ಬಿಳಿಯ ಸೀರೆಯನ್ನುಟ್ಟು, ಬಿಳಿದಾದ ಆಭರಣಗಳನ್ನು ತೊಟ್ಟು, ಬಿಳಿಯ ಮೈಬಣ್ಣವನ್ನು ಹೊಂದಿದ ಸರಸ್ವತಿ ಆಕಾಶದಲ್ಲಿ ಪ್ರತ್ಯಕ್ಷಳಾದಂತೆ ಚಿತ್ರಿಸಲಾಗಿದೆ. ಕಾಮನಬಿಲ್ಲು ತನ್ನ ಏಳು ಬಣ್ಣಗಳನ್ನು ತೋರುತ್ತಾ ಸರಸ್ವತಿಗೆ ಆಸನದಂತೆ ಗೋಚರಿಸುತ್ತದೆ. ಒಟ್ಟು ಚಿತ್ರದ ತಾತ್ಪರ್ಯ ಕಲೆ, ಸಾಹಿತ್ಯ, ಸಂಗೀತ, ನೃತ್ಯ, ವಾಸ್ತು, ಶಿಲ್ಪ ಮುಂತಾದ ಎಲ್ಲಾ ಕಲೆಗಳೂ ಸರಸ್ವತಿಯ ಆಶೀರ್ವಾದದಿಂದ ಮಾತ್ರ ಲಭ್ಯ ಎಂಬ ತತ್ವವನ್ನು ಸಾರುವ ಚಿತ್ರ ಇದಾಗಿದ್ದು, ಶಿವ ಸ್ವರೂಪಿ ನಟರಾಜನನ್ನು ಪೂಜಿಸುವುದೂ, ಆರಾದಿಸುವುದೂ, ನಾಟ್ಯ ಕಲೆಯನ್ನು ಅಭ್ಯಸಿಸುವವರಿಗೆ ದಾರಿದೀಪ ಎಂಬಂತೆ ಇಡೀ ಚಿತ್ರವು ಹೆಚ್ಚು ಪ್ರಖರವಾದ ಬಣ್ಣಗಳಿಲ್ಲದೆ ಸುಂದರವಾಗಿ ಪ್ರಚುರಪಡಿಸಬಹುದಾದ ಎಲ್ಲಾ ಅಂಶಗಳನ್ನು ತೆಕ್ಕೆಗೆ ತೆಗೆದುಕೊಂಡು ಸಂಯೋಜನಾಬದ್ಧವಾಗಿದೆ. ಚಿತ್ರದ ರೇಖಾವಿನ್ಯಾಸ, ವರ್ಣವಿನ್ಯಾಸಗಳು ಬಂಗಾಳದ ಚಿತ್ರ ಪರಂಪರೆಯನ್ನು ನೆನಪಿಸುವಂತಿದೆ.

### ೩. ರೂಪದರ್ಶಿ

ಇಲ್ಲಿಯೂ ಕೂಡ ಶಾಸ್ತ್ರಬದ್ಧವಾದ ಚಿತ್ರಕಲೆ ಅಧ್ಯಯನ ಕಂಡುಬರುತ್ತದೆ. ಲೈಫ್‌ಸ್ಟಡಿ ಎಂದರೆ ಎದುರಿಗೆ ಕುಳಿತುಕೊಂಡ ವ್ಯಕ್ತಿಯನ್ನು ರೇಖೆ ಮತ್ತು ಬಣ್ಣಗಳಿಂದ ಪರಿಪೂರ್ಣಗೊಳಿಸುವುದು ಎಂದರ್ಥ. ಇಲ್ಲಿ ಎದ್ದುನಿಂತ ವ್ಯಕ್ತಿ ಆಕಡೆ ಮುಖ ಮಾಡಿ ಬೆನ್ನು ತೋರಿದ್ದಾನೆ. ಇಲ್ಲಿ ವ್ಯಕ್ತಿಯೊಬ್ಬನ ನಿಂತ ಭಂಗಿ ಶರೀರ ರಚನೆಯ ವ್ಯಕ್ತಿಯೊಬ್ಬ ಕೈಯಲ್ಲಿ ಕೋಲೊಂದನ್ನು ಹಿಡಿದುಕೊಂಡು ಬಿಳಿಯ ಬಣ್ಣದ ತುಂಡುಡುಗೆಯನ್ನು ತೊಟ್ಟು ಕಟ್ಟಿಗೆಯ ಪೆಟ್ಟಿಗೆಯ ಮೇಲೆ ನಿಂತ ರೂಪದರ್ಶಿಯಾಗಿ ನಿಂತುಕೊಂಡ ಮಾದರಿ ಚಿತ್ರ ಇದಾಗಿದ್ದು, ಅಂದಿನ ಅಧ್ಯಯನ ಕ್ರಮದ ಕಲಿಕಾ ಮಾದರಿಯಾಗಿ ಮಾಡಿದ ಚಿತ್ರಕೃತಿ ಎನ್ನಬಹುದು.

### ೪. ಸಂಗನಬಸವ ಶ್ರೀಗಳು

ಅವರ ಕಾಲದಲ್ಲಿ ಬಹು ಪ್ರಭಾವಿ ಶ್ರೀಗಳಾದ ಸಂಗನಬಸವ ಸ್ವಾಮೀಜಿಗಳ ಭಾವಚಿತ್ರವನ್ನು ಪೆನ್ಸಿಲ್ ಮಾಧ್ಯಮದಲ್ಲಿ ಬಹು ಸುಂದರವಾಗಿ, ನೈಜವಾಗಿ ರಚಿಸಿದ ಚಿತ್ರ ಇದಾಗಿದೆ. ನೆರಳು ಬೆಳಕಿನ ವಿವಿಧ ಛಾಯೆಗಳನ್ನು ಅಧ್ಯಯನ ಮಾಡಿದ ಚಿತ್ರಮಾದರಿ ಇದಾಗಿದ್ದು, ಚಿಕ್ಕ ನಗುವಿನ ಶ್ರೀಗಳ ಭಾವನೆಯನ್ನು ಸೆರೆಹಿಡಿದ ಸಾಲಿಯವರು ಚಿತ್ರರಚನೆಯ ವಿವಿಧ ಮಾಧ್ಯಮಗಳಲ್ಲಿನ ಪ್ರೌಢಿಮೆಯನ್ನು ಸಾರುತ್ತದೆ. ಎತ್ತರವಾದ ಪಟಕ, ಹೆಗಲ ಮೇಲೆ ಶ್ಯಾಲು, ನಿಲುವಂಗಿ ಎಲ್ಲವನ್ನು ಪೆನ್ಸಿಲ್‌ನಲ್ಲಿ ನೆರಳು, ಬೆಳಕಿನಲ್ಲಿ ತೋರಿಸಿದ ಅದ್ಭುತ ಕೃತಿಯಾಗಿದೆ.

ನಾಡೋಜ ದಿವಂಗತ ಆರ್.ಎಂ. ಹಡಪದ ಅವರ ಹೆಸರು ಇಂದು ಕರ್ನಾಟಕ ಅಷ್ಟೇ ಅಲ್ಲದೇ ದೇಶ, ವಿದೇಶದಲ್ಲಿಯೂ ಅವರ ಕಲಾಕೃತಿಗಳೂ, ಅವರ ಶಿಷ್ಯ ಬಳಗ ಇರುವುದು ವಿಶೇಷ. ಬಾಗಲಕೋಟೆ ಜಿಲ್ಲೆಯ ಬಾದಾಮಿಯಲ್ಲಿ ೧೯೩೨ರಲ್ಲಿ ಶ್ರೀ ರುದ್ರಪ್ಪ ಎಂ. ಹಡಪದ ಅವರು ಜನಿಸಿದರು. ಬಾಲ್ಯದಿಂದಲೇ ಕಲೆಯ ಗೀಳು, ಕಲಾಗುರು ದಂಡಾವತಿ ಮಠ, ಮಿಣಜಗಿ ಹಾಗೂ ಅಕ್ಕಿ ಅವರ ಸಂಪರ್ಕದಿಂದ ೧೯೫೧ರಲ್ಲಿ

ಮುಂಬೈನ ಜೆ.ಜೆ. ಕಲಾಶಾಲೆಯಲ್ಲಿ ಉತ್ತಮ ದರ್ಜೆಯಲ್ಲಿ ಡಿಪ್ಲೊಮೊ ಗಳಿಸಿದರು. ಬೆಂಗಳೂರಿನಲ್ಲಿ ಕೆನ್ ಕಲಾ ಶಾಲೆಯನ್ನು ಕಟ್ಟಿ ಸಾವಿರಾರು ಹೆಸರಾಂತ ಕಲಾವಿದರನ್ನು ಜಗತ್ತಿಗೆ ನೀಡಿದ ಖ್ಯಾತಿ ಇವರದು. ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಹಲವಾರು ಕಲಾ ವಿಷಯದ ಉಪನ್ಯಾಸಗಳನ್ನು, ಕಲಾ ಇತಿಹಾಸವನ್ನು ಪ್ರಕಟಿಸುವ ಮೂಲಕ ದಾಖಲೆ ನಿರ್ಮಿಸಿದರು.

**೫. ಸರಸ್ವತಿ ಮತ್ತು ಬ್ರಹ್ಮ**

ಕಲಾವಿದನ ತರ್ಕಕ್ಕೆ ಪ್ರಯೋಗಕ್ಕೆ ಇತಿಮಿತಿಗಳಿರುವುದಿಲ್ಲ ಎಂಬುದಕ್ಕೆ ಹಡಪದ ಅವರು ಸ್ಪಷ್ಟ ಉದಾಹರಣೆಯಾಗಿದ್ದಾರೆ. ಚತುರ್ಮುಖ ಬ್ರಹ್ಮನ ಚೌಕಟ್ಟನ್ನು ಸ್ವಲ್ಪ ಆಚೆ ಈಚೆಗೊಳಿಸಿ ಮಧ್ಯದಲ್ಲಿ ಪತ್ನಿಯ ವಾಹನ ನವಿಲನ್ನು ದೊಡ್ಡದಾಗಿರಿಸಿ ಇನ್ನೊಂದು ಬದಿಯಲ್ಲಿ ಸರಸ್ವತಿ ಕುಳಿತಿರುವಂತೆ ಸಂಯೋಜನೆ ಇದೆ. ಇಲ್ಲಿ ಬ್ರಹ್ಮನ ಎಲ್ಲಾ ಕುರುಹುಗಳು ಅಂದರೆ ಕೈಯಲ್ಲಿ ಬಿಳಿ ಕಮಲ, ಕುಳಿತದ್ದು ಕೆಂಪು ಕಮಲ, ಬಲಗೈಯಲ್ಲಿ ಆಶೀರ್ವಾದ, ಬಿಳಿಯ ಬಣ್ಣದ ಮುತ್ತುಗಳ ಜಪಮಾಲೆ ಇದೆ. ಬ್ರಹ್ಮ ಮತ್ತು ಸರಸ್ವತಿಯರ ಪರಿಕಲ್ಪನೆ ಎಲ್ಲರೂ ರಚಿಸುವಂತೆ ಅಥವಾ ಇದುವರೆಗೂ ನಡೆದುಬಂದಂತೆ ಆಯಾ ದೇವತೆಗಳ ವೇಷಭೂಷಣ, ವಸ್ತುಗಳ ಕಿರೀಟ, ವಾಹನಗಳು ಇಲ್ಲಿ ತುಂಬಾ ವಿಭಿನ್ನವಾಗಿವೆ. ಸರಸ್ವತಿಯ ಬದಿಯ ನೋಟದ ಮುಖದ ಮೇಲೆ ಮೂರು ತ್ರಿಕೋನಗಳಂತೆ ಕಿರೀಟವನ್ನು ಸೃಷ್ಟಿಸಲಾಗಿದೆ. ಸೀರೆ ಶುಭ್ರ ವಸ್ತ್ರಧಾರೆಯಾದ ಸರಸ್ವತಿ ಸೀರೆಯನ್ನು ಉಟ್ಟುಕೊಂಡಿದ್ದಾಳೆ. ಅದು ಕೂಡ ನವ್ಯ ನಕ್ಷೆಯನ್ನು ಹೊಂದಿದೆ. ಇನ್ನೊಂದು ಮಹತ್ವದ ವಿಚಾರವೆಂದರೆ ವೀಣೆಯ ಬದಲು ಏಕತಾರಿಯನ್ನು ಕೊಡಲಾಗಿದೆ. ಅಲ್ಲಿ ತಂತಿಗಳಿಲ್ಲದಿರುವುದು ಇನ್ನೂ ವಿಶೇಷ.

ಒಂದು ಪಾದ ಕೆಂಪಾಗಿ, ಇನ್ನೊಂದು ಪಾದ ತೆಳು ಬಿಳಿಕೆಂಪಾದ ಮೈಬಣ್ಣ, ಎಡಗೈಗೆ ಅರ್ಧ ಕೆಂಪು, ಸೀರೆಯುಲ್ಲೊಂದಷ್ಟು ಕೆಂಪು, ಬಳಿದು ಸಮತೋಲಿಸಲಾಗಿದೆ. ಸರಸ್ವತಿಯ ಕಿರೀಟದ ಮೇಲೆ ಕೊನೆಯವರೆಗೂ ಸಮೃದ್ಧಿಯ ಸಂಕೇತವಾದ ಹಸಿರನ್ನು ಸಿಂಪಡಿಸಲಾಗಿದೆ. ಸರಸ್ವತಿ ಕುಳಿತ ಹಿನ್ನೆಲೆಯೆಲ್ಲಾ ಕಪ್ಪಾಗಿದ್ದು, ಕುಳಿತ ನೆಲವನ್ನು ಹಳದಿಯಾಗಿ ಚಪ್ಪಟೆ ವರ್ಣ ಬಳಸಲಾಗಿದೆ. ನವಿಲು ನಿಂತ ಸ್ಥಳವನ್ನು ಬೂದು ಮತ್ತು ಕೆಳಗೆ ನೆಲದಲ್ಲಿ ಕೆಂಪಾಗಿ ಚಿತ್ರಿಸಲಾಗಿದೆ. ಒಟ್ಟು ಕೆಂಪು ವರ್ಣವು ಬ್ರಹ್ಮನ ಕಮಲ, ಸರಸ್ವತಿಯ ಮೈಮೇಲೆ ನವಿಲಿಗೆ ಇಟ್ಟ ನೆಲ ಹಾಗೂ ನವಿಲಿನ ಮುಖದ ಮೇಲ್ಭಾಗದಲ್ಲಿ ಪಟ್ಟಿಯೊಂದರಲ್ಲಿ ಕೆಂಪಿರುವುದು ಇಡೀ ಚಿತ್ರವನ್ನು ಕೆಂಪು ಬಣ್ಣ ಸಮನಾಂತರವಾಗಿ ಆಳುತ್ತದೆ. ಇನ್ನು ಬ್ರಹ್ಮನ ಮುಖ, ಮೈ ಎಲ್ಲವೂ ಹೆಚ್ಚು ಹಳದಿ ಮಿಶ್ರಿತ ಕಂದಾಗಿರುವುದರಿಂದ ಸರಸ್ವತಿ ಕುಳಿತ ಜಾಗ ಏಕತಾರಿ, ಸರಸ್ವತಿ ಕಿರೀಟಗಳಿಗೆ ಬಳಸಿ ಹಳದಿಯನ್ನೂ ಸಮತೋಲನಗೊಳಿಸಲಾಗಿದೆ. ಬ್ರಹ್ಮ ಕುಳಿತ ಹಿನ್ನೆಲೆಯೂ ಕಪ್ಪಾಗಿದ್ದು, ಬ್ರಹ್ಮನ ಶರೀರವು ಎದ್ದು ಕಾಣುತ್ತದೆ. ಒಟ್ಟು ಚಿತ್ರವು ಬ್ರಹ್ಮ, ಸರಸ್ವತಿಯರ ಸೂಕ್ತ ಸಂಯೋಜನೆ ಮಾತ್ರ ಬೆರಗುಗೊಳಿಸುವಂತಹದಾಗಿದೆ. ಬ್ರಹ್ಮನ ಕೈಯೊಳಗಿನ ಬಿಳಿಯ ಕಮಲದ ಸಮತೋಲನೆಗಾಗಿ

ನವಿಲಿನ ಕೆಳಗಿರುವ ಕೆಂಪು ಬಣ್ಣದಲ್ಲಿ ಒಂದು ಬಿಳಿಯ ಬಣ್ಣದ ಕೋಳಿಯನ್ನು ಚಿತ್ರಿಸಲಾಗಿದೆ. ಒಟ್ಟು ಉತ್ತಮವಾದ ವರ್ಣ ಸಂಯೋಜನೆ ಚಿತ್ರ ಇದಾಗಿದ್ದು, ನಾಡಿನ ಹೆಮ್ಮೆಯ ಕನ್ನಡ ಭವನದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯನ್ನು ಪ್ರವೇಶಿಸುತ್ತಿದ್ದಂತೆ ಕಾಣುವ ಪ್ರಮುಖ ಸ್ಥಳದಲ್ಲಿ ಇದೆ.

೬. ಉರಿವ ಮಾನವ

ಮನುಷ್ಯನ ಮನಸ್ಸುಗಳಿಗೆ ಕಡಿವಾಣ ಹಾಕಲು ಸಾಧ್ಯವಿಲ್ಲ ಎಂಬ ಉಕ್ತಿಯಂತೆ ಈ ಚಿತ್ರವು ಮನುಷ್ಯ ಸಂಬಂಧಗಳ ಮಧ್ಯದ ಉರಿಯನ್ನು ಸಾಬೀತುಪಡಿಸುವಂತೆ ಸೃಷ್ಟಿಯಾಗಿದೆ. ಕಡುಹಳದಿ, ಅಲ್ಲಲ್ಲಿ ನೀಲಿ ಮತ್ತು ಬಿಳಿಯ ವರ್ಣದ ಬೆಂಕಿ ಜ್ವಾಲೆಯಲ್ಲಿ ಮನುಷ್ಯನೊಬ್ಬನನ್ನು ಇನ್ನೊಬ್ಬ ಮನುಷ್ಯ ಅವನ ಮಡಿಲಲ್ಲಿ ಮೊಗವಿಟ್ಟು ಸಾಂತ್ವನಗೊಳ್ಳುತ್ತಿದ್ದಾನೆ ಎನ್ನುವಂತೆ ಚಿತ್ರಿಸಲಾಗಿದೆ. ಹಿರಿಯ ಜೀವವೊಂದು ಅವನ ಬೆನ್ನ ಮೇಲೆ ಕೈ ಇಟ್ಟು ಸಮಾಧಾನಪಡಿಸುತ್ತಿರುವಂತೆ ಚಿತ್ರ ಗೋಚರವಾಗುತ್ತದೆ. ಇದೆಲ್ಲವೂ ನನಗೆ ಸಂಬಂಧವಿಲ್ಲ ಎನ್ನುವಂತೆ ಇನ್ನೊಂದು ಮಾನವಾಕೃತಿಯು ಆಕಡೆ ಮುಖ ಮಾಡಿ ಕುಳಿತಿರುವಂತೆ ಕಾಣುತ್ತದೆ.ಇನ್ನು ಒಟ್ಟು ಉರಿಯ ಮೇಲ್ಭಾಗದಲ್ಲಿ ಉರಿಯ ಒಳಗೆ ಮಿನುಕು ಮಿನುಕಾಗಿ ಮಾನವ ಆಕೃತಿಯೊಂದು ಕಾಣುತ್ತದೆ.

ಇಲ್ಲಿ ಕಲಾವಿದರು ಮಾನವನ ಹೊಟ್ಟೆಉರಿಯನ್ನು ವಾಸ್ತವ ಉರಿಯಂತೆ ಚಿತ್ರಿಸಿ ಮಾನವಾಕೃತಿಗಳನ್ನು ಸಂಯೋಜನೆಗೆ ತಕ್ಕಂತೆ ಇರಿಸಿದ್ದಾರೆ. ಅರ್ಥೈಸುವಾಗ ಹೇಗೆ ಅರ್ಥೈಸಿದರೂ ಇದು ಮಾತ್ರ ಸಾಮಾನ್ಯ ಭಾವನೆಗಳನ್ನು ಕೊಡುವ ಚಿತ್ರ ಅಲ್ಲವೇ ಅಲ್ಲ. ಕಲಾವಿದನ ತನ್ನೊಳಗಿನ ಅಮೂರ್ತ ಭಾವನೆಗಳನ್ನು ವ್ಯಕ್ತಪಡಿಸಲು ಉರಿಯ ಮೊರೆ ಹೋಗಿರುವಂತೆಯೂ ಭಾಸವಾಗುತ್ತದೆ. ಇಲ್ಲಿ ವಾಸ್ತವ ಬಣ್ಣ ಮತ್ತು ಹೇಳುವ ರೀತಿ ಒಂದೇ ಅರ್ಥವನ್ನು ನೀಡುವುದಿಲ್ಲ. ಸಾವಿರ ಶಬ್ದಗಳ ಶಕ್ತಿ ಇರುವ ಈ ಚಿತ್ರ ಉತ್ತಮ ಸಂಯೋಜನೆಯಾಗಿದೆ. ಕಲಾವಿದನ ಉದ್ವಿಗ್ನ ಭಾವನೆಯ ಪ್ರೇರಣೆಯಾಗಿದೆ.

೭. ಉಲ್ಲಾಸ

ಹೂವಿನೊಂದಿಗೆ ಹಾರಾಡುವ ಮೂರು ಮಾನವಾಕೃತಿಗಳು ತಮ್ಮ ಸಂತಸವನ್ನು ಹೂವಿಗೆ ತಿಳಿಸುವ, ಹೂವನ್ನು ಆಕರ್ಷಿಸುವ, ಆರಾಧಿಸುವ ಈ ಚಿತ್ರದಲ್ಲಿ ಮೇಲೆ ಸೂರ್ಯನಿದ್ದಾನೆ. ಸೂರ್ಯನಿಂದ ಬೆಳಕು, ಬೆಳಕಿನಿಂದ ನಿಸರ್ಗ, ನಿಸರ್ಗದಿಂದ ಸುಂದರ ವಸ್ತು, ಹೂವನ್ನು ಕಂಡು ಆನಂದಿಸುವ, ಹೂ ಮನಸ್ಸಿನ ಕುಣಿದಾಡುವ ಮಕ್ಕಳು ನೆಲದಿಂದ ಉಲ್ಲಾಸಗೊಂಡು ನೆಗೆಯುತ್ತಿರುವಂತೆ ಚಿತ್ರಿಸಿದ್ದಾರೆ. ಅಲ್ಲಲ್ಲಿ ತೆಳು ಹಸಿರು ಬಣ್ಣದ ಲೇಪನವಿದ್ದು ಸಮೃದ್ಧಿಯ ಸಂಕೇತವಾಗಿದೆ. ಸೂರ್ಯನೊಂದಿಗೆ ಹಗಲಿನಲ್ಲೂ ಗೋಚರವಾಗುವ ಚಂದ್ರ, ಗ್ರಹಗಳಂತೆ ಚುಕ್ಕೆಗಳನ್ನು ಇರಿಸಲಾಗಿದೆ. ಒಟ್ಟು ಚಿತ್ರವು ಇಲಕಲ್ಲಿನ ವಿಜಯ ಚಿತ್ರಕಲಾ ಮಹಾವಿದ್ಯಾಲಯದ ದಶಮಾನೋತ್ಸವದ ಉದ್ಘಾಟನೆಯ ಸಮಾರಂಭದಲ್ಲಿ ಹುಟ್ಟಿಕೊಂಡ ಐದು ನಿಮಿಷಗಳಲ್ಲಿ ರಚಿತವಾದ ಕಲಾಕೃತಿ. ಕಲಾವಿದನ ಕುಂಚದ ಶಕ್ತಿಗೆ ವಿಷಯ, ಸಮಯ ಇದ್ಯಾವುದು ಮಹತ್ವದ್ದೆನಿಸುವುದಿಲ್ಲ. ಆದರೆ ಅರ್ಥೈಸುವ, ಆದರಿಸುವ ಗುಣಗಳನ್ನು ಬೆಳಸಿಕೊಳ್ಳಬೇಕು ಎಂದು ಅಂದು ಸ್ವತಃ ಕಲಾವಿದರೇ ಸಭಿಕರ ಪ್ರಶ್ನೆಗೆ ಉತ್ತರಿಸಿದ್ದನ್ನು ಈ ಹಿನ್ನೆಲೆಯಲ್ಲಿ ನೆನಪಿಸಿಕೊಳ್ಳಬೇಕು.

## ೮. ತಾಯಿ, ಮಗು

ಚಿತ್ರದ ಮೂರ್ನಾಲ್ಕು ಅಂಶ ಭಾಗವು ಹಳದಿ ಬಣ್ಣದ ಹಿನ್ನೆಲೆ ವಿನ್ಯಾಸವನ್ನು ಹೊಂದಿದ್ದು, ಮೇಲ್ಭಾಗದಲ್ಲಿ ತೆಳುನೀಲಿ ವರ್ಣವನ್ನು ಚಪ್ಪಟೆಯಾಗಿ ಬಳಿಯಲಾಗಿದೆ. ಚಿತ್ರದಲ್ಲಿ ತಾಯಿ ತನ್ನ ಮಗುವನ್ನು ತಬ್ಬಿಕೊಂಡು ನಿಂತಿರುವ ಚಿತ್ರ ವಾಸ್ತವವಾಗಿ ಕಂಡರೂ ಅಲ್ಲಿರುವ ಮುಖದ ಭಾವನೆ ಕಪ್ಪು ವರ್ಣದ ಬದಿ ನೋಟವು ಚಿಂತಾಕ್ರಾಂತಳಾದ ಮಹಿಳೆಯ ಮುಖ ಕಾಣುತ್ತದೆ. ಅದರ ಹಿಂದೆ ಮಾತೃತ್ವದ ಸುಖ ಕಾಣುವ ಬಿಳಿಯ ವರ್ಣವೂ ಮುಖದಲ್ಲಿದೆ. ಎತ್ತರವಾದ ಕುತ್ತಿಗೆ ತಾಯಿಯ ಕಡೆಗೆ ಮುಖವಿರಬೇಕಾದ ಮಗುವನ್ನು ಪ್ರೇಕ್ಷಕರ ಕಡೆಗೆ ತಿರುಗಿಸಿ ಬಗಲಲ್ಲಿ ಎತ್ತಿಕೊಂಡಂತೆ ಇದೆ. ಮಗುವಿನ ಬಲ ಮೊಣಕಾಲನ್ನು ಮಡಿಚಿ ಬಿಳಿಯ ಬಣ್ಣದಲ್ಲಿ ಚಿತ್ರಿಸಲಾಗಿದೆ. ತಾಯಿ ಬಲಗೈಯಲ್ಲಿ ಮಗುವಿನ ಹೊಟ್ಟೆಯನ್ನು ಹಿಡಿದುಕೊಂಡು, ಎಡಗೈ ಖಾಲಿ ಹಸ್ತವನ್ನು ತೋರುತ್ತಾ ಹೊಟ್ಟೆಗಿಲ್ಲದ ಸಂಕೇತವನ್ನು ತೋರುವಂತಿದೆ. ಮಗುವಿನ ಮುಖದಲ್ಲೂ ಎರಡೆರಡು ಮುಖ ಕಾಣುತ್ತಿದ್ದು ಅಲ್ಲಿಯೂ ಕೂಡ ಹೆಚ್ಚು ಕತ್ತಲು ಬೆಳಕಿನ ಸಂಯೋಜನೆ ಇದೆ. ತಾಯಿಯ ಎದೆಯ ಭಾಗವನ್ನು ಹೊರತೆಗೆದು ಹೊಟ್ಟೆಗಿಲ್ಲದ ಮಗುವಿನ ಮತ್ತು ತನ್ನ ಸಮಸ್ಯೆಯನ್ನು ಹೇಳಿಕೊಳ್ಳುತ್ತಿರುವಂತೆ ಸಾಮಾನ್ಯವಾಗಿ ಕಂಡರೂ ಕಡುಗೆಂಪು ಬಣ್ಣವು ತಕ್ಷಣ ಆಕರ್ಷಿಸುತ್ತದೆ. ಹಾಗೆಯೇ ಇನ್ನೊಂದು ಮೂಲ ವರ್ಣ ಹಳದಿಯೂ ತನ್ನ ಛಾಪನ್ನು ಪ್ರಖರವಾಗಿ ನೀಡುವುದರಿಂದ ಒಟ್ಟು ಕಲಾವಿದರ ಭಾವನೆಯ ಸಂಕೇತಗಳನ್ನು ಮಾತ್ರ ಇಲ್ಲಿ ಅಂದಾಜಿಸಬಹುದು.

ವಿಜಯ ಸಿಂಧೂರ ಅವರು ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಬನಹಟ್ಟಿಯಲ್ಲಿ ಜೂನ್ ೭, ೧೯೪೦ರಂದು ಜನಿಸಿದರು. ಮುಂಬೈ ಜೆ.ಜೆ. ಕಲಾಶಾಲೆಯಿಂದ ೧೯೬೪ರಲ್ಲಿ ಜಿ.ಡಿ. ಆರ್ಟ್ ಪದವಿ ಪಡೆದರು. ಮುಂಬೈ ಜಾಹಂಗೀರ್ ತಾಜ್ ಗ್ಯಾಲರಿಯಲ್ಲಿ, ಬೆಂಗಳೂರು, ಹೈದ್ರಾಬಾದ್, ದೆಹಲಿ, ಕಲ್ಕತ್ತಾ ಹಾಗೂ ಭಾರತದ ಇತರ ಪ್ರಮುಖ ನಗರಗಳಲ್ಲಿ ಪ್ರದರ್ಶನ ಏರ್ಪಡಿಸಿದ್ದಾರೆ. ವಿದೇಶದಲ್ಲೂ ಗ್ರೂಫ್ ಶೋನಲ್ಲಿ ಭಾಗವಹಿಸಿದ್ದಾರೆ. ೧೯೮೫ರಲ್ಲಿ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ೧೯೯೧ರಲ್ಲಿ ರಾಜ್ಯೋತ್ಸವ ಪ್ರಶಸ್ತಿ, ೨೦೦೫ರಲ್ಲಿ ರಾಜ್ಯ ಲಲಿತಕಲಾ ಅಕಾಡೆಮಿಯ ೧ ಲಕ್ಷ ರೂಪಾಯಿ ಮೊತ್ತದ ವೆಂಕಟಪ್ಪ ಪ್ರಶಸ್ತಿಯೂ ಇವರಿಗೆ ಲಭಿಸಿದೆ. ಇವರ ಕೃತಿಗಳು ರಾಜ್ಯ, ದೇಶ ಹಾಗೂ ವಿದೇಶದಲ್ಲೂ ಸಂಗ್ರಹದಲ್ಲಿವೆ.

## ೯. ಮಂಗನಂತಹ ಮಾನವ

ಕನ್ನಡ ವಿಶ್ವವಿದ್ಯಾಲಯ, ೨೦೦೬ರಲ್ಲಿ ಸೇವಾನಿರತ ಎಂ.ವಿ.ಎ. ತರಗತಿಗಳಲ್ಲಿ ಎರಡು ದಿನಗಳ ಕಾಲ ಪ್ರಾತ್ಯಕ್ಷಿಕೆ ನಡೆಸಿದ ಸಂದರ್ಭದಲ್ಲಿ ವಿಜಯ ಸಿಂಧೂರ ಅವರು ರಚಿಸಿದ ಕೃತಿ ಇದು. ಆ ಸಂದರ್ಭದಲ್ಲಿ, ಮುನ್ನಾದಿನ ಹಂಪಿಯಲ್ಲಿ ಓಡಾಡಿಕೊಂಡಿದ್ದ ಸಿಂಧೂರ ಅವರ ಮನಸ್ಸಿನ ಮೇಲೆ ಪ್ರಭಾವ ಬೀರಿದ ಮಂಗಗಳು ಮಾನವರು ಅವರ ಅಂತರ ಹೀಗೆ ವರ್ಣಮಯ ಚಿತ್ರವೊಂದನ್ನು ರಚಿಸಬೇಕೆನ್ನುವ ಗುರಿ ಹೊಂದಿದ್ದೇ ಈ ಕೃತಿ ರಚನೆಗೆ ಕಾರಣವಾಯಿತು. ಚಿತ್ರದಲ್ಲಿ ಮಂಗವು ದೊಡ್ಡ ಕಟ್ಟಿಗೆಯ ಬೊಡ್ಡೆಯ ಮೇಲೆ ಕುಳಿತು ಒಂದು ಕೈಯನ್ನು ತೊಡೆಯ ಮೇಲೆ ಇನ್ನೊಂದು ಕೈಯನ್ನು ತೊಡೆಯ ಸಂದಿಯಲ್ಲಿಟ್ಟುಕೊಂಡು ಬದಿಯ ನೋಟದ ಚಿತ್ರ ಇದಾಗಿದೆ. ಆಕಾಶದಲ್ಲಿ ನೀಲಿ, ನೀಲಿಯ ಜೊತೆಗೆ

ಹಸಿರು ಬಣ್ಣದ ಸಿಂಚನವನ್ನು ನೀಡಲಾಗಿದೆ. ಕಲ್ಲು ಬಂಡೆಗಳಿಗೆ ಬೂದು ಮತ್ತು ತೆಳು ನೀಲಿ ಬಣ್ಣಗಳನ್ನು ಹಾಕಲಾಗಿದೆ. ಇಡೀ ಚಿತ್ರದುದ್ದಕ್ಕೂ ಬಿಳಿಯ ಬಣ್ಣವು ಅಲ್ಲಲ್ಲಿ ಗೋಚರಿಸಿದೆ. ಹಸಿರು ಹೆಚ್ಚು ಪ್ರಮಾಣದಲ್ಲಿ ಇರುವ ಚಿತ್ರದಲ್ಲಿ ಸಮೃದ್ಧಿಯ ಸಂಕೇತವೂ ಎದ್ದು ಕಾಣುತ್ತದೆ. ಮಂಗನಂತಿರುವ ಮಾನವ ಮೈಮೇಲೆಲ್ಲಾ ಕಂದು, ಹಸಿರು, ನೀಲಿ, ಹಳದಿ ಮತ್ತು ಕಡುಗೆಂಪು ಬಣ್ಣಗಳ ಸಮಗ್ರ ಮಿಶ್ರಣದಿಂದ ಅಂದವಾಗಿ ಎಲ್ಲಿಯೂ ಅಪಾರ್ಥವಾಗದಂತೆ ಸೃಷ್ಟಿಯಾಗಿದೆ. ಇನ್ನು ಕುಳಿದುಕೊಂಡ ಮರದ ಬೊಡ್ಡೆಯೂ ವರ್ಣರಂಜಿತವಾಗಿ ನೀಲಿ, ಹಳದಿ, ಕೆಂಪು ಬಣ್ಣಗಳಿಂದ ಸೃಷ್ಟಿಯಾಗಿದೆ. ಚಿತ್ರದಲ್ಲಿ ಬಲಗಾಲನ್ನು ಮುಂದೆ ಚಾಚಿದ, ಎಡಗಾಲನ್ನು ಮಡಿಚಿ ಇಟ್ಟುಕೊಂಡು ಮಂಗನಂತಿರುವ ಮಾನವನಿಗೆ ಮಂಗ ಎನ್ನುವುದಾದರೆ ಇಲ್ಲಿ ಬಾಲವಿಲ್ಲದಿರುವುದೂ ವಿಶೇಷ. ಕಡುಗೆಂಪು ಬಣ್ಣದ ಬಂಡೆಗಲ್ಲುಗಳ ಸಂದಿಯಲ್ಲಿ ಎಲ್ಲಾ ಬಣ್ಣಗಳಿಗೆ ಸಂಯೋಜನೆಯನ್ನು ನೀಡುವ ಕಪ್ಪು ಬಣ್ಣ ನೇರವಾಗಿ ಕೆಲವು ಕಡೆ ಬಳಸಲಾಗಿದೆ. ಮಂಗನಂತಹ ಆದಿಮಾನವನ ಮುಖವನ್ನು ಹೊಂದಿದ ಈ ಚಿತ್ರ ಪ್ರಸ್ತುತ ಬದುಕಿನ ಮಂಗನಂತಿರುವ ಮಾನವ ಮನಸ್ಸುಗಳ ಸಾಕ್ಷಿಯಾಗಿದೆ. ಕಲಾವಿದರು ಈ ಕಲಾಕೃತಿಯನ್ನು ಕುರಿತು ಚರ್ಚಿಸುವಾಗ ಮಂಗ, ಮಾನವ ಮಧ್ಯದ ಬಾಲವಿಲ್ಲದ ಬದುಕು ಅದರ ಭಾವನೆಗಳನ್ನು, ಆಕೃತಿ, ವರ್ಣಸಂಕೇತಗಳ ಮೂಲಕ ಅರ್ಥೈಸಿಕೊಂಡರೆ ಕಲಾಕೃತಿಯ ತಾತ್ಪರ್ಯ ಪ್ರಕಟವಾಗುತ್ತದೆ ಎಂದಿರುವುದು ಗಮನಾರ್ಹ.

**೧೦. ಬಸವಣ್ಣನವರು**

ನಾಡಿನ ಬಹುತೇಕ ಕಲಾವಿದರು ಚಿತ್ರಿಸಿದ ಬಸವಣ್ಣನವರ ಕಿರೀಟಧಾರಿ, ಅಶ್ವಾರೂಢ, ಲಿಂಗಪೂಜಾನಿರತ ಇವೆಲ್ಲವುಗಳಿಗಿಂತ ಸಿಂಧೂರ ಅವರ ಈ ಬಸವಣ್ಣನವರ ಕುಳಿತ ಭಂಗಿ ತುಂಬಾ ವಿಶೇಷವಾಗಿದೆ. ಬಾಗಲಕೋಟೆಯ ಬಸವೇಶ್ವರ ವಿದ್ಯಾವರ್ಧಕ ಸಂಘದ ಇಂಜನಿಯರಿಂಗ್ ಕಾಲೇಜಿನ ಸಭಾಭವನದಲ್ಲಿ ವಿರಾಜಮಾನವಾದ ಈ ಕಲಾಕೃತಿ ಬಸವಣ್ಣನವರು ಕುಳಿತಿರುವ ಚಿತ್ರ ತುಂಬಾ ವಿಭಿನ್ನವೆನಿಸುವುದು. ಏಕೆಂದರೆ ತೀರಾ ತೆಳುವಾದ ಬಣ್ಣಗಳಲ್ಲಿ ಬಸವಣ್ಣನವರು ತಪೋನಿರತರಂತೆ ಕುಳಿತ ಚಿತ್ರ ತೀರಾ ವಿರಳ. ಇಲ್ಲಿ ಎರಡೂ ಹಸ್ತಗಳನ್ನು ಕಟ್ಟಿ ಪದ್ಮಾಸನದಲ್ಲಿ ಬರೀಮೈಯಲ್ಲಿ ಕುಳಿತ ಬಸವಣ್ಣನವರ ಹಿನ್ನೆಲೆಗೆ ಕೂಡಲ ಸಂಗಮದ ಐಕ್ಯ ಮಂಟಪವನ್ನು ಚಿತ್ರಿಸಲಾಗಿದೆ.

ಅಲ್ಲಲ್ಲಿ ಹಸಿರು ಪಟ್ಟಿಗಳಿಂದ ಆಕಾಶ ಮತ್ತು ನೆಲಗಳನ್ನು ಬೆಸೆಯಲಾಗಿದೆ. ಕುಳಿತ ನೆಲದಲ್ಲೂ ಆಕಾಶದ ಬಣ್ಣವನ್ನೇ ಪುನರಾವರ್ತಿಸಿ ಅಗಮ್ಯ, ಅಗೋಚರತೆಗಳನ್ನು ತೋರಲು ಪ್ರಯತ್ನಿಸಿದಂತಿದೆ. ಶಿವನ ವಾಹನವಾದ ನಂದಿಯು ಬಲಬದಿಯಲ್ಲಿದೆ. ದೇವಸ್ಥಾನಗಳಲ್ಲಿರುವ ನಂದಿ ವಿಗ್ರಹವು ಬಸವಣ್ಣನವರಂತೆಯೇ ಮೈಬಣ್ಣವನ್ನು ಹೊಂದಿದೆ. ಮುಂದೆ ಎರಡು ಚಿಕ್ಕ, ಎರಡು ದೊಡ್ಡ ಹೆಜ್ಜೆಗಳನ್ನು ಚಿತ್ರಿಸಲಾಗಿದ್ದು, ನಂದಿಯೇ ಶಿವನ ವಾಹನ ಮುಂದೆ ಬಸವಣ್ಣನಾಗಿ ಚಿತ್ರಿಸಲಾಗಿದೆ. ಇಲ್ಲಿ ಬಸವ ತತ್ವದ ಪ್ರಕಾರ ನಂದಿಗೂ, ಬಸವಣ್ಣನವರಿಗೂ ಅಜಗಜಾಂತರ ವ್ಯತ್ಯಾಸವಿದೆ. ಆ ಬಸವಣ್ಣನೇ ಬೇರೆ, ನಂದಿಯೇ ಬೇರೆ ತತ್ವಾದರ್ಶಗಳನ್ನು ಹೇಳುವುದಾದರೆ ಬಸವಣ್ಣನವರು ಹೀಗಿದ್ದರು ಎನ್ನುವುದನ್ನು ಮಾತ್ರ ಹೇಳಬಹುದಿತ್ತು. ನಂದಿಯ ವಿಗ್ರಹವು ಬಸವಣ್ಣನವರಿಗೆ ಸಂಬಂಧಿಸುವುದಿಲ್ಲ. ಎತ್ತನ್ನು ಬಸವಣ್ಣನೆಂದು

ಪೂಜಿಸುವುದು ಕೂಡ ಬಸವಣ್ಣನವರ ವ್ಯಕ್ತಿತ್ವಕ್ಕೆ ಸಂಬಂಧವಿಲ್ಲ. ನಂದಿಯಂತಿರುವ ಬಸವಣ್ಣನೇ ಬೇರೆ, ಬಸವಣ್ಣನವರ ವ್ಯಕ್ತಿ ಭಾವ ಚಿತ್ರವೇ ಬೇರೆ ಹೀಗಿರುವಾಗ ಎರಡನ್ನೂ ಒಂದೇ ಕಡೆ ಸೇರಿಸಿ ಹೆಜ್ಜೆಗಳನ್ನಿರಿಸಿ ಯಾವ ತತ್ವದ ಆಧಾರದ ಮೇಲೆ ಈ ಚಿತ್ರವನ್ನು ಹೀಗೆ ರಚಿಸಿದರೆಂಬುದು ತಿಳಿಯುವುದಿಲ್ಲ. ಬಸವಣ್ಣನವರ ಮುಖಚಹರೆ, ವಿಭೂತಿಯಿಂದ ತುಂಬಿದ ಹಣೆ, ಕೊರಳಲ್ಲಿ ರುದ್ರಾಕ್ಷಿ, ಲಿಂಗ ಕಡುಗೆಂಪು ಬಣ್ಣದ ಧೋತ್ರವನ್ನು ಉಡಿಸಿದ್ದು, ಕಾಲು ಪಾದಗಳ ಅಸ್ಪಷ್ಟತೆ ನೆಲದೊಂದಿಗೆ ಮಿಶ್ರಣಗೊಂಡಿದ್ದು, ತುಂಬಾ ತೆಳುವಾದ ಬಣ್ಣಗಳಲ್ಲಿ ಶಾಂತವಾದ ಬಸವಣ್ಣನವರನ್ನು ಚಿತ್ರಿಸಿದ್ದು ಇಲ್ಲಿ ಗಮನಾರ್ಹ ಸಂಗತಿ. ಆದರೆ ಶಿವನ ಮುಂದೆ ಕುಳಿತ ನಂದಿಯಂತೆ ಚಿತ್ರ ಹೊಂದಿರುವುದು ಸಹೃದಯಿ ಪ್ರೇಕ್ಷಕರಿಗೆ ಯೋಚನೆಗೆ ಹಚ್ಚುವಂತೆ ಚಿತ್ರಿಸಲಾಗಿದೆ. ಒಟ್ಟು ಚಿತ್ರವು ತೆಳು ಬಣ್ಣಗಳ ಎಲ್ಲಾ ಆಯಾಮಗಳನ್ನು ಪಡೆದು ಸಂಯೋಜನಾಬದ್ಧ ಚಿತ್ರವಾಗಿದೆ.

### ೧೧. ಸಂಭ್ರಮ

ಸಾಮಾನ್ಯವಾಗಿ ಚಿತ್ರ ರಚನೆಯಲ್ಲಿ ಕ್ಯಾನ್ವಾಸಿನ ಕೆಳಬದಿಯ ಆರಂಭವು ಹೆಚ್ಚು ಕಡುವಾಗಿದ್ದು, ಮುಂದೆ ಹೋದಂತೆ ತೆಳುವಾಗುವುದು ಸಹಜ. ಕಲಾವಿದ ಹೆಚ್ಚು ಪ್ರಬುದ್ಧನಾಗುತ್ತಾ ಹೋದಂತೆ ನಿಯಮಾವಳಿಗಳನ್ನೆಲ್ಲಾ ಮುರಿಯುತ್ತಾ ಹೋಗುತ್ತಾನೆ ಎನ್ನುವುದಕ್ಕೆ ಸಿಂಧೂರರ ಈ ಚಿತ್ರ ಸಾಕ್ಷಿಯಾಗಿದೆ. ಚಿತ್ರದಲ್ಲಿ ತೆಳು ಕೇಸರಿ ಬಣ್ಣದ ನೆಲದಿಂದ ಆರಂಭವಾದ ಈ ಚಿತ್ರ ಹಸಿರು ಮತ್ತು ಹಳದಿ ಬಣ್ಣದ ಮನುಷ್ಯಾಕೃತಿಗಳಿಂದ ಮುಂದುವರೆದು ನೇರವಾದ ಕ್ರಿಮ್‌ಸನ್ ರೆಡ್‌ನ್ನು ಇಡೀ ಕ್ಯಾನ್ವಾಸ್‌ಗೆ ಹರಡಿದ ನೂತನ ಪ್ರಯೋಗ ಮಾಡಲಾಗಿದೆ. ಮಧ್ಯದ ಆಕೃತಿಗಳಲ್ಲಿ ಸಂಭ್ರಮದಿಂದ ಕುಣಿದಾಡುತ್ತಿರುವ ಜನ ಗೋಚರವಾದರೆ ಒಂದು ಬದಿಯಲ್ಲಿ ಸೀರೆ ಉಡಿಸಿ ಕೆಳದಡಿಯೊಂದಿಗೆ ಕೆಂಪು ಬಣ್ಣದ ಕೋರೆ ಹಲ್ಲುಗಳಿರುವ ಗ್ರಾಮದೇವತೆಯನ್ನು ಬಲಬದಿಯಲ್ಲಿ ಒಂದು ವಿಶಿಷ್ಟ ಚೌಕಟ್ಟಿನಲ್ಲಿ ಇರಿಸಲಾಗಿದೆ. ಗ್ರಾಮೀಣ ಪರಿಸರದ ಜಾತ್ರೆ ಸಂಭ್ರಮ ಇದಾಗಿದ್ದು, ಅಲ್ಲಿ ಹಳದಿ, ಹಸಿರು ಮತ್ತು ಬಿಳಿ ಒಂದೆಡೆಯಾದರೆ ಹಳದಿ, ಕೇಸರಿ, ಕೆಂಪು ಸಮೃದ್ಧ ವರ್ಣಗಳು ಜಾತ್ರೆಗೆ ಬಂದವರ ಹೊಸ ಬಟ್ಟೆ ಸಂಭ್ರಮಗಳನ್ನು ಸೂಚ್ಯವಾಗಿ ತೋರುವಂತಿದೆ. ವರ್ತುಳಾಕಾರದ ಬಲೂನುಗಳು ಜಾತ್ರೆಯ ಇತರೆ ವಸ್ತುಗಳು ಅಸ್ಪಷ್ಟವಾಗಿ ಕೆಂಪು ಬಣ್ಣದಲ್ಲಿ ಸ್ವಲ್ಪ ಬಿಳಿ, ಸ್ವಲ್ಪ ಕಪ್ಪು ಬಣ್ಣಗಳ ಮಿಶ್ರಣದಿಂದ ಚೌಕಟ್ಟು ಮತ್ತು ಆಕೃತಿಗಳನ್ನು ಸ್ಪಷ್ಟೀಕರಿಸಲಾಗಿದೆ. ಕುಣಿಯುವ, ಸಂಭ್ರಮಿಸುವ ಮನುಷ್ಯರ ಮಧ್ಯದಲ್ಲಿಯೂ ಆಕಾಶದ ಕೆಂಪನ್ನು ತಂದು ಸಮತೋಲನ ಕಾಯ್ದುಕೊಳ್ಳಲಾಗಿದೆ. ಒಟ್ಟು ಚಿತ್ರವು ಕೆಂಪು, ಹಸಿರು, ಕೇಸರಿ, ಅಲ್ಪಸ್ವಲ್ಪ ಹಳದಿ ಮತ್ತು ಬಿಳಿಗಳಿಂದ ಸಂಯೋಜಿತವಾಗಿದೆ.

### ೧೨. ಹನುಮಂತ

ಹಳ್ಳಿಗಳಲ್ಲಿನ ಹನುಮಂತ ದೇವರ ಗುಡಿ ಪರಿಕಲ್ಪನೆಯನ್ನು ನೀಡುವ ಈ ಚಿತ್ರದಲ್ಲಿ ಮಧ್ಯಭಾಗವು ಕಪ್ಪು ಮಿಶ್ರಿತ ನೀಲಿಯಾಗಿದ್ದು, ಗರ್ಭಗುಡಿಯ ಒಳ ಅರ್ಥವನ್ನು ನೀಡುತ್ತದೆ. ಅಲ್ಲಲ್ಲಿ ಬಿಳಿ ಮತ್ತು ಬೂದು ವರ್ಣಗಳಿಂದ ಹನುಮಂತ ದೇವರ ಮೂರ್ತಿಯನ್ನು ಚಿತ್ರಿಸಲಾಗಿದೆ. ವಿಶೇಷವೆಂದರೆ ಗುಡಿಗಳಲ್ಲಿ

ಹನುಮಂತ ಎಡಗೈಯಲ್ಲಿ ಸಂಜೀವಿನಿ ಪರ್ವತವನ್ನು ಹಿಡಿದು, ಬಲಗೈಯಿಂದ ಆಶೀರ್ವಾದ ಮಾಡುವ ಹನುಮಂತನ ಮೂರ್ತಿಗಳಿರುವುದು ಸಹಜ. ಆದರೆ ಇಲ್ಲಿ ಸಿಂಧೂರ ಅವರು ಎಡಗೈಯನ್ನು ಹನುಮಂತ ತನ್ನ ಸೊಂಟದ ಮೇಲಿಟ್ಟುಕೊಂಡು, ಬಲಗೈಯನ್ನು ಮೇಲೆತ್ತಿ ತೋರ್ಬೆರಳನ್ನು ಮುಂದೆ ಮಾಡಿರುವಂತೆ ಚಿತ್ರಿಸಲಾಗಿದೆ. ದೇವರನ್ನು ಹೀಗೆ ಹೀಗೆ ಚಿತ್ರಿಸಬೇಕೆಂಬ ನಿಯಮಗಳಿದ್ದರೂ ಕಂಟೆಂಪ್ರರಿ ಆಧುನಿಕ ಶಿಸ್ತಿನಲ್ಲಿ ಬೇರೆ ಬೇರೆ ಅರ್ಥಗಳನ್ನು ಕಲ್ಪಿಸಬಹುದಾಗಿದೆ. ಇಲ್ಲಿ ಹನುಮಂತನಿಗೆ ಕಿರೀಟವಿಲ್ಲ. ಒಂದು ಕಾಲು ಕಪ್ಪು, ಒಂದು ಕಾಲಿನ ಅರ್ಧ ಭಾಗಕ್ಕೆ ಕಪ್ಪು, ಹೊಟ್ಟೆ ಅರ್ಧಭಾಗಕ್ಕೆ ಕಪ್ಪು, ಎಡಗೈ ಅರ್ಧ ಕೆಂಪು, ಚಡ್ಡಿ ಮತ್ತು ಅದರ ಕೆಳಗಿನ ತೊಡೆ ಸ್ವಲ್ಪ ಕೆಂಪು, ಬಲಗೈ ಮುಂಗೈ ಕೆಂಪು, ಪಾದದ ಮೇಲೆ ಹೊರರೇಖಾ ವಿನ್ಯಾಸಗಳು ಕೆಂಪಾಗಿ ಚಿತ್ರಿಸಿ ಬಾಲದ ಆರಂಭದ ಭಾಗವು ಕೆಂಪಾಗಿದ್ದು, ಮುಂದೆ ಸಂಪೂರ್ಣ ಬಿಳಿಯದಾಗಿದೆ. ಮುಖ, ಬಲಗೈ, ಮುಂಗೈ, ಎಡಗೈ ರಟ್ಟೆ, ಅರ್ಧ ಹೊಟ್ಟೆ ಮುಂತಾದವು ಬಿಳಿಯ ಬಣ್ಣದಿಂದ ಪೂರ್ಣಗೊಳಿಸಲಾಗಿದೆ. ಗುಡಿಯ ಹೊರಭಾಗವನ್ನು ಸಿಮೆಂಟಿನ ಕಚ್ಚು ಹಾಕಿದ ಅರ್ಧಮುರ್ಧ ಕಟ್ಟಿದ ಕಟ್ಟಡದಂತಿದ್ದು, ಒಂದು ಕಡೆ ಬೂದು ಬಣ್ಣದಲ್ಲಿ ನಾಗಪ್ಪನ ಚಿತ್ರವನ್ನು ಬರೆಯಲಾಗಿದೆ. ಇನ್ನೊಂದು ಬದಿಯಲ್ಲಿ ಕುಳಿತ ಪೂಜಾರಿಯ ಚಿತ್ರವನ್ನು ಕಂಡೂ ಕಾಣದಂತೆ ಚಿತ್ರಿಸಲಾಗಿದೆ. ಇಲ್ಲಿ ಗರ್ಭಗುಡಿಯೊಳಗಿರುವ ಹನುಮಂತ ತನ್ನ ಬಲಗೈಯನ್ನು ಬಾಗಲಿನಿಂದ ಹೊರಗೆ ಹಾಕಿದಂತೆ ಮತ್ತು ಬಾಲವನ್ನೂ ಬಾಗಿಲಿನಿಂದ ಹೊರಗೆ ತಂದು ಮತ್ತು ಒಳಗೆ ಒಯ್ಯಲಾಗಿದೆ. ಅವಾಸ್ತವಿಕ ಎನಿಸಿದರೂ ಕಲಾವಿದನ ತರ್ಕ, ಸ್ವಾತಂತ್ರ್ಯ, ಸಂಯೋಜನೆಗಳನ್ನು ಪ್ರಶ್ನಿಸುವಂತಿಲ್ಲ. ಒಟ್ಟು ಮೂರು ಬಣ್ಣಗಳಲ್ಲಿ ಅದ್ಭುತವಾದ ಸಂಯೋಜನೆ ಇದಾಗಿದೆ.

೧೯೪೧ರಲ್ಲಿ ಜನಿಸಿದ ಡಾ.ಬಿ.ಕೆ. ಹಿರೇಮಠ ಅವರು ಕನ್ನಡದಲ್ಲಿ ಎಂ.ಎ. ಪದವಿಧರರು, ಬಹುಮುಖ ಪ್ರತಿಭಾವಂತರಾದ ಡಾ.ಬಿ.ಕೆ. ಹಿರೇಮಠ ಅವರ ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ ಎಂಬ ಪ್ರಬಂಧಕ್ಕೆ ಕರ್ನಾಟಕ ವಿಶ್ವವಿದ್ಯಾಲಯವು ೧೯೮೮ರಲ್ಲಿ ಪಿಎಚ್.ಡಿ. ಪದವಿಯನ್ನು ನೀಡಿದೆ. ಕರ್ನಾಟಕದ ಕಲಾ ಇತಿಹಾಸದಲ್ಲಿ 'ಹಸ್ತಪ್ರತಿಗಳ ಕಲಾವಿನ್ಯಾಸ' ಎಂಬುದು ಚಿತ್ರಕಲೆಗೆ ಸಂಬಂಧಿಸಿದ ಮೊದಲ ಸಂಶೋಧನೆ ಅಧ್ಯಾಯ ದಾಖಲಾರ್ಹ ಸಂಗತಿ. ೧೯೬೬-೬೭ ಎ.ಎಂ.ಜಿ.ಡಿ. ಆರ್ಟ್ ಜಿ.ಡಿ. ಮಾಡಲಿಂಗ್ ಪದವಿಯನ್ನು ಪಡೆದಿದ್ದಾರೆ. ೧೯೭೨-೭೩ರಲ್ಲಿ ಬೆಂಗಳೂರು ಮತ್ತು ಹುಬ್ಬಳ್ಳಿಯಲ್ಲಿ ಏಕವ್ಯಕ್ತಿ ಕಲಾಪ್ರದರ್ಶನಗಳನ್ನು ನಡೆಸಿದ್ದಾರೆ. ೧೯೯೧-೯೫ರವರೆಗೆ ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ೧೯೯೫ರಲ್ಲಿ ರಾಜ್ಯ ಲಲಿತಕಲಾ ಅಕಾಡೆಮಿಯ ವಾರ್ಷಿಕ ಪ್ರಶಸ್ತಿ ಇವರಿಗೆ ಲಭಿಸಿದೆ. ಬಸವೇಶ್ವರ ಕಲಾ ಮಹಾವಿದ್ಯಾಲಯದಲ್ಲಿ ಸೇವೆ ಸಲ್ಲಿಸಿ ಇತ್ತೀಚೆಗೆ ಸ್ನಾತಕೋತ್ತರ ಪದವಿಯ ಮುಖ್ಯಸ್ಥರಾಗಿ ನಿವೃತ್ತಿ ಹೊಂದಿದ್ದಾರೆ. ಅನೇಕ ಗ್ರಂಥಗಳ ಕರ್ತೃಗಳಾದ ಇವರ ಮಾರ್ಗದರ್ಶನದಲ್ಲಿ ಹಲವಾರು ಜನರು ಪಿಎಚ್.ಡಿ. ಪದವಿಗಳನ್ನು ಪಡೆದಿದ್ದಾರೆ.

## ೧೩. ವಿಶ್ವರೂಪ ದರ್ಶನ

ಕಲಾಕೃತಿಗಳು ಮಾನವನ ಮನಸ್ಸು, ಕೈ ಮತ್ತು ಹೃದಯಗಳು ಕೂಡಿ ಮಾಡುವ ಕೌಶಲ. ಸಾಂಸ್ಕೃತಿಕ ಹಿನ್ನೆಲೆ ಹಾಗೂ ಸಾಮಾಜಿಕ ಚಿಂತನೆಗಳ ಫಲವಾಗಿ ಕಲಾಕೃತಿ ಹುಟ್ಟಲು ಕಾರಣವಾಗುತ್ತದೆ. ಮೂಲತಃ ಚಿಂತನಶೀಲರಾದ ಬಿ.ಕೆ. ಹಿರೇಮಠರು ಸಹಜವಾಗಿಯೇ ದೈವಪ್ರಜ್ಞೆ, ವಿಶ್ವಪ್ರಜ್ಞೆ ಹೊಂದಿರುವಂತವರು. ಭಗವದ್ಗೀತೆಯ ವಿಶ್ವರೂಪದ ಶ್ಲೋಕವನ್ನು ನೆನಪಿಸುವ ಈ ಕೃತಿಯಲ್ಲಿ ವಿಶ್ವರೂಪ ತೋರುವ ಕೃಷ್ಣನಿಗೆ ಬದಲಾಗಿ ವಿಶ್ವವನ್ನಾಧರಿಸಿದ ಓಂಕಾರ, ಅದೇ 'ಸತ್' ಆಗಿದೆ. ಮಾತಿಗೂ, ಆಕಾರಕ್ಕೂ ನಿಲುಕದ ಶಕ್ತಿಯ ಪ್ರತೀಕವದು. ಕ್ಯಾನ್ವಸ್ಸಿನ ಮೇಲೆ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಉಬ್ಬು ಚಿತ್ರದಂತೆ ರಚಿಸಿ ಬಂಗಾರ ಲೇಪಿಸಿ ಅದರಲ್ಲಿ ಓಂಕಾರವನ್ನು ತೇಜ ಪುಂಜದಂತಿರುವ ವರ್ತುಲದಲ್ಲಿ ಸೂಚಿಸಲಾಗಿದೆ. ಅನೇಕಾನೇಕ ಕೈಗಳು, ಆಯುಧಗಳು, ಪಾದಗಳು ಎಲ್ಲೆಲ್ಲೂ ವ್ಯಾಪಿಸಿಕೊಂಡಂತೆ ಸತ್ ಎಂಬುದು ಎಲ್ಲ ದಿಕ್ಕುಗಳಲ್ಲಿ ವ್ಯಾಪಿಸಿಕೊಂಡಿರುವುದನ್ನು ಬಿಂಬಿಸಿದೆ. ಪ್ಲಾಸ್ಟರ್‌ನಲ್ಲಿ ಬಳಸಿಕೊಂಡು ಮಾಡಿದ ಚಕ್ರವಿರುವ ಅಂಗಾಲುಗಳು ಇಡೀ ಕಲಾಕೃತಿಯ ಕೆಳಭಾಗದಲ್ಲಿ ತೆಳುಗೆಂಪು ಬಣ್ಣದಲ್ಲಿವೆ. ಚಿತ್ರದ ಆಂತರ್ಯ ಹಳದಿ ಮತ್ತು ಕೇಸರಿ ವರ್ಣದಾಗಿದ್ದು, ಬಿಳಿದಾದ ಅಕ್ಷರಗಳಲ್ಲಿ ಓಂ ಒಂದನ್ನು ವರ್ತುಲದಲ್ಲಿ ಇರಿಸಿ ತತ್, ಸತ್ ಎಂಬ ಅಕ್ಷರಗಳನ್ನು ಚದುರಿ ವ್ಯಾಪ್ತಿಗೊಳ್ಳುವಂತೆ ಕಲ್ಪಿಸಲಾಗಿದೆ. ಕೆಳಗೆ ಎಡಗಡೆ ಅವರ ಎಲ್ಲಾ ಕೃತಿಗಳಲ್ಲಿರುವಂತೆ ಚೂಪು ಮುಖದ ದೊಡ್ಡ ಕಣ್ಣುಳ್ಳ ಆಕೃತಿಯನ್ನು ಅಡ್ಡಲಾಗಿ ರಚಿಸಲಾಗಿದೆ. ವಿಶ್ವರೂಪವನ್ನು ಕಂಡು ಬೆರಗಾದ ಅರ್ಜುನ, ಆ ವಿಶ್ವಶಕ್ತಿಗೆ ವಿನೀತವಾಗಿ ನಮಸ್ಕರಿಸುತ್ತಿದ್ದಾನೆ. ಕೊನೆಯ ಮೇಲ್ಭಾಗದಲ್ಲಿ ಕೈಯ ಎರಡೂ ಬೆರಳುಗಳಲ್ಲಿ ಕಮಲವೊಂದನ್ನು ಹಿಡಿದು ಸಮೃದ್ಧಿಯ ಸಂಕೇತವನ್ನು ನೀಡಲಾಗಿದೆ. ಓಂನ ಪಕ್ಕದಲ್ಲಿ ಸುದರ್ಶನ ಚಕ್ರ ಪುಸ್ತಕ, ಬೋಧಿಸುವ ಕೈ, ಅಲ್ಲಲ್ಲಿ ಹರಡಿದ ದೀಪದ ಬೆಳಕು ಎಲ್ಲವೂ ಓಂ ತತ್ಸತ್ ಪರಬ್ರಹ್ಮಣೇ ನಮಃ ಎಂಬುದನ್ನು ಅಮೂರ್ತವಾಗಿ ಚಿತ್ರಿಸಿದಂತಿದೆ. ಭಗವದ್ಗೀತೆಯ ಸಾರವನ್ನು ಹಲವಾರು ರೀತಿಯಿಂದ ಅರ್ಥೈಸಬಹುದಾದ ಕಲಾಕೃತಿ ಇದಾಗಿದೆ.

## ೧೪. ಕೃಷ್ಣ ಮತ್ತು ಗೋಪಿಯರು

ಕೃಷ್ಣನ ಹಲವಾರು ರೂಪಗಳನ್ನು ದೇಶದ ಬಹಳಷ್ಟು ಜನ ಕಲಾವಿದರು ಅವರವರ ದೃಷ್ಟಿಯಲ್ಲಿ ಸಾಂಕೇತಿಕವಾಗಿ ಮತ್ತು ನೈಜವಾಗಿ ಚಿತ್ರಿಸಿರುವುದಿದೆ. ಇಲ್ಲಿ ಕೊಳಲು ಹಾಗೂ ನವಿಲು ಗರಿಗಳ ಸಂಕೇತಗಳಿಂದ ಆತನ ಎಲ್ಲಾ ಕೃಷ್ಣನನ್ನು, ಪರಮಾತ್ಮನನ್ನು ಸೂಚಿಸಲಾಗಿದೆ. ದೇಹದ ಯಾವ ಅಂಗವೂ ಕಾಣದ ಕೃಷ್ಣನ ಮುಖ, ನವಿಲುಗರಿ ಮಾತ್ರ ಪ್ರಮುಖ ಅಂಶವಾಗಿವೆ. ಆತ್ಮ, ಪರಮಾತ್ಮರ ಮಿಲನದ ನಿರಂತರ ಹಂಬಲದ ಪ್ರತೀಕ ನದಿ. ಅಲೆ ಅಲೆಯಾಗಿ ಪ್ರವಹಿಸುತ್ತಲಿದೆ. ಹಳದಿ ಮತ್ತು ಗುಲಾಬಿ ವರ್ಣಗಳ ಗಡಸುತನದಲ್ಲಿ ನೀಲಿ ಒಂದು ಪೂರಕ ಅಂಶವಾಗಿ ಕಂಡುಬರುತ್ತದೆ. ಕೃಷ್ಣನ ಮುಖದ ಸುತ್ತ ೮ ಜನ ಆತ್ಮಸ್ವರೂಪಿ ಗೋಪಿಯರು ಅವನ ಕೊಳಲು ದನಿಗೆ ಆಕರ್ಷಿತರಾಗಿ ಮುಖವನ್ನು ಅವನ ಕಡೆಗೆ ತಿರುಗಿಸಿ ನೋಡುವಂತೆ ಅವರೆಲ್ಲರ ಮುಖದ ಸಂಯೋಜನೆ ಇದೆ. ಕೆಳಬಲಬದಿಗೆ ಅವರ ಪಶುಭಾವದ ಆತ್ಮಗಳು ಗೋವುಗಳ ಮುಖದ ಆಕೃತಿಗಳನ್ನು ಒಂದರೊಳಗೊಂದನ್ನು ಸೇರಿಸಿ ಸಂಯೋಜಿಸಲಾಗಿದೆ. ಸರ್ವ ದಿಕ್ಕುಗಳಿಗೆ

ಗೋಮುಖಗಳನ್ನು ಇರಿಸಲಾಗಿದ್ದು, ಕೃಷ್ಣನ ಹುಡುಕಾಟದಲ್ಲಿವೆ. ಗೋವು ಮತ್ತು ಮುಖಗಳ ಕೆಳಗೆ ಎಡಬದಿಯಲ್ಲಿ ಖಾಲಿಯಾದ ಹಳದಿ ಬಣ್ಣದ ಚಪ್ಪಟ ಸ್ಥಳ ಹಸಿರಿನಂತೆ ಪೂರಕವಾಗಿ ಗೋವು ಮೇಯುವ ಸ್ಥಳವೆಂಬಂತೆ ಗೋಚರವಾಗುತ್ತದೆ. ಇಲ್ಲಿ ಕೃಷ್ಣ ಗೋಪಿಯರು ಮತ್ತು ಗೋವುಗಳನ್ನು ಸಂಯೋಜನಾಬದ್ಧವಾಗಿ ಹೆಣೆಯಲಾಗಿದೆ. ಎಲ್ಲಾ ಆಕೃತಿಗಳಲ್ಲಿ ಬಣ್ಣಗಳ ನಿಲುವು ಸಮತೋಲನ ಕಾಯ್ದುಕೊಂಡಿದ್ದು, ನವಿಲುಗರಿ ಒಂದೇ ವಿಶೇಷವಾಗಿ ಆಕರ್ಷಿತವಾಗುತ್ತದೆ. ಅದಾದ ನಂತರ ನೀರಿನ ಪ್ರವಾಹದ ನಿರಂತರತೆಯ ದ್ವಿತೀಯ ಸ್ಥಾನದಲ್ಲಿ ನಿಲ್ಲುತ್ತದೆ. ಒಟ್ಟು ಚಿತ್ರದ ವರ್ಣಗಳ ಸಮತೋಲನವು ಒಂದಕ್ಕೊಂದು ವಿರೋಧ ವರ್ಣಗಳದಾಗಿದ್ದರೂ ಉತ್ತಮ ಸಂಯೋಜನೆಯಾಗಿದೆ.

### ೧೫. ಕಲ್ಕಿ

ಚಿತ್ರದಲ್ಲಿ ನೀಲಿ ಬಣ್ಣದ ಹಿನ್ನೆಲೆ ವಿನ್ಯಾಸ ಅಗೋಚರ ದೇವರ ಸ್ಥಳವೆಂದು ಭಾವಿಸುವುದಾದರೆ ಮಧ್ಯ ಕುಳಿತ ಮಾನವಾಕೃತಿ ಕಲ್ಕಿ ಪುರುಷನಿಗೆ ಪ್ರಥಮ ಆದ್ಯತೆ ನೀಡಲಾಗಿದೆ. ಸೂರ್ಯ, ಚಂದ್ರರನ್ನು ಅಂಗೈಯಲ್ಲಿ ಹಿಡಿಯುವೆನೆಂಬ ಮನುಷ್ಯನ  ಭ್ರಮೆ ಕಲಿಯುಗದ ಪ್ರವೃತ್ತಿಯೇ. ಇಲ್ಲಿ ಕಲಾವಿದರು ಅಂಗೈಯಲ್ಲಿ ಚಂದ್ರನನ್ನಿಟ್ಟು ಆಸ್ವಾದಿಸಿ ಕೈಗೆ ಸಿಗದ ಸೂರ್ಯ, ಈ ಚಿತ್ರದಲ್ಲಿ ಮನುಷ್ಯಾಕೃತಿಯ ತಲೆ ಭಾಗದಲ್ಲಿ ಪರಮಾಣುವಿನ ಕೋಷ್ಟಕವನ್ನು ಇರಿಸಲಾಗಿದೆ. ಕಲಿಯುಗದ ಜಾಯಮಾನವೆಂಬಂತೆ ಕೆಳಗಡೆ ಹಾವೊಂದು ತನ್ನ ಮೊಟ್ಟೆಯನ್ನು ತಾನೇ ತಿನ್ನುತ್ತಾ ಬದುಕುವ ಪರಿಯನ್ನೂ ಅಥವಾ ತನ್ನದೇ ಮೊಟ್ಟೆಗಳನ್ನು ಕಾಪಾಡಿಕೊಳ್ಳುವ ಹೆಣಗಾಟದಲ್ಲಿ ಇದೆಯೇನೋ ಎಂಬಂತೆ ಚಿತ್ರಿಸಲಾಗಿದೆ. ಇನ್ನು ಮನುಷ್ಯನ ಬಗಲಿನಿಂದ ತೊಡೆಯವರೆಗಿನ ವರ್ತುಳಾಕಾರದಲ್ಲಿ ಒಂದರ ಬಾಲವನ್ನು ಒಂದು ಬಾಯಿ ಹಾಕಿಕೊಂಡು ತಿಂದು ಬದುಕುವ ದೊಡ್ಡ ದೊಡ್ಡ ಮೀನಗಳು ಬದುಕುವ ಅನಿವಾರ್ಯ ಸ್ಥಿತಿಯನ್ನು  ಬಿಂಬಿಸಿದೆ. ಸಿಂಹ ಮಸ್ತಕದಲ್ಲಿ ಏರಿ ಕುಳಿತ ನರಿ, ಅರ್ಹರನ್ನು ಅನರ್ಹರು ತುಳಿಯುವ ಕಲಿಯುಗದ ಪರಿಯನ್ನು ಇನ್ನೊಂದು ವರ್ತುಲದಲ್ಲಿ ಚಿತ್ರಿಸಲಾಗಿದೆ. ಮಾನವನ ಬಲಬದಿಯಲ್ಲಿ ಬಿಳಿಯ ಬತ್ತಲೆ ಕುದುರೆಯ ಮುಖವಿದ್ದು,  ಅದಕ್ಕೆ ಯಾವುದೇ ಲಂಗು-ಲಗಾಮುಗಳಿಲ್ಲ. ಅದೇ ಕಲಿಯುಗದ ಚಲನೆ. ಮಾನವನ ಮನಸ್ಸಿನ ನೆಲೆ ಇಲ್ಲದ ಚಲನೆಯನ್ನು ಸಂಕೇತಗೊಳಿಸಲಾಗಿದೆ. ಇದಾದ ಮೇಲೆ ಕೆಳಗಿನ ನಾಲ್ಕೂ ವರ್ತುಲಗಳಿಗೆ ನಾಲ್ಕು ಯುಗಗಳ ಪ್ರತೀಕ. ಅವುಗಳಲ್ಲಿರುವುದು ಧರ್ಮವನ್ನು ಸಂಕೇತಿಸುವ ಕಾಮಧೇನು ಅಥವಾ ಆಕಳು. ಅದು ಕೃತ ಯುಗದಲ್ಲಿ ತನ್ನ ನಾಲ್ಕು ಕಾಲುಗಳ ಮೇಲೆ ನಿಂತಿದೆ. ತ್ರೇತಾ ಯುಗದಲ್ಲಿ ಮೂರು ಕಾಲಿನ ಮೇಲೆ ನಿಲ್ಲುವಂತಾಗಿದೆ. ದ್ವಾಪರದಲ್ಲಿ ಎರಡೇ ಕಾಲುಗಳ ಮೇಲೆ ನಿಲ್ಲಬೇಕಾದ ಸಂದರ್ಭವಿದೆ. ಕಲಿಯುಗದಲ್ಲಂತೂ ಧರ್ಮಧೇನು ಒಂದೇ ಕಾಲ ಮೇಲೆ ನಿಲ್ಲಬೇಕಾದ ದುರ್ದರ ಪರಿಸ್ಥಿತಿ. ಯುಗ ಧರ್ಮಕ್ಕೆ ಒದಗುತ್ತ ಬಂದ ಅವಸ್ಥೆಯನ್ನು ಈ ಕಲಾವಿದ ಕೆಲವೇ ವರ್ಣಗಳ ಸಂಯೋಜನೆಯಲ್ಲಿ ಚಿತ್ರಿಸಿದ್ದು ವಿಶೇಷವಾಗಿದೆ.

### ೧೬. ಸತ್ಯದ ಸಹನೆ

ಯೇಸುವಿನ ಜೀವನದ ಕೊನೆಯ ಭಾಗ ಶಿಲುಬೆಗೇರಿಸಿದ ಸನ್ನಿವೇಶವನ್ನು ಪ್ರಪಂಚದ ಎಲ್ಲಾ ಕಲಾವಿದರೂ ಒಂದಲ್ಲಒಂದು ರೀತಿಯಲ್ಲಿ ಬಳಸಿಕೊಂಡವರೇ. ಪ್ರಸ್ತುತ ಕಲಾವಿದರು ಅದನ್ನು ವಿಭಿನ್ನ

ರೀತಿಯಲ್ಲಿ ಬಳಸಿಕೊಂಡಿದ್ದಾರೆ. ಇಲ್ಲಿ ಇಡೀ ಚಿತ್ರದ ಕ್ಯಾನ್ವಾಸ್‌ನ್ನು ಬೇರೆ ಬೇರೆ ಆಕಾರದ ಸಮಪ್ರಮಾಣದ ಮೂರು ಭಾಗಗಳನ್ನಾಗಿರಿಸಿಕೊಂಡು ಆಕಾಶಕ್ಕೆ ನೀಲಿ, ಶಿಲುಬೆಯ ಪ್ರಮುಖ ಸ್ಥಳದ ಹಿನ್ನೆಲೆಯಾಗಿ ಶ್ವೇತವರ್ಣ ನೆಲೆಯಿದೆ. ಕಪ್ಪು ನೆಲವನ್ನು ಕೆಳಗಡೆ ಸೃಷ್ಟಿಸಿ ಅಲ್ಲಿಂದ ಶ್ವೇತವರ್ಣ ಶಿಲುಬೆಯನ್ನು ಆಕಾಶದವರೆಗೆ ಎತ್ತರಿಸಲಾಗಿದೆ. ಚಿತ್ರದಲ್ಲಿ ಶಿಲುಬೆ ಪ್ರಮುಖ ಸ್ಥಾನದಲ್ಲಿದ್ದು, ಯೇಸುವಿನ ಹಸ್ತುಗಳು ತಿಳುಗೆಂಪು, ಬಿಳಿ, ಹಳದಿ, ಕೇಸರಿ ಬಣ್ಣಗಳಂತಹ ಸಮೃದ್ಧಿಯ ಸಂಕೇತಗಳಿಂದ ತುಂಬಿದ ಕೈಗಳು. ತನಗೆ ಕಷ್ಟ ನೀಡಿದ ಮಾನವರನ್ನು ಕಾಪಾಡು, ಕ್ಷಮಿಸು ಎಂದೆಲ್ಲಾ ಹೇಳುವ ಕೈಗಳು ಶಿಲುಬೆಗೆ ಹೊಂದಿಕೊಂಡು ಸಂಕೇತ ಸೂಚಿಯಾಗಿವೆ. ಶಿಲುಬೆಯ ಮೇಲ್ಭಾಗದಲ್ಲಿ ಯೇಸುವಿಗೆ ಮುಳ್ಳಿನ ಕಿರೀಟ ಅಜ್ಞಾನಿ ಜನರು ಹೊರೆಸಿದ ಅಪರಾಧ ತೋರುತ್ತದೆ. ಎಲ್ಲೂ ಯೇಸುವಿನ ಪೂರ್ಣಪ್ರಮಾಣದ ಚಿತ್ರವಿರದೆ ಕೈ ಮತ್ತು ಮುಳ್ಳಿನ ಕಿರೀಟಗಳಿಂದ ಮಾತ್ರ ಅದನ್ನು ಅರ್ಥೈಸಬಹುದು. ಮೊಳೆ ಹೊಡೆದ ಸ್ಥಳಗಳಲ್ಲೆಲ್ಲಾ ರಕ್ತ ಸೋರಿದ್ದು ಯೇಸುವಿನ ಅಂಗೈ, ಕುತ್ತಿಗೆ ಮತ್ತು ಪಾದಗಳಲ್ಲಿ ಮೊಳೆಗಳನ್ನು ಹೊಡೆದು ಸೋರುವ ರಕ್ತದ ಕಲೆಗಳು ಮಾನವನ ಎಲ್ಲಾ ಕಾಲದ ಅಜ್ಞಾನ ಮತ್ತು ತಪ್ಪುಗಳನ್ನು ತೋರುವಂತಿವೆ. ಇನ್ನೂ ಶಿಲುಬೆ ಇರುವ ತಳದಲ್ಲಿ ಕಷ್ಟಕರವಾದ ರಟಗೊಳ್ಳಿ ಬಳ್ಳಿಯನ್ನು ಚಿತ್ರಿಸಲಾಗಿದೆ. ಅದರ ಎಲ್ಲಾ ಮುಖಗಳಲ್ಲಿರುವ ಮುಳ್ಳುಗಳು ಮಾನವರ ಅಮಾನವೀಯತೆಯನ್ನು ತೋರುತ್ತವೆ. ಸತ್ಯವು ಈ ಎಲ್ಲವನ್ನು ಸಹಿಸಿಕೊಂಡು ಕೂಡ ಲೋಕ ಕಲ್ಯಾಣವನ್ನೇ ಬಯಸುತ್ತದೆ. ಯೇಸು ಅಂಥ ಸತ್ಯದ ಪ್ರತೀಕನಾಗಿದ್ದಾನೆ. ಅದನ್ನು ಕಲಾವಿದರು ಕಡಿಮೆ ಬಣ್ಣಗಳಲ್ಲಿ ಹೆಚ್ಚು ಉತ್ಕೃಷ್ಟವಾದ ಸಂಯೋಜನೆಯ ಮೂಲಕ ಈ ಕಥನವನ್ನು ಸಾರಿದ್ದಾರೆ.

೧೦ ಅಕ್ಟೋಬರ್, ೧೯೪೨ರಂದು ವಿಜಾಪುರದಲ್ಲಿ ಜನಿಸಿದ ಜಮಖಂಡಿ ತಾಲ್ಲೂಕಿನ ರಬಕವಿಯ ಮಹಾದೇವ ಕವಿಶೆಟ್ಟಿ ಅವರು ನಿವೃತ್ತ ಕಲಾಶಿಕ್ಷಕರು. ಗದುಗಿನ ವಿಜಯ ಕಲಾಮಂದಿರದಲ್ಲಿ ಕಲಾಶಿಕ್ಷಣ ಪಡೆದು, ಭಾರತದ ವಿವಿಧ ಪ್ರದೇಶಗಳಲ್ಲಿ ಸುತ್ತಾಡಿ ಹಿಮಾಲಯವನ್ನು ಒಳಗೊಂಡು ಪುಣ್ಯ ಕ್ಷೇತ್ರಗಳ ಭೂದೃಶ್ಯಗಳನ್ನು ಯಥಾವತ್ತಾಗಿ ಚಿತ್ರಿಸಿ, ಪ್ರದರ್ಶನ ನೀಡಿದ್ದಾರೆ. ೩ ಲಕ್ಷ ಕಿ.ಮೀ.ಗಳವರೆಗೆ ಭಾರತದಾದ್ಯಂತ ಸಂಚರಿಸಿ ಐತಿಹಾಸಿಕ ಸ್ಮಾರಕಗಳ ಹಾಗೂ ಧಾರ್ಮಿಕ ಕ್ಷೇತ್ರಗಳ ರೇಖಾ ಚಿತ್ರ ಚಿತ್ರಿಸಿದ್ದಾರೆ. ೧೯೮೦ರಿಂದ ೧೯೮೩ರವರೆಗೆ ರಾಜ್ಯ ಲಲಿತಕಲಾ ಅಕಾಡೆಮಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ೧೯೮೮ರಲ್ಲಿ ಭಾರತ ಸರ್ಕಾರ ಪ್ರಶಸ್ತಿ ಸಹಿತ ಗೌರವಿಸಿದೆ. ೨೦೦೧ರಲ್ಲಿ ರಾಜ್ಯ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿ, ಅಂತರಾಷ್ಟ್ರೀಯ ಸಂಘಸಂಸ್ಥೆಗಳಿಂದ ಸನ್ಮಾನ ನೀಡಿ ಗೌರವಿಸಲಾಗಿದೆ.

### ೧೭. ಎತ್ತರದ ಕಟ್ಟಡಗಳು

ಮಹಾದೇವ ಕವಿಶೆಟ್ಟಿ ಅವರ ಚಿತ್ರಗಳಲ್ಲಿ ಕ್ಯೂಬಿಜಮ್ ಪಂಥ ಯಾವಾಗಲೂ ಎದ್ದು ಕಾಣುತ್ತದೆ. ಭೂದೃಶ್ಯಗಳಲ್ಲಿ ಈಗಾಗಲೇ ಇರುವುದೆಲ್ಲವನ್ನು ಬಿಟ್ಟು ಇರದುದರೆಡೆಗೆ ತವಕದಿಂದ ಸಂಚರಿಸುವ, ಸೆರೆಹಿಡಿಯುವ, ವರ್ಣಸಂಯೋಜಿಸುವ, ತವಕ ಇವರದಾಗಿದೆ. ಪ್ರಸ್ತುತ ಚಿತ್ರದಲ್ಲಿ ಸಮುದ್ರದ ದಂಡೆಗಿರುವ ಎತ್ತರವಾದ ಗಗನಚುಂಬಿ ಕಟ್ಟಡಗಳು, ಇಲ್ಲಿ ಕಡುಗೆಂಪು ವರ್ಣದಿಂದ ಕಟ್ಟಡಗಳ ಚೌಕು ಭ್ರಮೆಯನ್ನು

ಒಂದೇ ಬಣ್ಣದ ನೆರಳು, ಬೆಳಕುಗಳಿಂದ ರಚಿಸಿ ಎತ್ತರ, ದಪ್ಪ, ಹಿಂದುಮುಂದುಗಳ ಕಲ್ಪನೆ ಕೊಡುತ್ತಾರೆ. ಚಿತ್ರದಲ್ಲಿ ಕಟ್ಟಡದ ಪ್ರತಿಫಲನವು ನೀರಲ್ಲಿ ಬಿದ್ದದ್ದು, ಅದನ್ನು ಕೂಡ ನೈಜತೆಯೊಂದಿಗೆ ತಮ್ಮ ಕ್ಯೂಬಿಜಮ್ ಪಂಥವನ್ನು ಸೃಜನಶೀಲವಾಗಿ ಬಳಸಿಕೊಂಡು ಬಂದವರು ಮುಂದೆ ಹೋದಂತೆಲ್ಲಾ ಪ್ರತೀ ಕಟ್ಟಡದ ಎದುರು ನೋಟವನ್ನು ಹಳದಿ ಬಣ್ಣದಿಂದ ಚಿತ್ರಿಸಿ ಬದಿಯ ನೆರಳನ್ನು ಕೆಂಪು ಬಣ್ಣದಿಂದ ಚಿತ್ರಿಸುತ್ತಾ ಇಡೀ ಚಿತ್ರವು ಎಷ್ಟು ದೂರದ ಕಲ್ಪನೆಯನ್ನು ಕೊಡಬಹುದೆಂಬುದನ್ನು ವಿಸ್ತಾರಗೊಳಿಸುತ್ತಾ ಹೋಗುತ್ತಾರೆ. ಚಿತ್ರವು ನೋಡಲು ಸಾಮಾನ್ಯ ಎನಿಸಿದರೂ ಇಲ್ಲಿ ಪರಿಶ್ರಮ ಸಾಕಷ್ಟಿದೆ. ಆಕಾಶವನ್ನು ಅಲೆಅಲೆಯಾಗಿ, ಉಂಗುರುಂಗುರ ಮಾಡಿ ನೀಲಿಯಲ್ಲೇಯೇ ನಾಲ್ಕು ತರದ ತೆಳು ನೀಲಿಗಳನ್ನು ಆಕಾಶದೆತ್ತರಕ್ಕೆ ಬಳಿದು ವಿನ್ಯಾಸಗೊಳಿಸಿದ್ದಾರೆ. ಕೆಳಗಿರುವ ನೆಲದಲ್ಲಿ ತೆಳು ಹಸಿರು ಬಣ್ಣದ ಎರಡು ಪಟ್ಟಿ, ಅದರಲ್ಲಿ ಕಡು ಬಣ್ಣದ ಎರಡು ಚಿಕ್ಕ ಪಟ್ಟಿಗಳನ್ನು ಹಾಕಿ ರಸ್ತೆಯಂತೆ ಚಿತ್ರಿಸಲಾಗಿದೆ. ಒಟ್ಟು ಚಿತ್ರವು ಒಂದು ಅಪರೂಪದ ಸಂಯೋಜನೆಯಾಗಿದೆ.

### ೧೮. ಭಾರತ ಪಕ್ಷಿನೋಟ

ಭಾರತದ ಪ್ರಮುಖ ಐತಿಹಾಸಿಕ ಸ್ಥಳಗಳಾದ ಗೋಳಗುಮ್ಮಟ, ಪಾರ್ಲಿಮೆಂಟ್, ಕುತುಬ್‌ಮಿನಾರ್, ತಾಜ್‌ಮಹಲ್ ಮತ್ತು ಇತರೆ ದೇವಸ್ಥಾನಗಳು, ಐತಿಹಾಸಿಕ ಕಟ್ಟಡಗಳು ಈ ಎಲ್ಲವನ್ನೂ ಪಕ್ಷಿನೋಟದಿಂದ ಹೇಗೆ ಕಾಣುತ್ತದೆಯೋ ಹಾಗೆ ಯಥಾವತ್ತಾಗಿ ಚಿತ್ರಿಸಿದ ಚಿತ್ರ ಇದಾಗಿದೆ. ಸಮುದ್ರ, ನದಿಯ ದಂಡೆಗಳಲ್ಲಿ ಪ್ರತಿಷ್ಠಾಪನೆಗೊಂಡ ಕಟ್ಟಡಗಳನ್ನು ನೋಡುವ ಇವರ ಭಿನ್ನ ರೀತಿ ಇಲ್ಲಿ ಅನಾವರಣಗೊಂಡಿದೆ. ಎಲ್ಲಿಯೂ ಹಿಂದುಮುಂದುಗಳ ಬಣ್ಣವನ್ನು ಕಡು ಮತ್ತು ತೆಳು ಮಾಡಬೇಕೆಂಬ ನಿಯಮ ಇಲ್ಲಿಲ್ಲ. ಇಲ್ಲಿ ಎಲ್ಲವೂ ಒಂದೇ ಸಮತಟ್ಟಾದ ಪ್ರದೇಶದಲ್ಲಿ ಗೋಚರವಾಗುವ ಕಲಾವಿದನಿಗೆ ಅವುಗಳ ಸೃಷ್ಟಿಸುವ ಬಣ್ಣ ಮಾತ್ರ ಮುಖ್ಯವಾಗಿದೆ. ಎಲ್ಲವನ್ನೂ ಒಂದೊಂದು ಮೂಲೆಯಿಂದ ಆಯ್ದುಕೊಂಡು ಚಿತ್ರ ರಚಿಸುತ್ತಾ ಹೋಗುತ್ತಾರೆ. ದೆಹಲಿಯಲ್ಲಿರುವ ಪಾರ್ಲಿಮೆಂಟ್, ಕುತುಬ್‌ಮಿನಾರ್ ಬಿಳಿ ಮತ್ತು ಕೇಸರಿ ಬಣ್ಣದಲ್ಲಿದ್ದರೆ, ಪಕ್ಕದಲ್ಲೇ ಆಗ್ರಾದಲ್ಲಿರುವ ತಾಜ್‌ಮಹಲ್ ಸಂಪೂರ್ಣ ಶ್ವೇತವರ್ಣದಲ್ಲಿ ರಚಿತವಾಗಿದೆ. ನದಿಯಲ್ಲಿ ನಾವುಗಳು, ನಾವಿಕರು ಇರುವುದನ್ನು ಕಾಣಬಹುದು. ಚಿತ್ರದ ಮೇಲ್ತುದಿಯಲ್ಲಿ ಹಿಮಾಲಯದ ಬೆಟ್ಟಗಳನ್ನು ಮಂಜಿನಂತೆ ಬಿಳಿಯ ಬಣ್ಣದಲ್ಲಿ ಚಿತ್ರಿಸಲಾಗಿದೆ. ಬಲಭಾಗದಲ್ಲಿ ನೇಪಾಳದ ಸಮೀಪದಲ್ಲಿ ಕಾಫಿ ಕೀಳುವ ಇಬ್ಬರ ಮಹಿಳೆಯರನ್ನು ಆ ಸ್ಥಳದ ವಿಶೇಷತೆಯನ್ನು ತೋರಲು ನಿಲ್ಲಿಸಿದಂತಿದೆ. ಅಲ್ಲಲ್ಲಿ ಪೂರಕವಾಗಿ ಕೆಲವು ಕಂಬದಂತೆ ಗಿಡಮರಗಳನ್ನು ಬಳಸಿಕೊಳ್ಳಲಾಗಿದೆ. ನಂತರ ನದಿಯ ತೀರದಲ್ಲಿ ರಾಮಮಂದಿರವನ್ನು ಚಿತ್ರಿಸಲಾಗಿದೆ. ಸ್ವರ್ಣಮಂದಿರ, ಚರ್ಚ್‌ಗಳನ್ನು ಅಲ್ಲಲ್ಲಿ ಚಿತ್ರಿಸಲಾಗಿದೆ. ಒಟ್ಟು ಚಿತ್ರದ ತಾತ್ಪರ್ಯ ಭಾರತದ ಭೂಮಿ ವರ್ಣರಂಜಿತ, ಭಾವೈಕ್ಯತೆಯ ಬೀಡು, ಸಮೃದ್ಧವಾದ ಹಸಿರು ಎಲ್ಲಿ ಬೇಕಾದಲ್ಲಿ ಹರಿಯುವ ಚಿತ್ರದ ತುಂಬೆಲ್ಲಾ ನೀಲಿ ಬಣ್ಣದ ನೀರನ್ನು ತೋರಿಸಿ ಹಳದಿ, ನೀಲಿ, ಅಲ್ಪಸ್ವಲ್ಪ ಕೆಂಪು, ಅಲ್ಲಲ್ಲಿ ಕಪ್ಪು ಮತ್ತು ನೀಲಿಯಲ್ಲಿಯೇ ಎರಡುಮೂರು ತರಹದ ವರ್ಣಗಳನ್ನು ಬಳಸಿ ನದಿಗಳನ್ನು ಅಲಂಕೃತವಾಗಿ ವಿನ್ಯಾಸಗೊಳಿಸಲಾಗಿದೆ. ಸಮುದ್ರದ ದಂಡೆಯೆನ್ನುವುದಕ್ಕೆ ಹಡಗೊಂದನ್ನು ನಿಲ್ಲಿಸಲಾಗಿದೆ.

ಒಟ್ಟು ಚಿತ್ರವು ಒಂದೆಡೆ ನೋಡಿಸಿಕೊಡದೆ ಪ್ರೇಕ್ಷಕರನ್ನು ಎಲ್ಲಾ ಕಡೆಗೂ ಸಮಪ್ರಮಾಣದಲ್ಲಿ ದೃಷ್ಟಿ ಹಾಯಿಸುವಂತೆ ಮಾಡಿರುವಲ್ಲಿ ಕಲಾವಿದರ ಪ್ರೌಢಿಮೆಯನ್ನು ಕಾಣಬಹುದು.

### ೧೯. ಗೋಳಗುಮ್ಮಟ

ಇಲ್ಲಿಯೂ ಕೂಡ ಕಲಾವಿದರು ಕ್ಯೂಬಿಜಮ್ ಪಂಥದಲ್ಲಿಯೇ ಗೋಳಗುಮ್ಮಟವನ್ನು ರಚಿಸಿ ನೈಜ ಕೃತಿಯನ್ನು ಹೀಗೂ ಮಾಡಬಹುದು ಎಂಬುದನ್ನು ತೋರಿಸಿದಂತಿದೆ. ನೀಲ ವರ್ಣದ ಬದಲು ತೆಳು ನೇರಳೆ ಬಣ್ಣವನ್ನು ಆಕಾಶಕ್ಕೆ ಬಳಸಿದ್ದು ಒಂದು ವಿಶೇಷತೆ. ಕೆಂಪು, ಕಡುಗೆಂಪು, ಕೇಸರಿ, ತೆಳುಕೇಸರಿ, ಕಂದು ಮತ್ತು ಕಪ್ಪು ಇಷ್ಟು ಬಣ್ಣಗಳಿಂದ ಇಡೀ ಗೋಳಗುಮ್ಮಟದ ಎಲ್ಲಾ ಆಯಾಮಗಳನ್ನು ಚಿತ್ರಿಸುವ, ಅಚ್ಚೊತ್ತುವ ಶೈಲಿ ಇದಾಗಿದ್ದು, ಯಾರು ನೋಡಿದರೂ ಈ ಚಿತ್ರ ಕವಿಶೆಟ್ಟಿಯವರದೇ ಎನ್ನುವಷ್ಟರಮಟ್ಟಿಗೆ ಕಲಾವಿದರು ಚಿತ್ರರಚನಾ ವಿಶೇಷವನ್ನು ಮೆರೆದಿದ್ದಾರೆ. ನೆಲದ ವಿಭಾಗದಲ್ಲಿ ಕಡುಹಸಿರು, ತೆಳುಹಸಿರು, ಬಣ್ಣದ ತ್ರಿಕೋನಗಳಿಂದ ನೆಲವನ್ನು ಸೃಷ್ಟಿಸಿ ಹಿಂದುಮುಂದುಗಳ ಕಲ್ಪನೆಯನ್ನು ನೀಡುತ್ತದೆ. ಆಕಾಶದಲ್ಲಿಯೂ ನೇರಳೆ ಬಣ್ಣದ ಮೂರ್ನಾಲ್ಕು ಆಯಾಮಗಳನ್ನು ಮಿಶ್ರಣ ಮಾಡಿಕೊಂಡು ತ್ರಿಕೋನಗಳಿಂದ ಪೂರ್ಣಗೊಳಿಸಿದ್ದಾರೆ. ತಾವು ನಿಂತ ದೂರವನ್ನು ಪರಿಭ್ರಮಿಸಲು ತೀರಾ ಮುಂಭಾಗಕ್ಕೆ ಎನ್ನುವಂತೆ ಇಡೀ ಚಿತ್ರದ ಆಕಾಶದಲ್ಲಿ ಎರಡು ಕಪ್ಪು ಮಿಶ್ರಿತ ವೈಲೆಟ್ ಬಣ್ಣದಿಂದ ಎರಡು ತ್ರಿಕೋನಗಳನ್ನು ಆಚೆ ಈಚೆ ರಚಿಸಲಾಗಿದೆ. ಪಕ್ಷಿ ನೋಟದಲ್ಲಿ ಚಿಕ್ಕ ಚಿಕ್ಕ ಅಶೋಕ ಮರಗಳನ್ನು ಮೂಲೆ ಮೂಲೆಗೆ ದೊಡ್ಡ ಮರಗಳನ್ನು ಚಿಕ್ಕದಾಗಿ ರಚಿಸಿ ಇಡೀ ಚಿತ್ರದಲ್ಲಿ ಗೋಳಗುಮ್ಮಟವೊಂದೇ ಎದ್ದು ಕಾಣುವಂತೆ ಚಿತ್ರಿಸಲಾಗಿದೆ. ಒಟ್ಟು ಚಿತ್ರವು ಎಲ್ಲಾ ಬದಿಯಿಂದ ಸಂಯೋಜನಾತ್ಮಕವಾಗಿದೆ.

### ೨೦. ಜಲಪಾತ

ಕಲಾವಿದ ಕವಿಶೆಟ್ಟಿ ಅವರು ಹಿಂದಿನ ಮೂರು ಚಿತ್ರಗಳಲ್ಲಿರುವಂತೆ ಕ್ಯೂಬಿಜಮ್ ತಂತ್ರವನ್ನು ಬಿಟ್ಟು ಇಲ್ಲಿ ತೀರಾ ನೈಜವಾದ ನಿಸರ್ಗ ಚಿತ್ರವನ್ನು ರಚಿಸಿದ್ದಾರೆ. ಬೆಟ್ಟ, ಗುಡ್ಡಗಳಲ್ಲಿ ಶಾಂತವಾಗಿ ಬೀಳುವ ನೀರು ನೀಲಿ ಹಾಗೂ ಬಿಳಿಯ ವರ್ಣದಿಂದ ಕಂಗೊಳಿಸುತ್ತದೆ. ಮೇಲೆ ಆಕಾಶದಲ್ಲಿ ಅತೀ ಕಡಿಮೆ ಸ್ಥಳವನ್ನು ನೀಡಿ ಕೆಂಪು ಮಿಶ್ರಿತ ಬಿಳಿಯ ಹಿಮಾಲಯದಂತಹ ಮಂಜಿನ ಗುಡ್ಡವನ್ನು ಚಿತ್ರಿಸಿದ್ದು, ಅದರ ನಂತರ ನೀರಿನ ಹರಹನ್ನು ಚಿತ್ರಿಸಿ ಆಚೆ ಈಚೆ ಬದಿಗಳಲ್ಲಿ ಹುಲ್ಲು ಮತ್ತು ಗಿಡಮರಗಳನ್ನು ರಚಿಸಿ ದೂರದ ಕಲ್ಪನೆಯನ್ನು ನೀಡಲಾಗಿದೆ. ಕಪ್ಪು ಬಣ್ಣದ ಬೆಟ್ಟದ ಬಂಡೆಗಳಿಂದ ಬೀಳುವ ನೀರು ಅಲ್ಲಲ್ಲಿ ಬಂಡೆಗಳ ಮೇಲೆ ಬಿದ್ದಾಗ ನಿಂತು ಚಲಿಸುವ ಕ್ರಿಯೆಯನ್ನು ಬಿಳಿಯ ವರ್ಣಗಳಿಂದ ಹೈಲೈಟ್ ಹಾಕಿ ಅದ್ಭುತವಾಗಿ ಚಿತ್ರಿಸಲಾಗಿದೆ. ಬಲ ಮೇಲ್ಭಾಗದಲ್ಲಿ ಬಾಗಿದ ಬೆಟ್ಟದ ಕಪ್ಪು ಕಲ್ಲೊಂದು ಸುಂದರವಾದ ಹೂಗಳನ್ನು ಪಕ್ಕಕ್ಕಿರಿಸಿಕೊಂಡು ನಿಂತಿದೆ. ಅಲ್ಲಲ್ಲಿ ಒಣ ಗಿಡ, ಮರಗಳ ಟೊಂಗೆಗಳು ಹೊರಬಂದಿವೆ. ಮುಂಭಾಗದಲ್ಲಿ ಮತ್ತೆ ಕಲ್ಲು, ಬಂಡೆಯ ಚಿತ್ರಣವಿದ್ದು, ಚಿತ್ರವು ಈ ಭಾಗದಲ್ಲಿ ಮತ್ತಷ್ಟು ಹೆಚ್ಚು

ವಿವರಗಳನ್ನು ನೀಡುತ್ತಾ ಹೋಗುತ್ತದೆ. ಕೊನೆಯಲ್ಲಿ ಚಿಕ್ಕ ಚಿಕ್ಕ ನಾಲ್ಕು ಮನೆಗಳು ಕೆಂಪು ಬಣ್ಣದ ನೀರಿನ ಕಡೆಗೆ ಬಾಗಿದ ಹೂವಿನ ಗಿಡವೊಂದು ಕಲ್ಲು ಸಂದಿಯಲ್ಲಿ ಬೆಳೆದಿದೆ. ಅಲ್ಲಲ್ಲಿ ಕಲ್ಲು ಬಂಡೆಗಳು ದಬದಬೆಯನ್ನು ಮರೆಮಾಚಿ ನಿಂತಿವೆ. ತೀರಾ ಮುಂಭಾಗದಲ್ಲಿ ಟೆಂಗಿನ ಮರದ ಮೇಲ್ಭಾಗವೊಂದು ಗೋಚರಿಸುತ್ತದೆ. ಅಲ್ಲಲ್ಲಿ ಗಿಡಮರಗಳು ರಚಿತಗೊಂಡಿದ್ದು ಒಟ್ಟು ಚಿತ್ರವು ಸುಮಾರು ಒಂದೆರಡು ಕಿ.ಮೀ.ನಷ್ಟು ದೂರವಿರುವ ಕಲ್ಪನೆಯನ್ನು ಕಲಾವಿದ ಕಟ್ಟಿಕೊಟ್ಟಿದ್ದಾರೆ.

೨೪ ಫೆಬ್ರವರಿ, ೧೯೫೪ರಲ್ಲಿ ದಯಾನಂದ ಈಶ್ವರಪ್ಪ ತಪಶೆಟ್ಟಿ ಅವರು ಬಾಗಲಕೋಟೆಯಲ್ಲಿ ಜನಿಸಿದರು. ಶ್ರೀಮಂತ ಕುಟುಂಬದಲ್ಲಿ ಹುಟ್ಟಿದ ದಯಾನಂದ ಅವರು ೧೯೭೮ರಲ್ಲಿ ಬೆಂಗಳೂರಿನ ಕೆನ್ ಕಲಾಶಾಲೆಯಲ್ಲಿ ಅಧ್ಯಯನ ನಡೆಸಿದರು. ಹಡಪದ ಅವರ ಪರಮ ಶಿಷ್ಯರಾದ ಇವರು ವಾಪಾಸು ಬಾಗಲಕೋಟೆಗೆ ಬಂದಾಗ ಅವರ ಶಿಕ್ಷಣಕ್ಕೆ ನೆರವಾಗಿದ್ದ ಅವರ ದೊಡ್ಡಪ್ಪ ತೀರಿಕೊಂಡಾಗ ಕಲಾಕ್ಷೇತ್ರದ ಸಂಪರ್ಕವನ್ನು ಕಡಿದುಕೊಂಡು ವ್ಯಾಪಾರಕ್ಕಾಗಿ ಅಂಗಡಿಯಲ್ಲಿ ಕುಳಿತುಕೊಂಡರು. ಆಗ ರಚಿಸಿದ ಕಲಾಕೃತಿಗಳೇ ಇಂದಿಗೂ ಉಳಿದುಕೊಂಡಿವೆ. ಕೆ.ಎಂ. ಸುರೇಶ್, ಶೀಲಾಗೌಡ, ಜಯರಾಜ್ ಇವರ ಸ್ನೇಹಿತರಾಗಿದ್ದರು. ಇಂದಿಗೂ ಕಲಾಕೃತಿ ರಚನೆಯ ಹಂಬಲವನ್ನು ಉಳಿಸಿಕೊಂಡು ಬಂದಿದ್ದಾರೆ.

**೨೧. ಗಣೇಶನ ಚಿತ್ರ**

ಕಲಾವಿದ ತಪಶೆಟ್ಟಿ ಅವರು ರಚಿಸಿದ ಈ ಕಲಾಕೃತಿಯಲ್ಲಿ ಗಣೇಶನಿಗೆ ಮುಖದ ಆಕಾರ ಮಾತ್ರ ಇದ್ದು ಕಣ್ಣು, ಕಿವಿ ಏನನ್ನೂ ರಚಿಸಿಲ್ಲ. ಎರಡೇ ಕೈಗಳಿದ್ದು, ಒಂದು ಬಲಗೈ ಆಶೀರ್ವಾದ ಮಾಡಿದ್ದು, ಎಡಗೈಯಲ್ಲಿ ಏನನ್ನೋ ಹಿಡಿದುಕೊಂಡಂತೆ ಚಿತ್ರಿಸಲಾಗಿದೆ. ಮೊಳೆಗಳ ಆಕಾರದಲ್ಲಿ ಬೆರಳುಗಳ ಸಂದಿಯನ್ನು ತೋರಿದ್ದು, ಹೊಕ್ಕಳಕ್ಕಾಗಿ ವರ್ತುಲಾಕಾರದ ಒಂದು ಚಿಹ್ನೆಯನ್ನು ನೀಡಲಾಗಿದೆ. ಭುಜದ ಮೇಲೆ ಸಾಂಕೇತಿಕವಾಗಿ ಶೆಲ್ಯಯನ್ನು ಬಿಳಿಯ ಬಣ್ಣದಲ್ಲಿ ಹಾಕಲಾಗಿದೆ. ಸೊಂಡಿಲಿಗೆ ಬಿಳಿಯ ಬಣ್ಣವನ್ನು ಬಳಿದಿದ್ದು, ವಿಭೂತಿಗಾಗಿ ಮೂರು ಬೆರಳು ಬಿಳಿಯ ಬದಲು ಕಪ್ಪು ಬಣ್ಣವನ್ನು ಬಳಸಿದ್ದು, ಇಲ್ಲಿ ವಿಶೇಷ. ಇಡೀ ಚಿತ್ರವು ಕಂದು ಬಣ್ಣದ್ದಾಗಿದ್ದು, ಕಡುಗಂದು ಬಣ್ಣದಲ್ಲಿ ಗಣೇಶನ ಧೋತ್ರವನ್ನು ರಚಿಸಿ ಅದರಿಂದ ಒಂದು ಬಲಪಾದವನ್ನು ಹೊರಗೆ ಹಾಕಿ, ಎಡಗಾಲನ್ನು ಮಡಚಿ ಇಡಲಾಗಿದೆ. ಹೊಕ್ಕಳಿನ ಮುಂಭಾಗದಲ್ಲಿ ಸೊಂಡಿಲಿಗೆ ಸಮನಾಂತರವಾಗಿ ಬಿಳಿಯ ಪಟ್ಟಿಯನ್ನು ಬಿಡಲಾಗಿದೆ. ದೊಡ್ಡ ಹೊಟ್ಟೆ ಬಿಳಿಯ ಸೊಂಡಿಲಿಗೆ ಬಾಣದಾಕಾರದ ತುದಿಯನ್ನು ನಿರ್ಮಿಸಲಾಗಿದೆ. ಒಟ್ಟು ಚಿತ್ರವು ಏಕ ವರ್ಣದಲ್ಲಿ ಏಕದಂತನನ್ನು ಚಿತ್ರಿಸಿದ್ದು, ದಂತಗಳೂ ಇಲ್ಲದಿರುವುದು ವಿಶೇಷ. ಒಟ್ಟು ಚಿತ್ರವು ಸಂಯೋಜನೆಯಲ್ಲಿ ಮಾತ್ರ ಹಿಂದೆ ಬಿದ್ದಿಲ್ಲ.

**೨೨. ತಾಯಿ, ಮಗು**

ಚಿತ್ರದ ಮೂರ್‍ನಾಲ್ಕು ಬಣ್ಣಗಳ ಮಿಶ್ರಣದ ಹಿನ್ನೆಲೆ ವಿನ್ಯಾಸವನ್ನು ಹೊಂದಿದ್ದು, ಮೇಲ್ಭಾಗದಲ್ಲಿ ತೆಳುಹಸಿರು, ಕೆಂಪು ವರ್ಣವನ್ನು ಚಪ್ಪಟೆಯಾಗಿ ಮಿಶ್ರಣ ಮಾಡಲಾಗಿದೆ. ಚಿತ್ರದಲ್ಲಿ ತಾಯಿ ತನ್ನ ಮಗುವನ್ನು

ತಬ್ಬಿಕೊಂಡು ನಿಂತಿರುವ ಚಿತ್ರ ವಾಸ್ತವವಾಗಿ ಕಂಡರೂ ಅಲ್ಲಿರುವ ಮುಖದ ಭಾವನೆ ಕಪ್ಪು ವರ್ಣದ ಬದಿಯ ನೋಟದ ಚಿಂತಾಕ್ರಾಂತಳಾದ ಮಹಿಳೆಯ ಮುಖ ಕಾಣುತ್ತದೆ. ಅದರ ಹಿಂದೆ ಅಲ್ಲಿಯೇ ಸುಖ ಕಾಣುವ ಬಿಳಿಯ ವರ್ಣವೂ ಮುಖದಲ್ಲಿದೆ. ಎತ್ತರವಾದ ಕುತ್ತಿಗೆ ತಾಯಿಯ ಕಡೆಗೆ ಮುಖವಿರಬೇಕಾದ ಮಗುವನ್ನು ಪ್ರೇಕ್ಷಕರ ಕಡೆಗೆ ತಿರುಗಿಸಿ ಬಗಲಲ್ಲಿ ಎತ್ತಿಕೊಂಡಂತೆ ತಾಯಿ ಬಲಗೈಯಲ್ಲಿ ಮಗುವಿನ ಕಾಲನ್ನು ಹಿಡಿದುಕೊಂಡು, ಎಡಗೈ ಮಡಿಚಿದ ಹಸ್ತವನ್ನು ತೋರುತ್ತಾ ಹೊಟ್ಟೆಗಿಲ್ಲದ ಸಂಕೇತವನ್ನು ತೋರುವಂತಿದೆ. ಮಗುವಿನ ಮುಖದಲ್ಲೂ ಎರಡೆರಡು ಮುಖ ಕಾಣುತ್ತಿದ್ದು ಅಲ್ಲಿಯೂ ಕೂಡ ಹೆಚ್ಚು ಕತ್ತಲು ಬೆಳಕಿನ ಸಂಯೋಜನೆ ಇದೆ. ತಾಯಿಯ ಎದೆಯ ಭಾಗವನ್ನು ಹೊರತೆಗೆದು ಹೊಟ್ಟೆಗಿಲ್ಲದ ಮಗುವಿನ ಮತ್ತು ತನ್ನ ಸಮಸ್ಯೆಯನ್ನು ಹೇಳಿಕೊಳ್ಳುತ್ತಿರುವಂತೆ ಸಾಮಾನ್ಯವಾಗಿ ಕಂಡರೂ ತೆಳುಗೆಂಪು ಬಣ್ಣವು ತಕ್ಷಣ ಆಕರ್ಷಿಸುತ್ತದೆ. ಹಾಗೆಯೇ ಇನ್ನೊಂದು ತೆಳು ಹಳದಿಯೂ ತನ್ನ ಛಾಪನ್ನು ಶಾಂತವಾಗಿ ನೀಡುವುದರಿಂದ ಒಟ್ಟು ಕಲಾವಿದರ ಭಾವನೆಯ ಸಂಕೇತಗಳನ್ನು ಮಾತ್ರ ಇಲ್ಲಿ ಗುರುತಿಸಬಹುದು.

**೨೩. ಗೆಳೆಯರು**

ಕ್ಯೂಬಿಜಮ್ ತಂತ್ರದಲ್ಲಿ ರಚಿತಗೊಂಡ ಈ ಚಿತ್ರವು ಮೊದಲೊಂದು ಆಕೃತಿ ದೊಡ್ಡ ಮುಖದಾಗಿದ್ದು, ಕೈಗಳನ್ನು ಕೆಳಗೆ ಮಾಡಿ, ಮುಖವನ್ನು ಮೇಲೆ ಮಾಡಿ ಹೊರಟಂತೆ ಕಾಣುತ್ತದೆ. ಮಧ್ಯದಲ್ಲಿ ಮೂರು ಜನರ ಮುಖಗಳು ಕಂಡು ಒಂದಕ್ಕೊಂದು ವಿಭಿನ್ನ ವರ್ಣಗಳಲ್ಲಿ ಸಂಯೋಜಿತವಾಗಿದೆ. ಕೆಳಗೊಂದು ವರ್ತುಳದಲ್ಲಿ ಹೆಜ್ಜೆ ಇಟ್ಟಂತೆ ಚೌಕಾಕಾರದಲ್ಲಿ ವಿಶೇಷ ಎಂಬಂತೆ ತೋರಲಾಗಿದೆ. ಮೇಲ್ಭಾಗದಲ್ಲೂ ಕಟ್ಟಿಗೆಯ ಹಲಗೆಗಳಂತೆ ಬೇರೆ ಬೇರೆ ವರ್ಣಗಳ ಸಂಯೋಜನೆಯನ್ನು ಮಾಡಲಾಗಿದೆ. ತೆಳು ಹಸಿರು ಬಣ್ಣ ಇಡೀ ಚಿತ್ರಕ್ಕೆ ಸಾಂಕೇತಿಕವಾಗಿ ಸಮೃದ್ಧವಾದ ಶಿಸ್ತನ್ನು ಕಲ್ಪಿಸಿ ಕೊಡುತ್ತದೆ. ಒಟ್ಟು ಚಿತ್ರದ ತಾತ್ಪರ್ಯ ಕಾರ್ಯನಿರತ ಸ್ನೇಹಿತರು ಒಂದೆಡೆ ಸೇರಿದ ಗುಂಪಿನ ಭಾವನೆಯನ್ನು ನೀಡುತ್ತದೆ. ಒಟ್ಟು ಚಿತ್ರವು ಸುಂದರವಾದ ಸಂಯೋಜನೆಯಾಗಿದ್ದು ನಿಖರವಾದ ಅರ್ಥ ಕಲ್ಪಿಸುವುದು ಅಸಾಧ್ಯ. ಅಮೂರ್ತದಲ್ಲಿ ಏನೂ ಬೇಕಾದರೂ ಆಗಬಹುದು ಎಂಬುದು ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಒಟ್ಟು ಚಿತ್ರವು ಕೆಂಪು, ಕಡುಗೆಂಪು, ಅಲ್ಲಲ್ಲಿ ಹಳದಿ ಬಣ್ಣದ ತುಣುಕು ತುಣುಕು ಸಂಯೋಜನೆಯನ್ನು ಹೊಂದಿದೆ.

**೨೪. ಮನುಷ್ಯಾಕೃತಿಗಳ ಸಂಯೋಜನೆ**

ತೆಳು ಹಸಿರು ಬಣ್ಣದ ವ್ಯಕ್ತಿ ಚಿತ್ರವು ಮಧ್ಯದಲ್ಲಿ ರಭಸವಾಗಿ ಹೊರಟಂತೆ ಕಾಣುತ್ತದೆ. ಹಿಂಬದಿಯಲ್ಲಿ ಸರಳುಗಳ ಮಧ್ಯ ಕೆಂಪು ವರ್ಣದ ಮುಖವುಳ್ಳ ವ್ಯಕ್ತಿಯೊಬ್ಬ ಮುಂದಿನ ವ್ಯಕ್ತಿಯನ್ನು ಹಿಡಿದುಕೊಂಡಿರುವಂತೆ ಚಿತ್ರಿಸಲಾಗಿದೆ. ಕೇವಲ ಹಸಿರು ವರ್ಣ ಹೆಚ್ಚಾಗಿರುವ ಈ ಚಿತ್ರದಲ್ಲಿ ಸಮೃದ್ಧಿಯ ಸಂಕೇತವೆಂದು ಭಾವಿಸುವುದು ಸಹಜ. ಆಕೃತಿಗಳ ಸಂಯೋಜನೆಯಲ್ಲಿ ಕಲಾವಿದರು ತುಂಬಾ ಎಚ್ಚರ ವಹಿಸಿ ಮನೆಯ ಹಿನ್ನೆಲೆಯನ್ನು, ಕಿಡಕಿಯನ್ನು ಚಿತ್ರಿಸಲಾಗಿದೆ. ಹಲವು ಕಡೆ ಮೇಲೆ, ಕೆಳಗೆ ವರ್ಣಗಳನ್ನು ಸಂಯೋಜಿತವಾಗಿ ಹೊಂದಾಣಿಕೆ ಮಾಡಲಾಗಿದೆ. ಹೆಚ್ಚು ಕಡುವರ್ಣದಿಂದ ಹಿನ್ನೆಲೆ ವಿನ್ಯಾಸವನ್ನು ರಚಿಸಲಾಗಿದೆ. ಹೀಗಾಗಿ ಆಕೃತಿಗಳು ಅಲ್ಲಲ್ಲಿ ಸ್ಪಷ್ಟವಾಗಿ ಗೋಚರಿಸುತ್ತಾ ಅಮೂರ್ತವಾದ ಕಲ್ಪನೆಗಳನ್ನು ಕೊಡುತ್ತಾ ಸಾಗುತ್ತದೆ.

ಇಡೀ ಚಿತ್ರದಲ್ಲಿ ದಯಾನಂದ ತಪಶೆಟ್ಟಿ ಅವರ ವಿಭಿನ್ನ ಆಲೋಚನೆಗಳು ಎದ್ದುತೋರುತ್ತವೆ. ಕಲೆಯ ಸೂತ್ರಗಳು ಅವರಿಗೆ ಕರಗತವಾಗಿದ್ದನ್ನು ಇಲ್ಲಿ ಸಾಬೀತುಪಡಿಸಿದ್ದಾರೆ.

ಗುಳೇದಗುಡ್ಡದ ಮಹಾದೇವ ಜಗತಾಪ ಅವರು ೧ ಜೂನ್, ೧೯೫೭ರಂದು ಬಸವನಬಾಗೇವಾಡಿಯ ಮುತ್ತಗಿಯಲ್ಲಿ ಜನಿಸಿದರು. ಪ್ರಸ್ತುತ ಗುಳೇದಗುಡ್ಡದ ವೆಂಕಟೇಶ್ವರ ಹಿಂದಿ ಹೈಸ್ಕೂಲ್‌ನಲ್ಲಿ ಚಿತ್ರಕಲಾ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅಲ್ಲದೆ ಯೋಗ ಶಿಕ್ಷಣದಲ್ಲೂ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಜಿಲ್ಲಾ ಆದರ್ಶ ಶಿಕ್ಷಕ ಪ್ರಶಸ್ತಿ, ಕಲಾಶ್ರೀ ಪ್ರಶಸ್ತಿ ಇವರಿಗೆ ಲಭಿಸಿವೆ. ಗುಳೇದಗುಡ್ಡದ ಭಿತ್ತಿ ಮತ್ತು ಗಾಜಿನ ಚಿತ್ರಗಳನ್ನು ಬೆಳಕಿಗೆ ತಂದ ಖ್ಯಾತಿ ಇವರದು. ಪತ್ರಿಕೆಗಳಿಗೆ, ಅಕಾಡೆಮಿಗೆ ಮತ್ತು ಸಾಹಿತ್ಯ ಪರಿಷತ್ತಿಗೆ ಕಲೆಯ ಕುರಿತು ಲೇಖನಗಳನ್ನು ನೀಡಿ ಹಲವಾರು ಕಲಾತ್ಮಕ ವಿಷಯಗಳನ್ನು ಬೆಳಕಿಗೆ ತಂದಿದ್ದಾರೆ. ಇವರ ಭಾವೈಕ್ಯತೆ ಹಾಗೂ ಭೂದೃಶ್ಯಗಳು ಹೆಸರಾಂತ ಕೃತಿಗಳಾಗಿವೆ.

### ೨೫. ಭೂದೃಶ್ಯ

ಆಕಾಶಕ್ಕಾಗಿ ಹೆಚ್ಚು ಸ್ಥಳವನ್ನು ಇರಿಸಿಕೊಂಡು ಮೇಲೆ ಕಡುನೀಲಿ ಬಣ್ಣವನ್ನು ಹಾಕುತ್ತಾ ಕೆಳಗೆ ಬಂದಂತೆಲ್ಲಾ ಗುಲಾಬಿ ವರ್ಣದ ಆಕಾಶವನ್ನು ಸಂಯೋಜಿಸುತ್ತಾ ಬಂದು ದೂರದಲ್ಲಿ ಎರಡು ತೆಂಗಿನ ಮರಗಳು ಇನ್ನು ಮುಂದೆ ಬಂದಂತೆಲ್ಲಾ ಎತ್ತರವಾದ ದ್ವೀಪ ಸ್ತಂಭದಂತಹ ದೇವಾಲಯದ ಗೋಪುರವನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಜಲವರ್ಣದ ಈ ಕಲಾಕೃತಿ ಮಂಟಪವೊಂದನ್ನು ಬದಿಯಲ್ಲಿ ಹೊಂದಿದ್ದು ಪ್ರಿವೀವ್‌ನಲ್ಲಿ ಅವರ ಆಯ್ಕೆ, ಸ್ಥಳ ಹೊಂದಾಣಿಕೆ ಅತ್ಯಂತ ಸಮೃದ್ಧ ವಾತಾವರಣವನ್ನು ಕಲ್ಪಿಸಿಕೊಟ್ಟಿದೆ. ತೆಳು ಹಸಿರು ಬಣ್ಣದ ಹುಲ್ಲು, ಹಿಂಬದಿಯಲ್ಲಿ ಅದೇ ಬಣ್ಣದ ಮರಗಳು ಮುಂದೆ ನೆಲದಲ್ಲಿ ದೂರದ ಕಲ್ಪನೆಗಳನ್ನು ಕೊಡುವಲ್ಲಿ ಕಪ್ಪು ವರ್ಣವನ್ನು ಬಳಸಿ, ನೈಜವಾಗಿ ಚಿತ್ರಿಸಿ ದೂರದ ಪರಿಕಲ್ಪನೆಯನ್ನು ನೀಡಿದ್ದಾರೆ. ಒಟ್ಟು ಸಂಯೋಜನೆಯು ಸುಂದರವಾದ ಭೂದೃಶ್ಯವಾಗಿದ್ದು ಇಡೀ ಚಿತ್ರದಲ್ಲಿ ನೈಜತೆಯ ಝಲಕು ಕಂಡುಬರುತ್ತದೆ.

### ೨೬. ಗುರುತ್ವಾಕರ್ಷಣೆ

ನೀಲಾಕಾಶದಲ್ಲಿ ದೊಡ್ಡ ಬಂಡೆಯೊಂದು ಕಡುಗೆಂಪು ಬಣ್ಣದಲ್ಲಿ ರಚಿತಗೊಂಡಿದ್ದು ಮಧ್ಯದಲ್ಲಿ ಹಾಗೂ ಆಚೆ ಈಚೆ ಒಂದು ಕೇಸರಿ ಮತ್ತು ಕಂದು ವರ್ಣಗಳ ಮೂರು ದೀರ್ಘ ವರ್ತುಳಗಳು ರಚಿತವಾಗಿವೆ. ನೆಲದಲ್ಲಿ ಸಂಪೂರ್ಣ ತೆಳು ಹಸಿರು ಬಣ್ಣದ ಲೇಪನವಿದ್ದು ಒಟ್ಟು ಚಿತ್ರವು ಭೂದೃಶ್ಯದಂತೆಯೇ ಕಂಡರೂ ಬೆಟ್ಟದ ಮೇಲೆ ಆಕರ್ಷಿತರಾಗಿ ನಿಂತ ನೂರಾರು ಬಿಳಿಯ ಬಣ್ಣದ ವೇಷಭೂಷಣಗಳನ್ನು ತೊಟ್ಟ ಜನ ನಿಂತಿದ್ದಾರೆ. ಅವರೆಲ್ಲರ ಮುಂದೆ ಸಾಂಕೇತಿಕವಾಗಿ ನಾಮಫಲಕವೊಂದನ್ನು ನಿಲ್ಲಿಸಿದ್ದು, ಅದಕ್ಕೆ ಮೂರು ಕಾಲುಗಳಿವೆ. ಇಡೀ ಚಿತ್ರದ ಕೇಂದ್ರ ಆಕರ್ಷಣೆ ಈ ಜನರು ಮತ್ತು ಆ ನಾಮಫಲಕ. ಗುರುತ್ವಾಕರ್ಷಣೆ ಹೊಂದಿದ ಭೂಮಿ ಜನರನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ನಿಂತ ಘಟನೆ ಇದಾಗಿದೆ ಎಂದು ಸ್ವತಃ ಕಲಾವಿದರು ಅಭಿಪ್ರಾಯಪಡುತ್ತಾರೆ.

ಇಲ್ಲಿ ಮೂರು ತರಹದ ವರ್ಣಗಳಲ್ಲಿ ಮಧ್ಯದ ಕಲ್ಲುಬಂಡೆ ಇರುವ ಕ್ಷೇತ್ರ ಮಾತ್ರ ಗಣನೆಗೆ ತೆಗೆದುಕೊಳ್ಳುವಂತೆ ಪ್ರೇರೇಪಿಸುತ್ತದೆ. ಉಳಿದೆಲ್ಲಾ ಅಂಶಗಳು ಇಲ್ಲಿ ಗೌಣವಾಗುತ್ತವೆ.

ಅಮೀನಗಡದಲ್ಲಿ ೨೯.೯.೧೯೩೩ರಲ್ಲಿ ಜನಿಸಿದ ದಿವಂಗತ ಶ್ರೀ ಬಸವರಾಜ ಸಣ್ಣ ಬಸಪ್ಪ ಗರಡಿಯವರು ಅಮೀನಗಡದ ಶ್ರೀ ಸಂಗಮೇಶ್ವರ ಪದವಿಪೂರ್ವ ಕಾಲೇಜಿನಲ್ಲಿ ಚಿತ್ರಕಲಾ ಶಿಕ್ಷಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಅನ್ನದಾನೇಶ್ವರಿ ಔದ್ಯೋಗಿಕ ಕಲಾಸಂಘ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಹೊಲಿಗೆ ತರಬೇತಿ ಹಾಗೂ ಪ್ರಭುರಾಜೇಂದ್ರ ಚಿತ್ರ ಕಲಾಮಂದಿರವನ್ನು ಸ್ಥಾಪಿಸಿದರು.

**೨೭. ವಚನ ಚಿತ್ರ**

ಭಕ್ತಿ ಎಂಬ ಪೃಥ್ವಿಯ ಮೇಲೆ ಗುರು ಎಂಬ ಬೀಜವು ಅಂಕುರಿಸಿತ್ತು. ಈ ಬಸವಣ್ಣನವರ ವಚನದ ಸಾರವನ್ನು ಹೇಳುವ ಈ ಚಿತ್ರವು ದೀರ್ಘ ವರ್ತುಳಾಕಾರದ ಭೂಮಿಯ ಮೇಲೆ ಮಾವಿನ ಹಣ್ಣಿನಲ್ಲಿ ಚಿಪ್ಪಿನಾಕಾರದ ಬೀಜವನ್ನು ಚಿತ್ರಿಸಿ, ಬಲ ಅಂಗೈಯಲ್ಲಿ ಇಡಲಾಗಿದೆ. ನಂತರದಲ್ಲಿ ಗ್ರಂಥವೊಂದನ್ನು ರಚಿಸಿ ಎರಡು ಪತ್ರಿಯ ದಳಗಳನ್ನು ಚಿತ್ರಿಸಲಾಗಿದೆ. ಮೇಲೆ ಸ್ಥಾವರಲಿಂಗದ ಆಕಾರದಲ್ಲಿ ಮನುಷ್ಯ ಶರೀರವನ್ನು ರಚಿಸಿ ಅಲ್ಲಿ ಜಾರಿ ಬೀಳುವ ತನಗೆ ಬೇಕೆಂದು ಎತ್ತಿಕೊಳ್ಳುವ ಕೂಡಲಸಂಗಮ ದೇವರ ಕಲ್ಪನೆಗಳನ್ನು ತಲೆಯನ್ನು ಹೂವಾಗಿಸಿ ಚಿತ್ರಿಸಲಾಗಿದೆ. ಒಟ್ಟು ಚಿತ್ರವು ವಸ್ತುವಿನಿಂದ ವಸ್ತುವಿಗೆ ವಚನದಲ್ಲಿರುವ ಸಾರದ ಸಮೃದ್ಧ ಪರಿಕಲ್ಪನೆಯನ್ನು ನೀಡುವಲ್ಲಿ ಯಶಸ್ವಿಯಾಗುತ್ತದೆ. ಒಟ್ಟಿನಲ್ಲಿ ಒಂದು ಉತ್ತಮ ಸಂಯೋಜನೆಯಾಗಿದೆ. ಲಭ್ಯವಾದ ಚಿತ್ರ ಕಪ್ಪು, ಬಿಳುಪಾಗಿರುವುದರಿಂದ ವರ್ಣ ಸಂಯೋಜನೆಯ ಬಗ್ಗೆ ಯಾವುದೇ ವಿವರ ಲಭ್ಯವಾಗಿಲ್ಲ. ಹಣ್ಣು, ಹೂವು ಎಂದಾಗ ಹಸಿರು, ಕೆಂಪು, ಹಳದಿ ಇರಬಹುದೆಂದು ಅಂದಾಜಿಸಬಹುದು.

ಜಿಲ್ಲೆಯ ಕೊರ್ತಿ ಗ್ರಾಮದ ರವಿ ಹಡಪದ ಅವರು ಅಮೀನಗಡದ ಪ್ರಭುರಾಜೇಂದ್ರ ಚಿತ್ರಕಲಾ ಮಂದಿರದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದರು. ಧಾರವಾಡದ ಸರ್ಕಾರಿ ಕಲಾ ಶಾಲೆಯಲ್ಲಿ ಎ.ಎಂ.ಜಿ.ಡಿ. ಪದವಿಯನ್ನು ಪಡೆದಿದ್ದಾರೆ. ಪ್ರಸ್ತುತ ಜಿಲ್ಲೆಯಲ್ಲಿ ಕಲಾಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**೨೮. ನೀನೊಲಿದರೆ...**

ನೀನೊಲಿದರೆ ಕೊರಡು ಕೊನರುವುದಯ್ಯ, ನೀನೊಲಿದರೆ ಬರಡು ಹಯನಹುದಯ್ಯ, ನೀನೊಲಿದರೆ ವಿಷವೇ ಅಮೃತವಹುದಯ್ಯ, ನೀನೊಲಿದರ ಸಕಲ ಪಡಿಪದಾರ್ಥ ಇದಿರಲಿಪ್ಪವು ಕೂಡಲಸಂಗಮ ದೇವ ಈ ವಚನದ ಸಾರವನ್ನು ತೈಲ ವರ್ಣದಲ್ಲಿ ಕ್ಯಾನ್ವಾಸ್ ಮೇಲೆ ರಚಿಸಿದ ಬಗೆ ಇಂತಿದೆ. ಒಣಗಿದ ಕೊರಡೊಂದನ್ನು ರಚಿಸಿ ಅದು ಚಿಗುರಿದಂತೆ ಎಲೆಗಳನ್ನು ಹಸಿರು ಬಣ್ಣದಲ್ಲಿ ಚಿತ್ರಿಸಲಾಗಿದೆ. ಬರುಡ ದನ ಒಂದು ಹೈಯನ್‌ನಿಂದ ತುಂಬಿ ಹಾಲನ್ನು ಭೂಮಿಗೆ ಸುರಿಸುತ್ತಿರುವಂತೆ ಚಿತ್ರಿಸಲಾಗಿದೆ. ದೇವರು ಒಲಿದರೆ ಇಚ್ಛೆಪಡುವ ಎಲ್ಲಾ ಪದಾರ್ಥಗಳು ಎದುರಲ್ಲಿ ಇರುವ ಬಗ್ಗೆ ನಿಚ್ಚಳ ನಿಲುವನ್ನು ತಳೆಯುವ

ಬಗ್ಗೆ ಬಸವಣ್ಣನವರು ಈ ಖಾತ್ರಿ ಮಾತುಗಳನ್ನಾಡುತ್ತಾರೆ. ಅದಕ್ಕಾಗಿ ದೇವರು ಒಲಿದರೆ ಏನೆಲ್ಲವೂ ಸಾಧ್ಯ ಎಂಬ ತಾತ್ಪರ್ಯದ ವಚನ ಚಿತ್ರ ಇದಾಗಿದೆ.

ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಕಡಪಟ್ಟಿಯಲ್ಲಿ ೧.೬.೧೯೬೪ರಲ್ಲಿ ಜನಿಸಿದ ದಿವಂಗತ ವಿರೂಪಾಕ್ಷ ರಾಮಪ್ಪ ಕಡಪಟ್ಟಿ ಅವರು ಬಾಲ್ಯದಲ್ಲಿಯೇ ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿದ ಅವರು ತಂದೆಯ ಮಾರ್ಗದರ್ಶನದಲ್ಲಿ ಹಲವಾರು ಚಿತ್ರಗಳನ್ನು ಪ್ರಾಥಮಿಕ ಹಂತದಲ್ಲಿಯೇ ರಚಿಸಿದವರು. ಭಾರತೀಯ ಕಲಾಕೇಂದ್ರ ಧಾರವಾಡದಲ್ಲಿ ರಾಜ್ಯಕ್ಕೆ ಪ್ರಥಮ ರ್‍ಯಾಂಕ್‌ನೊಂದಿಗೆ ಎ.ಎಂ. ಪದವಿಯನ್ನು ಪಡೆದವರು. ನೈಜ ಚಿತ್ರಗಳನ್ನು ರಚಿಸುವಲ್ಲಿ ಸಿದ್ಧಹಸ್ತರು. ಇತ್ತೀಚೆಗೆ ಬೆಳಗಾವಿ ಜಿಲ್ಲೆಯ ಪರಮಾನಂದವಾಡಿಯ ಸರ್ಕಾರಿ ಪ್ರೌಢಶಾಲೆಯ ಕಲಾ ಶಿಕ್ಷಕರಾಗಿ ೨೨ ವರ್ಷ ಸೇವೆ ಸಲ್ಲಿಸಿ ಇತ್ತೀಚೆಗೆ ನಿಧನರಾದರು. ನಿಧನಕ್ಕೆ ಮುನ್ನ ಕರ್ನಾಟಕ ಸರ್ಕಾರವು ಕೊಡಮಾಡುವ ಉತ್ತಮ ರಾಜ್ಯ ಶಿಕ್ಷಕ ಪ್ರಶಸ್ತಿ ಇವರ ಮುಡಿಗೇರಿತ್ತು.

**೨೯. ಆಧ್ಯಾತ್ಮ**

ಆಧ್ಯಾತ್ಮ ಚಿಂತನೆಯನನು ಬೋಧಿಸುತ್ತಿರುವ ಋಷಿಯೊಬ್ಬರು ದೊಡ್ಡ ಆಲದ ಮರದ ಕೆಳಗೆ ಕುಳಿತಿದ್ದಾನೆ. ಬಲಗೈ ಹಸ್ತವನ್ನು ಮುಂದೆ ಮಾಡಿ ಬೋಧನೆ ಮಾಡುತ್ತಿದ್ದಾರೆ. ಮುಂದೆ ಕುಳಿತವರಲ್ಲಿ ಕಡುಗೆಂಪು ಮತ್ತು ಕಪ್ಪು ಬಣ್ಣದ ಜನರನ್ನು ಚಿತ್ರಿಸಲಾಗಿದೆ. ಅವರ ಬೆನ್ನ ಮೇಲೆ ನಿಸರ್ಗದ ಮೂಲವಾದ ಎಲೆಗಳನ್ನು ಬೇರೆ ಬೇರೆ ಬಣ್ಣದಲ್ಲಿ ಚಿತ್ರಿಸಲಾಗಿದೆ. ಋಷಿಯ ಹಿಂದೆ ಅರಣ್ಯದ ವಾತಾವರಣವಿದ್ದು, ಹೂವು, ಬಳ್ಳಿಗಳಿಂದ ತುಂಬಿ ಹೋಗಿದೆ. ಬಲಗಡೆ ಇನ್ನರ್ಧ ಚಿತ್ರದಲ್ಲಿ ದೊಡ್ಡ ಮರಕ್ಕೆ ಹೊಂದಿಕೊಂಡು ಟೊಂಗೆಯೊಂದು ಹೊರಗೆ ಹಾಯ್ದದ್ದು, ಅದರಲ್ಲಿ ಕೋಗಿಲೆಯೊಂದು ಕುಳಿತು ಕೂಗುತ್ತಿರುವಂತೆ ಚಿತ್ರಿಸಲಾಗಿದೆ. ಬದಿಯಲ್ಲಿ ದೊಡ್ಡ ಬ್ರಹ್ಮಾಂಡ ಮೂರು ಬಿಳಿ ಮತ್ತು ಒಂದು ನೀಲಿ ಬಣ್ಣದ ನಕ್ಷತ್ರಗಳನ್ನು ರಚಿಸಲಾಗಿದೆ. ಹಿಂದೆ ಆಕಾಶದಲ್ಲಿ ಗಿಡಕ್ಕೆ ಹೊಂದಿಕೊಂಡ ಕಾಮನಬಿಲ್ಲು, ನೀಲಾಕಾಶ ಮಿಂಚಿದ ಬಿಳಿ ವರ್ಣದ ವಿನ್ಯಾಸ ಉಳಿದೆಲ್ಲಾ ಸ್ಥಳದಲ್ಲಿ ಕಡುನೀಲಿ ಬಣ್ಣದ ಹಿನ್ನೆಲೆ ವಿನ್ಯಾಸವನ್ನು ರಚಿಸಲಾಗಿದೆ. ಒಟ್ಟು ಚಿತ್ರವು ಒಂದು ಸಂದೇಶವನ್ನು ಸಾರುವ, ಪರಿಸರದ ಪಾಠ ಕಲಿಸುವ ಚಿತ್ರವಿದಾದ್ದರಿಂದ ಒಂದು ಉತ್ತಮ ಸಂಯೋಜನೆಯಾಗಿದೆ.

ಜಿಲ್ಲೆಯ ಬಾದಾಮಿಯ ಶಿವಾನಂದ ಬಡಿಗೇರ ಬಾದಾಮಿಯ ಚಾಲುಕ್ಯ ಲಲಿತಕಲಾ ವಿದ್ಯಾಲಯದಲ್ಲಿ ಎ.ಎಂ. ಪದವಿಯನ್ನು ಪಡೆದವರು. ನಂತರ ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ವಿ.ಎ. ಪದವಿಯನ್ನು ಪಡೆದರು. ಪ್ರಸ್ತುತ ಪುಲಿಕೇಶಿ ವಿದ್ಯಾಸಂಸ್ಥೆ ಬಾದಾಮಿಯಲ್ಲಿ ಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**೩೦. ಪ್ರತಿಫಲ**

ಪ್ರಸ್ತುತ ಚಿತ್ರವು ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಶಸ್ತಿ ಪುರಸ್ಕೃತ ಚಿತ್ರ. ನೀರಿಲ್ಲದ ಬವಣೆಯಲ್ಲಿ ತತ್ತರಿಸುವ ಜನ ಆಕಾಶದಿಂದ ಖಾಲಿ ಕೊಡವೊಂದು ಇಳಿದುಬಂದ ಹಾಗೂ ಭೂಮಿಗೆ

ಬರುತ್ತಲೇ ಕೆಳಮುಖ ಮಾಡಿ ತಳ ಒಡೆದು ಚೂರುಚೂರಾಗಿ ಬೀಳುವಂತೆ ಭಾಸವಾಗುತ್ತದೆ. ಕೊನೆ ಅಂಚಿನಲ್ಲಿ ಪ್ರಮುಖ ಆಕೃತಿಯಾಗಿ ಮಹಿಳೆಯೊಬ್ಬಳು ಕೊಡದ ಬಣ್ಣದಲ್ಲಿಯೇ ರಚಿತಗೊಂಡು ಶಿಲ್ಪದಂತೆ ನಿಂತಿದ್ದಾಳೆ. ಅದಕ್ಕೆ ಕಾರಣ ಮನಸ್ಸು ಕಲ್ಲಾಗಿರುವುದು. ಆಕಾಶದಲ್ಲಿ, ಭೂಮಿಯಲ್ಲಿ ಇರಬೇಕಾದ ಬಣ್ಣ ಹಾಕಿ ನೀರಿಗಾಗಿ ಅಣಕಿಸುವಂತೆ ಭೂಮಿ ಮೇಲೆ ಹೋಗಿ ಕುಳಿತಿದೆ. ಕೆಳಗಡೆ ಪ್ರಖರವಾದ ಬೆಳಕೊಂದು ಆಕಾಶದಿಂದ ಬಂದು ಕೆಂಪು ಬಣ್ಣದ ಸುಡುವ ಭೂಮಿಯಲ್ಲಿ ನೀರಹನಿಯಾಗಿ ಮಾರ್ಪಾಡು ಹೊಂದುತ್ತಿರುವುದು ಇಲ್ಲಿ ಅದ್ಭುತವಾಗಿ ಚಿತ್ರಿತವಾಗಿದೆ. ಮಹಿಳೆಯ ಸುತ್ತಲೂ ನೀಲಿ ವರ್ಣದ ಛಾಯೆಯಿದ್ದು, ಕೊಡದ ಸುತ್ತಲೂ ಅಂತಹದೇ ಬಣ್ಣವನ್ನು ಹಾಕಿ ವರ್ಣ ಸಮತೋಲನೆ ಕಾಯ್ದುಕೊಳ್ಳಲಾಗಿದೆ. ತಳದಲ್ಲಿರುವ ಕೆಂಪು ಬಣ್ಣವು ಬೆಂಕಿಯಂತೆ ಪ್ರಖರವಾಗಿದ್ದು ಕೊಡಕ್ಕೂ, ಸ್ತ್ರೀಗೂ, ಆಕಾಶದಿಂದ ಬಂದ ರೇಖೆಗೂ ಸಂಬಂಧ ಕಲ್ಪಿಸಿ ಕಲಾವಿದನು ಸುಂದರವಾದ ಸಂಯೋಜನೆಯನ್ನು ನೀಡಿದ್ದಾನೆ.

**೩೧. ದೃಷ್ಟಿ**

ಹಿರೇಸಿಂಗನಗುತ್ತಿಯ ಮಾನಪ್ಪ ಬಸಪ್ಪ ಬಡಿಗೇರ ಅವರ ಈ ಕಲಾಕೃತಿಯು ಮನುಷ್ಯನ ವಿಕೃತ ನೋಟವನ್ನು ಮಧ್ಯ ಭಾಗದಲ್ಲಿ ಕಪ್ಪು ವರ್ಣದ ಭಯಾನಕ ಪ್ರಾಣಿಯೊಂದಿಗೆ ದೊಡ್ಡ ಕಣ್ಣೊಂದನ್ನು ಚಿತ್ರಿಸಿ ಪರಿಸರವನ್ನು ನೋಡುವ, ಕಾಪಾಡುವ ಬಗೆಯನ್ನು ಆಕ್ರೋಶದಿಂದ ವಿವರಿಸುತ್ತಾರೆ. ಕೆಳಗೆ ಬೀಳುತ್ತಿರುವ ಒಣ ಎಲೆಗಳು ಉದುರುವ ಸಂಕೇತವಾದರೆ ಮೇಲೆ ಹಸಿರು ಎಲೆಗಳು ಗೋಚರಿಸುತ್ತಿವೆ. ಅಲ್ಲಲ್ಲಿ ಸೋರಿದ ವರ್ಣಗಳಿಂದ ಬಿಳಿ ಬಣ್ಣದ ಕ್ಯಾನ್ವಾಸ್‌ನ್ನು ಪೂರ್ತಿಗೊಳಿಸಲಾಗಿದೆ. ಬಲಭಾಗದಲ್ಲಿ ಕಟ್ಟಿಗೆಯ ಸಂಕೇತವೊಂದನ್ನು ಇಟ್ಟು ಎಡಭಾಗದಲ್ಲಿ ಕೆಳಗೆ ಭೂಮಿಯ ಬಣ್ಣವನ್ನು ಚೆಲ್ಲಿ ಅದರ ಗುಣಧರ್ಮಗಳನ್ನು ಅರಿಯುವಂತೆ ಆಕೃತಿಗಳು ತುಂಬಾ ಸರಳವಾಗಿ ವಿವರಣೆ ನೀಡುತ್ತವೆ. ಹೊಸತನ ನೈಜತೆ ಇಲ್ಲದ ಸೃಜನಶೀಲ ಈ ಕೃತಿ ನೋಡುಗನಿಗೆ ವಿಭಿನ್ನ ಅರ್ಥಗಳನ್ನು ನೀಡುವಲ್ಲಿ ಯಶಸ್ವಿಯಾಗುತ್ತದೆ.

ಗದುಗಿನ ಜೆ.ಎನ್. ಕಲಾಮಂದಿರ ಹಾಗೂ ಇಲಕಲ್ಲಿನಲ್ಲಿ ಚಿತ್ರಕಲೆಯ ಪದವಿ ಪೂರೈಸಿದ ಇವರು ಕನ್ನಡ ವಿಶ್ವವಿದ್ಯಾಲಯದಿಂದ ಎಂ.ವಿ.ಎ. ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಸದ್ಯ ಇಲಕಲ್ಲಿನ ವಿಜಯ ಚಿತ್ರಕಲಾ ಮಹಾವಿದ್ಯಾಲಯದಲ್ಲಿ ಹಿರಿಯ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಹುನಗುಂದ ತಾಲ್ಲೂಕಿನ ಹಿರೇಸಿಂಗನಗುತ್ತಿಯ ತಿರುಪತಿ ಚಲುವಾದಿ ಬಾಲ್ಯದಲ್ಲಿಯೇ ಕಲಾಸಕ್ತಿ ಹೊಂದಿ ೧೯೯೩ರಲ್ಲಿ ಇಲಕಲ್ಲಿನಲ್ಲಿ ವಿಜಯ ಚಿತ್ರಕಲಾ ಮಹಾವಿದ್ಯಾಲಯದ ವಿದ್ಯಾರ್ಥಿಯಾದರು. ೧೯೯೮ರಲ್ಲಿ ಎ.ಎಂ. ಪದವಿಯನ್ನು ಪಡೆದರು. ಸರ್ಕಾರಿ ಪ್ರೌಢಶಾಲೆ ಜಂಬಲದಿನ್ನಿಯಲ್ಲಿ ಪ್ರಸ್ತುತ ಚಿತ್ರಕಲಾ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**೩೨. ದುಷ್ಕೃತ್ಯ**

ಕೆಟ್ಟ ಕೆಲಸಗಳನ್ನು ಮಾಡುವ ಮನುಷ್ಯರ ಮೇಲೆ ಕಲಾವಿದರು ಯಾವಾಗಲೂ ತಮ್ಮ ಚಾಟಿಯೇಟು ನೀಡುತ್ತಲೇ ಬಂದಿದ್ದಾರೆ. ಇಲ್ಲಿ ತಿರುಪತಿ ಚಲವಾದಿಯವರು ಆಕಡೆ ಮುಖ ಮಾಡಿದ ಅರ್ಧ ಕತ್ತಲು,

ಅರ್ಧ ಬೆಳಕುಳ್ಳ ಮುಖವೊಂದನ್ನು ಇಡೀ ಕ್ಯಾನ್ವಾಸಿನ ತುಂಬಾ ಅವನ ಬಾಹುಗಳನ್ನು ಚಾಚಿ ಇರಿಸಿದ್ದಾನೆ. ದೂರದಲ್ಲಿ ಅಮೂರ್ತವಾಗಿ ಬಲಗಡೆಯಲ್ಲಿ ಗಾಂಧೀಜಿ ತನ್ನ ಕೋಲನ್ನು ಹಿಡಿದುಕೊಂಡು ಹೊರಟಿದ್ದಾನೆ. ಎಡಗಡೆ ಕತ್ತಲಲ್ಲಿ ಜೈ ಎನ್ನುತ್ತಿರುವ ಜನರ ಕೈಗಳು, ಸಾಮಾನ್ಯವಾಗಿ ಬಿಳಿಯ ವರ್ಣದಿಂದ ರಚಿತಗೊಂಡಿವೆ. ಕುತ್ತಿಗೆಯಿಂದ ಎದೆಯ ಎಲುಬಿನ ಹಂದರ ಹೊರಗೆ ಕಾಣುವಂತೆ ದೊಡ್ಡ ಮನುಷ್ಯನಿಗೆ ಚಿತ್ರಿಸಲಾಗಿದೆ. ನೈಜವಾದ ಕೈಯಿಂದ ಕುಂಚವನ್ನು ಬಿಟ್ಟು ಕೆಂಪು ಬಣ್ಣದಲ್ಲಿ ಕೈ ಅದ್ದಿ ಅಂಗೈಯನ್ನು ಕ್ಯಾನ್ವಾಸಿಗೆ ಒತ್ತಿ ರಕ್ತ ಸೋರಿದಂತೆ ಮಾಡಿ ಚಿತ್ರವನ್ನು ಪೂರ್ಣಗೊಳಿಸಲಾಗಿದೆ. ಇಲ್ಲಿ ಕಲಾವಿದ ಹೊಸ ಮಾದರಿ ತಂತ್ರವನ್ನು ಕಂಡುಕೊಂಡಿದ್ದಾನೆ. ಬೇಕಂತಲೇ ರಕ್ತವನ್ನು ಸುರಿಸಿ ಇಡೀ ಚಿತ್ರವನ್ನು ಕೆಂಪು ಬಣ್ಣಕ್ಕೆ ಕೇಂದ್ರೀಕೃತವಾಗುವಂತೆ ಮಾಡಿದ್ದಾನೆ. ಮಾನವನ ದುಷ್ಕೃತ್ಯಗಳಿಗೆ ತಡೆ ಹಾಕುವ ಒಳ್ಳೆಯ ಕಾಲ ಬರಲಿ ಎಂದು ಕಲಾವಿದನು ಆಶಿಸುತ್ತಾನೆ.

ಹುನಗುಂದ ತಾಲ್ಲೂಕಿನ ಇಲಕಲ್ಲಿನ ಚಂದ್ರಕಾಂತ ಸರೋದೆ ಬಾಲ್ಯದಿಂದ ಚಿತ್ರಕಲಾ ಅಧ್ಯಯನದತ್ತ ಒಲವು ತೋರಿದವರು. ಇಲಕಲ್ಲಿನ ವಿಜಯ ಚಿತ್ರಕಲಾ ಮಹಾವಿದ್ಯಾಲಯದಿಂದ ಆರ್ಟ್ ಮಾಸ್ಟರ್ ಮತ್ತು ಜಿ.ಡಿ. ಪದವಿಗಳನ್ನು ಪಡೆದು ಸುಮಾರು ೧೦ ವರ್ಷಗಳಿಂದ ಸರ್ಕಾರಿ ಪ್ರೌಢಶಾಲೆ ಚಿಕ್ಕ ಆದಾಪುರನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

**೩೩. ನಟರಾಜ**

ಬಾದಾಮಿಯ ಗುಹೆಯಲ್ಲಿರುವ ಅತೀ ಪ್ರಮುಖ ಶಿಲ್ಪ ನಟರಾಜ. ಅದನ್ನು ತನ್ನ ಕಲಾಕೃತಿಯಲ್ಲಿ ಕಲಾವಿದನು ಹಲವಾರು ರೀತಿಯಲ್ಲಿ ತರಲು ಪ್ರಯತ್ನಪಟ್ಟಿದ್ದಾನೆ. ಅದರಲ್ಲಿ ಈ ಕಲಾಕೃತಿಯಲ್ಲಿ ಇಡೀ ಕ್ಯಾನ್ವಾಸ್ ನೀಲಮಯವಾಗಿದ್ದು, ದೊಡ್ಡ ಬಿಳಿ ಬಣ್ಣದ ಸೂರ್ಯನೊಂದು ಕಾಣುತ್ತದೆ. ಎಡ ಕೆಳಭಾಗದಲ್ಲಿ ನೀಲಿ ವರ್ಣದಲ್ಲಿ ನಟರಾಜನ ಆಕೃತಿ ಇದ್ದು, ಒಂದು ಬದಿಯಿಂದ ಬೆಳಕು ಬಿದ್ದಂತೆ ಗುಲಾಬಿ ವರ್ಣದ ಛಾಯೆಯನ್ನು ಹಾಕಲಾಗಿದೆ. ಅಲ್ಲಲ್ಲಿ ಕಂದುಬಣ್ಣದ ಛಾಯೆಗಳನ್ನು ಇರಿಸಿ ನಟರಾಜ ಎದ್ದು ತೋರಲು ಅವನ ಹಿಂದೆ ಕಪ್ಪು ಬಣ್ಣವನ್ನು ಹಾಕಲಾಗಿದೆ. ಒಟ್ಟು ಚಿತ್ರದ ತಾತ್ಪರ್ಯ ಸೂರ್ಯ, ಚಂದ್ರಾದಿಗಳಿರುವವರೆಗೆ ಈ ಬಾದಾಮಿಯ ನಟರಾಜ ಶಿಲ್ಪವು ಮತ್ತು ಅದರೊಂದಿಗಿರುವ ಎಲ್ಲಾ ಶಿಲ್ಪ ಕಲಾಕೃತಿಗಳು ಶಾಶ್ವತ ಮತ್ತು ನೀಲಿ ಬಣ್ಣವನ್ನು ಬಳಸುವ ಉದ್ದೇಶ, ಕೀರ್ತಿಯನ್ನು ಹೆಚ್ಚಿಸುವಂತಹವುಗಳು ಎಂದು ಸುಂದರ ಸಂಯೋಜನೆಯನ್ನು ಕಡಿಮೆ ಬಣ್ಣಗಳಲ್ಲಿ ರಚಿಸಲಾಗಿದೆ.

ಹುನಗುಂದ ತಾಲ್ಲೂಕಿನ ಇಲಕಲ್ಲಿನ ದಿವಂಗತ ಮಹಾದೇವ ದಲಬಂಜನ ಇಂದು ಇಲ್ಲ. ಆದರೆ ಅವರ ಕಲಾಕೃತಿಗಳು ಶಾಶ್ವತವಾಗಿ ಜನರ ಮನಸ್ಸಿನಲ್ಲಿ ಅಚ್ಚೊತ್ತಿವೆ. ಅವುಗಳಲ್ಲಿ ಹಲವಾರು ಕೃತಿಗಳು ತುಂಬಾ ಜನಪ್ರಿಯವಾಗಿವೆ. ವಿಜಯ ಚಿತ್ರಕಲಾ ಮಹಾವಿದ್ಯಾಲಯದ ಹೆಮ್ಮೆಯ ವಿದ್ಯಾರ್ಥಿ ಎ.ಎಂ. ಹಾಗೂ ಜಿ.ಡಿ. ಪದವಿಯನ್ನು ಪಡೆದಿದ್ದರು. ಅತೀ ಸೂಕ್ಷ್ಮವಾದ ಚಿತ್ರ ರಚಿಸುವುದು ಇವರ ಹವ್ಯಾಸ. ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಪ್ರದರ್ಶನಕ್ಕೆ ಕಳುಹಿಸಿ ಒಂದು ಚಿತ್ರ ೧೦ ಸಾವಿರ ರೂಗಳಿಗೆ ಮಾರಾಟವಾದದ್ದು ಈಗ ಇತಿಹಾಸ.

೩೪. ಬೇಟೆ

ರಾಜನೋರ್ವ ರಥದಲ್ಲಿ ಕುಳಿತು ಸಾರಥಿಯು ಎರಡು ಬಿಳಿ ಕುದುರೆಗಳುಳ್ಳ ರಥವನ್ನು ಓಡಿಸುತ್ತಿದ್ದು, ರಾಜನು ಬಿಲ್ಲಿಗೆ ಬಾಣವನ್ನು ಹೂಡಿ ಜಿಂಕೆಗೆ ಬಿಡುವಂತೆ ಚಿತ್ರಿಸಲಾಗಿದೆ. ಜಿಂಕೆಯ ವೇಗದ ಓಟ, ನಾಲ್ಕೂ ಕಾಲುಗಳನ್ನು ಮೇಲೆತ್ತಿಕೊಂಡು ಹೋಗುತ್ತಿರುವುದು ಬಹುಸೂಕ್ಷ್ಮವಾಗಿ ಚಿತ್ರಿಸಲಾಗಿದೆ. ಕುದುರೆಗಳ ಕಾಲುಗಳೂ ಅಷ್ಟೇ ವೇಗವಾಗಿ ಓಡುತ್ತಿರುವಂತೆ ಚಿತ್ರಿಸಲಾಗಿದೆ. ರಾಜನ ಬದಿಗೆ ನೆಲಕ್ಕೆ ಓಡುತ್ತಿರುವ ಭಟನೊಬ್ಬ ಭರ್ಚಿಯನ್ನು ಜಿಂಕೆಯೆಡೆಗೆ ಎಸೆಯುತ್ತಿರುವುದು ಗಮನಾರ್ಹ. ಇದೆಲ್ಲದರ ಹಿಂದೆ ದೂರದಲ್ಲಿ ಹಿಂದುಳಿದ ವ್ಯಕ್ತಿಯೊಬ್ಬ ಓಡಿ ಬರುತ್ತಿರುವ ಸಂಬಂಧ ನಾಲ್ಕೂ ಆಕೃತಿಗಳಿಗೆ ಒಂದಕ್ಕೊಂದು ಪೂರಕವಾಗಿ ಚಿತ್ರಿತವಾಗಿವೆ. ರಥದ ಚಿತ್ರವು ನಕ್ಷಾ ವಿನ್ಯಾಸದಿಂದ ಕಂದು ಬಣ್ಣದಿಂದ ಚಿತ್ರಿತಗೊಂಡು ಗಾಲಿಗಳು ವೇಗವಾಗಿ ಉರುಳುತ್ತಿವೆ. ಚಿತ್ರದಲ್ಲಿ ನೆಲವು ತೆಳು ಹಳದಿ ಬಣ್ಣದಾಗಿದ್ದು, ಮುಂಚೂಣಿಯಲ್ಲಿ ದೂರದ ಪರಿಣಾಮವನ್ನು ಬಿಂಬಿಸಲು ಕಪ್ಪು ಮಿಶ್ರಿತ ಹಸಿರು ಬಣ್ಣಗಳ ಗಿಡಗಂಟೆಗಳನ್ನು ಚಿತ್ರಿಸಲಾಗಿದೆ. ರಥದ ಹಿಂದಿರುವ ಗಿಡಮರಗಳಲ್ಲಿ ಕುಂಚದಿಂದ ಹಾಕಿರುವ ಗೆರೆಗಳು ಎಷ್ಟು ಸೂಕ್ಷ್ಮವಾಗಿವೆ ಎಂದರೆ ಯಾರೂ ಅವುಗಳನ್ನು ಕುಂಚದಿಂದ ಹಾಕಿದ ಗೆರೆಗಳು ಎನ್ನಲು ಸಾಧ್ಯವಿಲ್ಲ. ಅವುಗಳನ್ನು ಪೆನ್ನಿನಿಂದ ಹಾಕಿದ ಗೆರೆಗಳೆಂದು ವಾದ ಮಾಡಿದವರೂ ಇದ್ದಾರೆ. ಒಟ್ಟು ಚಿತ್ರವು ಆಕಾಶದಿಂದ ಗಿಡಮರ, ರಥ, ಬೇಟೆಗಾರರು, ರಾಜನ ಶರೀರವಂತೂ ತುಂಬಾ ತರ್ಕಬದ್ಧವಾಗಿ ಶರೀರಶಾಸ್ತ್ರದ ಎಲ್ಲಾ ಆಯಾಮಗಳನ್ನು ಪಡೆದು ಸೃಷ್ಟಿಯಾದ ಇದೊಂದು ಕಿರುರೂಪ ಚಿತ್ರ. ಚಿಕ್ಕ ವಯಸ್ಸಿನಲ್ಲಿಯೇ ಇಂತಹ ಅದ್ಭುತ ಕಲಾವಿದನನ್ನು ಕಳೆದುಕೊಂಡಿದ್ದು ಜಿಲ್ಲೆಯ ದುರದೃಷ್ಟವಾಗಿದೆ.

ಹುನಗುಂದ ತಾಲ್ಲೂಕಿನ ಇಲಕಲ್ಲಿನ ಖಾಸೀಂ ಇಬ್ರಾಹಿಂ ಕನಸಾವಿ ಬಾಲ್ಯದಿಂದ ಚಿತ್ರಕಲಾ ಅಧ್ಯಯನದತ್ತ ಒಲವು ತೋರಿದವರು. ಇಲಕಲ್ಲಿನ ವಿಜಯ ಚಿತ್ರಕಲಾ ಮಹಾವಿದ್ಯಾಲಯದಿಂದ ಆರ್ಟ್ ಮಾಸ್ಟರ್ ಮತ್ತು ಜಿ.ಡಿ. ಪದವಿಗಳನ್ನು ಪಡೆದು ಸುಮಾರು ೧೦ ವರ್ಷಗಳಿಂದ ಸರ್ಕಾರಿ ಪ್ರೌಢಶಾಲೆ ಕರಡಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

೩೫. ಭ್ರಮೆ

ಕಡುಕೇಸರಿ ಬಣ್ಣದಲ್ಲಿ ಇಡೀ ಕ್ಯಾನ್ವಾಸ್ ತುಂಬಿರುವ ಈ ಚಿತ್ರದಲ್ಲಿ ಗಿಳಿಮುಖವನ್ನು ಹೊಂದಿದ ಪ್ರಾಣಿಯೊಂದು ಓಡುತ್ತಿದೆ. ಅದರ ಮೇಲೆ ಕಣ್ಣು, ಮೂಗುಗಳಿಲ್ಲದ ಮನುಷ್ಯ ಕೂತಿದ್ದಾನೆ. ಚಾಚಿದ ಕಾಲು, ಬಲಗೈಯಲ್ಲಿ ಹಿಡಿದ ಮೂಗುದಾರ, ನೀಲಿ ಮತ್ತು ಹಸಿರು ಬಣ್ಣಗಳಿಂದ ಪ್ರಾಣಿ ರಚಿತಗೊಂಡಿದ್ದು, ಗಿಳಿಯಂತಹ ಮುಖವನ್ನು ಹೊಂದಿದೆ. ದೂರದಲ್ಲಿ ಗುರಾಣಿಯಂತಹ ತಟ್ಟೆಯನ್ನು ಗೋಡೆಗಿರಿಸಲಾಗಿದೆ. ಅಲ್ಲಿ ನೀಲಿ ಮತ್ತು ಕಪ್ಪು ಬಣ್ಣದ ಹಿನ್ನೆಲೆ ವಿನ್ಯಾಸವನ್ನು ರಚಿಸಲಾಗಿದೆ. ಕ್ಯಾನ್ವಾಸ್‌ನ ಬಲಬದಿಯಲ್ಲಿ ಕಡುನೀಲಿ ಬಣ್ಣದ ಪಟ್ಟಿಯೊಂದನ್ನು ಹಾಕಲಾಗಿದೆ. ಪ್ರಾಣಿ ಓಡುವ ವೇಗಕ್ಕೆ ಸರಿಯಾಗಿ ಬಿಳಿಯ ಬಣ್ಣವನ್ನು ಕಡುಕೇಸರಿಯನ್ನು ಅರ್ಧ ವರ್ತುಳಾಕಾರದಲ್ಲಿ ವೇಗವಾಗಿ ಬಳಿದು ಮಿಶ್ರಣ ಮಾಡಲಾಗಿದೆ. ಒಟ್ಟು ಚಿತ್ರವು ಭ್ರಮಾಲೋಕಕ್ಕೆ ಕರೆದೊಯ್ಯುವ ಉತ್ತಮ ಸಂಯೋಜನೆಯಾಗಿದೆ.

ಹುನಗುಂದ ತಾಲ್ಲೂಕಿನ ಐಹೊಳೆ ಗ್ರಾಮದ ನಿಂಗಪ್ಪ ಅಂಗಡಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ವಿ.ಎ. ಪದವಿ ಪಡೆದು ಕಳೆದ ವರ್ಷ ಕರ್ನಾಟಕದ ಗಾಜಿನ ಚಿತ್ರಗಳು ವಿಷಯದಲ್ಲಿ ಪಿಎಚ್.ಡಿ. ಪದವಿ ಪಡೆದವರು. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ, ಬಾದಾಮಿ ವಿಭಾಗದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**೩೬. ಗೂಳಿ**

ಕಡುಗೆಂಪು ಮತ್ತು ಕಡುನೀಲಿ ಬಣ್ಣಗಳಲ್ಲಿ ರಚಿತಗೊಂಡ ಈ ಕೃತಿಯಲ್ಲಿ ಕೆಂಪು ಹಿನ್ನೆಲೆ ವಿನ್ಯಾಸದಲ್ಲಿ ಬಂಗಾರ ಬಣ್ಣದ ಗೂಳಿಯೊಂದು ಗರ್ವದಿಂದ ನಡೆಯುತ್ತಿದೆ. ಅದರ ಬಾಲವು ಬಿಳಿದಾಗಿ, ಆಕಾಶದೆತ್ತರ ಹೋಗಿ, ಅಲ್ಲಿ ಕೆಲವು ದುಂಡು ದುಂಡಾದ ಆಕೃತಿಗಳನ್ನು ಸೃಷ್ಟಿ ಮಾಡಿಕೊಂಡಿದೆ. ಗೂಳಿಯ ಮುಂದೆ ನೀಲಬಣ್ಣದ ಸರೋವರದಲ್ಲಿ ನೂರಾರು ಕಮಲದ ಎಲೆಗಳು ತೇಲಾಡುತ್ತಿವೆ. ಅಲ್ಲಲ್ಲಿ ಬಿಳಿ ಬಿಳಿಯಾದ ಚಿಕ್ಕ ಚಿಕ್ಕ ಮೊಗ್ಗುಗಳು ಗೋಚರಿಸುತ್ತವೆ. ಎಡಭಾಗದಲ್ಲಿ ಒಂದು ದೊಡ್ಡ ಎಲೆವುಳ್ಳ ಗುಲಾಬಿ ವರ್ಣದ ಕಮಲದ ಮೊಗ್ಗೊಂದು ಬಿಳಿಯ ಬಣ್ಣದ ಎಸಳುಗಳನ್ನು ಹಾರಿಬಿಟ್ಟು ದೊಡ್ಡ ಎಲೆಗಳನ್ನು ಹೊಂದಿ ಇಡೀ ಚಿತ್ರಕ್ಕೆ ಸ್ವಾರಸ್ಯವನ್ನು ತಂದುಕೊಟ್ಟಿದೆ. ಗೂಳಿಯ ಹಿಂದಿರುವ ಕೆಂಪು ಬಣ್ಣಕ್ಕೂ, ನೆಲದಲ್ಲಿರುವ ಕೆಂಪು ಬಣ್ಣಕ್ಕೂ, ದೊಡ್ಡ ಕಮಲದ ಮೊಗ್ಗಿಗೂ, ವರ್ಣ ಸಮತೋಲನವನ್ನು ಮಾಡಲಾಗಿದೆ. ಎಲ್ಲಿಯೂ ಏಕದೃಷ್ಟಿ ನೆಡಲಾಗದ ಈ ಚಿತ್ರವು ಭ್ರಮೆಯ ಸಂಕೇತವೂ ಆಗಿದೆ. ಒಟ್ಟಿನಲ್ಲಿ ಒಂದು ಉತ್ತಮ ಸಂಯೋಜನೆಯಾಗಿದೆ.

ಜಮಖಂಡಿ ತಾಲ್ಲೂಕಿನ ಬನಹಟ್ಟಿಯ ಕಲಾವಿದ ಡಾ. ಶಿವಪ್ರಕಾಶ ತುಕ್ಕಣವರ ಅವರು ಕನ್ನಡ ವಿಶ್ವವಿದ್ಯಾಲಯದ ಎಂ.ವಿ.ಎ. ಪದವಿಯನ್ನು ಪಡೆದು ಕರ್ನಾಟಕದ ರಥಶಿಲ್ಪಗಳು ಎಂಬ ವಿಷಯದ ಮೇಲೆ ಪಿಎಚ್.ಡಿ. ಪದವಿಯನ್ನು ಪಡೆದಿದ್ದಾರೆ. ಪ್ರಸ್ತುತ ಬನಹಟ್ಟಿಯಲ್ಲಿ ವಾಸವಾಗಿದ್ದು, ಫ್ರಿಲಾನ್ಸ್ ಆರ್ಟಿಸ್ಟ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**೩೭. ಕೋಲಾಜ್**

ಚಿತ್ರಕಲೆಯಲ್ಲಿ ಕ್ಯಾನ್ವಾಸ್‌ನ ಮೇಲೆ ಪ್ರಿಂಟ್ ಆಗಿರುವ ಕಾಗದಗಳನ್ನು ಅಂಟಿಸಿ ಭಾಗಶಃ ಕುಂಚದಿಂದ ಕಲಾಕೃತಿಯೊಂದನ್ನು ರಚಿಸುವುದು ಕೋಲಾಜ್ ಎಂದು ಕರೆಸಿಕೊಳ್ಳುತ್ತದೆ. ಇಂಥ ಕಲಾಕೃತಿಗಳಲ್ಲಿ ಕೆಲವರು ಮಾತ್ರ ಹಿಡಿತ ಸಾಧಿಸಿರುತ್ತಾರೆ. ಕ್ಯಾನ್ವಾಸಿನ ಮೇಲ್ಭಾಗದಲ್ಲಿ ಕಡುಗೆಂಪು ವರ್ಣವನ್ನು ಹಾಕಿ ಕೆಳಗೆ ಅರ್ಧ ವರ್ತುಳದಲ್ಲಿ ಒಂದು ಮನುಷ್ಯನ ಚಿತ್ರವನ್ನು ಮುಖ ಮಾತ್ರ ಕತ್ತರಿಸಿ, ಅಂಟಿಸಿ ಒಳಗೆ ಕೈಗಳಿರುವಂತೆ ಮತ್ತೊಂದು ಕಾಗದದಿಂದ ಪೂರ್ತಿಗೊಳಿಸಲಾಗಿದೆ. ಎಡಬದಿಯಲ್ಲಿ ಹೂಗಳಿರುವ ಮತ್ತೊಂದು ಕಾಗದವನ್ನು ಅಂಟಿಸಲಾಗಿದೆ. ಇದೆಲ್ಲದರ ಮೇಲೆ ಯಾವುದೂ ಆಕೃತಿ ಇಲ್ಲದ ಚಿಕ್ಕ ಕಾಗವೊಂದನ್ನು ಕತ್ತರಿಸಿ ಅದರ ಮೇಲೆ ಕಪ್ಪು ಬಣ್ಣದ ಹೊರರೇಖೆಯನ್ನು ಹಾಕಲಾಗಿದೆ. ಕೆಳಭಾಗದಲ್ಲಿ ನೀಲಿ ಬಣ್ಣದ ಕಾಗದಗಳನ್ನು ಹಚ್ಚಿ, ಬಿಳಿ ಬಣ್ಣದ ಕಾಗದದ ಮೇಲೆ ನೀಲಿ ಬಣ್ಣದ ಲೇಪನ ಮಾಡಲಾಗಿದೆ. ಕೊನೆಯಲ್ಲಿ ವ್ಯಕ್ತಿಯೊಬ್ಬ ಸಿಗರೇಟಿನಲ್ಲಿ ಗಾಂಜಾ ತುಂಬುತ್ತಿರುವ ಚಿತ್ರವನ್ನು ಕತ್ತರಿಸಿ ಅಂಟಿಸಲಾಗಿದೆ. ಇದರ ಹಿನ್ನೆಲೆ ಮತ್ತು

ಕೆಳಗೆ ಮತ್ತೆ ಕೆಂಪು ವರ್ಣವನ್ನು ಲೇಪಿಸಲಾಗಿದೆ. ಶೇಕಡ ೭೫ರಷ್ಟು ಕೆಂಪು ಬಣ್ಣವಿರುವ ಅಪಾಯಕಾರಿ ಸಂಕೇತವನ್ನು ಸೂಚಿಸುವ ಇವರ ಕೃತಿ ಸೂಚ್ಯವಾಗಿ ತಾನು ಏನನ್ನು ಹೇಳಬೇಕೆಂದಿದ್ದಾನೆ ಅದನ್ನು ಕತ್ತರಿಸಿ ಅಂಟಿಸಿದರೆ ಆಯಿತು. ಅದೂ ಕೂಡ ಒಂದು ಸೃಜನಶೀಲ ಕಲೆಯಾಗಿ ಜನರ ಮನಸ್ಸನ್ನು ಆಕರ್ಶಿತಗೊಳಿಸುತ್ತದೆ.

ಶ್ರೀ ಗಿರೀಶ ವೀರಭದ್ರಪ್ಪ ಹಂಪಣ್ಣವರ ಪ್ರಸ್ತುತ ಜಮಖಂಡಿ ಮಹೇಶ ಚಿತ್ರಕಲಾ ಮಹಾವಿದ್ಯಾಲಯದ ಪ್ರಾಚಾರ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯಿಂದ ಎಂ.ವಿ.ಎ. ಪದವಿಯನ್ನು ಪಡೆದಿದ್ದಾರೆ. ಇವರ ನಿಸರ್ಗ ಮತ್ತು ಪ್ರಾಣಿ ಚಿತ್ರಗಳು ಮಹತ್ವದ ಕೃತಿಗಳಾಗಿವೆ. ಇತ್ತೀಚೆಗೆ ಅವರ ಕಲಾಕೃತಿಯೊಂದು ಮಯೂರ ಪತ್ರಿಕೆಯ ಮುಖಪುಟವಾಗಿ ಪ್ರಕಟಗೊಂಡಿತ್ತು.

### ೩೮. ಗೊಲ್ಲರ ಕೃಷ್ಣ

ಪ್ರಕೃತಿಯ ಸುಂದರ ತಾಣದ ಮಧ್ಯ ಏಳು ಆಕಳುಗಳೊಂದಿಗೆ ಕೃಷ್ಣ ಕೊಳಲನ್ನು ಎಡಗೈಯಲ್ಲಿ ಹಿಡಿದುಕೊಂಡು, ಬಲಗೈಯಲ್ಲಿ ಕಮಲದ ಹೂವನ್ನು ಹಿಡಿದುಕೊಂಡಿದ್ದಾನೆ. ಕಪ್ಪು ಬಣ್ಣದ ಗೊಲ್ಲರ ಕೃಷ್ಣ ಬಿಳಿ ಹಣೆಯ ಮೇಲೆ ನಾಮ, ಹಿಂದೆ ಕಟ್ಟಿದ ತುರುಬು, ಜೋತುಬಿಟ್ಟ ಜಡೆ, ಮೈಮೇಲೆ ಪಾರದರ್ಶಕವಾದ ತೆಳು ನೀಲಿ ಬಣ್ಣದ ಶೆಲ್ಯ, ಹಳದಿ ಧೋತ್ರವನ್ನು ಉಟ್ಟುಕೊಂಡು ಕಾಲು ಮಡಚಿಕೊಂಡು ಕುಳಿತಿದ್ದಾನೆ. ಕೃಷ್ಣ ಕುಳಿತುಕೊಳ್ಳಲು ಇಡೀ ಚಿತ್ರದಲ್ಲಿ ಎದ್ದು ಕಾಣುವಂತೆ ಕೆಂಪು ಬಣ್ಣದ ಎಲೆಗಳಂತೆ ನಕ್ಷೆ ಇರುವ, ಒಳಗಡೆ ಕಪ್ಪು ಬಣ್ಣ ಇರುವ ಹಾಸಿಗೆಯೊಂದನ್ನು ವರ್ತುಳ ಆಕಾರವಾಗಿ ಹಾಕಲಾಗಿದೆ. ಸುಂದರವಾದ ಮುಖಗಳನ್ನು ಹೊಂದಿದ ಕಟ್ಟುಮಸ್ತಾದ ಗೋವುಗಳು ಕೃಷ್ಣನ ಕಡೆಗೆ ಮುಖಮಾಡಿ ಮೂರು ಆಕಳುಗಳು ನಿಂತುಕೊಂಡಿವೆ. ಇನ್ನು ಮೂರು ಆಕಳುಗಳು ವಿಮುಖವಾಗಿ ನಿಂತುಕೊಂಡಿವೆ. ತೆಳು ಹಸಿರು ಬಣ್ಣದ ನೆಲ ಹಾಸಿಗೆಯಂತೆ ಹುಲ್ಲಿನ ಬಣ್ಣ, ಅದಾದ ಮೇಲೆ ಜುಳು ಜುಳು ಹರಿಯುವ ನೀರು, ನೀರಿನಲ್ಲಿ ಗುಡ್ಡದ ಛಾಯೆ, ಗುಡ್ಡಗಳಂತೂ ಹಸಿರು ಬಣ್ಣದಿಂದ ಮತ್ತು ಹಸಿರು ಕೆಂಪು ಕೂಡಿದ ಬಣ್ಣಗಳಿಂದ ಎತ್ತರವಾದ ಗುಡ್ಡಗಳನ್ನು ರಚಿಸಲಾಗಿದೆ. ಮೊದಲನೆಯ ಗುಡ್ಡವು ಕೃಷ್ಣ ಕುಳಿತ ಜಾಗಕ್ಕೆ ಹಾಕಿದ ಹಸಿರು ಬಣ್ಣವನ್ನೇ ಹೊಂದಿರುವುದರಿಂದ ಬಣ್ಣದ ಸಮತೋಲನವನ್ನು ಕಾಯ್ದುಕೊಂಡಂತೆ ತೋರುತ್ತದೆ. ಗುಡ್ಡದ ಉಳಿದ ಪ್ರದೇಶಗಳಲ್ಲೂ ಹಸಿರು ಕಂಡರೂ ಹೆಚ್ಚು ಕೆಂಪು ಬಣ್ಣದ ಗುಡ್ಡ ಅವಾಗಿವೆ. ಗುಡ್ಡದ ನಂತರ ಯಾವುದಕ್ಕೂ ತೊಂದರೆ ಇಲ್ಲದಂತೆ, ದೃಷ್ಟಿ ಬೇರೆಕಡೆ ಸೆಳೆಯದಂತೆ ಚಪ್ಪಟೆಯಾದ, ತೆಳುವಾದ ನೀಲಿ ವರ್ಣವನ್ನು ಬಳಿಯಲಾಗಿದೆ. ನೀರಿನಲ್ಲಿ ಸಣ್ಣ ಸಣ್ಣ ಹೂವಿನ ಮೊಗ್ಗುಗಳಿರುವುದು ಸೌಂದರ್ಯಕ್ಕೆ ಕಾರಣವಾಗಿದೆ. ಕೃಷ್ಣ ಕುಳಿತ ಬಲ ಮೂಲೆಯಲ್ಲಿ ಎಲೆಗಳನ್ನು ರಚಿಸಿ ಮುಂಭಾಗವನ್ನು ಶ್ರೀಮಂತಗೊಳಿಸಲಾಗಿದೆ. ಒಟ್ಟಿನಲ್ಲಿ ತೆಳು ಹಸಿರು ಬಣ್ಣದ ವರ್ಣರಂಜಿತ ಸಂಯೋಜನೆಯಾಗಿದೆ.

ಜಮಖಂಡಿಯ ಮೆಹಬೂಬ ರಾಜೇಸಾಬ ಮೊಮಿನ ಅವರು ವಿಜಾಪುರದ ಸಿದ್ದೇಶ್ವರ ಕಲಾಮಂದಿರದಲ್ಲಿ ಡಿ.ಎಮ್.ಸಿ. ತರಬೇತಿ ಪಡೆದರು. ಬಾಲ್ಯದಲ್ಲಿ ಕಲಾಸಕ್ತಿಯಿಂದ ಜಮಖಂಡಿ

ಊರಿಗೆಲ್ಲಾ ಬೇಕಾದ ಕಲಾವಿದನಾಗಿದ್ದು, ಶಬಾನ ಎಂಬ ಹೆಸರಿನಿಂದ ಖ್ಯಾತರಾಗಿದ್ದಾರೆ. ನೈಜ ಚಿತ್ರಗಳ ಜೊತೆಗೆ ಕಂಟೆಂಪ್ರರಿ ಚಿತ್ರಗಳನ್ನೂ ರಚಿಸಬಲ್ಲವರಾದ ಮೆಹಬೂಬ ಸದ್ಯ ಜಮಖಂಡಿಯಲ್ಲಿ ಸ್ಟುಡಿಯೋ ಒಂದನ್ನು ಮಾಡಿಕೊಂಡು ಕಲಾಕೃತಿ ರಚನೆ ಮಾಡುತ್ತಿರುತ್ತಾರೆ.

**೩೯. ಪರಿಸರ ನಾಶ**

ಪ್ರಕೃತಿಯ ನಾಶದ ಚಿತ್ರವನ್ನು ಮೆಹಬೂಬ ಅವರು ವರ್ಣರಂಜಿತ ವ್ಯಕ್ತಿಗಳಿಂದ ಗಿಡವನ್ನು ಕಡಿಯುವ ಸನ್ನಿವೇಶವನ್ನು ಸೃಷ್ಟಿಸಿದ್ದಾರೆ. ಹಸಿರು ಬಣ್ಣದ ಮೈಬಣ್ಣ ಹೊಂದಿದ ವ್ಯಕ್ತಿ ಮುಖ್ಯ ಪಾತ್ರಧಾರಿಯಾಗಿ ಕೆಂಪು ಪಟಕವನ್ನು ಧರಿಸಿ, ಬಿಳಿಯ ಧೋತ್ರವನ್ನು ಧರಿಸಿ, ಎಡಗೈಯಲ್ಲಿ ಕೊಡಲಿಯನ್ನು ಹಿಡಿದು ಗಿಡದ ಮೇಲೆ ಕುಳಿತು ಗಿಡವನ್ನೇ ಕಡಿಯುತ್ತಿದ್ದಾನೆ. ಅವನ ಮುಂದೆ ನೀಲಿ ಬಣ್ಣದ ವ್ಯಕ್ತಿಯೊಬ್ಬ ಎಡಗೈಯಿಂದ ಗಿಡವನ್ನು ಕಡಿಯುತ್ತಿದ್ದಾನೆ. ಹಾಗೆಯೇ ಅವನ ಹಿಂದೆ ಟೊಂಗೆಯ ಮೇಲೆ ನಿಂತ ವ್ಯಕ್ತಿಯೊಬ್ಬ ಕೈಯಿಂದ ಗಿಡವನ್ನು ಮುರಿಯುತ್ತಿದ್ದಾನೆ. ಮಧ್ಯದ ವ್ಯಕ್ತಿಯ ಮೇಲೆ ಕೊನೆಯ ಟೊಂಗೆಯಲ್ಲಿ ಕೆಂಪು ಬಣ್ಣದ ವ್ಯಕ್ತಿಯೊಬ್ಬ ಎಡಗೈಯಲ್ಲಿ ಕುಡುಗೋಲನ್ನು ಹಿಡಿದು ಗಿಡದ ಟೊಂಗಿಯನ್ನು ಕಡಿಯುತ್ತಿದ್ದಾನೆ. ಇವರೆಲ್ಲರೂ ಮೇಲಿರುವಾಗ ಕೆಳಗೆ ಇಬ್ಬರು ಮೇಲಿನವರನ್ನು ಲೆಕ್ಕಿಸದೆ ಮೂಲ ಬೊಡ್ಡೆಯನ್ನೇ ಒಬ್ಬ ಕತ್ತರಿಸುತ್ತಿದ್ದಾನೆ. ಇನ್ನೊಬ್ಬ ಬಿದ್ದ ಟೊಂಗೆಯನ್ನು ಎಳೆದು ಹಾಕುತ್ತಿದ್ದಾನೆ. ಚಿತ್ರದ ಒಟ್ಟು ತಾತ್ಪರ್ಯ ಮನುಷ್ಯರು ತಾವು ಕುಳಿತ ಆಶ್ರಯ ಪಡೆದುಕೊಂಡು, ಮನುಷ್ಯರೇ ಕಡಿದು ನಮಗೆ ನಾವೇ ಶತ್ರುಗಳು ಎಂಬುದನ್ನು ಸಾದರಪಡಿಸುವ ಚಿತ್ರ ಇದಾಗಿದೆ. ಪರಿಸರದ ಹಾನಿಯನ್ನು ತಡೆಗಟ್ಟಲು ಈ ಚಿತ್ರ ಪಾಠ ಕಲಿಸುವಂತಿದೆ. ಇಡೀ ಚಿತ್ರದ ಕೆಳಭಾಗದಲ್ಲಂತೂ ಅಂಧಃಕಾರವೇ ತುಂಬಿದೆ. ಆಕಾಶದಲ್ಲಿ ನೀಲಿ, ಅಲ್ಲಲ್ಲಿ ಗುಡ್ಡಗಳನ್ನು ರಚಿಸಲಾಗಿದೆ. ಒಟ್ಟು ಚಿತ್ರ ಸಂಯೋಜನಾಬದ್ಧವಾಗಿದೆ.

ಜಮಖಂಡಿ ತಾಲ್ಲೂಕಿನ ಆಸಂಗಿ ಗ್ರಾಮದ ವಿನಾಯಕ ಪತ್ತಾರ ಮುಧೋಳದಲ್ಲಿ ಜಯವಿಜಯ ಸಂಸ್ಥೆಯ ಮಹೇಶ ಚಿತ್ರಕಲಾ ಮಹಾವಿದ್ಯಾಲಯದಲ್ಲಿ ಎ.ಎಂ. ಪದವಿಯನ್ನು ಪಡೆದಿದ್ದಾರೆ. ಬಾಲ್ಯದಲ್ಲಿ ಚಿತ್ರಕಲಾಸಕ್ತರಾದ ವಿನಾಯಕ ಗಣಪತಿಗಳನ್ನು ಮಾಡುವುದು, ಊರಲ್ಲಿ ಗುಡಿಗುಂಡಾರಗಳಲ್ಲಿ ಚಿತ್ರ ರಚಿಸುವುದನ್ನು ಮಾಡುತ್ತಿದ್ದರು. ಪ್ರಸ್ತುತ ಬೆಳಗಾವಿ ಜಿಲ್ಲೆಯ ಗೋಕಾಕದ ಕರ್ನಾಟಕ ಲಲಿತಕಲಾ ಮಹಾವಿದ್ಯಾಲಯದ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**೪೦. ಹೂದಳ**

ಹೂವಿನ ಹಲವಾರು ಪ್ರಕಾರಗಳನ್ನು ಪ್ರಪಂಚದ ಎಲ್ಲಾ ಕಲಾವಿದರು ವಿಭಿನ್ನ ಆಯಾಮಗಳಲ್ಲಿ ಬಳಸಿಕೊಂಡಿದ್ದಾರೆ. ಆದರೆ ವಿನಾಯಕ ಪತ್ತಾರ ಕ್ಯಾನ್ವಾಸಿನ ವರ್ಣದಲ್ಲಿ ಎರಡು ಭಾಗಗಳನ್ನು ಮಾಡಿ ಮಧ್ಯದಲ್ಲಿ ಗುಲಾಬಿ ಬಣ್ಣದ ಹೂವೊಂದನ್ನು ಇರಿಸಿ, ಅದರ ದೇಟುಗಳನ್ನು ಎಳೆ ಎಳೆಯಾಗಿ ಚಿತ್ರಿಸಿ ತುಂಬಾ ನೈಜವಾದ, ಆಕರ್ಷಕವಾದ ಚಿತ್ರ ರಚನೆಯಲ್ಲಿ ಸಿದ್ಧಹಸ್ತರು. ಹೂವಿನ ಕೆಳಭಾಗ ಕಡುಹಸಿರು ಬಣ್ಣದ ಎಲೆಗಳಿಂದ ತುಂಬಿದ್ದೂ, ಅದಾದ ನಂತರ ಕಡುಹಳದಿ ಬಣ್ಣದ ಲೇಪನವನ್ನು ಮಾಡಿ ನೆಲದಂತೆ ಚಿತ್ರಿಸಿ ಅಲ್ಲಿ ತೆಳುನೀಲಿ ಬಣ್ಣದ ಎಲೆಗಳನ್ನು ಕಂಡೂ ಕಾಣದಂತೆ ಚಿತ್ರಿಸಿದ್ದಾರೆ. ಇನ್ನು ಆಕಾಶದಲ್ಲಂತೂ

ಹೂವಿಗೆ ಹೆಚ್ಚು ಮಹತ್ವ ನೀಡುವುದಕ್ಕಾಗಿ ಅದನ್ನು ತೆಳುನೀಲಿ ಬಣ್ಣದ ಚಪ್ಪಟೆ ಲೇಪನ ಮಾಡಲಾಗಿದೆ. ಎಲೆಗಳ ಸ್ಥಳದಲ್ಲಿ ಮುಂದೆ ಮುಂದೆ ಹೋದಂತೆ ಕಡುಹಸಿರು ಬಣ್ಣವು ತೆಳು ಹಸಿರಾಗುತ್ತಾ ಹೋಗುತ್ತದೆ. ಹೀಗೆ ಚಿತ್ರವು ಹೂವಿನ ಪ್ರಮುಖ ಆಕರ್ಷಣೆಯನ್ನು ಅಗಾದವಾಗಿ ಚಿತ್ರಿಸಿ ಉಳಿದೆಲ್ಲಾ ವಸ್ತುಗಳನ್ನು ಗೌಣವಾಗಿಡುವುದು ಈ ಸಂಯೋಜನೆಯ ಪ್ರಮುಖ ಆಶಯವಾಗಿದೆ.

ಬೀಳಗಿ ತಾಲ್ಲೂಕಿನ ಅನಗವಾಡಿ ಗ್ರಾಮದ ಶಿವಾನಂದ ಬಸಯ್ಯ ಹಿರೇಮಠ, ಜಮಖಂಡಿಯ ಮಹೇಶ ಚಿತ್ರಕಲಾ ಮಹಾವಿದ್ಯಾಲಯದ ಎ.ಎಂ.ಜಿ.ಡಿ. ಪದವಿಗಳನ್ನು ಪಡೆದಿದ್ದಾರೆ. ಹಲವಾರು ವೇದಿಕೆಗಳಲ್ಲಿ ಗೀತರಾಗ ರೇಖೆ ಕಾರ್ಯಕ್ರಮದಲ್ಲಿ ಭಾಗವಹಿಸಿ ಸ್ಥಳದಲ್ಲಿಯೇ ಕಡಿಮೆ ಅವಧಿಯಲ್ಲಿ ಚಿತ್ರ ರಚಿಸುವ ಶಕ್ತಿ ಅವರಿಗಿದೆ. ಪ್ರಸ್ತುತ ಬಾಗಲಕೋಟೆಯ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘದ ಅಂಗ ಸಂಸ್ಥೆಯಾದ ಅನಗವಾಡಿಯ ಪ್ರೌಢಶಾಲೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**೪೧. ಪ್ರೀತಿ ಹೃದಯ**

ಹುಡುಗಿಯೊಬ್ಬಳ ಪ್ರೀತಿಗೆ ಸಂಬಂಧಿಸಿದ ಈ ಚಿತ್ರದಲ್ಲಿ ಸ್ತ್ರೀ ಮುಖವೊಂದನ್ನು ಇಟ್ಟು ಮೇಲೆ ಹಾಡುತ್ತಿರುವು ಕೋಗಿಲೆ ಕಪ್ಪು ಬಣ್ಣದಿಂದ ರಚಿತವಾಗಿದೆ. ಜೊತೆಯಲ್ಲಿ ಕೆಳಗಡೆ ನೀಲಿ ಬಣ್ಣದ ಕಿಟಕಿಯೊಂದು ತೆರೆದುಕೊಂಡಿದೆ. ಹುಡುಗಿಗೆ ಪೂರಕವಾಗಿ ಹೃದಯಾಕಾರದಲ್ಲಿ ಸೇಬು ಒಂದನ್ನು ರಚಿಸಲಾಗಿದೆ. ಅದರ ಕೆಳಗೆ ಇನ್ನೊಂದು ಸೇಬಿನ ಆಕಾರದಲ್ಲಿ ಎಲೆಯಂತಿದ್ದು, ಕೆಂಪು ವರ್ಣದ ಈ ಎರಡೂ ವಸ್ತುಗಳ ಕೊನೆಯಲ್ಲಿ ಮಹಿಳೆಯೊಬ್ಬಳು ಕುಳಿತಿರುವಂತೆ ಚಿತ್ರಿಸಲಾಗಿದೆ. ಕೆಳಗಡೆ ಓಡಾಡುವ ಜನರು ಚುಕ್ಕೆ ಚುಕ್ಕೆಯಾಗಿ ಇರಿಸಲಾಗಿದೆ. ಒಟ್ಟು ಚಿತ್ರವು ಕಡಿಮೆ ಅವಧಿಯಲ್ಲಿ ರಚಿತವಾದ್ದರಿಂದ ಒಂದು ಹಾಡಿಗಾಗಿ ಹಾಡಿನ ಸಾಲುಗಳ ಅರ್ಥವನ್ನು ಕಲ್ಪಿಸಲಿಕ್ಕಾಗಿ ಮಾತ್ರ ಈ ಕಲಾಕೃತಿ ರಚಿತವಾಗಿದೆ.

ಮುಧೋಳ ತಾಲ್ಲೂಕಿನ ಲೋಕಾಪುರದ ಬಸಪ್ಪಗೂಳಪ್ಪ ಚೌದರಿ ಅವರು ಧಾರವಾಡದ ಸರ್ಕಾರಿ ಚಿತ್ರಕಲಾ ಶಾಲೆಯಲ್ಲಿ ಎ.ಎಂ.ಜಿ.ಡಿ. ಪದವಿಗಳನ್ನು ಪಡೆದುಕೊಂಡರು. ಪ್ರಸ್ತುತ ಮಹೇಶ ಚಿತ್ರಕಲಾ ಮಹಾವಿದ್ಯಾಲಯ, ಜಮಖಂಡಿಯಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**೪೨. ಜನಜೀವನ**

ಮನುಷ್ಯ ಮತ್ತು ಪ್ರಾಣಿಗಳ ನಡುವಿನ ಸಂಬಂಧದ ಕೃಷಿ ಬದುಕಿನ ಚಿತ್ರವಿದು ಗಾಢವಾದ ನೀಲಿ ಆಕಾಶದೊಂದಿಗೆ ಮೇಲೆ ಆರಂಭವಾಗುವ ಚಿತ್ರ ಮಧ್ಯದಲ್ಲಿ ದೊಡ್ಡ ಮನುಷ್ಯಾಕೃತಿಯ ಮುಖವೊಂದು ಗೋಚರಿಸುತ್ತದೆ. ತಲೆಯಲ್ಲಿ ವಿಚಾರಗಳಿಗನುಗುಣವಾಗಿ ನವ್ಯತೆಯೆಡೆಗೆ ಸಾಗುವ ಮನುಷ್ಯ ಧರ್ಮ ಕೃಷಿಯಿಂದ ಫ್ಯಾಕ್ಟರಿ ಬದುಕಿನೆಡೆಗೆ ಸಾಗುವ ಕನಸು ತಲೆಯಲ್ಲಿ ತುಂಬಿಕೊಂಡು ಫ್ಯಾಕ್ಟರಿ ಕೊಳವೆಗಳಿಂದ ಹೊಗೆ ಆಕಾಶದೆತ್ತರಕ್ಕೆ ಸಾಗಿರುವ ಹಾಗೂ ಬಲಬದಿಯ ಹೊಲದಲ್ಲಿ ಹುಲ್ಲು ತುಂಬಿದ ಎತ್ತಿನ ಬಂಡಿಯೊಂದು ನಿಂತಿದೆ. ಎಡಬದಿಯಲ್ಲಿ ಹಿಮದ ಗುಡ್ಡವೊಂದು ಗೋಚರಿಸುತ್ತದೆ. ಹಸಿರು ತುಂಬಿದ ಬೆಟ್ಟಗಳಿಂದ ಮುಂಭಾಗವು ಗಿಡಮರಗಳನ್ನು ಸಂರಕ್ಷಿಸುವ ಸಂಕೇತವಾಗಿ ಮೂಡಿಬಂದಿದೆ. ದೊಡ್ಡ ಮುಖಕ್ಕೆ ಎದುರಾಗಿ ಆಕಡೆ ಮುಖವಾಗಿ ನಿಂತ ಮನುಷ್ಯಾಕೃತಿಯೊಂದು ಎದುರುಬದುರು ಕಪ್ಪು ಮುಖದ ಬಿಳಿ

ಎತ್ತುಗಳ ಮಧ್ಯದಲ್ಲಿ ಸಿಕ್ಕಿ ಹಾಕಿಕೊಂಡಂತೆ ಗೋಚರವಾಗುತ್ತದೆ. ಅವನ ಬದಿಗೆಲ್ಲಾ ವಿಚಾರ ತರಂಗಗಳು ಎಲೆಬಳ್ಳಿಗಳು ವರ್ಣಾಲಂಕೃತವಾಗಿವೆ. ಕೆಂಪು ಕೋಡುಗಳ ಎತ್ತು ಕಿವಿಗಳನ್ನು ಮೇಲೆತ್ತಿ ನಿಂತುಕೊಂಡಿವೆ. ಎತ್ತಿನ ಕಾಲುಗಳುಳ್ಳ ನೆಲದ ತುಂಬೆಲ್ಲಾ ತುತ್ತೂರಿಯಾಕಾರದ ವಸ್ತುಗಳು ಮೇಲ್ಮುಖವಾಗಿ ನೆಲದಲ್ಲಿ ಹೂತಿರುವಂತೆ ಚಿತ್ರಿಸಲಾಗಿದೆ. ಕೆಂಪು ಬಣ್ಣದ ಉಸುಕು ನೆಲ, ಎತ್ತಿನ ಬಂಡಿ ಎಡಬದಿಯ ನೆಲ ಒಂದು ಬಣ್ಣವಾದರೆ ಮಧ್ಯಭಾಗದಲ್ಲಿ ಹಸಿರು ತುಂಬಿ ಆಕಾಶದ ನೀಲಿಗೆ ಸಂಯೋಜನಾತ್ಮಕವಾಗಿ ಚಿತ್ರಿತವಾಗಿವೆ. ಅಲ್ಲಲ್ಲಿ ಕಪ್ಪು ವರ್ಣವು ತನ್ನ ಪ್ರಭಾವದಿಂದ ಚಿತ್ರಗಳನ್ನು ಎದ್ದು ಕಾಣುವಂತೆ ವಸ್ತುಗಳನ್ನು ತೋರ್ಪಡಿಸುತ್ತದೆ.

ಸಣ್ಣ ಮುದಗಪ್ಪ ಗಡ್ಡಿ ಇವರು ಹುನಗುಂದ ತಾಲ್ಲೂಕಿನ ದನ್ನೂರು ಗ್ರಾಮದಲ್ಲಿ ಜನಿಸಿದ್ದಾರೆ. ಬಾಲ್ಯದಿಂದ ಚಿತ್ರಕಲಾಸಕ್ತರಾದ ಇವರು ವಿಜಾಪುರ ಮತ್ತು ಇಲಕಲ್ಲುಗಳಲ್ಲಿ ಚಿತ್ರಕಲಾ ಪದವಿಯನ್ನು ಪಡೆದು ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ವಿ.ಎ. ಸ್ನಾತಕೋತ್ತರ ಪದವಿ ಪಡೆದು ಚಿತ್ರಕಲೆಯಲ್ಲಿ ಪಿಎಚ್.ಡಿ. ಮಹಾಪ್ರಬಂಧವನ್ನು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಸದ್ಯ ಯಾದಗಿರಿ ಜಿಲ್ಲೆಯಲ್ಲಿ ಸರ್ಕಾರಿ ಪ್ರೌಢಶಾಲೆ ಚಿತ್ರಕಲಾ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**೪೩. ಚಾಲುಕ್ಯ ಸಿರಿ**

ಇಡೀ ಚಿತ್ರದ ಮೂಕ್ಕಾಲು ಭಾಗವು ಮೇಲೆ ಚಾಲುಕ್ಯ ಶಿಲ್ಪದ ಸಾಲು ಕೃತಿಯನ್ನು ಹೊಂದಿದ್ದು, ಅಲ್ಲಿ ಗಣಗಳು, ಕೊಂಬು-ಕಹಳೆಗಳನ್ನು ಊದುವ ಶಿಲ್ಪಗಳು ಢಕ್ಕೆ, ಮೃದಂಗಗಳನ್ನು ಬಾರಿಸುವ ಶಿಲ್ಪಗಳು ಮತ್ತು ಅವುಗಳೊಂದಿಗೆ ನರ್ತಿಸುತ್ತಿರುವ ಮನುಷ್ಯರ ಚಿತ್ರಗಳೊಂದಿಗೆ ಈ ಭಾಗವು ಆವೃತವಾಗಿದ್ದು ಕೆಳಗೆ ಸಂಪೂರ್ಣ ತೆಳು ಹಳದಿ ಬಣ್ಣದ ಆಕಾಶದಿಂದ ವರ್ಣಗಳನ್ನು ಸೋರಿಕೆಯಿಂದ ತುಂಬಿ ಎತ್ತರವಾದ ಗುಡ್ಡದ ಮೇಲೆ ದೇವಾಲಯವೊಂದನ್ನು ಚಿತ್ರಿಸಲಾಗಿದೆ.

ಹೆಚ್ಚು ವರ್ಣಗಳನ್ನು ಹೊಂದಿರದೆ ಕೇವಲ ಕೆಂಪು ಮಿಶ್ರಿತ ಕಂದು ಬಣ್ಣದ ಚಿತ್ರ ಇದಾಗಿದ್ದು, ಕೇವಲ ನೆರಳು ಬೆಳಕುಗಳಿಂದ ಅಲಂಕೃತಗೊಳಿಸಲಾಗಿದೆ. ಚಿತ್ರದಲ್ಲಿ ಶಿಲ್ಪವು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದ್ದು ಒಟ್ಟಿನಲ್ಲಿ ಬಾದಾಮಿ ಗುಡ್ಡದ ವರ್ಣದಿಂದ ಚಾಲುಕ್ಯರ ಸಿರಿಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಚಿತ್ರದಲ್ಲಿ ಏಕವರ್ಣ ಸಂಯೋಜನೆ ಅದ್ವಿತೀಯವಾಗಿದೆ.

ಇದಲ್ಲದೇ ಹಲವು ಜನ ಹಿರಿಯ ಚಿತ್ರಕಲಾ ಶಿಕ್ಷಕರು ಇಂದಿಗೂ ಕಲಾಕೃತಿ ರಚನೆಯಲ್ಲಿ ನಿರತರಾಗಿದ್ದಾರೆ. ಅಂತವರಲ್ಲಿ ಪ್ರಮುಖರು ಅಮೀನಗಡದ ಬಿ.ಎಚ್. ತುಂಬಗಿ, ಇಲಕಲ್ಲಿನ ಎಂ.ಎಂ. ಶಿರೂರ, ಎಲ್.ಎನ್. ಹಣಗಿ, ಮಲ್ಲಿಕಾರ್ಜುನ ಟಂಕಸಾಲಿ, ಹುನಗುಂದದ ಜಿ.ಬಿ. ಕಂಬಾಳಿಮಠ, ಮುಧೋಳದ ಶ್ರೀ ಅಂಗಡಿ, ಶ್ರೀ ಸಿಂಧೆ, ಜಮಖಂಡಿಯ ಎಸ್.ಎಸ್. ಪೂಜಾರಿ, ಶ್ರೀ ಹಡಪದ, ಮರೇಗುದ್ದಿಯ ನಾಗರಾಜ ಪತ್ತಾರ, ಬಾದಾಮಿಯ ಎಂ.ಐ. ಬಾರಾವಲಿ, ಜೆ. ದಾಜೀಬ, ಶಕೀಲ್ ಅಹಮ್ಮದ್ ಪಿಂಜಾರ, ದಿನೇಶ, ಮಹಾಕೋಟೇಶ್ವರಗೌಡ ಪಾಟೀಲ, ಬಸವರಾಜ ಹಡಪದ, ಗುಳೇದಗುಡ್ಡದ ಸಿ.ಎಂ. ಕಾಮಾ, ಬನ್ನಿಹಟ್ಟಿಯ ಬಸವರಾಜ ಹೊಸಮನಿ, ಗೋಠೆಯ ಅಶೋಕ ಹರಿಜನ,

ಧನ್ನೂರಿನ ಎಸ್.ಎಸ್. ಗಡ್ಡಿ, ಹನುಮಂತ ಹೂಗಾರ್ ಇನ್ನೂ ಅನೇಕರು ಜಿಲ್ಲೆಯಲ್ಲಿ ಕಾರ್ಯನಿರತ ಕಲಾವಿದರಾಗಿ ಕಲಾಕೃತಿ ರಚನೆಯಲ್ಲಿ ತೊಡಗಿರುತ್ತಾರೆ.

*** ವಲಸೆ ಹೋದ ಜಿಲ್ಲೆಯ ಕಲಾವಿದರು**

ಜಿಲ್ಲೆಯಲ್ಲಿ ಜನಿಸಿ ಇಲ್ಲಿಯೇ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣವನ್ನು ಪಡೆದು ಕಲಾ ಶಿಕ್ಷಣದ ನಂತರ ಬೇರೆ ಜಿಲ್ಲೆಗಳಲ್ಲಿ ಕೆಲಸದ ನಿಮಿತ್ತ ತೆರಳಿ ಅಲ್ಲಿಯೇ ನೆಲೆಸಿ ಆ ಜಿಲ್ಲೆಯವರೇ ಎನಿಸಿಕೊಂಡ ನಮ್ಮ ಜಿಲ್ಲೆಯ ಪ್ರತಿಷ್ಠಿತ ಕೆಲವೇ ಕಲಾವಿದರ ಕೃತಿಗಳನ್ನು ಮಾತ್ರ ಇಲ್ಲಿ ಪ್ರಸ್ತುತಪಡಿಸಲಾಗಿದೆ. ಉಳಿದ ಕೆಲವು ಜನರ ಈಗಿರುವ ಸ್ಥಳವನ್ನು, ಅವರ ಹೆಸರುಗಳನ್ನು ಮೂಲಊರನ್ನು ಮಾತ್ರ ನಮೂದಿಸಲಾಗಿದೆ.

**೧. ಮಹಿಳೆ**

ವಿ.ಟಿ. ಕಾಳೆಯವರ ಪ್ರಸಿದ್ಧ ಚಿತ್ರಗಳಲ್ಲಿ ರಾಜಮನೆತನದ ಘೋರ್ಪಡೆಯವರ ಕುಟುಂಬದ ಸದಸ್ಯರ ಚಿತ್ರಗಳು ಬಹು ಪ್ರಸಿದ್ಧವಾಗಿವೆ. ಮತ್ತು ಈಗಲೂ ಅವರ ಆಸ್ಥಾನದಲ್ಲಿ ಗೌರವಾನ್ವಿತವಾಗಿ ಪ್ರದರ್ಶನಗೊಳ್ಳುತ್ತಿವೆ. ಅವುಗಳಲ್ಲಿ ನಿಂತ ತರುಣಿ ಸಂಡೂರಿನ ನಿಂತ ನೀರಿನ ಮುಂಭಾಗದಲ್ಲಿ ಮಹಿಳೆಯೋರ್ವಳು ಛಾಯಾಚಿತ್ರಕ್ಕೆ ಪೋಜು ಕೊಟ್ಟಂತೆ ನೈಜವಾಗಿ ಚಿತ್ರಿಸಲಾಗಿದೆ. ಕೆಂಪು ಬಣ್ಣದ ಲಂಗ, ಓಡಣಿಗಳನ್ನು ಧರಿಸಿದ ಮಹಿಳೆ ಕಪ್ಪು ಮಿಶ್ರಿತ ಕೆಂಪು ನೆಲದಲ್ಲಿ ನಿಂತು ಹಿಂದಿನ ನೀರಿನ ಛಾಯೆಯಲ್ಲಿ ಅವಳ ಕೆಂಪು ಬಣ್ಣದ ವಸ್ತ್ರಗಳು ಸೊಗಸಾಗಿ ನೆರಳು, ಬೆಳಕುಗಳೊಂದಿಗೆ ಮೂಡಿಬಂದಿದೆ. ನೀರು ಮುಗಿಯುತ್ತಿದ್ದಂತೆ ತಲೆಯು ಎರಡು ಬೆಟ್ಟಗಳ ಮಧ್ಯದಲ್ಲಿ ಬರುವಂತೆ ರಚಿತವಾಗಿದ್ದು, ತಲೆಯಲ್ಲಿ ಕಪ್ಪನೆಯ ಕೂದಲುಗಳು ಬೆಟ್ಟದ ಹಿಂದಿನ ಹಿಮದಂತಿರುವ ಬೆಟ್ಟಕ್ಕೆ ಮುಂದೆ ಎದ್ದುಕಾಣುವಂತೆ ಚಿತ್ರಿತವಾಗಿದೆ. ಬೆಟ್ಟಗಳ ಹಿಂದೆ ಬಿಳಿಯ ವರ್ಣಗಳ ಮೋಡಗಳಿಂದ ಕಡು ನೀಲಿ ಬಣ್ಣದ ಆಕಾಶದಿಂದ ಚಿತ್ರವು ಮುಕ್ತಾಯವಾಗುತ್ತದೆ. ನೈಜವಾದ ನೀರು ಮತ್ತು ಅದರ ಅಲೆಗಳು ಹಿನ್ನೆಲೆ ವಿನ್ಯಾಸವನ್ನೂ ಮುಂದಿನ ಆಕೃತಿಯಷ್ಟೇ ಮಹತ್ವಪೂರ್ಣವಾಗಿ ರಚಿಸಿದ ಚಿತ್ರ ಇದಾಗಿದೆ.

ಸದ್ಯ ಸಂಡೂರಿನಲ್ಲಿ ವಾಸವಾಗಿರುವ ವಿ.ಟಿ. ಕಾಳೆಯವರು ೧೯೩೪, ಫೆಬ್ರವರಿ ೧೨ರಂದು ಜಿಲ್ಲೆಯ ಹುನಗುಂದದಲ್ಲಿ ಜನಿಸಿದರು. ಮುಂಬೈನ ಜೆ.ಜೆ. ಸ್ಕೂಲ್ ಆಫ್ ಆರ್ಟ್‌ನಲ್ಲಿ ಡಿಪ್ಲೊಮಾ ಗದುಗಿನ ವಿಜಯ ಕಲಾಮಂದಿರದಲ್ಲಿ ಟಿ.ಪಿ. ಅಕ್ಕಿ ಹಾಗೂ ಸಿ.ಎನ್. ಪಾಟೀಲರಿಂದ ಶಿಕ್ಷಣ ಪಡೆದು ಸಂಡೂರಿನ ರಾಜಮನೆತನದ ಎಂ.ವೈ. ಘೋರ್ಪಡೆಯವರ ಶಾಲೆಯಲ್ಲಿ ಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಇತ್ತೀಚೆಗೆ ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ, ಕನ್ನಡ ವಿಶ್ವವಿದ್ಯಾಲಯದ ನಾಡೋಜ ಗೌರವಕ್ಕೆ ಪಾತ್ರರಾಗಿದ್ದಾರೆ. ನೈಜ ಚಿತ್ರ ರಚನೆ, ಕಾಲ್ಪನಿಕ ದೇವಾನುದೇವತೆಗಳ ಚಿತ್ರಗಳು ಇವರ ಪ್ರಸಿದ್ಧ ಕೃತಿಗಳು.

**೨. ಕುದುರೆಯ ಮೇಲೆ ಘೋರ್ಪಡೆ**

ಭಾವಚಿತ್ರಗಳನ್ನು ಕ್ಯಾಮರದಲ್ಲಿ ಕ್ಲಿಕ್ಕಿಸಿ, ಮುದ್ರಿಸಿ ನೋಡುವುದಕ್ಕಿಂತ ಅಂದವಾಗಿ ಚಿತ್ರಗಳನ್ನು ರಚಿಸಬಲ್ಲ ಕಾಳೆಯವರ ನೈಜ ಮನೋಸ್ಥಿತಿಗೆ ಈ ಚಿತ್ರ ಸಾಕ್ಷಿಯಾಗಿದೆ. ಘೋರ್ಪಡೆಯವರ ಪ್ರೀತಿಯ

ಬಿಳಿ ಕುದುರೆ ನೈಜವಾಗಿ ಚಿತ್ರಿತವಾಗಿದ್ದು, ನೆಲದಲ್ಲಿ ಕಲ್ಲು ಮಿಶ್ರಿತವಾದ ವರ್ಣದಿಂದ ಪೂರ್ಣಗೊಳಿಸಲಾಗಿದೆ. ಸಂಡೂರಿನ ಕೆಂಪು ಮಣ್ಣು ತನ್ನ ಹಿನ್ನೆಲೆ ವಿನ್ಯಾಸದ ಛಾಪ ಮೂಡಿಸಿದೆ. ಸಫಾರಿ ವೇಷವನ್ನು ಧರಿಸಿದ ಘೋರ್ಪಡೆಯವರು ಎಡಗೈಯಲ್ಲಿ ಕುದುರೆಯ ಮೂಗುದಾರವನ್ನು ಹಿಡಿದು, ಬಲಗೈಯನ್ನು ತೊಡೆಯ ಮೇಲೆ ಇಟ್ಟು, ಲಾಳದಲ್ಲಿ ಶೂಗಳನ್ನು ಹೊಂದಿದ ಕಾಲನ್ನು ಇಟ್ಟು ಕುದುರೆಯ ಮೇಲೆ ಕುಳಿತ ಚಿತ್ರವು ಆಕಾಶವು ಆಕೃತಿಗೆ ತಕ್ಕಂತೆ ಬಿಳಿಯ ಮೋಡಗಳನ್ನು ಹೊಂದಿದ ಕಡುನೀಲಿ ಬಣ್ಣದೊಂದಿಗೆ ಮುಕ್ತಾಯಗೊಳ್ಳುತ್ತದೆ. ಛಾಯಾ ಚಿತ್ರವೊಂದರ ನೈಜ ಪ್ರತಿಕೃತಿ ಇದಾದುದರಿಂದ ಸೃಜನಶೀಲತೆಗಿಂತ ಇದ್ದಕ್ಕಿದ್ದಂತೆ ಚಿತ್ರಿಸುವ ಚಾಕಚಕ್ಯತೆಯಿಂದ ಕಾಳೆಯವರನ್ನು ಮೆಚ್ಚಬಹುದು.

**೩. ಅಜ್ಜ ಮತ್ತು ಮೊಮ್ಮಗ**

ಈ ಚಿತ್ರವೂ ಕೂಡ ಛಾಯಾಚಿತ್ರದ ಪ್ರತಿಕೃತಿಯಾಗಿದ್ದು, ನೈಜವಾಗಿ ಚಿತ್ರಿಸುವ ಕಾಳೆಯವರ ಶಕ್ತಿಗೆ ಪೂರಕವಾಗಿದೆ. ಸಚಿವರಾಗಿದ್ದಾಗ ಘೋರ್ಪಡೆಯವರು ತಮ್ಮ ಮೊಮ್ಮಗನನ್ನು ತೊಡೆಯ ಮೇಲೆ ಕುಳ್ಳರಿಸಿಕೊಂಡ ಚಿತ್ರ ಇದಾಗಿದೆ. ಘೋರ್ಪಡೆಯವರಿಗಿಂತ ಕೊಂಚ ಎತ್ತರದಲ್ಲಿರುವ ಮೊಮ್ಮಗನ ಮುಖ ನಗುಮುಖವಾಗಿದ್ದು, ಕಪ್ಪನೆಯ ಕೂದಲುಗಳನ್ನು ಹೊಂದಿದೆ. ಅದೇ ರೀತಿ ಒಂದೂ ಕೂದಲುಗಳಿಲ್ಲದ ಘೋರ್ಪಡೆಯವರ ತಲೆ ತುಂಬಾ ನೈಜವಾಗಿ ಬೋಳು ತಲೆಯೊಂದಿಗೆ ನಗುಮುಖವನ್ನು ಹೊಂದಿದೆ. ನಡುವನ್ನು ಬಳಸಿದ ಎಡಗೈ, ಮುಂದೆ ಕೈ ಮಾಡಿದ ಬಲಗೈ ತೊಡೆಯ ಮೇಲೆ ಕುಳ್ಳರಿಸಿಕೊಂಡು ಇಬ್ಬರೂ ಬಿಳಿಯ ವಸ್ತ್ರಗಳನ್ನು ಧರಿಸಿದ್ದರೂ ಒಂದಕ್ಕೊಂದು ಪೂರಕವಾಗಿ ಹಿಂದುಮುಂದಿನ ಪರಿಕಲ್ಪನೆ ನೀಡುತ್ತವೆ. ಒಟ್ಟು ಚಿತ್ರವು ಪ್ರತಿಕೃತಿಯಾದರೂ ಸುಂದರವಾಗಿ ಮೂಡಿಬಂದಿದೆ.

**೪. ಬಳ್ಳಾರಿ ಬೆಟ್ಟ**

ಈ ಚಿತ್ರದಲ್ಲಿ ಘೋರ್ಪಡೆಯವರು ಅತೀ ಚಿಕ್ಕದಾಗಿ ಮುಂಭಾಗದಲ್ಲಿ ನಿಂತಿರುವುದು ಕಂಡುಬರುತ್ತದೆ. ಕೈಯಲ್ಲಿ ಕ್ಯಾಮರಾ ಹಿಡಿದು ನಿಂತಿರುವ ಅವರ ಹಿಂಭಾಗದಲ್ಲಿ ಇಡೀ ಬೆಟ್ಟವು ಕೋಟೆಯೊಂದಿಗೆ ಕಂಗೊಳಿಸುತ್ತಿದೆ. ಬೆಟ್ಟದಲ್ಲಿರುವ ಪ್ರತೀ ಕಲ್ಲು ಕಲ್ಲು ನೈಜವಾಗಿ ಚಿತ್ರಿತವಾಗಿವೆ. ಕಾಲುದಾರಿ ಮುಂದೆ ಹೋದಂತೆ ಎತ್ತರ ಎತ್ತರಕ್ಕೆ ವಿಸ್ತರಿಸಿದ್ದು, ಕಪ್ಪು ಬಣ್ಣದ ಬೆಟ್ಟವು ಮೇಲೆ ಕೋಟೆ ಗೋಡೆಯನ್ನು ಹೊಂದಿದೆ. ಅವರ ನಿಂತ ಸ್ಥಳದಿಂದ ಎಷ್ಟು ಎತ್ತರವಾಗಿದೆ ಎನ್ನುವುದಕ್ಕೆ ಅವರ ಆಕೃತಿ ಅಷ್ಟು ಚಿಕ್ಕದಾಗಿರುವುದಕ್ಕೆ ಕಾರಣವಾಗಿದೆ. ಅವರನ್ನು ದೃಷ್ಟಿಯಲ್ಲಿಟ್ಟುಕೊಂಡು ಇಡೀ ಚಿತ್ರವನ್ನು ವೀಕ್ಷಿಸಿದಾಗ ಕಿ.ಮೀ. ಗಟ್ಟಲೆ ಹಿಂದಕ್ಕೆ ಮತ್ತು ಎತ್ತರಕ್ಕೆ ಹೋದಂತೆ ಕಲ್ಪನೆಯನ್ನು ನೀಡುತ್ತದೆ.

ಹುನಗುಂದ ತಾಲ್ಲೂಕಿನ ಕೆಲೂರ ಗ್ರಾಮದ ದಿವಂಗತ ಕಾಳಿದಾಸ ಪತ್ತಾರ ೧ ಜೂನ್, ೧೯೪೩ರಲ್ಲಿ ಕೆಲೂರಿನಲ್ಲಿಯೇ ಜನಿಸಿದರು. ೧೯೬೯ರಲ್ಲಿ ಕೆನ್ ಕಲಾಶಾಲೆಯಿಂದ ಲಲಿತಕಲೆಯಲ್ಲಿ ಡಿಪ್ಲೊಮೊ, ೧೯೭೫ರಲ್ಲಿ ಎಂ.ಎಸ್.ಪಿ.ವಿ.ಯಿಂದ ಗ್ರಾಫಿಕ್‌ನಲ್ಲಿ ಪಿ.ಜಿ. ಬೆಂಗಳೂರು, ದಾವಣಗೆರೆ, ಹೈದ್ರಾಬಾದ್ ಮತ್ತು ದೆಹಲಿಯ ಮುಂತಾದ ಕಡೆಗಳಲ್ಲಿ ಪ್ರದರ್ಶನ ನಡೆಸಿದ್ದಾರೆ. ಬಾಂಗ್ಲಾದೇಶದಲ್ಲಿ ನಡೆದ ಎರಡನೇ ಏಷ್ಯಾ ಬಿನಾಲೆಯಲ್ಲಿ ಭಾಗವಹಿಸಿ ವಿನ್ಯಾಸೋತ್ಸವ ಯು.ಎಸ್.ಎ.ನಲ್ಲಿ ಭಾಗವಹಿಸಿದ್ದಾರೆ.

### ೫. ಹಳ್ಳಿ ಹುಡುಗಿ

ಜಿಲ್ಲೆಯಿಂದ ವಲಸೆ ಹೋದ ಕಲಾವಿದರಲ್ಲಿ ಕೆಲೂರಿನ ಕಾಳಿದಾಸ ಪತ್ತಾರ ಅವರು ರಚಿಸಿದ ಈ ಕಲಾಕೃತಿಯಲ್ಲಿ ಹಸಿರು ಬಣ್ಣದ ರವಿಕೆಯನ್ನು ತೊಟ್ಟು, ಹಳದಿ ಮತ್ತು ಕೆಂಪು ವರ್ಣದ ಲಂಗ ತೊಟ್ಟು, ಕೈ ಮುಂದೆ ಕಟ್ಟಿಕೊಂಡು ನಿಂತಿದ್ದಾಳೆ. ಮುಖದಲ್ಲಿ ಮಂದಹಾಸ, ಅಗಲವಾದ ಕಿವಿ, ಹಣೆ ಮತ್ತು ಮೂಗಿಗೆ ಬಿಳಿ ಬಣ್ಣದ ಲೇಪನ, ತಲೆಗೂದಲು ಹಿಂದೆ ಹೋದಂತೆಲ್ಲಾ ಜಡೆಯಾಗಿ ಬೆನ್ನ ಹಿಂದೆ ಇಳಿಬಿದ್ದಿದೆ. ಲಂಗದಲ್ಲಿರುವ ಎಲ್ಲಾ ವರ್ಣಗಳು ಹಿನ್ನೆಲೆ ವಿನ್ಯಾಸದ ಗೋಡೆಗೆ ಬಳಸಲಾಗಿದ್ದು, ಸಾಮಾನ್ಯ ಸಂಯೋಜನೆಯಾಗಿದೆ. ರವಿಕೆಯಲ್ಲಿರುವ ಅಲ್ಪಸ್ವಲ್ಪ ನೀಲಿ ಮತ್ತು ಹಸಿರು ವರ್ಣಗಳನ್ನು ಗೋಡೆಗೆ ಒಣಗಲು ಹಾಕಿದ ಬಟ್ಟೆಗಳಲ್ಲಿ ಬಿಂಬಿಸಿ ಸಮತೋಲನವನ್ನು ಕಳೆದುಕೊಳ್ಳಲಾಗಿದೆ. ಕೊರಳಲ್ಲಿ ಬಂಗಾರದ ಕರಿಮಣಿ ಇಲ್ಲದ ತಾಳಿಯೊಂದನ್ನು ಚೈನ್‌ನಂತೆ ಎರಡು ಎಳೆಯಾಗಿ ಬಿಡಲಾಗಿದೆ. ಎಡಗೈ ಹಿಂದೆ ಸಂಪೂರ್ಣವಾಗಿ ಬಿಳಿಯ ವರ್ಣವನ್ನು ಬಳಸಿ ಚಪ್ಪಟೆಯಾಗಿ ಮಧ್ಯದಲ್ಲಿ ದೃಷ್ಟಿ ಸೆಳೆಯುವಂತೆ ಮಾಡಲಾಗಿದೆ. ಒಟ್ಟು ಚಿತ್ರವು ಸುಂದರವಾದ ವರ್ಣರಂಜಿತ ಸಂಯೋಜನೆಯಾಗಿದೆ.

ಜಿಲ್ಲೆಯ ಇಲಕಲ್ಲಿನಲ್ಲಿ ೧೮ ಅಕ್ಟೋಬರ್, ೧೯೨೨ರಂದು ಜನಿಸಿದ ಹಿರಿಯ ಕಲಾವಿದ ವಿ.ಸಿ. ಮಾಲಗತ್ತಿ ಅವರು ಈಗ ಬೆಳಗಾವಿಯಲ್ಲಿ ವಾಸವಾಗಿದ್ದರು. ಜೆ.ಜೆ. ಕಲಾಶಾಲೆಯಿಂದ ಆರ್ಟ್ ಮಾಸ್ಟರ್ ಪದವಿಯನ್ನು ಪಡೆದಿದ್ದರು. ದಸರಾ ಪ್ರದರ್ಶನ ಮಂಡಳಿಯ, ಟೆಕ್ಸ್ಟ್‌ಬುಕ್ ಸಮಿತಿಯ ಸದಸ್ಯತ್ವ ಪಡೆದಿದ್ದರು. ೧೯೮೦ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ವಾರ್ಷಿಕ ಪ್ರಶಸ್ತಿಯನ್ನು ಪಡೆದಿದ್ದಾರೆ. ಹಲವಾರು ಲೇಖನಗಳನ್ನು ಬರೆದಿದ್ದಾರೆ. ದೆಹಲಿಯ ಸಾಹಿತ್ಯ ಸಮ್ಮೇಳನದಲ್ಲಿ ೧೯೫೫ರಲ್ಲಿ ಹೆಬ್ಬಾರ ಪ್ರಶಸ್ತಿ ಲಭಿಸಿದೆ.

### ೬. ಹೂ ಹುಡುಗಿ

ದಪ್ಪನೆಯ ಕುಂಚದಿಂದ ಸರಾಗವಾಗಿ ಮತ್ತು ವೇಗವಾಗಿ ರಚಿಸಿದ ವಿ.ಸಿ. ಮಾಲಗತ್ತಿ ಈ ಚಿತ್ರ ಹುಡುಗಿಯೊಬ್ಬಳು ತಾನು ಹೂವು ಮುಡಿದುಕೊಂಡು ಎಡಗೈಯಲ್ಲಿ ಹೂಗುಚ್ಛವನ್ನು ಹಿಡಿದುಕೊಂಡಿರುವ ಚಿತ್ರ ಇದಾಗಿದೆ. ಹುಡುಗಿಯ ಮುಖದಲ್ಲಿ ಬಿಳಿ ಮಿಶ್ರಿತ ಕೆಂಪುವರ್ಣ ಲೇಪಿಸಿ ಅಲ್ಲಲ್ಲಿ ನೀಲಿ ಮತ್ತು ಹಳದಿ ಬಣ್ಣಗಳ ಮಿಶ್ರಣ ಮಾಡಲಾಗಿದೆ. ತಲೆಯಲ್ಲಿರುವ ಕೂದಲುಗಳಿಗೆ ಎಳೆ ಎಳೆಯಾಗಿ ಬೇರೆ ಬೇರೆ ಬಣ್ಣಗಳನ್ನು ನೀಡಲಾಗಿದೆ. ಹುಡುಗಿ ಹಾಕಿಕೊಂಡ ವೇಷಭೂಷಣ, ತೆಳುನೀಲಿ ಬಣ್ಣದ ಮಿಶ್ರಣವಾಗಿದ್ದು, ಎದ್ದುನಿಂತ ಬಲತೋಳು ಮತ್ತು ಹೊಟ್ಟೆಯ ಕೆಳಗಿನ ಭಾಗ ಒಂದೇ ಬಣ್ಣದಲ್ಲಿ ಚಿತ್ರಿತವಾಗಿದೆ. ಮಧ್ಯದಲ್ಲಿರುವ ಫ್ರಾಕು ಕಂದು ಬಣ್ಣದಾಗಿದೆ. ತಲೆಯಲ್ಲಿ ಮುಡಿದ ಹೂವು ಕೆಂಪು ಮಿಶ್ರಿತ ಬಿಳಿಯ ಬಣ್ಣದ್ದಾಗಿದ್ದು, ಮುಖದ ಬಣ್ಣಕ್ಕೆ ಪೂರಕವಾಗಿದೆ. ಕೈಯಲ್ಲಿ ಹಿಡಿದುಕೊಂಡ ಹೂಗಳಲ್ಲಿ ಹಳದಿ, ನೀಲಿ, ಹಸಿರು ಬಣ್ಣದ ಹೂಗುಚ್ಛವಾಗಿದ್ದು ಕೆಳಗಡೆ ದೇಟುಗಳು ಕಡುಹಸಿರು ಬಣ್ಣದಿಂದ ಸೃಷ್ಟಿಯಾಗಿವೆ. ಹಿಡಿದುಕೊಂಡ ಕೈ ಕಾಣುವುದಿಲ್ಲ. ಆದರೆ ಎಡಗೈಯಲ್ಲಿ ಹೂಗಳನ್ನು ಹಿಡಿದುಕೊಂಡಂತೆಯೇ ಭಾಸವಾಗುತ್ತದೆ. ಹೂವು ಮತ್ತು ಹೊಟ್ಟೆಯ ಭಾಗದಲ್ಲಿರುವ ಫ್ರಾಕಿನ ಕಂದು ಬಣ್ಣದಲ್ಲಿ ಬಿಳಿಯ

ವರ್ಣವನ್ನು ಮಿಶ್ರಿಸಿ, ಹಿನ್ನೆಲೆ ವಿನ್ಯಾಸವನ್ನು ರಚಿಸಲಾಗಿದೆ. ಒಟ್ಟು ಚಿತ್ರವು ಬರೀ ಮುಖ ಇದ್ದರೂ ಹೂವು ಮತ್ತು ಫ್ರಾಕಿನ ವಿನ್ಯಾಸಗಳಲ್ಲಿ ವರ್ಣಗಳನ್ನು ಸಂಯೋಜಿಸಿಕೊಂಡ ಪರಿಪೂರ್ಣವಾದ ಚಿತ್ರವಾಗಿದೆ.

ಬಾದಾಮಿ ತಾಲ್ಲೂಕಿನ ಜಲಗೇರಿಯಲ್ಲಿ ೧ ಜೂನ್, ೧೯೬೩ರಲ್ಲಿ ಜನಿಸಿದ ಈರಣ್ಣ ದಂಡಿನವರು ಪ್ರಸ್ತುತ ಕೋಲಾರ ಚಿನ್ನದ ಗಣಿಯ ಹತ್ತಿರದ ಶಿವನ ಸಮುದ್ರದ ಸರ್ಕಾರಿ ಪ್ರೌಢಶಾಲೆಯ ಕಲಾಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಗದುಗಿನ ವಿಜಯ ಕಲಾಮಂದಿರದಿಂದ ಎ.ಎಮ್. ಪದವಿ, ೧೯೮೫ರಲ್ಲಿ ಮೈಸೂರು ದಸರಾ ಪ್ರಶಸ್ತಿ, ೧೯೯೨ರಲ್ಲಿ ಹಿಮಾಚಲ ಪ್ರದೇಶದ ಪ್ರಶಸ್ತಿ, ೧೯೮೭ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ವಾರ್ಷಿಕ ಪ್ರಶಸ್ತಿ. ಕಲಾಕೃತಿಗಳ ಗೋವಾ ಲಲಿತಕಲಾ ಅಕಾಡೆಮಿಯ ಸಂಗ್ರಹದಲ್ಲಿವೆ.

**೭. ಸುಳುವು**

ಈರಣ್ಣ ದಂಡಿನವರ ಪ್ರತಿ ಕಲಾಕೃತಿಯ ವೈಶಿಷ್ಟ್ಯ ಉಬ್ಬು, ತಗ್ಗುಗಳ ಹಾವಿನಾಕಾರದ ವಸ್ತುಗಳು ಒಂದರೊಳಗೊಂದು ಸೇರಿ ಸಂಯೋಜಿತಗೊಂಡಿರುತ್ತವೆ. ಈ ಚಿತ್ರದಲ್ಲಿ ಕೂಡ ಎಸ್ ಆಕಾರದ ಹಲವಾರು ಆಕೃತಿಗಳು, ಹಾವುಗಳು ಜೊತೆಗೂಡಿದಂತೆ ಭಾಸವಾಗುವ ಚಿತ್ರ ಇದಾಗಿದೆ. ಅಲ್ಲಲ್ಲಿ ಪ್ರಶ್ನಾರ್ಥಕ ವರ್ತುಳ, ಉದ್ದ, ಅಡ್ಡ, ಚೌಕಾಕೃತಿಗಳ ಮಧ್ಯ ಇಡೀ ಕೃತಿಯು ಸಂಯೋಜಿತವಾಗಿದೆ. ತೆಳುನೀಲಿ ಬಣ್ಣದ ಹಿನ್ನೆಲೆ ವಿನ್ಯಾಸದಲ್ಲಿ ತೆಳುಕೆಂಪು ಬಣ್ಣದ ಆಕೃತಿಗಳು ಸಮ್ಮಿಳಿತವಾಗಿವೆ. ಚಿತ್ರದಲ್ಲಿ ವಸ್ತುವಿನಿಂದ ವಸ್ತುವಿಗೆ ಬೇರ್ಪಡಿಸಲು ಕಡುಗೆಂಪು ಬಣ್ಣದ ಬಳಕೆಯನ್ನು ಸಂದುಗಳಲ್ಲಿ ಮಾಡಲಾಗಿದೆ. ಇದರಿಂದಾಗಿ ಒಳಹೋದ ಮತ್ತು ಹೊರಬಂದ ಆಕೃತಿಗಳು ಮೂಡಿಬರುತ್ತವೆ. ಚಿತ್ರದಲ್ಲಿ ಅಲ್ಲಲ್ಲಿ ತೆಳುವಾದ ಬಿಳಿ ಮಿಶ್ರಿತ ಬಣ್ಣಗಳೇ ಹೆಚ್ಚಾಗಿರುವುದರಿಂದ ಚಿತ್ರವು ಕಣ್ಣಿಗೆ ತಂಪನ್ನು ನೀಡುತ್ತದೆ. ಶಾಂತವಾದ ವಸ್ತುಗಳ ಚಲನೆ ಇವರ ಚಿತ್ರದ ವಸ್ತುವಾಗಿದೆ. ಒಟ್ಟಿನಲ್ಲಿ ಹೆಚ್ಚು ಬಣ್ಣಗಳನ್ನು ಬಳಸದೇ ಕೆಲವೇ ವರ್ಣಗಳಲ್ಲಿ ಹೆಚ್ಚು ಆಕರ್ಷಣೆ ಮತ್ತು ಸಾಕಷ್ಟು ಸಮಯವನ್ನು ವ್ಯಯ ಮಾಡಿದ ಕುರುಹುಗಳು ಕಂಡುಬರುತ್ತವೆ. ಹೀಗೆ ಸಂಯೋಜನೆಯು ಯಾವ ಗಡಸು ಬಣ್ಣಗಳಿಲ್ಲದೇ ಶುದ್ಧವಾದ ಚಿಂತನೆಯಾಗಿದ್ದು, ಕಲಾವಿದ ನೋಡುಗನ ಮಧ್ಯ ಸಾಮರಸ್ಯ ಮೂಡುವಂತೆ ಸುಂದರ, ಶಾಂತ ಚಿತ್ರ ರಚಿಸುವುದು ಈರಣ್ಣ ದಂಡಿನವರಿಗೆ ಒಲಿದ ಸಂಗತಿಯಾಗಿದೆ.

**೮. ಕೆಳವರ್ಗ**

ಬಹುಅರ್ಥ ಕಲ್ಪಿತ ಅಪ್ರತಿಮ ರೇಖಾಚಿತ್ರ ರಚಿಸುವಲ್ಲಿ ಯುವ ಕಲಾವಿದ ಮಕಾಳಿ ಪ್ರಸಿದ್ಧರು. ಪುಸ್ತಕಗಳ ಮುಖಪುಟಗಳಿಗಾಗಿ ಅವರು ರಚಿಸಿದ ರೇಖೆಗಳು ಸಾವಿರಾರು. ಅವುಗಳಲ್ಲಿ ಒಂದನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ. ಡಾ. ವೀರೇಶ ಬಡಿಗೇರ ಅವರ ಭಕ್ತಿ-ಭಜನೆ: ಕೆಳವರ್ಗ ಪುಸ್ತಕದ ಮುಖಪುಟವಾಗಿ ನಿರ್ಮಾಣಗೊಂಡ ಈ ಚಿತ್ರವು ಹಳ್ಳಿ ಬದುಕಿನ ಧಾರ್ಮಿಕ ಭಾವನೆಗಳನ್ನು ಬಿಂಬಿಸುವ ರೇಖೆಗಳನ್ನು ಹೊಂದಿವೆ. ಏಕಧಾರಿ ಭಜನಾ ಸಾಮಗ್ರಿಗಳಲ್ಲಿ ಪ್ರಮುಖವಾಗಿದ್ದು, ಅದನ್ನು ಮಧ್ಯಭಾಗದಲ್ಲಿಟ್ಟು ಪ್ರಾಣಿ ಪ್ರೀತಿಯನ್ನು ಕೆಳಗಡೆಯಿಂದ ಆರಂಭಿಸುತ್ತಾ ಹಲವು ಹೆಜ್ಜೆಗಳನ್ನಿಡುತ್ತಾ, ಗ್ರಾಮೀಣ ಬದುಕನ್ನು ಬಿಂಬಿಸುತ್ತಾ, ಚಿತ್ರವು ಎತ್ತರಕ್ಕೆ ಸಾಗುತ್ತದೆ. ಮಧ್ಯದಲ್ಲಿ ಮನುಷ್ಯಾಕೃತಿಗೆ ಕಣ್ಣೊಂದು ರಚಿತವಾಗಿದ್ದು,

ಏಕಧಾರಿಯ ಬೆಣೆಗಳು, ತಂತಿಗಳು ಕಾಣುತ್ತಾ ಹಕ್ಕಿಯೊಂದು ಹಾರುತ್ತಿರುವಂತೆ ಗೋಚರವಾಗುತ್ತದೆ. ಬದಿಯಲ್ಲಿ ಹಳ್ಳಿ ಬದುಕಿನ ಪುಟ್ಟ ಪುಟ್ಟ ಗುಡಿಸಲುಗಳು, ಹಾವಿನ ಆಕಾರದ ಆಕೃತಿಗಳು ಏಣಿಯಂತೆ ರಚಿತವಾಗಿವೆ. ಹೀಗೆ ಮನುಷ್ಯ ಸಂಬಂಧಿ ಧಾರ್ಮಿಕ ಭಾವನೆಗಳುಳ್ಳ ಅಮೂರ್ತವಾದ ಸೃಜನಶೀಲ ರೇಖಾಚಿತ್ರ ಒಳಗಿರುವ ಬರಹಗಳಿಗೆ ಪೂರಕವಾಗಿದೆ. ಇಂತಹ ಹಲವಾರು ಕಡಿಮೆ ರೇಖೆಗಳಲ್ಲಿ ಬಹಳಷ್ಟು ಹೇಳುವ ಸಾಮರ್ಥ್ಯವನ್ನು ಮಕಾಳಿ ಮಾತ್ರ ಹೊಂದಿದ್ದಾರೆ.

*** ಜಿಲ್ಲೆಯ ಗ್ಯಾಲರಿಗಳಲ್ಲಿ ಸಂಗ್ರಹಿತ ಚಿತ್ರಗಳು**

ಜಿಲ್ಲೆಯ ಹುನಗುಂದದಲ್ಲಿ ತಾಯಿಯ ತವರು ಮನೆಯಲ್ಲಿ ಜನಿಸಿದ ನಾಡೋಜ ವಿ.ಟಿ. ಕಾಳೆಯವರು ಇಂದು ಸಂಡೂರಿನಲ್ಲಿ ವಾಸವಾಗಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡಮಿಯ ಅಧ್ಯಕ್ಷರೂ ಆಗಿದ್ದ ಅವರು ಜಿಲ್ಲೆಯ ಶಿವಯೋಗ ಮಂದಿರದ ಶತಮಾನೋತ್ಸವದಲ್ಲಿ ನಿರ್ಮಾಣಗೊಂಡ ಕಲಾ ಗ್ಯಾಲರಿಯಲ್ಲಿ ೩ x ೬ ಅಳತೆಯ ೩೨ ಕಲಾಕೃತಿಗಳು ತುಂಬಾ ನೈಜವಾಗಿ ಹಾನಗಲ್ ಕುಮಾರಸ್ವಾಮಿಯವರ ಜೀವನಾಧಾರಿತ ಕಲಾಕೃತಿಗಳನ್ನು ರಚಿಸಿ ಅವುಗಳ ಕೆಳಗೆ ಅಲ್ಲಿರುವ ಸನ್ನಿವೇಶದ ಕುರಿತು ಕೆಲವು ಸಾಲುಗಳನ್ನು ಬರೆದು ಗಾಜಿನ ಫ್ರೇಮ್‌ನೊಂದಿಗೆ ಶಾಶ್ವತವಾಗಿ ಪ್ರದರ್ಶಿಸಲಾಗುತ್ತಿದೆ. ಶಿವಯೋಗ ಮಂದಿರಕ್ಕೆ ಬಂದವರು ಗ್ಯಾಲರಿಗೆ ಭೇಟಿ ಕೊಡಲೇಬೇಕು. ಅಲ್ಲಿ ಪ್ರತಿಯೊಬ್ಬರೂ ಕಲಾವಿದ, ಕಲಾಕೃತಿಗಳ ಬಗ್ಗೆ ಉತ್ತಮ ಮಾತುಗಳನ್ನಾಡುವುದು, ಕಲೆಯನ್ನು ಅರ್ಥೈಸಿಕೊಳ್ಳುವುದು ಜೊತೆಗೆ ಮಹಾತ್ಮರ ಜೀವನ ತತ್ವಾದರ್ಶನಗಳನ್ನು ಅಳವಡಿಸಿಕೊಳ್ಳುವುದು ಹೀಗೆಲ್ಲಾ ಕೆಲಸಗಳು ಒಟ್ಟಿಗೆ ನಡೆಯುತ್ತವೆ.

ಮೂವತ್ತೆರಡು ಕಲಾಕೃತಿಗಳಲ್ಲಿ ಮೊದಲನೆಯದಾಗಿ ಶಿವಕುಮಾರ ಸ್ವಾಮೀಜಿಯವರ ಗದ್ದುಗೆ, ಗ್ರಂಥಗಳಲ್ಲಿ ಅಧ್ಯಯನ ನಿರತರಾದ ಶ್ರೀಗಳು, ಓರ್ವ ಮುದುಕಿಯಿಂದ ಪಾದಸೇವೆಯನ್ನು ಸ್ವೀಕರಿಸುತ್ತಿರುವ ಶ್ರೀಗಳು, ಕುರುಬ ಗಾದಿಲಿಂಗಪ್ಪನವರು ಶ್ರೀಗಳಿಗೆ ಹಾಲು ತಂದುಕೊಟ್ಟದ್ದು, ಮುಪ್ಪಿನಲ್ಲಿ ಹಾಸಿಗೆ ಹಿಡಿದ ಶ್ರೀಗಳು, ಲಿಂಗವನ್ನು ಪುನಃ ದೊರಕಿಸಿಕೊಟ್ಟ ಪವಾಡ ದೃಶ್ಯ, ಗೊಡ್ಡು ಆಕಳಿಂದ ಹಾಲು ಬರುವಂತೆ ಮಾಡಿದ ಪವಾಡ ದೃಶ್ಯ, ಧರ್ಮ ಪ್ರಚಾರಕ್ಕೆ ಹೊರಟ ಸ್ವಾಮಿಗಳು ಮತ್ತು ಇತರರು, ಗೋಶಾಲೆಗಳಲ್ಲಿ ಶ್ರೀಗಳು, ಬಿರುಗಾಳಿಯಲ್ಲಿಯೂ ದೀಪ ಉರಿಸಿದ ಚಿತ್ರ, ಶಿವಯೋಗ ಮಂದರ ಆವರಣದಲ್ಲಿ ಪಾಠ ಮಾಡುತ್ತಿರುವ ಚಿತ್ರ, ರೋಗಿಯೊಬ್ಬನ ಸೇವೆಯಲ್ಲಿ ನಿರತರಾದ ಶ್ರೀಗಳು, ವೈರಾಗ್ಯದ ಮಲ್ಲಣಾರ್ಯರು ಮತ್ತು ಶ್ರೀಗಳು, ಶಿವಯೋಗ ಮಂದಿರದ ಸ್ಥಾಪನೆ ಕುರಿತು ನಡೆದ ಮಹಾಸಭೆ, ಇಲಕಲ್ಲಿನ ವಿಜಯ ಮಹಾಂತ ಸ್ವಾಮಿಗಳ ದರ್ಶನ, ಯಳಂದೂರು ಬಸವಲಿಂಗ ಗುರುಗಳ ದರ್ಶನ, ಯಳಂದೂರು ಬಸವಲಿಂಗ ಶ್ರೀಗಳೊಂದಿಗೆ ಪೂಜಾನಿರತ ಶ್ರೀಗಳು, ಗುರುಬಸವ ಗದ್ದುಗೆ ಮುಂದೆ ಪೂಜಾನಿರತ ಶ್ರೀಗಳು, ಹಾನಗಲ್ ಮಠದಲ್ಲಿ ಅನ್ನ ದಾಸೋಹ ಮಾಡುತ್ತಿರುವ ಶ್ರೀಗಳು, ತಾಯಿಯ ಋಣದ ಚಿತ್ರ, ಸಿದ್ಧಾರೂಢಸ್ವಾಮಿಗಳ ಸನ್ನಿಧಿಯಲ್ಲಿ ಶ್ರೀಗಳು, ಸ್ತ್ರೀ ವ್ಯಾಮೋಹ ತಿರಸ್ಕರಿಸಿದ ದೃಶ್ಯ, ಜಡೆ ಸಿದ್ದೇಶ್ವರ ದರ್ಶನ, ಮನೆ ಪಾಠದಲ್ಲಿ ನಿರತರಾದ ಬಾಲಕುಮಾರಸ್ವಾಮಿ, ಬಾಲಕ ಕುಮಾರಸ್ವಾಮಿಗಳು ಭಿಕ್ಷೆಗೆ ಹೋದಾಗ ನಡೆದ ಘಟನೆಯ ಚಿತ್ರ, ವಿದ್ಯೆಯನ್ನು ಅರಸುತ್ತಾ ಚಿಂತಿತನಾಗಿ ಕುಳಿತ ಕುಮಾರಸ್ವಾಮಿಗೆ ನೆರವಾದ ಹಿರೇಮಠರ ಸನ್ನಿವೇಷದ

ಚಿತ್ರ, ಪಾಠಪ್ರವಚನ ಬೋಧಿಸುತ್ತಿರುವ ಕುಮಾರಸ್ವಾಮಿಯವರು, ಶಿವಯೋಗಿ ಹಾನಗಲ್ ಕುಮಾರಸ್ವಾಮಿಗಳ ಪೂರ್ಣ ಭಾವಚಿತ್ರ, ಕುಮಾರಸ್ವಾಮಿಯವರ ತಾಯಿ ನೀಲಮ್ಮನವರ ಸ್ವಪ್ನ ಸಿದ್ಧಿಯ ದೃಶ್ಯ, ಕುಮಾರಸ್ವಾಮಿಯವರ ನಾಮಕರಣದ ದೃಶ್ಯ ಹೀಗೆ ಮೂವತ್ತು ಕೃತಿಗಳು ತುಂಬಾ ನೈಜವಾಗಿ ಆ ಕಾಲಕ್ಕೆ ಕರೆದೊಯ್ಯುವಂತೆ ಎಲ್ಲಿಯೂ ನವ್ಯತೆ ಇಲ್ಲದೆ ವೇಷಭೂಷಣಗಳು ಹಿಂದಿನ ಭೂದೃಶ್ಯ ಎಲ್ಲವೂ ಶತಮಾನದ ಹಿಂದ ನಡೆದುದು ಎಂಬಂತೆ ಚಿತ್ರಿಸಲಾಗಿದೆ. ಕಲಾವಿದ ಕೆ.ವಿ. ಕಾಳೆಯವರ ಜೀವನದ ಮರೆಯಲಾಗದ ಅನನ್ಯ ಶಾಶ್ವತ ಚಿತ್ರ ಪ್ರದರ್ಶನ ಇದಾಗಿದೆ. ಅದರಲ್ಲಿ ಪ್ರಮುಖವಾಗಿ ಸಂಯೋಜಿತವಾಗಿರುವ ಎರಡು ಚಿತ್ರಗಳ ವಿವರಣೆ ಇಲ್ಲಿ ಚರ್ಚಿಸಲಾಗಿದೆ.

**೧. ಧವಸಧಾನ್ಯಗಳನ್ನು ಸಂಗ್ರಹಿಸುವ ದೃಶ್ಯ**

ಸವಾರಿ ಕಟ್ಟಿದ ಎತ್ತಿನ ಬಂಡಿಯಲ್ಲಿ ಮಠದ ಭಕ್ತನೊಬ್ಬ ಬಂಡಿ ನಡೆಸುತ್ತಿರುವುದು, ಕುಮಾರಸ್ವಾಮಿಗಳು ಹಿಂದೆ ಬಂಡಿಯಲ್ಲಿ ಕುಳಿತಿರುವುದು ಜೊತೆಗೆ ಧವಸಧಾನ್ಯ ತುಂಬಿದ ಚೀಲಗಳು ಬಂಡಿಯಲ್ಲಿರುವುದು ಒಂದಾದ ನಂತರ ಇನ್ನೊಂದು ಬಂಡಿ ಹೀಗೆಯೇ ಪುರ ಪ್ರವೇಶ ಮಾಡುವ ನಾಲ್ಕು ಬಂಡಿಗಳು ಸ್ವಾಗತಿಸಲು ಕೈಮುಗಿದು ನಿಂತ ಊರ ಹಿರಿಯರು, ಆ ಕಾಲದ ಕೋಟು, ನಿಲುವಂಗಿ, ಬಿಳಿಯ ಪಟಕ, ರೇಷ್ಮೆ ಪಟಕ, ಕೆಂಪು ಪಟಕ, ಬಿಳಿಯ ವೇಷಭೂಷಣಗಳು, ತಲೆಯ ಮೇಲೆ ಸೆರಗು ಹೊದ್ದು ನಿಂತ ಇಲಕಲ್ಲು ಹಾಗೂ ಬನಹಟ್ಟಿ- ರಬಕವಿಗಳ ಸೀರೆಗಳನ್ನುಟ್ಟ ಮಹಿಳೆಯರು ಹಣೆತುಂಬಾ ವಿಭೂತಿ ಹಚ್ಚಿಕೊಂಡು ಕೈಯಲ್ಲಿ ಆರತಿ, ಕಳಸ ತಟ್ಟೆಗಳನ್ನು ಹಿಡಿದುಕೊಂಡು ಕೈಮುಗಿದು ಸಾಲಾಗಿ ನಿಂತಿದ್ದಾರೆ.

ಬಲಬದಿಯ ಆರಂಭದಲ್ಲೂ ಮೂರು ಜನ ಹೆಣ್ಣು ಮಕ್ಕಳು ಯಥಾದರ್ಶನಕ್ಕೆ ತಕ್ಕಂತೆ ದೊಡ್ಡದಾದ ಮುಖಗಳಿರುವವರು ಆರತಿ ಹಿಡಿದು ನಿಂತಿದ್ದಾರೆ. ಸಮೃದ್ಧವಾದ ಗಿಡಮರಗಳಿರುವ ಹಿನ್ನೆಲೆ ವಿನ್ಯಾಸ, ಅಂಚಿನ ಮನೆಗಳು, ದೂರ, ಸಮೀಪದ ಪರಿಣಾಮಗಳಲ್ಲಿ ಅತ್ಯುನ್ನತವಾದ ಸಂಯೋಜನಾಬದ್ಧ ಚಿತ್ರ ಇದಾಗಿದೆ. ಎಲ್ಲರ ಮುಖದ ಭಾವನೆಗಳನ್ನು ಇಲ್ಲಿ ಅರ್ಥೈಸಿಕೊಳ್ಳಬಹುದು. ಕಲಾವಿದನ ಸಾಮರ್ಥ್ಯ ಒಂದು ಕಾಲದ ವಾಸ್ತವ ಘಟನೆಗಳನ್ನು, ಕಥೆಯನ್ನು ನೈಜವಾಗಿ ಸೃಷ್ಟಿಸುವ ಕಲಾವಿದರು ಇಲ್ಲಿ ಯಶಸ್ವಿಯಾಗಿದ್ದಾರೆ.

**೨. ಶಿವಯೋಗ ಮಂದಿರ ಸ್ಥಾಪನೆ ದೃಶ್ಯ**

ಇಲಕಲ್ಲಿನ ಶ್ರೀ ವಿಜಯ ಮಹಾಂತ ಶಿವಯೋಗಿಗಳು ಮಹಾಂತಮ್ಮ ಎಂಬ ಗೋಮಾತೆಯ ಸಹಾಯದಿಂದ ಶಿವಯೋಗ ಮಂದಿರವು ಇಲ್ಲಿಯೇ ಸ್ಥಾಪನೆಯಾಗಬೇಕೆಂಬ ವಿಷಯವನ್ನು ಪ್ರಸ್ತಾಪಿಸಿದ ಚಿತ್ರ ಇದಾಗಿದೆ. ಕುಮಾರಸ್ವಾಮಿಗಳು ಗೋಮಾತೆಯ ಮೇಲೆ ತಮ್ಮ ಬಲಗೈಯನ್ನಿಟ್ಟು ಎಡಗೈಯಲ್ಲಿ ತಮ್ಮ ಬೆತ್ತವನ್ನು ಹಿಡಿದುಕೊಂಡಿದ್ದಾರೆ. ಕಣ್ಣು ಮುಚ್ಚಿದ ಗೋಮಾತೆ ತಲೆಯಾಡಿಸುತ್ತಿರುವಂತೆ ಸ್ಥಳ ತೋರಿದ ಚಿತ್ರ ಇದಾಗಿದೆ. ಬಲಬದಿಯಲ್ಲಿ ನಿಂತ ವಿಜಯ ಮಹಾಂತ ಶಿವಯೋಗಿಗಳು ತಮ್ಮ ಬಲಗೈ ತೋರು ಬೆರಳಿನಿಂದ ಕೈ ಮಾಡಿ ಶಿವಯೋಗ ಮಂದಿರ ಸ್ಥಾಪನೆಯಾಗಬೇಕಾದ ಸ್ಥಳವನ್ನು ತೋರಿದ ಮಹಿಮಾ ಚಿತ್ರ ಇದಾಗಿದೆ. ಇಬ್ಬರೂ ಸ್ವಾಮಿಗಳ ಹಿಂದೆ ಮೂರು ಮೂರು ಜನ ಹಿರಿಯರು ಟೊಂಕದ

ಮೇಲೆ ಕೈ ಇಟ್ಟುಕೊಂಡು ಇಬ್ಬರು ಹಿಂದೆ ನಿಂತಿದ್ದಾರೆ. ಬಿಳಿಯ ಪಟಕಗಳನ್ನು ಸುತ್ತಿಕೊಂಡು ನಿಂತಿದ್ದಾರೆ. ವಿಜಯ ಮಹಾಂತ ಶಿವಯೋಗಿಗಳ ಹಿಂದೆ ಮೂರು ಜನರಲ್ಲಿ ಮೊದಲನೆಯವನು ಕೈಕಟ್ಟಿಕೊಂಡು ನಿಂತಿದ್ದು ಜಾಕೀಟು ಧರಿಸಿ, ಬಿಳಿ ಪಟಕ ಧರಿಸಿ ನಿಂತಿದ್ದಾನೆ. ಹಿಂದೆ ಇನ್ನಿಬ್ಬರಲ್ಲಿ ಒಬ್ಬರು ಕೆಂಪು ಪಟಕವನ್ನು ಸುತ್ತಿ ಹಳದಿ ಅಂಗಿಯನ್ನು ಧರಿಸಿದ್ದಾನೆ. ಹಿನ್ನೆಲೆ ವಿನ್ಯಾಸವಾಗಿ ಹಳೆಯ ಚಿಕ್ಕ ದೇವಸ್ಥಾನದ ಅವಶೇಷವನ್ನು ತೋರಿಸಲಾಗಿದೆ. ಹಿಂದಿನ ವಾತಾವರಣವು ಸಂಪೂರ್ಣವಾಗಿ ಅರಣ್ಯದಂತೆ ಕಡುಹಸಿರಾಗಿ ಗೋಚರಿಸುತ್ತದೆ.

**ಮಾತೆ ಮಹಾದೇವಿಯವರ ಕೂಡಲ ಸಂಗಮದ ಬಸವಾಶ್ರಮದಲ್ಲಿ ಸಂಗ್ರಹಿತ ಚಿತ್ರಗಳು**

ಕೂಡಲ ಸಂಗಮದಲ್ಲಿ ಮಾತೆ ಮಹಾದೇವಿಯವರ ಬಸವಾಶ್ರಮದಲ್ಲಿ ಬೀದರ್ ಜಿಲ್ಲೆಯ ಹುಮನಾಬಾದ್ ತಾಲ್ಲೂಕಿನ ಹುಡುಗಿ ಗ್ರಾಮದ ಬಸವರಾಜ ಮುಗಳಿ ಅವರು ರಚಿಸಿದ ಶರಣರ ಕಾಯಕದ ೩೦ ಭಾವಚಿತ್ರಗಳಿದ್ದು ಡೋಹರ ಕಕ್ಕಯ್ಯ, ಕಿನ್ನರಿ ಬೊಮ್ಮಯ್ಯ, ಗೊಲ್ಲಾಳೇಶ್ವರ, ಶಿವದಾಸಿಮಯ್ಯ, ಗುರುಮಲ್ಲೇಶ್ವರ, ಅಮುಗಿ ದೇವಯ್ಯ ದಂಪತಿ, ಮಾದರ ಚನ್ನಯ್ಯ, ದಸರಯ್ಯ, ರಾಮಿತಂದೆ, ಏಕಾಂತ ರಾಮಯ್ಯ, ಕದಿರೆ ರೆಮ್ಮವ್ವೆ, ಕುಂಬಾರ ಗುಂಡಣ್ಣ, ದಾನಮ್ಮದೇವಿಯ ಲಿಂಗದೀಕ್ಷೆ, ಹಾಳ ಕಲ್ಲಯ್ಯ, ಮಾಯಿ ದೇವಿ, ಗೌಳಿಗಿತ್ತಿ ಗೌರವ್ವ, ನುಲಿಯ ಚಂದಯ್ಯ, ಸತ್ಯಕ್ಕ, ಹೂಗಾರ ಮಾದಯ್ಯ, ಗಾಣದ ಕಣ್ಣಪ್ಪ, ಕಂಬಾರ ಕಲ್ಲಣ್ಣ, ಅಕ್ಕಮಹಾದೇವಿ, ಅಕ್ಕನಾಗಮ್ಮ, ಗುರುಬಸವಣ್ಣ ನೀಲಾಂಬಿಕೆ ವಿವಾಹ, ಶಿಶು ಬಸವಣ್ಣ, ಅಕ್ಕ ನಾಗಮ್ಮ, ಬಾಲಕ ಬಸವ, ಜಾತ ವೇದಶ್ರೀ, ಬಾಲಕ ಬಸವ, ಬಾಲಬಸವ, ಅಲ್ಲಮಪ್ರಭು ಮತ್ತು ಸಿದ್ಧರಾಮೇಶ್ವರರು, ಅನುಭವ ಮಂಟಪ, ಸಂಪತ್ತನ್ನು ಅಗೆದು ತೆಗೆಸಿದ ಸಂದರ್ಭ, ಕಲ್ಯಾಣ ಮಹೋತ್ಸವ, ಕಲ್ಯಾಣ ತೊರೆಯುವ ಮುನ್ನ ಶರಣರು ಹೀಗೆ ಕೃತಿಗಳಿದ್ದು ಅವುಗಳ ಶಾಶ್ವತ ಪ್ರದರ್ಶನಕ್ಕೆ ಬಸವಾಶ್ರಮದ ಕೆಳಮನೆ ಸದಾಕಾಲವು ತೆರೆದಿರುತ್ತದೆ. ಕಲಾವಿದನ ಚಿಂತನಾಶಕ್ತಿ, ವರ್ಣಸಂಯೋಜನೆ ಮತ್ತು ಆ ಕಾಲದ ಮನುಷ್ಯರ ಹಾವಭಾವ, ವೇಷಭೂಷಣ ಇವೆಲ್ಲದಕ್ಕೂ ಮಹತ್ವ ನೀಡಿ ರಚಿಸಿದ ಚಿತ್ರಗಳು ಭೇಟಿ ನೀಡಿದ ಪ್ರತಿಯೊಬ್ಬರನ್ನು ೧೨ನೇ ಶತಮಾನಕ್ಕೆ ಕರೆದೊಯ್ಯುತ್ತವೆ. ಅದರಲ್ಲಿ ಪ್ರಮುಖವಾಗಿ ಎರಡು ಚಿತ್ರಗಳನ್ನು ಆಯ್ದು ವಿಶ್ಲೇಷಿಸಲಾಗಿದೆ.

**೩. ಆನೆಯ ಕಾಲಿಗೆ ಕಟ್ಟಿ ಎಳೆಯುವ ಚಿತ್ರ**

ವರ್ಣ ಸಂಕರದ ತಪ್ಪು ಮಾಡಿದವರಿಗೆ ಅಲ್ಲಿನ ರಾಜ ಬಿಜ್ಜಳನ ಶಿಕ್ಷಾ ಮಾದರಿ ಚಿತ್ರದಲ್ಲಿ ಪ್ರಕಟಗೊಳುತ್ತಿದೆ. ಆನೆಯೊಂದಕ್ಕೆ ಸರಪಳಿಗಳಿಂದ ಮೂರು ಜನರನ್ನು ಕಟ್ಟಿ ಇಡೀ ಊರತುಂಬ ಓಣಿಯಲ್ಲಿ ಎಳೆದುಕೊಂಡು ಹೋಗುವ, ಮನ ಕಲಕುವ ಚಿತ್ರ ಇದಾಗಿದ್ದು, ಶೃಂಗರಿತ ಆನೆ, ಅದರ ಮೇಲೆ ಮಾವುತ, ಹಿಂದೆ ನಿಂತು ಆಶ್ಚರ್ಯಚಕಿತರಾಗಿ ನೋಡುವ ಜನ, ಮುಂಭಾಗದಲ್ಲೂ ಶಿಕ್ಷೆ ಕೊಡಿಸಿದವರ ಕುಹಕ ನಗು ಎಲ್ಲವೂ ಪ್ರಕಟವಾಗುವ ಚಿತ್ರ ಸಂಧ್ಯಾಸಮಯದ್ದಾಗಿರಬೇಕು. ಆಕಾಶ ನೀಲಿಯಿಂದ ಕೆಂಪಗೆ ತಿರುಗುವ ಸಮಯ, ಅರಮನೆಯ ಬಾಗಿಲಲ್ಲಿ ನಿಂತ ರಾಜ ಎಳೆದುಕೊಂಡು ಹೋಗು ಎಂಬಂತೆ ಆಜ್ಞಾಪಿಸುತ್ತಿದ್ದಾನೆ. ಒಂದು ಕಾಲಘಟ್ಟದ ಕಲಾಕೃತಿಯನ್ನು ಕಲಾವಿದನು ಸಾಕಷ್ಟು ಅಧ್ಯಯನಶೀಲನಾಗಿ ರಚಿಸಿದ್ದಾನೆ.

೪. ಯುದ್ಧ ನಿರತ ಮಡಿವಾಳ ಮಾಚಯ್ಯ

ಯುದ್ಧದ ಸನ್ನಿವೇಶವನ್ನು ಕುದುರೆಯ ಮೇಲೆ ಕುಳಿತಿರುವ ಮಡಿವಾಳ ಮಾಚುದೇವ ಮತ್ತು ಅವನ ಸಹಚರರು ಖಡ್ಗ ಮತ್ತು ಗುರಾಣಿಗಳೊಂದಿಗೆ ಬಿಳಿ ಬಣ್ಣದ ಕುದುರೆ, ಹಸಿರು ಬಣ್ಣದ ಕುದುರೆಯನ್ನೂ ಸೃಷ್ಟಿಸಲಾಗಿದೆ. ಸೈನಿಕರ ವೇಷಭೂಷಣಗಳು, ರಕ್ತಸಿಕ್ತ ಕೆಳಗೆ ಬಿದ್ದ ಸೈನಿಕರು, ದೂರದಲ್ಲಿ ಯುದ್ಧ ಮಾಡುವ ಪುರುಷ ಮತ್ತು ಮಹಿಳೆಯರು ಕುದುರೆಗಳನ್ನು ಜಗ್ಗಿ ಎರಡು ಕಾಲುಗಳನ್ನು ಮೇಲಕ್ಕೆತ್ತಿ ಖಡ್ಗವನ್ನು ಝಳಕಿಸುತ್ತಾ ಯುದ್ಧ ಮಾಡುತ್ತಿರುವ ಈ ಸನ್ನಿವೇಶ ವರ್ಣ ಸಂಯೋಜಿತವಾಗಿದೆ.

ಆಕೃತಿಯಿಂದ ಆಕೃತಿಗೆ ಒಂದನ್ನೊಂದು ಸೇರಿಸುವ ಬಗೆ ಹಿಂದುಮುಂದುಗಳ ಕಲ್ಪನೆ ನೀಲಾಕಾಶದಲ್ಲಿ ಹಳದಿ ಬಣ್ಣದ ಆಕಾಶ ಮಿಶ್ರಣಗೊಂಡಿದ್ದು, ಕುದುರೆಗಳ ಕಾಲುಗಳು ಮುರಿದು ಬಿದ್ದಿದ್ದು ಕತ್ತಿ, ಗುರಾಣಿ, ಕುದುರೆಯ ಕೊರಳಲ್ಲಿ ಹಾಕಿದ, ಗೆಜ್ಜೆ, ಮಗಾಡುಗಳು ಅಲ್ಲಲ್ಲಿ ವರ್ಣ ಸಮತೋಲನವನ್ನು ಕಾಯ್ದುಕೊಳ್ಳುವಂತೆ ಚಿತ್ರಿಸಲಾಗಿದೆ.

೫. ಕೌದಿ ವಿನ್ಯಾಸದಲ್ಲಿ ಐಹೊಳೆ ದುರ್ಗಾಮಂದಿರ

ಈ ಚಿತ್ರವು ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತ ಇಲಾಖೆಯ ಸಂಗ್ರಹದಲ್ಲಿದೆ. ಸಂಸ್ಕೃತಿ ಇಲಾಖೆ ಜಿಲ್ಲಾಡಳಿತ ಜೊತೆಗೂಡಿ ನಡೆಸಿದ ಚಾಲುಕ್ಯ ಉತ್ಸವದಲ್ಲಿ ರಾಜ್ಯಮಟ್ಟದ ಕಲಾವಿದರ ಶಿಬಿರದಲ್ಲಿ ಸೃಷ್ಟಿಗೊಂಡ ಈ ಚಿತ್ರ ವಿಜಾಪುರದ ಸಿದ್ಧೇಶ್ವರ ಕಲಾಮಂದಿರದ ಪ್ರಾಚಾರ್ಯ ಶ್ರೀ ಪಿ.ಎಸ್. ಕಡೆಮನೆಯವರ ರಚಿಸಿದ ಜಿಲ್ಲೆಯ ಐತಿಹಾಸಿಕ ಕುರುಹನ್ನು ಆಧುನಿಕತೆಗೆ ಹೋಲಿಸಿಕೊಂಡ ಚಿತ್ರ ಇದಾಗಿದೆ. ನೈಜವಾದ ಐಹೊಳೆಯ ದುರ್ಗಾಮಂದಿರವನ್ನು ಕಪ್ಪು ಹಿನ್ನೆಲೆ ವಿನ್ಯಾಸದಲ್ಲಿಟ್ಟು ಅದರ ಬದಿಯ ಸ್ಥಳವನ್ನೆಲ್ಲಾ ಕೌದಿ ಚಿತ್ರವನ್ನು ರಚಿಸಿ ಅದರೊಳಗೊಂದು ನವ್ಯ ಮುಖವನ್ನು ಕೋಲಾಜ್ ಮಾಡಲಾಗಿದೆ. ಐಹೊಳೆಯ ಸ್ಥಳಾಂತರ ಕುರಿತು ಹಲವಾರು ಹೋರಾಟಗಳು ನಡೆದರೂ ಜನ ಐತಿಹಾಸಿಕ ಸಂಪತ್ತಿನ ಬಗ್ಗೆ ತಿಳುವಳಿಕೆ ಇಲ್ಲದೇ ಪ್ರಾಚ್ಯವಸ್ತು ಇಲಾಖೆಯ ಸ್ವಾದೀನದಲ್ಲಿರುವ ಸುಂದರ ಶಿಲ್ಪಗಳ ಮೇಲೆ ಬಟ್ಟೆ ಒಗೆಯುವುದು, ಕೌದಿ ಹಾಸಿಕೊಂಡು ಮಲಗುವುದು, ಬಹಿರ್ದೆಸೆಗೆ ಹೋಗುವುದು, ಒಕ್ಕಲುತನ ಸಾಮಗ್ರಿಗಳನ್ನು ಶಿಲ್ಪಗಳ ಮುಂದೆ ಹಾಕುವುದು, ದನಗಳನ್ನು ಶಿಲ್ಪಭರಿತ ಕಂಬಗಳಿಗೆ ಕಟ್ಟುವುದು ದನಗಳು ತಿನ್ನುವ ಹೊಟ್ಟು, ಕಣಿಕೆ ಮತ್ತು ಉರಿಯುವ ಕಟ್ಟಿಗೆ ಮುಂತಾದವುಗಳನ್ನು ದೇವಸ್ಥಾನದಲ್ಲಿಯೇ ಸಂಗ್ರಹಿಸಿಡುವುದು. ಇವೆಲ್ಲವುಗಳನ್ನೂ ಸರಿಪಡಿಸುವ ಉದ್ದೇಶದಿಂದ ಈ ಕೃತಿಯನ್ನು ರಚಿಸಲಾಗಿದೆ. ಐಹೊಳೆಯಲ್ಲಿ ಇಂದಿಗೂ ಮೇಲಿನ ಕೃತ್ಯಗಳು ನಡೆಯುತ್ತಲೇ ಇವೆ. ಇಲಾಖೆ ಅಥವಾ ತಿಳುವಳಿಕೆ ಇರುವವರು ಎಷ್ಟು ಹೇಳಿದರೂ ಕಡಿಮೆಯಾಗುತ್ತಿಲ್ಲ. ಈ ಕಲಾಕೃತಿ ಅಂತಹ ಮಹತ್ವದ ತಿಳುವಳಿಕೆಯನ್ನು ನೀಡಲು ಸಹಾಯಕಾರಿಯಾಗಿದೆ ಎಂಬುದು ಬಲ್ಲವರ ಅಭಿಪ್ರಾಯ.

೬. ಭೂದೃಶ್ಯ

ಖ್ಯಾತ ಭೂದೃಶ್ಯ ಹಿರಿಯ ಕಲಾವಿದ ಎಂ.ಎಸ್. ಚಂದ್ರಶೇಖರ ಅವರ ಬಾದಾಮಿಯ ಅಗಸ್ತ್ಯತೀರ್ಥದ ಲ್ಯಾಂಡ್‌ಸ್ಕೇಪ್ ಮೂಲಚಿತ್ರವು ಬಾದಾಮಿಯ ಮಯೂರ ಹೋಟೆಲ್‌ನಲ್ಲಿ ಸಂಗ್ರಹಿತವಾಗಿದೆ. ಜೊತೆಗೆ

ಇನ್ನೂ ಎರಡು ಕೃತಿಗಳು ಹೋಟೆಲ್‌ನಲ್ಲಿವೆ. ಈ ಕಲಾಕೃತಿಯು ಬೃಹದಾಕಾರದ ಬಂಡೆಗಲ್ಲು ಅದಕ್ಕೆ ಹಿನ್ನೆಲೆಯಾಗಿ ಹಸಿರು ಗುಡ್ಡ, ಅಗಸ್ತ್ಯತೀರ್ಥದ ನೀರಿನಲ್ಲಿ ಕೆಂಪು ಸೀರೆಯನ್ನು ಉಟ್ಟುಕೊಂಡ ಮಹಿಳೆಯೊಬ್ಬಳು ಬಟ್ಟೆ ಒಗೆಯುತ್ತಿರುವ ಸನ್ನಿವೇಶ ಛಾಯಾಚಿತ್ರದಷ್ಟು ನೈಜವಾಗಿದೆ. ಅವಳ ಕಾಲ ಬಳಿಯಿಂದ ಹೊರಟ ನೀರಿನ ಅಲೆಗಳು ದೇವಸ್ಥಾನದ ಪ್ರತಿಬಿಂಬವು ಚಿಕ್ಕ ಗುಡಿಯ ಹಿಂದೆ ಎದ್ದುನಿಂತ ಸುಂದರವಾದ ಬಸರಿ ಗಿಡವು ಎಲ್ಲವೂ ಸೇರಿ ಅದ್ಭುತವಾದ ರಮ್ಯ ನೋಟವನ್ನು ಸೆರೆ ಹಿಡಿದಿದ್ದಾರೆ. ಜಲವರ್ಣದ ಈ ಕಲಾಕೃತಿ ಬಹು ಬೆಲೆಬಾಳುವುದಾಗಿದ್ದು, ಬಹುತೇಕ ಹಿಂದಿನ ಹೋಟೆಲ್‌ನ ಯಜಮಾನರುಗಳು ಅವನ್ನು ಖರೀದಿಸಿ ಪ್ರತಿಷ್ಠಾಪಿಸಿರಬಹುದು.

**೭. ನಿಸರ್ಗ ಚಿತ್ರ**

ಬಾದಾಮಿಯ ಅಂತರಾಷ್ಟ್ರೀಯ ಹೋಟೆಲ್ ಬಾದಾಮಿ ಕೋರ್ಟ್‌ನಲ್ಲಿ ಖ್ಯಾತ ಕಲಾವಿದ ಬೆಂಗಳೂರಿನ ಕೆ. ಲಿಂಗದೇವರು ಅವರ ೬ ಭೂದೃಶ್ಯದ ಕಲಾಕೃತಿಗಳು ಸಂಗ್ರಹದಲ್ಲಿವೆ. ಅದರಲ್ಲಿ ಉತ್ತಮವಾದ ಒಂದು ಕಲಾಕೃತಿಯನ್ನು ಮಾತ್ರ ಇಲ್ಲಿ ವಿಶ್ಲೇಷಿಸಲಾಗಿದೆ. ಇದೂ ಕೂಡ ಖರೀದಿಸಿ ಸಂಗ್ರಹಿಸಿದ್ದಾದ್ದರಿಂದ ದಾಖಲಿಸುವ ಉದ್ದೇಶದಿಂದ ಮಾತ್ರ ಆಯ್ದುಕೊಳ್ಳಲಾಗಿದೆ. ಲಿಂಗದೇವರು ಮಲೆನಾಡಿನ ಊರಿನಲ್ಲಿ ರಚಿಸಿದ ಎತ್ತರವಾದ ಮೆಟ್ಟಿಲುಗಳನ್ನು ಏರಿ ಇಳಿದು ನೀರು ತರುತ್ತಿರುವ ಹೆಣ್ಣುಮಕ್ಕಳು ತಲೆಯ ಮೇಲೆ ಮತ್ತು ಬಗಲಲ್ಲಿ ಕೊಡಗಳನ್ನು ಹೊತ್ತು ಕೆಳಗಿರುವ ನೀರಿನ ಹೊಂಡದಿಂದ ನೀರನ್ನು ತರುತ್ತಿದ್ದಾರೆ. ಮೇಲೆ ಐದಾರು ಗುಡಿಸಲುಗಳ ಮುಖ್ಯ ಚಿತ್ರಗಳಿವೆ. ನೀರು, ಆಕಾಶ ತೆಳುನೀಲಿ ಬಣ್ಣದ್ದಾಗಿದ್ದು ಗಿಡಮರಗಳು ಹೆಚ್ಚು ಹಳದಿ ಮತ್ತು ಹಸಿರು ಬಣ್ಣಗಳಿಂದ ರಚಿತವಾಗಿವೆ. ಆಕಾಶ ಮತ್ತು ಗಿಡಮರಗಳಿಗೆ ಎಲ್ಲಿಯೂ ಅಂತ್ಯ ಕಾಣುವುದಿಲ್ಲ. ಒಂದರಲ್ಲೊಂದು ಮಿಶ್ರಣವಾಗಿವೆ. ಒಟ್ಟು ಚಿತ್ರವು ಮಳೆಗಾಲದ ಝಲಕನ್ನು ಕೊಡುವ ಚಿತ್ರವಾಗಿದೆ. ಅಸ್ಪಷ್ಟತೆಗೆ ಮೋಡ ಮುಸುಕಿದ ಕಾರಣ ವಾತಾವರಣ ಕಾರಣ ಎನ್ನಬಹುದು.

**ರಂಗಪರದೆ ಮತ್ತು ಜನಪದ ಕಲಾವಿದರ ಕೃತಿಗಳ ವಿಶೇಷತೆ**

* ನಾಟಕದಲ್ಲಿ ಮಾತ್ರ ಮನುಷ್ಯ ಮನುಷ್ಯನಷ್ಟೇ ಕಾಣುತ್ತಾನೆ ಎಂಬ ತತ್ವದಡಿಯಲ್ಲಿ ರಸ್ತೆಯಲ್ಲಿ ನಿಂತ ಮನುಷ್ಯನ ಹಿಂದೆ ಮನೆಗಳು, ಅರಣ್ಯ ಮತ್ತು ರಾಜ ದರ್ಬಾರುಗಳು ನೈಜವಾದ ಸ್ಥಳದಲ್ಲಿ ಎಷ್ಟು ಎತ್ತರದಲ್ಲಿರುತ್ತವೆಯೋ ಅಷ್ಟೇ ಎತ್ತರದ ಕಲ್ಪನೆ ನೀಡುವ ಚಿತ್ರಗಳು ಇವಾಗಿವೆ.

* ಸಂದರ್ಭಕ್ಕೆ ತಕ್ಕ ಹಾಗೆ ಏರಿಸುವ ಮತ್ತು ಇಳಿಸುವ ಗುಣಗಳನ್ನು ಹೊಂದಿದ ಮಡಿಸಬಹುದಾದ ಚಿತ್ರಗಳು ಮತ್ತು ಕಾಲಕ್ಕೆ ತಕ್ಕ ಹಿನ್ನೆಲೆ ವಿನ್ಯಾಸವನ್ನು ಬದಲಾಯಿಸುತ್ತಾ ಹೋಗಬಹುದಾದ ಚಿತ್ರಗಳು ಇವಾಗಿವೆ.

* ಕವಾಟುಗಳ ಚಿತ್ರದಲ್ಲಿ ನಾಟಕಕ್ಕೆ ಸಂಬಂಧಪಡದ ಯಾವುದೋ ಚಿತ್ರ ಉದಾಹರಣೆಗೆ: ಬೇಲೂರ ಶಿಲಾಬಾಲಕಿ, ದ್ವಾರಪಾಲಕರು, ಎಸ್.ಎಂ. ಪಂಡಿತರಂತಹ ನೈಜ ಕಲಾವಿದರ ಪ್ರತಿ ಕೃತಿಗಳು ಇಲ್ಲಿ ಛಾಪ ಮೂಡಿಸುತ್ತವೆ. ಇವುಗಳನ್ನು ಅಲ್ಲಿಟ್ಟಿರುವ ಕಾರಣ ರಸ್ತೆಸೀನರಿಯಲ್ಲಿ ಬರುವ ಮನುಷ್ಯ

ಮುಂಗಡವಾಗಿಯೇ ಪ್ರೇಕ್ಷಕನಿಗೆ ಕಾಣಬಾರದೆಂಬ ತಾಂತ್ರಿಕ ಅಂಶಕ್ಕಾಗಿ ಈ ಕವಾಟು ಚಿತ್ರಗಳನ್ನು ರಚಿಸಲಾಗಿದೆ.

* ಜನಪದ ಕಲಾವಿದರ ಕೃತಿಗಳಲ್ಲಿ ದಾರ್ಶನಿಕರ ಕಲ್ಪನಾ ಚಿತ್ರಗಳು ಹೇರಳವಾಗಿವೆ. ಋಷಿಮುನಿಗಳ ಕಾಲದ, ಶರಣರ ಜೀವನ ಆಧಾರಿತ ಕಥೆಗಳನ್ನು ಚಿತ್ರರೂಪಕ್ಕೆ ಇಳಿಸಿ ಆ ಕಾಲದ ಪರಿಕಲ್ಪನೆಗೆ ಕೊಂಡೊಯ್ಯುವ ಸಾಮರ್ಥ್ಯವನ್ನು ಜನಪದ ಕಲಾವಿದ ಹೊಂದಿದ್ದನೆಂಬುದನ್ನು ಈ ಚಿತ್ರಗಳು ಸಾಭೀತುಪಡಿಸುತ್ತವೆ.

* ಜನಪದ ಕಲಾವಿದರು ಚಿತ್ರಿಸಿದ ಅಪರೂಪದ ಚಿತ್ರಗಳನ್ನು ಶರೀರಶಾಸ್ತ್ರಬದ್ಧವಾದ ಮಾನವಾಕೃತಿಗಳು, ಭಾವಚಿತ್ರಗಳು ನೈಜವಾಗಿರುವುದಲ್ಲದೇ ನೋಡುಗನಿಗೆ ಆ ಕಾಲದ ಜನ ಹೀಗೆಯೇ ಇದ್ದರೆಂದು ನಂಬುವಂತೆ ಕೃತಿಗಳನ್ನು ರಚಿಸಲಾಗಿದೆ.

**ಶಿಷ್ಟ ಶೈಲಿಯ ಕಲಾವಿದರ ಕಲಾಕೃತಿಗಳ ವಿಶೇಷತೆ**

* ಪ್ರಬುದ್ಧ ಮತ್ತು ಪ್ರಸಿದ್ಧ ಕಲಾವಿದರು ಜನಿಸಿದ ಬಾಗಲಕೋಟೆ ಜಿಲ್ಲೆ ಚಿತ್ರಕಲೆಯಲ್ಲಿ ಹಲವಾರು ದಾಖಲೆಗಳನ್ನು ಸೃಷ್ಟಿಸಿದೆ. ಕಲಾವಿದರು ತಮ್ಮ ತಲೆಮಾರುಗಳಿಗೆ ತಕ್ಕ ಹಾಗೆ ಭಾವನೆಗಳ ಪ್ರೇರಣೆಯನ್ನು ವ್ಯಕ್ತಪಡಿಸುವಲ್ಲಿ ಯಶಸ್ವಿಯಾಗಿದ್ದಾರೆ.

* ಒಬ್ಬೊಬ್ಬ ಕಲಾವಿದರು ತಮ್ಮ ತಮ್ಮ ಕೃತಿಗಳಲ್ಲಿ ವೈಚಾರಿಕತೆಯನ್ನು ಮೆರೆಯುವುದರೊಂದಿಗೆ ಸೃಜನಶೀಲತೆ, ವರ್ಣಸಂಯೋಜನೆಯಲ್ಲಿ ರಾಜಧಾನಿಯ ಹಾಗೂ ಬೇರೆ ಭಾಗದ ಕಲಾವಿದರಿಗೇನು ಕಡಿಮೆ ಇಲ್ಲದಂತೆ ಚಿತ್ರ ರಚಿಸಿದ್ದಾರೆ.

* ಯುವ ಕಲಾವಿದರು ಅಕಾಡೆಮಿ ಪ್ರಶಸ್ತಿಯನ್ನು ಪಡೆದ ಕೃತಿಗಳು ಇಲ್ಲಿವೆ. ಉತ್ಕೃಷ್ಟವಾದ ಕೃತಿಗಳ ಪ್ರಯೋಗಗಳನ್ನು ಮಾಡುತ್ತಾ ಅಂತರ್ಜಾಲಗಳಲ್ಲಿ ತಮ್ಮ ವರ್ಣಛಾಯೆಯನ್ನು ದಾಖಲಿಸಿದ್ದಾರೆ.





ಅಕಾಡೆಮಿಕ್ ಶೈಲಿಯ ಕಲಾವಿದರ ಚಿತ್ರಗಳು ೧) ಅಕ್ಕಮಹಾದೇವಿ



೨) ಕಲಾರಾಧನೆ



೬) ಉರಿಯುವ ಮಾನವ



೧೪) ಕೃಷ್ಣ ಮತ್ತು ಗೋಪಿಯರು



೧೭) ಎತ್ತರದ ಕಟ್ಟಡಗಳು



೧೮) ಭಾರತದ ಪಕ್ಷಿನೋಟ



೨೪) ಮನುಷ್ಯಾಕೃತಿಗಳ ಸಂಯೋಜನೆ



೨೯) ಆಧ್ಯಾತ್ಮ



೩೦) ಪ್ರತಿಫಲ



೩೮) ಗೊಲ್ಲರ ಕೃಷ್ಣ



೩೯) ಪರಿಸರ ನಾಶ



೪೨) ಜನಜೀವನ



ವಲಸೆ ಹೋದ ಜಿಲ್ಲೆಯ ಕಲಾವಿದರ ಚಿತ್ರಗಳು 	೧) ಮಹಿಳೆ



೨) ಕುದುರೆ ಮೇಲೆ ಘೋರ್ಪಡೆ



ಳ) ಬಳ್ಳಾರಿ ಬೆಟ್ಟ



ಶಿವಯೋಗ ಮಂದಿರದ ಚಿತ್ರಗಳು

೧) ದವಸದಾನ್ಯಗಳನ್ನು ಸಂಗ್ರಹಿಸುವ ದೃಶ್ಯ



2) ಶಿವಯೋಗ ಮಂದಿರ ಸ್ಥಾಪನೆ ದೃಶ್ಯ

ಕೂಡಲಸಂಗಮದ ಮಾತೆ ಮಹಾದೇವಿಯವರ ಬಸವಾಶ್ರಮದಲ್ಲಿ ಸಂಗ್ರಹಿತ ಚಿತ್ರಗಳು



೩) ಆನೆಗೆ ಕಟ್ಟಿ ಎಳೆಯುವ ಶಿಕ್ಷೆ



೪) ಯುದ್ಧನಿರತ ಮಡಿವಾಳ ಮಾಚಯ್ಯ



೭) ನಿಸರ್ಗ ಚಿತ್ರ



ಅಧ್ಯಾಯ ಏಳು

## ಬಾಗಲಕೋಟೆ ಜಿಲ್ಲೆಯ ಗಾಜು ಮಾಧ್ಯಮ ಚಿತ್ರಕಲೆ

# ಬಾಗಲಕೋಟೆ ಜಿಲ್ಲೆಯ ಗಾಜು ಮಾಧ್ಯಮ ಚಿತ್ರಕಲೆ

ಆದಿಮಾನವನ ಗೋಡೆ ಮತ್ತು ಭಿತ್ತಿಯ ಮಾಧ್ಯಮದೊಂದಿಗೆ ಆರಂಭವಾದ ಚಿತ್ರಕಲಾ ಪರಂಪರೆ ಮುಂದೆ ಹಸ್ತಪ್ರತಿ, ತೊಗಲುಗಳನ್ನು ಆಧಾರವಾಗಿಸಿಕೊಂಡು ತನ್ನ ವ್ಯಾಪ್ತಿ, ವೈವಿಧ್ಯವನ್ನು ಬೆಳೆಯಿಸಿಕೊಂಡಿದೆ. ಅನಂತರದಲ್ಲಿ ಆಕರ್ಷಕವಾದ ಹೊಳಪಿನ ಮೇಲ್ಮೈ, ಪಾರದರ್ಶಕತೆ ಹಾಗೂ ವೈಶಿಷ್ಟ್ಯಪೂರ್ಣವಾದ ರಚನಾ ವಿಧಾನವನ್ನು ಹೊಂದಿರುವ 'ಗಾಜ'ನ್ನು ಆಧಾರವಾಗಿಸಿಕೊಂಡದ್ದು ಚಿತ್ರಕಲಾ ವಲಯದಲ್ಲಿ ಒಂದು ವಿನೂತನ ವಿಧಾನವಾಯಿತು. ಪರಿಣಾಮವಾಗಿ ವಿಶ್ವದಾದ್ಯಂತ 'ಗಾಜ'ನ್ನು ಚಿತ್ರಕಲೆಯ ಮಾಧ್ಯಮವಾಗಿಸಿಕೊಂಡು ವಿವಿಧ ಶೈಲಿಯಲ್ಲಿ ಹಲವಾರು ಕಲಾಕೃತಿಗಳು ಜನ್ಮ ತಾಳಿದವು.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕ್ರಿ.ಶ. ಆರಂಭದ ಹೊತ್ತಿಗೆ ಗಾಜಿನ ಕಲಾತ್ಮಕ ಬಳಕೆಯಾಗಿರುವುದರ ಬಗೆಗೆ ಮಾಹಿತಿ ದೊರೆಯುತ್ತವೆ. ಅಂತೆ ಮಧ್ಯಕಾಲದಲ್ಲಿ ಬೆಳೆದ ವಾಸ್ತು ಕಲೆಗಳಲ್ಲಿ ಗಾಜಿನ ಚಿತ್ರಕಲೆ ವಿಪುಲವಾಗಿ ಬೆಳೆದದ್ದನ್ನು ಕಾಣಬಹುದು. ಅದೇ ಹೊತ್ತಿಗೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಹುಟ್ಟಿಕೊಂಡ ರೋಮನೆಸ್ಕ್, ಗಾತಿಕ್, ಬಾರೊಕ್, ರೊಕೋಕೊ ಕಲೆಗಳಲ್ಲಿ ಗಾಜಿನ ಕಲಾತ್ಮಕ ಬಳಕೆ ಹಾಗೂ ಗಾಜಿನ ಚಿತ್ರಕಲೆಯನ್ನು ವೈವಿಧ್ಯಪೂರ್ಣವಾಗಿ ಬಳಸಿಕೊಳ್ಳಲಾಗಿದೆ.

ಭಾರತದಲ್ಲಿಯೂ ಗಾಜಿನ ಪ್ರಾಚೀನತೆಯನ್ನು ಸಾಹಿತ್ಯಿಕ ಆಧಾರಗಳ ಮೇಲೆ ಅರಿಯಬಹುದಾಗಿದೆ. ರಾಮಾಯಣ, ಮಹಾಭಾರತ ಮಹಾಕಾವ್ಯಗಳಲ್ಲಿ ಗಾಜಿನ ಕಲಾತ್ಮಕ ವಸ್ತುಗಳು, ಗಾಜಿನ ಕನ್ನಡಿ, ಗಾಜಿನ ಮೇಲೆ ಚಿತ್ರಿತವಾಗಿರುವ ಕಲಾಕೃತಿಗಳ ಬಗ್ಗೆ ಹಲವಾರು ಉಲ್ಲೇಖಗಳಿವೆ. ರಾಮಾಯಣದ ರಾವಣ, ವಿಭೀಷಣ, ಇಂದ್ರಜಿತ್, ಕುಂಭಕರ್ಣ ಮುಂತಾದವರ ಅರಮನೆಗಳ ವರ್ಣನೆಗಳಲ್ಲಿ ಮತ್ತು ಮಹಾಭಾರತದ ಪಾಂಡವರು ಇಂದ್ರಪ್ರಸ್ಥದಲ್ಲಿ ದೇವಶಿಲ್ಪಿ 'ಮಯ'ನಿಂದ ನಿರ್ಮಾಣಗೊಂಡಿದ್ದ ಅರಮನೆಯಲ್ಲಿ ವಿವಿಧ ಬಗೆಯ ಸುಂದರ ಗಾಜಿನ ಕಲಾಕೃತಿಗಳಿರುವ ಬಗೆಗೆ ವಿವರಗಳಿವೆ.

ತಕ್ಷಶಿಲೆ ಎಂಬ ಪ್ರದೇಶದ ದಿಬ್ಬಗಳ ಉತ್ಖನನದಲ್ಲಿ ಗಾಜಿನ ಕಲಾತ್ಮಕ ವಸ್ತುಗಳು ದೊರೆತಿದ್ದು, ಇವು ಕ್ರಿ.ಪೂ. ೨ನೇ ಶತಮಾನಕ್ಕೆ ಸಂಬಂಧಪಟ್ಟವುಗಳಾಗಿವೆ. ಇವೇ ಭಾರತದಲ್ಲಿ ಐತಿಹಾಸಿಕವಾಗಿ ಅಧಿಕೃತವಾಗಿ ಲಭ್ಯವಾದ ಗಾಜಿನ ಕಲಾಕೃತಿಗಳಾಗಿವೆ. ಇನ್ನು ಮೊಘಲರ ಕಾಲಕ್ಕೆ ಗಾಜಿನ ಕಲಾತ್ಮಕ ವಸ್ತುಗಳ ಬಳಕೆ ಅಧಿಕವಾಗಿತ್ತು ಎನ್ನಬಹುದು. ಇವರ ನಂತರದಲ್ಲಿ ರಜಪೂತರು ಗಾಜನ್ನು

ವೈವಿಧ್ಯಮಯವಾಗಿ ಬಳಸಿಕೊಂಡಿರುವುದಲ್ಲದೇ ಗಾಜಿನ ಮೇಲೆ ಚಿತ್ರಗಳನ್ನು ರಚಿಸಿರುವುದನ್ನು ಇಂದಿಗೂ ರಾಜಸ್ಥಾನ ಮತ್ತು ಗುಜರಾತಿನ ಅರಮನೆಗಳಲ್ಲಿ ಕಾಣಬಹುದಾಗಿದೆ.

ಕರ್ನಾಟಕದ ಗಾಜಿನ ಚಿತ್ರಕಲೆಯ ಪ್ರಾಚೀನತೆಯ ಬಗೆಗೂ ನಿಖರವಾದ ಮಾಹಿತಿಯನ್ನು ರಕ್ಷಿಸಲಾಗಿ ಯಾದಗಿರಿ ತಾಲ್ಲೂಕಿನ ಹಲವು ಪ್ರದೇಶಗಳು, ಸುರಪುರ ತಾಲ್ಲೂಕಿನ ಜಮಲಾಪುರಗಳಲ್ಲಿ ಗಾಜು ತಯಾರಿಸುವ ಕೇಂದ್ರಗಳಿದ್ದ ಬಗೆಗೆ ಕುರುಹುಗಳು ಲಭ್ಯವಾಗಿವೆ. ಅಲ್ಲಿ ಗಾಜು ತಯಾರಿಸುತ್ತಿದ್ದ ಕುಲುಮೆಯ ಅವಶೇಷ ಹಾಗೂ ಯಥೇಚ್ಛ ಪ್ರಮಾಣದ ಗಾಜಿನ ತುಂಡುಗಳು ಕಂಡುಬಂದಿವೆ. ಇವು ಕ್ರಿ.ಪೂ. ಇಲ್ಲವೇ ಕ್ರಿ.ಶ. ಆರಂಭದ ಕಾಲದವುಗಳಾಗಿರಬೇಕೆಂದು ಊಹಿಸಲಾಗಿದೆ.[೩೨]

ಕರ್ನಾಟಕದಲ್ಲಿಯೂ ಕೂಡ ಗಾಜಿನ ಕೃತಿಗಳನ್ನು ಒಂದು ಚಿತ್ರಕಲಾ ಪ್ರಕಾರವಾಗಿ ಪರಿಭಾವಿಸುವ ಪರಂಪರೆ ಪಾಶ್ಚಾತ್ಯರ ಆಗಮನದೊಂದಿಗೆ ಆರಂಭವಾಯಿತೆಂದು ಹೇಳಬಹುದು. ಕರ್ನಾಟಕವನ್ನು ಆಳಿದ ರಾಜಮನೆತನಗಳಾದ ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು ಮುಂತಾದ ಅರಸರ ಕಾಲದಲ್ಲಿ ಗಾಜಿನ ಬಳಕೆಯ ಬಗೆಗೆ ನಿಖರ ಆಧಾರಗಳು ದೊರೆತಿಲ್ಲವಾದರೂ, ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಗಾಜಿನ ಕಲಾತ್ಮಕ ವಸ್ತುಗಳು, ಗಾಜಿನ ಚಿತ್ರಕಲೆ ವಿಪುಲವಾಗಿ ಬಳಕೆಯಲ್ಲಿದ್ದ ಬಗೆಗೆ ಆ ಸಂದರ್ಭದಲ್ಲಿ ಭೇಟಿ ನೀಡಿದ ವಿದೇಶಿ ಪ್ರವಾಸಿಗರ ಬರವಣಿಗೆಗಳಿಂದ ತಿಳಿಯಬಹುದು.

ಪಾಶ್ಚಾತ್ಯರ ಆಗಮನದ ನಂತರ ಅವರು ಕಟ್ಟಿದ ಇಲ್ಲಿನ ಪ್ರಾಚೀನ ಚರ್ಚುಗಳಿಂದ ಗಾಜಿನ ಚಿತ್ರಕಲೆಯು ಇನ್ನಷ್ಟು ಸೃಜನಶೀಲತೆಯನ್ನು ಪಡೆದುಕೊಂಡಿತು. ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೨ನೆಯ ಶತಮಾನದ ಸುಮಾರಿಗೆ ಚರ್ಚುಗಳಿರುವ ಬಗ್ಗೆ ತಿಳಿದುಬರುತ್ತದೆ. ಕರ್ನಾಟಕದ ಮಂಗಳೂರು, ಬೆಂಗಳೂರು, ಮೈಸೂರು ಭಾಗಗಳಲ್ಲಿ ಹೆಚ್ಚಾಗಿ ಮತ ಪ್ರಚಾರ, ಶಿಕ್ಷಣ ಹಾಗೂ ಸಮಾಜ ಸೇವೆಯ ಉದ್ದೇಶಗಳೊಂದಿಗೆ ಕ್ರೈಸ್ತ ದೇಗುಲಗಳನ್ನು ನಿರ್ಮಿಸಿದರೋ, ಅದರ ಜೊತೆ ಜೊತೆಗೆ ವಾಸ್ತುಶಿಲ್ಪದ ರಚನೆಯ ಭಾಗವಾಗಿ ಗಾಜಿನ ಚಿತ್ರಕಲೆಯನ್ನು ಅಭಿವೃದ್ಧಿಪಡಿಸಿದರು. ಗಾಜಿನ ಚಿತ್ರಕಲೆಯ ಚರಿತ್ರೆಯನ್ನು ಅವಲೋಕಿಸಲಾಗಿ, ಕ್ರೈಸ್ತ ಧರ್ಮದವರು ಬಳಸಿಕೊಂಡಿರುವಷ್ಟು ಬೇರಾವ ಧರ್ಮದವರು ಗಾಜನ್ನು ಬಳಸಿಕೊಂಡಿಲ್ಲ ಎನ್ನಬಹುದು.

ಈ ಗಾಜಿನ ಕಲಾಪ್ರಕಾರವನ್ನು ಸಮರ್ಥವಾಗಿ ಬಳಸಿಕೊಂಡ ಭಾರತೀಯ ಚಿತ್ರಕಾರರು ರಾಮಾಯಣ, ಮಹಾಭಾರತ ಹಾಗೂ ದೇವಾನುದೇವತೆಗಳ ಚಿತ್ರಗಳನ್ನು ಬರೆದು ನಾಡಿನುದ್ದಕ್ಕೂ ಹರಡಿದ್ದಾರೆ. ಕರ್ನಾಟಕದಲ್ಲಿ ಮೈಸೂರು ದೊರೆಗಳು, ಸುರಪುರ ದೊರೆಗಳು ಕೆಳದಿ ಅರಸರು, ಚಿತ್ರದುರ್ಗದ ನಾಯಕರು ಹಾಗೂ ಸಣ್ಣಪುಟ್ಟ ಅರಸರು ಮನೆತನಗಳ ಆಶ್ರಯದಲ್ಲಿ ರಚನೆಗೊಂಡ ಗಾಜಿನ ಚಿತ್ರಗಳನ್ನು ಕಾಣಬಹುದಾಗಿದೆ. ಕರ್ನಾಟಕದ ಗಾಜಿನ ಚಿತ್ರಕಲೆಯು ಟಿಪ್ಪುಸುಲ್ತಾನನ ಪ್ರೋತ್ಸಾಹದೊಂದಿಗೆ ಬೆಳೆದುಬಂದಿರುವುದು ಉಲ್ಲೇಖನೀಯ.[೩೩]

---

೩೨. ಪರ್ವಿನ್ ಸುಲ್ತಾನ್, ಕರ್ನಾಟಕ ಚರಿತ್ರೆ(ಸಂಪುಟ ೬), ಪು. ೧೭೭.

೩೩. ಡಾ. ಮೋಹನ್‌ಕೃಷ್ಣ ರೈ, ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ, ಪು. ೪೯.

ಈ ರಾಜಮನೆತನಗಳ ಅವನತಿಯ ನಂತರ ಅವರ ಆಶ್ರಯದಲ್ಲಿದ್ದ ಕಲಾವಿದರು ಹೊಟ್ಟೆಪಾಡಿಗಾಗಿ ದೇಶದುದ್ದಕ್ಕೂ ಚದುರಿಹೋದರು. ಈ ಕಲಾವಿದರು ನಾಡಿನ ಪ್ರಸಿದ್ಧ ಧಾರ್ಮಿಕ ಕ್ಷೇತ್ರಗಳಲ್ಲಿ ನೆಲೆಸಿ, ಗ್ರಾಹಕರ ಬೇಡಿಕೆಗಳಿಗನುಗುಣವಾಗಿ ಹೆಚ್ಚು ಮಾರಾಟದ ಕಲಾಕೃತಿಗಳನ್ನು ರಚಿಸಿ, ಪ್ರತಿಕೃತಿಗೊಳಿಸಿ ಮಾರಾಟ ಮಾಡಹತ್ತಿದರು. ಈ ಕಾರಣಕ್ಕಾಗಿ ಗಾಜಿನ ಚಿತ್ರಕಲೆಯು ಸಂಪೂರ್ಣ ವ್ಯಾಪಾರೀಕರಣವಾಯಿತು. ಅಂತೆ ಒಂದೇ ವಿಷಯದ ಚಿತ್ರಗಳು ಹೆಚ್ಚು ಸಂಖ್ಯೆಯಲ್ಲಿ ಸಂಗ್ರಹಗೊಂಡಿರುವುದು ಕಾಣಸಿಗುತ್ತವೆ.

ಇನ್ನು ಬಾಗಲಕೋಟೆ ಜಿಲ್ಲೆಯಲ್ಲಿಯ ಗಾಜಿನ ಚಿತ್ರಕಲೆಯ ಬಗೆಗೆ ವಿವೇಚಿಸುವುದಾದರೆ, ಭವ್ಯ ಸಾಂಸ್ಕೃತಿಕತೆಯನ್ನು ಮೈಗೂಡಿಸಿಕೊಂಡಿರುವ ಜಿಲ್ಲೆಯಲ್ಲಿ, ವಿವಿಧ ಹಬ್ಬಗಳಾದ ಗಣೇಶಚತುರ್ಥಿ, ಗೌರಿಹುಣ್ಣಿಮೆ, ವರಮಹಾಲಕ್ಷ್ಮಿ ಪೂಜೆ, ದೀಪಾವಳಿ, ದಸರಾ, ಹೋಳಿಹಬ್ಬಗಳಂತಹ ಹಬ್ಬಗಳಲ್ಲಿ ತಮ್ಮ ತಮ್ಮ ಮನೆಗಳಲ್ಲಿ, ಗಲ್ಲಿಗಲ್ಲಿಗಳಲ್ಲಿ ವಿಶೇಷ ಮಂಟಪಗಳನ್ನು ನಿರ್ಮಿಸಿ ಆ ಮಂಟಪಗಳಲ್ಲಿ ಸಂದರ್ಭನುಸಾರವಾಗಿ ಗಾಜಿನ ಚಿತ್ರಕಲಾಕೃತಿಗಳಿಂದ ಮಂಟಪಗಳನ್ನು ಶೃಂಗರಿಸುತ್ತಾರೆ. ಈ ಪರಂಪರೆಯು ಸುಮಾರು ೨-೩ ತಲೆಮಾರುಗಳಿಂದ ನಡೆದುಕೊಂಡು ಬಂದದ್ದನ್ನು ಗಮನಿಸಬಹುದು. ಜಿಲ್ಲೆಯ ಸಂಗ್ರಹದಲ್ಲಿರುವ ಗಾಜಿನ ಚಿತ್ರಕಲಾಕೃತಿಗಳೆಲ್ಲವೂ ತಂಜಾವೂರು, ರಾಜಸ್ಥಾನ ಕಡೆಗಳಿಂದ ತಂದು ಸಂಗ್ರಹಿಸಿಟ್ಟುಕೊಂಡಿರುವುಗಳಾಗಿವೆ. ಜಿಲ್ಲೆಯ ಶ್ರೀಮಂತ ಮನೆತನಗಳು, ಮನೆಯ ಅಲಂಕಾರಕ್ಕಾಗಿ, ಹಬ್ಬಹರಿದಿನಗಳ ವಿಶೇಷ ಅಲಂಕಾರಕ್ಕಾಗಿ ಸುಮಾರು ೫೦ರಿಂದ ೧೦೦ ವರ್ಷಗಳಿಂದೀಚಿನಿಂದಲೇ ಸಂಗ್ರಹ ಮಾಡಿ, ಸಂರಕ್ಷಿಸಿಕೊಂಡು ಬಂದಿರುವುದು ವಿಶೇಷವಾಗಿದೆ.[೩೪]

### i. ಜಿಲ್ಲೆಯಲ್ಲಿ ಗಾಜಿನ ಚಿತ್ರಗಳಿರುವ ನೆಲೆಗಳು

ಜಿಲ್ಲೆಯ ಮನೆ, ದೇವಸ್ಥಾನ, ವಸ್ತು ಸಂಗ್ರಹಾಲಯಗಳು, ರಾಜವಾಡೆಗಳಲ್ಲಿ ಗಾಜಿನ ಚಿತ್ರಗಳು ಸಂಗ್ರಹಗೊಂಡಿರುವುದನ್ನು ಕಾಣಬಹುದಾಗಿದೆ.

### ಅರಮನೆಗಳು

ಜಿಲ್ಲೆಯ ಜಮಖಂಡಿಯ ಬೆಟ್ಟದ ಮೇಲೆ ಕಂಡುಬರುವ ರಾಯಲ್ ಪ್ಯಾಲೇಸ್ ಅರಮನೆಯಲ್ಲಿ ನೂರಾರು ಕಿಟಕಿ, ಬಾಗಿಲುಗಳಿವೆ. ಈ ಕಿಟಕಿ, ಬಾಗಲುಗಳು ಪಾರದರ್ಶಕ ಗಾಜು ಫಲಕಗಳನ್ನು ಹೊಂದಿದ್ದು, ಇವುಗಳ ಮೇಲೆ ರಾಜಮನೆತನದ ಎಂಬ್ಲಮ್, ರಾಜಮನೆತನದವರು ನಡೆಸುತ್ತಿರುವ ಶಿಕ್ಷಣಸಂಸ್ಥೆಗಳ ಎಂಬ್ಲಮ್‌ಗಳ ಅಲಂಕಾರಿಕ ನಕ್ಷಾ ವಿನ್ಯಾಸಗಳನ್ನು ರಚಿಸಲಾಗಿದೆ.

ಮುಧೋಳದ ಶ್ರೀ ಮಾಲೋಜಿರಾವ್, ವೆಂಕಟರಾವ್ ಘೋರ್ಪಡೆಯವರ ಸಂಸ್ಥಾನದ ಅರಮನೆಯ ಕಟ್ಟಡವು ೧೮೮೪ರಲ್ಲಿ ನಿರ್ಮಿತವಾಗಿದ್ದು, ಅಲ್ಲಿ ಹಲವಾರು ತೈಲ ಕಲಾಕೃತಿಗಳು, ಗಾಜಿನ ಕಲಾತ್ಮಕ ವಸ್ತುಗಳು ಸಂಗ್ರಹಗೊಂಡಿವೆ. ಈ ಗಾಜಿನ ವಸ್ತುಗಳ ಮೇಲೆ ವೈವಿಧ್ಯಮಯವಾದ ಚಿತ್ರ ವಿನ್ಯಾಸಗಳು ರಚನೆಗೊಂಡಿವೆ.

---

೩೪. ಮಹಾದೇವ ಜಗತಾಪ್, ಕರ್ನಾಟಕ ಜನಪದ ಚಿತ್ತಾರಗಳು ಹಾಗೂ ಶಿಲ್ಪಗಳು, ಪು. ೭೧-೭೨.

**ದೇವಸ್ಥಾನಗಳು**

ಜಿಲ್ಲೆಯ ಅಮೀನಗಡ ಗ್ರಾಮದ ಶ್ರೀ ಬಸವೇಶ್ವರ ದೇವಸ್ಥಾನದಲ್ಲಿ ಒಂದೇ ಅಳತೆಯ ನಾಲ್ಕು ತೂಗು ಹಾಕುವ ಗಾಜಿನ ಚಿತ್ರಗಳಿವೆ. ಇವು ಶ್ರೀಕೃಷ್ಣ, ಸತ್ಯಭಾಮೆ, ರುಕ್ಮಿಣಿ, ವಿಷ್ಣು, ಶ್ರೀದೇವಿ, ಭೂದೇವಿ, ರಾಧೆಕೃಷ್ಣ ವಿಷಯಗಳನ್ನೊಳಗೊಂಡಿವೆ. ಸ್ಥಳೀಯ ವ್ಯಾಪಾರಸ್ಥರೊಬ್ಬರು ದೇವಸ್ಥಾನಕ್ಕೆ ಇವುಗಳನ್ನು ಕಾಣಿಕೆಯಾಗಿ ನೀಡಿದ್ದಾರೆಂದು ಪೂಜಾರಿಗಳು ತಿಳಿಸುತ್ತಾರೆ.

ಜಿಲ್ಲೆಯ ಬಾದಾಮಿ ತಾಲ್ಲೂಕಿನ ಕೋಟೆಕಲ್ ಶ್ರೀ ಹುಚ್ಚೇಶ್ವರ ಮಠದಲ್ಲಿ ೧೧ನೇ ಶ್ರೀ ಹೊಳೆಹುಚ್ಚೇಂದ್ರ ಸ್ವಾಮಿಗಳ ಗಾಜಿನ ಮೇಲೆ ಚುಕ್ಕಿಗಳಿಂದ ಕೊರೆದ ಭಾವಚಿತ್ರವಿದೆ. ಈ ಚಿತ್ರವು ವಿಶಿಷ್ಟ ರಚನಾವಿಧಾನವನ್ನು ಹೊಂದಿದ್ದು, ೨೫x೪೦ ಸೆಂ.ಮೀ. ಅಳತೆಯನ್ನು ಹೊಂದಿದೆ. ಬಾಗಲಕೋಟೆಯ ಶ್ರೀ ಸಿದ್ರಾಮಪ್ಪ ಬಸಪ್ಪ ವೈಜಾಪೂರ ಇವರು ದೇವಸ್ಥಾನಕ್ಕೆ ಕಾಣಿಕೆಯಾಗಿ ನೀಡಿದ್ದಾರೆಂದು ಸ್ಥಳೀಯರು ವಿವರಿಸುತ್ತಾರೆ.

**ವಸ್ತುಸಂಗ್ರಹಾಲಯ**

ಬಾಗಲಕೋಟೆಯ ನವನಗರದ ಜನಪದ ವಸ್ತುಸಂಗ್ರಹಾಲಯದಲ್ಲಿ ಎರಡು ಗಾಜಿನ ಚಿತ್ರಗಳನ್ನು ಸಂಗ್ರಹಿಸಲಾಗಿದೆ.

**ಮನೆಗಳು**

ಜಿಲ್ಲೆಯ ಬಾಗಲಕೋಟೆ, ಗುಳೇದಗುಡ್ಡ, ಅಮೀನಗಡ, ಇಲಕಲ್ ನಗರದ ಹಲವಾರು ಮನೆಗಳಲ್ಲಿ ಗಾಜಿನ ಚಿತ್ರಗಳು ಹೆಚ್ಚು ಸಂಗ್ರಹಗೊಂಡಿವೆ.

ಬಾಗಲಕೋಟೆ ನಗರದ ಶ್ರೀ ಎಸ್. ನಾರಾ, ಶ್ರೀ ಬಿ.ಎಂ. ಹಲಕಾಟಿ, ಶ್ರೀ ಮಹೇಂದ್ರ ಸರಾಫ್, ಶ್ರೀ ಅಶೋಕ ಗೋಣಿ, ಶ್ರೀ ಎಸ್.ಬಿ. ಹೊಕ್ರಾಣಿ, ಶ್ರೀ ಮಾಣಿಕ್‌ಚಂದ್ ಹನ್ಸರಾಜ್, ಬೇತಾಳ ಎಂಬುವವರ ಮನೆಗಳಲ್ಲಿ ಗಾಜಿನ ಚಿತ್ರಗಳು ಸಂಗ್ರಹಗೊಂಡಿವೆ.

ಜಿಲ್ಲೆಯ ಬಾದಾಮಿ ತಾಲ್ಲೂಕಿನ ಗುಳೇದಗುಡ್ಡ ನಗರದಲ್ಲಿ ಅತೀ ಹೆಚ್ಚು ಗಾಜಿನ ಚಿತ್ರಕಲಾಕೃತಿಗಳಿರುವುದು ಗಮನಾರ್ಹ. ಶ್ರೀ ರಾಜಶೇಖರ ಶೀಲವಂತ, ಶ್ರೀ ಅಶೋಕ, ವಿರೂಪಾಕ್ಷಪ್ಪ, ತಿಪ್ಪಾ, ಶ್ರೀ ವೀರಬಸಪ್ಪ ರಾಚಪ್ಪ, ತಿಪ್ಪಾ, ಶ್ರೀ ಬನ್ಸಿಲಾಲ್, ಬಾಲಕಿಶನ್, ಕಾಬ್ರಾ, ಶ್ರೀ ವೀರಗಂಟೆಪ್ಪ, ಸಂಗಪ್ಪ ಕರಡಿ, ಶ್ರೀ ಶಂಕರಸಾ, ಫಕೀರಸಾ, ಪವಾರ, ಶ್ರೀ ಬಸವಪ್ರಭಾ, ಮಹಾದೇವಪ್ಪ ಗಂಗಾವತಿ, ಶ್ರೀ ಯೋಗಪ್ಪ, ಸಂಗಪ್ಪ ರಾಜನಾಳ, ಶ್ರೀ ವೀರಸಂಗಪ್ಪ, ಈಶ್ವರಪ್ಪ, ಭಾವಿ, ಶ್ರೀ ಶೇಖರಪ್ಪ, ಉಮಚಗಿ ಎಂಬುವವರ ಮನೆಗಳಲ್ಲಿ ಹಲವಾರು ಗಾಜಿನ ಚಿತ್ರಗಳು ಸಂಗ್ರಹಿತವಾಗಿವೆ.

ಜಿಲ್ಲೆಯ ಹುನಗುಂದ ತಾಲ್ಲೂಕಿನ ಅಮೀನಗಡದ ಎರಡು ಮನೆತನಗಳಲ್ಲಿ ಗಾಜಿನ ಚಿತ್ರಗಳು ಸಂಗ್ರಹಗೊಂಡಿವೆ. ಶ್ರೀ ಶೀಲವಂತಪ್ಪ ಸಣ್ಣಬಸಪ್ಪ ಗರಡಿ ಹಾಗೂ ಶ್ರೀ ಗುರಪ್ಪ, ಕಣ್ಣೂರು ಅವರ ಮನೆಗಳಲ್ಲಿ ಸುಮಾರು ೨೦೦ ವರ್ಷಗಳ ಹಿಂದೆಯೇ ಸಂಗ್ರಹಗೊಂಡ ಕಲಾಕೃತಿಗಳಾಗಿವೆ. ಶ್ರೀ ಶೀಲವಂತಪ್ಪ ಗರಡಿಯವರ ಮನೆಯಲ್ಲಿ ಒಟ್ಟು ೯ ಕಲಾಕೃತಿಗಳಿದ್ದು, ಇವು ೩೫x೬೫ ಸೆಂ.ಮೀ. ಅಳತೆಯಲ್ಲಿವೆ.

ಜಿಲ್ಲೆಯ ಹುನಗುಂದ ತಾಲ್ಲೂಕಿನ ಇಲಕಲ್ ನಗರದ ಶ್ರೀ ಆರ್.ಜಿ. ಬುತಡಾರ ಮನೆಯ ಕಪಾಡಿನ ಪಡುಕುಗಳಿಗೆ ಅಳವಡಿಸಿದ ಗಾಜಿನ ಫಲಕಗಳ ಮೇಲೆ ಲಕ್ಷ್ಮೀ ಹಾಗೂ ವೇಣುಗೋಪಾಲನ ಚಿತ್ರಗಳನ್ನು ಚಿತ್ರಿಸಲಾಗಿದ್ದು, ಈ ಎರಡೂ ಚಿತ್ರಗಳು ೭೦ ವರ್ಷಗಳ ಹಿಂದೆ ಸ್ಥಳೀಯ ಕಲಾವಿದನೋರ್ವನಿಂದ ಚಿತ್ರಿಸಲ್ಪಟ್ಟಿವೆ ಎಂದು ಮನೆಯ ಹಿರಿಯರು ಅಭಿಪ್ರಾಯಪಡುತ್ತಾರೆ. ಈ ಚಿತ್ರಗಳು ೨೦x೨೫ ಸೆಂ.ಮೀ. ಅಳತೆಯಲ್ಲಿವೆ.

ಒಟ್ಟು ಜಿಲ್ಲೆಯನ್ನು ಲಕ್ಷಿಸಲಾಗಿ ಬಾಗಲಕೋಟೆ, ಗುಳೇದಗುಡ್ಡ, ಅಮೀನಗಡ, ಇಲಕಲ್, ಜಮಖಂಡಿ, ಮುಧೋಳ, ಕೋಟೆಕಲ್‌ಗಳು ಗಾಜಿನ ಚಿತ್ರಗಳನ್ನು ಹೊಂದಿರುವ ನೆಲೆಗಳಾಗಿವೆ. ದೇವಸ್ಥಾನ, ಅರಮನೆ, ಸಂಗ್ರಹಾಲಯಗಳಿಗೆ ಹೋಲಿಸಲಾಗಿ, ಅತೀ ಹೆಚ್ಚು ಗಾಜಿನ ಚಿತ್ರಗಳು ಶ್ರೀಮಂತರ ಮನೆಗಳಲ್ಲಿ ಸಂಗ್ರಹಗೊಂಡಿರುವುದು ಗಮನಾರ್ಹ ಅಂಶವಾಗಿದೆ.

**ii. ಚಿತ್ರ ರಚನೆಯ ತಂತ್ರ ವಿಧಾನಗಳು**

ಯಾವುದೇ ಚಿತ್ರಕಲೆ ರೂಪುಗೊಳ್ಳಬೇಕಾದರೆ ಅದಕ್ಕೆ ಸೂಕ್ತವಾದ ಫಲಕ ಹಾಗೂ ಚಿತ್ರ ರಚನೆಗೆ ಬೇಕಾಗುವ ಪರಿಕರಗಳು. ಅಂದರೆ ರೇಖೆ ಬರೆಯುವ ವಸ್ತುಗಳು, ವರ್ಣಲೇಪನ ಮಾಡುವ ಬಣ್ಣಗಳು ಬೇಕಾಗುತ್ತವೆ. ಈ ವಿಧಾನವನ್ನು ನಮ್ಮ ಪ್ರಾಚೀನ ಮಾನವನ ಕಾಲದಿಂದ ಇಂದಿವರೆಗೆ ಅನುಸರಿಸಿದ್ದನ್ನು ಪ್ರಾಗೈತಿಹಾಸಿಕ ಚಿತ್ರಗಳು, ಗುಹಾಂತರ ಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಭಿತ್ತಿ ಚಿತ್ರಗಳು, ಕಿರುರೂಪ ಚಿತ್ರಗಳು ಹಾಗೂ ಪ್ರಸ್ತುತವಿರುವ ಸಮಕಾಲೀನ ಚಿತ್ರಗಳಿಂದ ತಿಳಿದುಬರುತ್ತದೆ. ಈ ಚಿತ್ರಗಳ ರಚನೆಯ ಪರಿಕರಗಳು ಹಾಗೂ ರಚನೆಯ ವಿಧಿವಿಧಾನಗಳು ಕಾಲದಿಂದ ಕಾಲಕ್ಕೆ ಅನೇಕ ಬದಲಾವಣೆಗಳನ್ನು ಮೈಗೂಡಿಸಿಕೊಂಡು ಬೆಳೆದುಬಂದಿರುವುದು ವಿಶೇಷ. ಚಿತ್ರ ರಚನೆಗೆ ಬಳಸುವ ಕಲ್ಲು, ಭಿತ್ತಿ, ಕಾಗದ, ಕ್ಯಾನ್ವಾಸ್‌ಗಳಂತೆ ಗಾಜನ್ನು ಬಳಸಿಕೊಂಡಿದ್ದನ್ನು ಇತಿಹಾಸ ಪೂರ್ವದ ಕಾಲದಿಂದ ಸಮಕಾಲೀನ ಕಾಲದವರೆಗೂ ನೋಡುತ್ತೇವೆ. ಚಿತ್ರ ರಚನೆಗೆ ಬಳಸುವ ಬೇರೆ ಬೇರೆ ಫಲಕಗಳಿಗಿಂತ ಗಾಜನ್ನು ಬಳಸುವಾಗ ಕಲಾವಿದನು ತಾಳ್ಮೆ ಹಾಗೂ ಜಾಣ್ಮೆಯನ್ನು ಹೊಂದಿರಬೇಕಾಗುತ್ತದೆ. ಯಾಕೆಂದರೆ ಗಾಜು ಪಾರದರ್ಶಕವಾಗಿರುವುದರಿಂದ ಹಾಗೂ ಇದರ ಮೈಪಾತಳಿಯು ಅತ್ಯಂತ ನುಣುಪಾಗಿ, ಹೊಳಪಾಗಿರುವುದರಿಂದ ರೇಖೆ ಮತ್ತು ಬಣ್ಣಗಳು ಕಿತ್ತುಹೋಗುವ ಸಂಭವವಿರುತ್ತದೆ. ಆ ಕಾರಣಕ್ಕಾಗಿ ಇದರ ಮೇಲೆ ಚಿತ್ರ ಬರೆಯುವಾಗ ಎಚ್ಚರ ವಹಿಸಬೇಕಾಗುತ್ತದೆ.

ಇಲ್ಲಿ ಗಾಜನ್ನು ಇನ್ನೂ ವಿಶೇಷ ರೀತಿಯಲ್ಲಿ ಬಳಸಿಕೊಳ್ಳಬಹುದು. ಗಾಜು ಪಾರದರ್ಶಕವಾಗಿರುವುದ ರಿಂದ ಅದರ ಎರಡೂ ಮೈಪಾತಳಿಗಳು ಇದ್ದರೂ ಯಾವುದೇ ಒಂದು ಮೈಯನ್ನು ಚಿತ್ರ ರಚನೆಗೆ ಬಳಸಿಕೊಳ್ಳಬಹುದು. ಗಾಜಿನ ಒಂದು ಮೈಪಾತಳಿಯ ಮೂಲಕ ಚಿತ್ರ ಬರೆದು ಅದರ ಇನ್ನೊಂದು ಬದಿಯ ಮೂಲಕ ಚಿತ್ರ ವೀಕ್ಷಿಸಬಹುದು. ಇದರ ಮೇಲೆ ಎರಡು ರೀತಿಯ ಪದ್ಧತಿಯಲ್ಲಿ ವರ್ಣಲೇಪನ ಮಾಡಬಹುದು. ಒಂದು ಪಾರದರ್ಶಕ ಪದ್ಧತಿ ಇನ್ನೊಂದು ಅಪಾರದರ್ಶಕ ಪದ್ಧತಿ. ಪಾರದರ್ಶಕ ಪದ್ಧತಿಯಲ್ಲಿ ಗಾಜಿನ ಒಂದು ಮೈಪಾತಳಿಯ ಮೇಲೆ ಚಿತ್ರಿಸಿ ವರ್ಣಲೇಪನ ಮಾಡಿ ಅದರ ಹಿಂಬದಿಯ ಮೂಲಕ ಬೆಳಕನ್ನು ಹಾಯಿಸಿ ಚಿತ್ರವೀಕ್ಷಣೆ ಮಾಡುವುದಾಗಿದೆ. ಈ ರೀತಿಯ ಚಿತ್ರ ಕ್ರಮವನ್ನು ಸ್ಟೇನ್ಡ್

ಗ್ಲಾಸ್ (Stained glass) ಚಿತ್ರಗಳಲ್ಲಿ ಕಾಣಬಹುದು. ಕ್ರೈಸ್ತ ಇಗರ್ಜಿಗಳಲ್ಲಿ ಕಂಡುಬರುವ ಗಾಜಿನ ಚಿತ್ರಗಳನ್ನು ತಕ್ಕ ಉದಾಹರಣೆಯಾಗಿ ನೀಡಬಹುದಾಗಿದೆ.

ಅಪಾರದರ್ಶಕ ಪದ್ಧತಿಯಲ್ಲಿ ಗಾಜಿನ ಒಂದು ಮೈಪಾತಳಿಯಲ್ಲಿ ಚಿತ್ರಿಸಿ ವರ್ಣಲೇಪನ ಮಾಡಿ ಒಂದು ನಿರ್ದಿಷ್ಟ ಚೌಕಟ್ಟಿಗೆ ಅಲಂಕರಿಸುವುದು. ಗಾಜಿನ ಚಿತ್ರ ಕಲಾವಿದರು ಈ ವರ್ಣಪದ್ಧತಿಯನ್ನು ಅನುಸರಿಸುವುದರ ಜೊತೆಗೆ ಚಿತ್ರವು ಇನ್ನೂ ಸುಂದರವಾಗಿ ಕಾಣುವಂತಾಗಲು ವರ್ಣಮಯ ಮೆರಗು ಕಾಗದಗಳನ್ನು, ಲೋಹದ ಹಾಳೆಗಳನ್ನು(Metal foil) ಬೆಳ್ಳಿ ಹಾಗೂ ಬಂಗಾರ ಹಾಳೆಗಳನ್ನು ಬಳಸಿದ್ದಾರೆ. ಹೀಗೆ ಇಲ್ಲಿಯವರೆಗೆ ಲಭ್ಯವಾದ ಗಾಜಿನ ಚಿತ್ರಗಳ ರಚನಾ ವಿಧಾನ ಹಾಗೂ ಪರಿಕರಗಳನ್ನು ವಿಂಗಡಿಸಿಕೊಂಡು ಇಲ್ಲಿ ಚರ್ಚಿಸಲಾಗಿದೆ.

ಉತ್ತಮ ದರ್ಜೆಯ ಗಾಜು, ಬಣ್ಣಗಳು, ಚಿತ್ರಿಸಲು ಬಯಸುವ ಕಲಾಕೃತಿಯ ರೇಖಾಚಿತ್ರಗಳು, ಪಾರದರ್ಶಕ ಕಾಗದಗಳು(ಟ್ರೇಸಿಂಗ್ ಪೇಪರ್ಸ್), ಕಾರ್ಬನ್ ಪೇಪರ್ಸ್, ವಿವಿಧ ಲೇಖನಿಗಳು, ಬಗೆ ಬಗೆಯ ಕುಂಚುಗಳು, ಮೆರಗು ಕಾಗದಗಳು, ಬೆಳ್ಳಿ ಹಾಗೂ ಬಂಗಾರದ ಕಾಗದಗಳು(Silver/Gold foils), ಚಿತ್ರಪಟಗಳು, ಬಂಧಕಗಳು, ವಿವಿಧ ಚೌಕಟ್ಟುಗಳು, ಚೌಕಟ್ಟುಗಳ ಹಿಂದಿನ ರಕ್ಷಣಾ ಹಲಗೆಗಳು ಮತ್ತು ಇತ್ಯಾದಿ ಸಾಮಗ್ರಿಗಳು ಬೇಕಾಗುತ್ತವೆ.

## ಉತ್ತಮ ದರ್ಜೆಯ ಗಾಜು

ಗಾಜಿನ ಮೇಲೆ ಚಿತ್ರ ಬರೆಯಬೇಕಾದರೆ ಆ ಚಿತ್ರವು ಸುಸ್ಪಷ್ಟವಾಗಿ ಕಾಣಬೇಕಾದರೆ ಕಲಾವಿದನಾದವನು ಉತ್ತಮ ಗುಣಮಟ್ಟದ ಹಾಗೂ ಪರಿಶುದ್ಧವಾದ ಗಾಜನ್ನು ಆಯ್ದುಕೊಳ್ಳಬೇಕಾಗುತ್ತದೆ.

ಗಾಜಿನ ತಯಾರಿಕೆಯಲ್ಲಿ ಸುರುಳಿಗಾಜು(Rolled glass), ಹಾಳೆ ಗಾಜು(Sheet glass), ತಟ್ಟೆಗಾಜು(Plate glass)ಗಳನ್ನಾಗಿ ತಯಾರಿಸುತ್ತಿದ್ದರು. ಅದೇ ರೀತಿ ಹೊಳಪಿನ ಗಾಜು, ಅಲಂಕೃತ ಗಾಜು, ಸಂರಕ್ಷಕ ಗಾಜು, ಗಾಜಿನ ದಾರ ಹಾಗೂ ರಂಗಿನ ಗಾಜು ಎಂದು ತಯಾರಿಸಿರುವರು. ಗಾಜಿನ ಕಲಾವಿದರು ರಂಗಿನ ಗಾಜನ್ನು ಹೆಚ್ಚು ಬಳಸುತ್ತಿದ್ದರು. ಸಾವಿರಾರು ವರ್ಷಗಳ ಹಿಂದೆ ಚರ್ಚುಗಳ ಕಿಟಕಿಯ ಗಾಜುಗಳನ್ನು ರಂಗಿನಿಂದ ಚಿತ್ರಿಸುತ್ತಿದ್ದರು. ಈ ತಯಾರಿಕೆಯಲ್ಲಿ ಗಾಜಿನ ಕೆಲಸಗಾರ, ಕೊಳವೆಯೊಂದನ್ನು ಕರಗಿರುವ ಗಾಜಿನಲ್ಲಿ ಅದ್ದಿ ತುದಿಯಲ್ಲಿ ಮೃದುವಾದ ಮುದ್ದೆ ತೆಗೆದುಕೊಳ್ಳುತ್ತಾನೆ. ಕೊಳವೆಯ ಇನ್ನೊಂದು ಅಂಚಿನಿಂದ ಗಾಜನ್ನು ಊದಿ ದೊಡ್ಡ ಟೊಳ್ಳಾದ ಗಾಜಿನ ಚಂಡನ್ನು ಮಾಡಿ ಅದನ್ನು ತೂಗಾಡಿಸಿ ಕೊಳವೆಯ ಆಕಾರವನ್ನು ಮಾಡುತ್ತಾನೆ. ಇದು ತಣ್ಣಗಾಗಿ ಸ್ವಲ್ಪ ಗಟ್ಟಿಯಾದ ಮೇಲೆ ಅಂಚುಗಳನ್ನು ಕತ್ತರಿಸುತ್ತಾರೆ. ಅದನ್ನು ಕಾಯಿಸಿ ಮೃದುಮಾಡಿ ಹಾಳೆಯಾಗಿ ಬಿಚ್ಚುತ್ತಾನೆ. ಈ ರೀತಿಯಲ್ಲಿ ೩ ಉದ್ದ ಮತ್ತು ೨ ಫೂಟ್ ಅಗಲದ ಗಾಜಿನ ಹಾಳೆಗಳನ್ನು ಪಡೆದು ಅವುಗಳ ಮೇಲೆ ಆಕೃತಿ, ಚಿತ್ರಗಳನ್ನು ಬರೆದು ಕಿಟಕಿಗಳಲ್ಲಿ ಉಪಯೋಗಿಸುತ್ತಿದ್ದುದು ತಿಳಿದುಬರುತ್ತದೆ. ಹಾಳೆಯ ಗಾಜು ಪಾರದರ್ಶಕವಾಗಿಯೂ, ಪರಿಶುದ್ಧವಾಗಿಯೂ ಇರಬೇಕು. ಇಂಥ ಗಾಜನ್ನು ಕಲಾವಿದರು ಚಿತ್ರ ರಚನೆಗೆ ಬಳಸುವರು. ಈ ಗಾಜನ್ನು ಸಾಮಾನ್ಯ ಗಾಜಿನಿಂದ ತಯಾರಿಸುವರು.

ತೂಗುಹಾಕುವ ಗಾಜಿನ ಚಿತ್ರಗಳ ರಚನೆಗೆ ಹಾಗೂ ಬೇರೆ ಬೇರೆ ವಸ್ತುಗಳಲ್ಲಿ ಅಳವಡಿಸಿದ ಗಾಜಿನ ಚಿತ್ರಗಳ ರಚನೆಗೆ ಹಾಳೆಯ ಗಾಜನ್ನೇ(Sheet glass) ಬಳಸಿದ್ದಾರೆ. ಹಾಳೆ ಗಾಜು ವಿವಿಧ ಗಾತ್ರಗಳಲ್ಲಿ ಹಾಗೂ ವಿವಿಧ ಅಳತೆಗಳಲ್ಲಿ ತಯಾರಿಸಬಹುದಾದ್ದರಿಂದ ಈ ಕಲಾವಿದರು ೨ ಎಂ.ಎಂ. ಗಾತ್ರದ ಗಾಜಿನ ಹಾಳೆಯನ್ನು ಬಳಸಿರುವರು. ಯಾಕೆಂದರೆ ಇದರ ಮೇಲೆ ಚಿತ್ರ ಬರೆಯುವುದರಿಂದ ನೋಡುಗರಿಗೆ ಸ್ಪಷ್ಟವಾಗಿ ಕಾಣುತ್ತದೆ. ಈ ಗಾಜು ಸಾಮಾನ್ಯವಾಗಿರುವುದರಿಂದ ಮೇಲಿನಿಂದ ಬಿದ್ದರೆ ಅಥವಾ ಯಾವುದೇ ರೀತಿ ಪೆಟ್ಟು ಬಿದ್ದರೆ ಒಡೆಯುತ್ತದೆ.

ಇಂದು ಗಾಜನ್ನು ಪ್ರತಿಯೊಂದು ಕ್ಷೇತ್ರಗಳಲ್ಲಿ ಹೇರಳವಾಗಿ ಬಳಸಲಾಗುತ್ತಿದ್ದು, ಇದು ಒಂದು ದೊಡ್ಡ ಉದ್ದಿಮೆಯಾಗಿ ರೂಪುಗೊಂಡಿದೆ. ಗಾಜು ಬೇಕಾದ ಅಳತೆಯಲ್ಲಿ ಬೇಕಾದ ಗಾತ್ರಗಳಲ್ಲಿ ಹಾಗೂ ಬೇಕಾದ ಬಣ್ಣಗಳಲ್ಲಿ ಮಾರುಕಟ್ಟೆಯಲ್ಲಿ ದೊರೆಯುತ್ತಿರುವುದರಿಂದ ಗಾಜಿನ ಕಲಾವಿದರು ಬೇಕಾದ ಗಾಜನ್ನು ಆಯ್ದುಕೊಂಡು, ಚಿತ್ರ ರಚನೆಯುಲ್ಲಿ ತೊಡಗಿರುವರು. ಕಲಾವಿದರು ಗಾಜನ್ನು ಯಾವುದೇ ರೀತಿ ಪೂರ್ವಸಿದ್ಧತೆ ಮಾಡಿಕೊಳ್ಳುವ ಪ್ರಮೇಯವೇ ಇಲ್ಲ.

ಇತ್ತೀಚೆಗೆ ಗಾಜಿನಂತೆಯೇ ಇರುವ ಅಕ್ರಲಿಕ್ ಪಾರದರ್ಶಕ ಹಾಳೆಗಳು ಮಾರುಕಟ್ಟೆಯಲ್ಲಿ ಲಭ್ಯ ಇವೆ. ಇದರ ಮೇಲೆಯೂ ಗಾಜಿನ ಚಿತ್ರಗಳಂತೆ ಯಾವುದೇ ರೀತಿಯ ಚಿತ್ರಗಳನ್ನು ಬರೆಯಬಹುದಾಗಿದೆ. ಇದು ಗಾಜಿಗಿಂತ ದುಬಾರಿಯಾಗಿದೆ. ಯಾಕೆಂದರೆ ಇದು ಮೇಲಿಂದ ಬಿದ್ದರೆ ಒಡೆಯುವುದಿಲ್ಲ. ಇದರಲ್ಲಿ ಒಂದು ದೋಷವನ್ನು ಕಾಣಬಹುದು. ಇದರ ಮೇಲೆ ಯಾವುದಾದರೂ ವಸ್ತುವಿನಿಂದ ಗೀಚಿದರೆ ಶಾಶ್ವತ ಗೀಚುಗಳು ಬೀಳುತ್ತವೆ.

**ಬಣ್ಣಗಳು**

ಗಾಜಿನ ಮೇಲಿನ ಚಿತ್ರಕಲೆಗೆ ಬಣ್ಣಗಳನ್ನು ಬಳಸಿರುವ ಕುರಿತು ನಮಗೆ ಲಭ್ಯವಿರುವ ಪ್ರಕಾರ ಮಧ್ಯಕಾಲದ ಸ್ಟೇನ್ಡ್ ಗ್ಲಾಸ್ ಚಿತ್ರಗಳಿಂದ ೧೮-೧೯ನೇ ಶತಮಾನಗಳ ಪಾಶ್ಚಿಮಾತ್ಯರ ಹಾಗೂ ಭಾರತೀಯರ ಆಧುನಿಕ ಕಾಲದ ಗಾಜಿನ ಚಿತ್ರಗಳಿಗೆ ನೈಸರ್ಗಿಕ ಹಾಗೂ ರಾಸಾಯನಿಕವಾಗಿ ತಯಾರಿಸಲಾಗುತ್ತಿದ್ದ ಬಣ್ಣಗಳನ್ನು ಬಳಸಿದ್ದು ಕಂಡುಬರುತ್ತದೆ. ಇವುಗಳಿಗೆ ಜಲ ಮತ್ತು ತೈಲಗಳನ್ನು ಮಿಶ್ರಣ ಮಾಡಿ ಗಾಜಿನ ಚಿತ್ರಗಳನ್ನು ಬರೆಯುತ್ತಿದ್ದರು. ಇವು ಆಯಾ ಕಾಲಗಳ ಸಂದರ್ಭಗಳಲ್ಲಿ ಪ್ರಚಲಿತವಿದ್ದ ಭಿತ್ತಿ, ಕಾಗದ, ಕಟ್ಟಿಗೆ, ಬಟ್ಟೆಗಳ ಮೇಲೆ ಚಿತ್ರ ರಚಿಸಲು ಬಳಸುತ್ತಿದ್ದ ಬಣ್ಣಗಳನ್ನೇ ಗಾಜಿನ ಚಿತ್ರಕಲಾವಿದರು ಬಳಸುತ್ತಿದ್ದರು. ಗಾಜಿನ ಮೇಲೆ ಹೆಚ್ಚಾಗಿ ತೈಲವರ್ಣಗಳನ್ನೇ ಬಳಸಿದ್ದು ಗಮನಾರ್ಹವಾದುದು. ೧೯ನೆಯ ಶತಮಾನದ ಕೊನೆಯ ಅವಧಿಯಲ್ಲಿ ರಾಸಾಯನಿಕ ವರ್ಣಗಳು ಮಾರುಕಟ್ಟೆಯಲ್ಲಿ ಲಭ್ಯವಾದ ಕಾರಣ ಕಲಾವಿದರು ಗಾಜಿನ ಮೇಲೆ ಅವುಗಳನ್ನೇ ಬಳಸತೊಡಗಿದರು.

**ಟೆಂಪರಾ ವರ್ಣ**

'ಟೆಂಪರಾ' ಬಣ್ಣಗಳನ್ನು ಗಾಜಿನ ಚಿತ್ರ ರಚನೆಯಲ್ಲಿ ಹೆಚ್ಚು ಪ್ರಮಾಣದಲ್ಲಿ ಬಳಸಿರುವುದನ್ನು ಇಂದು ಲಭ್ಯವಿರುವ ಗಾಜಿನ ಚಿತ್ರಗಳಿಂದ ತಿಳಿಯಬಹುದು. ಮೊಟ್ಟೆಯ ಬಿಳಿಯ ಭಾಗದೊಂದಿಗೆ ಯಾವುದೇ

ಮೂಲದ ಬಣ್ಣಗಳನ್ನು ಬೆರೆಸಿ ಬೇಕಾದ ರೀತಿಯಲ್ಲಿ ತಯಾರಿಸಿಕೊಂಡು ಚಿತ್ರಕ್ಕೆ ಬಣ್ಣ ತುಂಬುವ ವಿಧಾನವನ್ನು 'ಟೆಂಪರಾ' ಎಂದು ಕರೆಯುವರು. ಇದನ್ನು ತೆಳುವಾಗಿ, ಮಂದವಾಗಿ ಹಾಗೂ ಗಟ್ಟಿಯಾಗಿಯೂ ಬಳಸಬಹುದು. ನೈಸರ್ಗಿಕವಾಗಿ ದೊರೆಯುವ ಬಣ್ಣಗಳ ಹೆಂಟೆ ಮತ್ತು ಪುಡಿ ವರ್ಣಗಳನ್ನು ಮೊಟ್ಟೆ ಅಥವಾ ಅಂಟು ಪದಾರ್ಥಗಳಲ್ಲಿ ಬೆರೆಸಿ ಚಿತ್ರ ರಚಿಸುತ್ತಿದ್ದರು. ಮೊಟ್ಟೆ ಬೆರೆಸಿದ ಟೆಂಪರಾವನ್ನು ನೀರಿನಿಂದ ತೆಳುಗೊಳಿಸಿ ರಚಿಸಿದ ಚಿತ್ರಕ್ಕೆ ಹೊಳಪಿನ ಲೇಪನ ಮಾಡಿದರೆ ಅದು ಜಲವರ್ಣದಂತೆ ಕಾಣುತ್ತದೆ. ಇದಕ್ಕೆ ತೈಲದಂತಹ ಪದಾರ್ಥ(ಅಗಸೆ, ಕುಸುಬಿ, ಶೇಂಗಾದಂತಹ ಎಣ್ಣೆಕಾಳಿನ ತೈಲ) ಮಿಶ್ರಣ ಮಾಡಿದರೆ ತೈಲದಂತಹ ಟೆಂಪರಾ ಸಿದ್ಧವಾಗುತ್ತದೆ.

ಚಿತ್ರ ರಚನೆಯಲ್ಲಿ ತೆಳುವಾಗಿ ಲೇಪಿಸಿದ ಟೆಂಪರಾ ಮೇಲೆ ವಾರ್ನಿಷ್‌ನ ಒಂದು ಪದರು ಲೇಪಿಸಿದರೆ ಅದು ತೈಲವರ್ಣಕ್ಕೆ ಅತ್ಯುತ್ತಮ ತಳಪಾಯ ನೀಡುತ್ತದೆ. ಜನಸಾಮಾನ್ಯರು ತೈಲವರ್ಣವೆಂದು ಭಾವಿಸುವ ಮಧ್ಯಯುಗದ ಅನೇಕ ಕೃತಿಗಳಲ್ಲಿ, ವಾಸ್ತವದಲ್ಲಿ ಮೂಲತಃ ಹೊಳಪಿಲ್ಲದ ಟೆಂಪರಾಗಳೇ. ಹೊಳಪಿಲ್ಲದ ಟೆಂಪರಾಗಳಿಗೆ ವಾರ್ನಿಷ್‌ನ ಹೊಳಪು ನೀಡುವುದರಿಂದ ಈ ಟೆಂಪರಾ ವರ್ಣಗಳು ಆಕರ್ಷಕ ತೈಲವರ್ಣ ಚಿತ್ರಗಳಂತೆ ಕಾಣುತ್ತವೆ. 'ಟೆಂಪರಾ' ತೈಲವರ್ಣದ ಮೂಲ ಸಾಮಗ್ರಿಯೂ ಆಗಿದ್ದು, ೧೯ನೇ ಶತಮಾನದಲ್ಲಿ ರಾಸಾಯನಿಕ ತೈಲವರ್ಣದ ಹುಟ್ಟಿನಿಂದ ಇದರ ಬೇಡಿಕೆ ಕಡಿಮೆಯಾಯಿತು.

ಬಹುತೇಕ ಕರ್ನಾಟಕದಲ್ಲಿ ಲಭ್ಯವಿರುವ ಗಾಜಿನ ಚಿತ್ರ ರಚನೆಗೆ ಆ ದಿನಗಳಲ್ಲಿ ಬಳಸಲಾಗುತ್ತಿದ್ದ ಟೆಂಪರಾ ವರ್ಣಗಳಲ್ಲಿ ನೈಸರ್ಗಿಕ ಮೂಲದ ವೈವಿಧ್ಯಮಯವಾದ ಬಂಧಕಗಳನ್ನು ಬಳಸಿಕೊಂಡು ಗಾಜಿನ ಮೇಲೆ ವಿಶಿಷ್ಟವಾಗಿ ಚಿತ್ರಿಸಿದ್ದಾರೆ. ಅಪಾರದರ್ಶಕವಾಗಿ ಬೆಳಕು, ನೆರಳನ್ನು ಈ ವರ್ಣಗಳಲ್ಲಿ ತರಲು ಪ್ರಯತ್ನಿಸಿದ್ದಾರೆ.

೧೯ನೇ ಶತಮಾನದ ನಂತರ ನಮ್ಮಲ್ಲಿ ರಾಸಾಯನಿಕ ಬಣ್ಣಗಳು ಉತ್ಕೃಷ್ಟ ಮಟ್ಟದಲ್ಲಿ ಪರಿಶುದ್ಧ ವರ್ಣಗಳು ಸಿದ್ಧವಾಗಿ ಮಾರುಕಟ್ಟೆಗೆ ಬರತೊಡಗಿದವು. ಬಣ್ಣವನ್ನು ತೆಳು ಮಾಡಿಕೊಳ್ಳಲು ಟರ್ಪಂಟೈನ್ ಮತ್ತು ಲಿನ್ಸಿಡ್ ಆಯಿಲ್ ನಂತರ ಮೀಡಿಯಮ್‌ಗಳು ಹೊರಬರತೊಡಗಿದವು. ತೈಲವರ್ಣ ಇಂದು Powder liquid ಹಾಗೂ Paste ಮಾದರಿಯಲ್ಲಿಯೂ ಮಾರುಕಟ್ಟೆಯಲ್ಲಿ ಲಭ್ಯ ಇವೆ. ಈ ಮೂರು ಮಾದರಿಯ ತೈಲ ವರ್ಣಗಳನ್ನು ಪೈಟಿಂಗ್(Painting), ಮುದ್ರಣ(Graphic) ಹಾಗೂ ಇತರೆ ಕಲೆಗಳಲ್ಲಿ ಉಪಯೋಗಿಸುತ್ತಾರೆ. ಈ ತೈಲವರ್ಣ ಕಟ್ಟಿಗೆ, ಕಲ್ಲು, ಲೋಹ, ಬಟ್ಟೆ, ಗಾಜು ಹೀಗೆ ಯಾವುದೇ ಫಲಕದ ಮೇಲೆ ಹೊಂದಿಕೊಳ್ಳುವಂತಹ ಗುಣ ಹೊಂದಿದೆ. ಹೀಗಾಗಿ ಈ ಮಾಧ್ಯಮದ ವರ್ಣವ ಗಾಜಿನ ಚಿತ್ರಕಲೆಯಲ್ಲಿಯೂ ಬಳಸಿರುವರು. ಇದರಿಂದ ಆಕೃತಿಗಳಲ್ಲಿ ಬೆಳಕು ನೆರಳಿನ ಕಲ್ಪನೆಯನ್ನು ತರಲು ಮತ್ತು ಇತರ ವರ್ಣಗಳ ಜೊತೆಗೆ ಮಿಶ್ರಣ ಮಾಡಲು ಉತ್ತಮವಾಗಿದೆ.

ಗಾಜಿನ ಚಿತ್ರಗಳ ರಚನೆಯಲ್ಲಿ ಪ್ರಧಾನವಾಗಿ ಕಪ್ಪು, ಕೆಂಪು, ಹಳದಿ, ನೀಲಿ, ಹಸಿರು, ಬಿಳಿಯಂತಹ ಪ್ರಾಥಮಿಕ ವರ್ಗದ ಬಣ್ಣಗಳು ಕಂಡುಬರುತ್ತವೆ. ಇಲ್ಲಿ ಕಪ್ಪು ವರ್ಣವನ್ನು ವಿಶೇಷವಾಗಿ ಚಿತ್ರದಲ್ಲಿ ರೇಖೆ ಬರೆಯಲು ಉಪಯೋಗಿಸಲಾಗುತ್ತದೆ. ಗಾಜಿನ ಚಿತ್ರಗಳಲ್ಲಿ ಕಪ್ಪು ಬಣ್ಣದ ರೇಖೆಗಳದೇ ಪ್ರಾಧಾನ ಪಾತ್ರವಾಗಿದೆ. ಇನ್ನುಳಿದ ವರ್ಣಗಳನ್ನು ನೇರವಾಗಿಯೂ ಬಳಸಿದ್ದಾರೆ. ಹಾಗೂ ಬೇರೆ ಬೇರೆ ವರ್ಣಗಳನ್ನು

ಬೆರೆಸಿ ದ್ವಿತೀಯ ವರ್ಗದ ಬಣ್ಣಗಳನ್ನು ಈ ಚಿತ್ರಕಾರರು ಬಳಸಿದ್ದಾರೆ. ಕರ್ನಾಟಕದಲ್ಲಿ ಲಭ್ಯವಿರುವ ಗಾಜಿನ ಚಿತ್ರಗಳು ಜಲ ಹಾಗೂ ತೈಲ ವರ್ಣಗಳಿಂದ ಚಿತ್ರಣಗೊಂಡಿವೆ.

ಕರ್ನಾಟಕದ ಗ್ರಾಮೀಣ ಭಾಗಗಳಲ್ಲಿ ವಿವಿಧ ಮೂಲಗಳಿಂದ ಕಪ್ಪು ಬಣ್ಣಗಳನ್ನು ತಯಾರಿಸಲಾಗುತ್ತದೆ. ಅವರೇ ಸೊಪ್ಪು, ನೆಲ್ಲಿ ಸೊಪ್ಪು, ವೀಳ್ಯೆದೆಲೆ ರಸ, ಹಾಗಲ ರಸ, ಚಪ್ಪರದ ಅವರೆ ರಸ ಮುಂತಾದವುಗಳನ್ನು ಮಣ್ಣಿನ ಪಾತ್ರೆಗೆ ಸವರಿ ದೀಪದ ಕಾಡಿಗೆಯಿಂದ ಕಪ್ಪು ಬಣ್ಣವನ್ನು ತಯಾರಿಸಲಾಗುತ್ತಿತ್ತು. ನೇಯ್ಗೆ ಕಲೆಯಲ್ಲಿ ನೇಕಾರರು ನೂಲಿಗೆ ಬಣ್ಣ ಹಾಕಲು ನೈಸರ್ಗಿಕವಾಗಿ ತಯಾರಿಸುವ ಕಪ್ಪು ಬಣ್ಣವನ್ನು ಬಳಸುವರು. ಕಪ್ಪು ವರ್ಣವನ್ನು ಗಾಜಿನ ಚಿತ್ರಕಲೆಯಲ್ಲಿ ಬಾಹ್ಯರೇಖೆ ಹಾಕಲು, ಕೂದಲು ಬರೆಯಲು ಕಣ್ಣು, ಹುಬ್ಬು ಹಾಗೂ ಬೇಕಾದಲ್ಲಿ ಚಿತ್ರದ ಹಿನ್ನೆಲೆಗೆ ಕಪ್ಪು ಬಣ್ಣ ತುಂಬಲು ಕಲಾವಿದರು ಬಳಸಿದ್ದಾರೆ.

ಬಿಳಿ ವರ್ಣವನ್ನು ಗಾಜಿನ ಚಿತ್ರಕಾರರು ವಿಪುಲವಾಗಿ ಬಳಸಿದ್ದಾರೆ. ಈ ವರ್ಣವನ್ನು ಬೇರೆ ಬೇರೆ ಮೂಲಗಳಿಂದ ತಯಾರಿಸಲಾಗುತ್ತಿದೆ. ಬಿಳಿ ಮಣ್ಣು, ಶಂಖದ ಚಿಪ್ಪಿನಿಂದ ಬಿಳಿ ವರ್ಣವನ್ನು ತಯಾರಿಸುತ್ತಿದ್ದರು. ಬಿಳಿಬಣ್ಣವನ್ನು ಗಾಜಿನ ಚಿತ್ರಕಾರರು ಆಕೃತಿಗಳ ಮೈ ಬಣ್ಣಕ್ಕೆ ಚಿತ್ರದ ಹಿನ್ನೆಲೆಗೆ ಹಾಗೂ ಪರದೆಗಳಿಗೆ ಬಳಸಿದ್ದಾರೆ. ಈ ಬಣ್ಣವನ್ನು ಬೇರೆ ಮೂಲ ಬಣ್ಣಗಳೊಂದಿಗೆ ಬೆರೆಸಿ ವಿವಿಧ ಬಣ್ಣಗಳ ಛಾಯೆಯಾಗಿ ಬಳಸಿದ್ದಾರೆ.

**ಕೆಂಪು ವರ್ಣ**

ಕೆಂಪು ವರ್ಣವು ಗಾಜಿನ ಚಿತ್ರಕಲೆಯಲ್ಲಿ ಹೆಚ್ಚು ಪ್ರಮಾಣದಲ್ಲಿ ಬಳಕೆಯಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಡ್ರ್ಯಾಪರಿ, ಆಕೃತಿಗಳ ಉಡುಗೆ-ತೊಡುಗೆಗಳಲ್ಲಿ ಹಾಗೂ ಹಿನ್ನೆಲೆಗೆ ಚಪ್ಪಟೆಯಾಗಿ ಹಾಗೂ ವರ್ಣಛಾಯೆಯನ್ನಾಗಿ ಬಳಸಿದ್ದಾರೆ. ಬಹುತೇಕ ಟೆಂಪರಾದಂತಹ ಕೆಂಪು ವರ್ಣಗಳನ್ನೇ ಈ ಕಲಾವಿದರು ಉಪಯೋಗಿಸಿದ್ದಾರೆ. ಕಬ್ಬಿಣದ ಆಕ್ಸೈಡ್, ಮ್ಯಾಂಗನೀಸ್, ಹೆಮಟೈಟ್‌ಗಳ ಸಂಯುಕ್ತಗಳಿಂದ ಕೆಂಪು ಬಣ್ಣವನ್ನು ಪಡೆಯುತ್ತಿದ್ದರು. ಕೆಂಪು ಮಣ್ಣು ಮತ್ತು ಕೆಂಪು ಕಲ್ಲುಗಳಿಂದ ಈ ಬಣ್ಣವನ್ನು ತಯಾರಿಸುತ್ತಿದ್ದರು. ಇಂಗಳಿಕದಿಂದಲೂ ಕೆಂಪು ವರ್ಣವನ್ನು ಪಡೆಯಲಾಗುತ್ತಿದ್ದು, ಇದನ್ನು ಚೆನ್ನಾಗಿ ಕುಟ್ಟಿ ಅದರ ಪುಡಿಯನ್ನು ನೀರಿನಲ್ಲಿ ಕಲಕಿ ನಂತರ ಅದನ್ನು ಬೇವಿನ ಅಂಟಿನೊಂದಿಗೆ ಬೆರೆಸಿ ಈ ಬಣ್ಣವನ್ನು ತಯಾರಿಸುತ್ತಿದ್ದರು. ಹೀಗೆ ಅನೇಕ ಮೂಲಗಳಿಂದ ಈ ಕೆಂಪು ಬಣ್ಣವನ್ನು ತಯಾರಿಸಿ ಚಿತ್ರ ರಚನೆ ಮಾಡುತ್ತಿದ್ದರು.

**ಹಸಿರು ವರ್ಣ**

ಹಸಿರು ವರ್ಣವನ್ನು ನೀಲಿ ಮತ್ತು ಹಳದಿಯ ಮೂಲ ವರ್ಣಗಳಿಂದ ಪಡೆಯಲಾಗುತ್ತಿತ್ತು. ಈ ಬಣ್ಣವನ್ನು ಸಸ್ಯಗಳ ಮೂಲದಿಂದ ಹಾಗೂ ಖನಿಜಗಳ ಮೂಲದಿಂದ ಹಸಿರು ಬಣ್ಣವನ್ನು ತಯಾರಿಸುತ್ತಿದ್ದರು. ಟೆರ್ರಾವರ್ಟ, ಮಲಟೈಟ್, ವೆರ್ಡ್‌ಮೊಂಟಾನಾ, ಕ್ರಾಯಿ ಸೋಕೋಲ್ಲಾ ಮತ್ತು

ಅಜುರೈಟ್ ಖನಿಜಗಳಿಂದ ಹಸಿರು ಬಣ್ಣವನ್ನು ತಯಾರಿಸುತ್ತಿದ್ದುದು ತಿಳಿದುಬರುತ್ತದೆ. ಅದೇ ರೀತಿ ಅಳ್ಳಿಕಾಯಿ, ಕಾಕಡಸಿಂಬಿಗಳನ್ನು ಉಪಯೋಗಿಸಿ ಹಸಿರು ಬಣ್ಣವನ್ನು ತಯಾರಿಸುತ್ತಿದ್ದರು. ಹಸಿರು ವರ್ಣದಲ್ಲಿ ಗಿಳಿ ಹಸಿರು, ಪ್ಲಾಂಟೇನ್ ಎಲೆಯ ಹಸಿರು, ಪಚ್ಚೆ ಹಸಿರು ಎಂಬ ಅನೇಕ ವಿಧಗಳನ್ನು ಕುರಿತು ನಮ್ಮ ಪ್ರಾಚೀನ ಶಾಸ್ತ್ರ ಗ್ರಂಥಗಳು ತಿಳಿಸುತ್ತವೆ. ಈ ರೀತಿಯಲ್ಲಿ ತಯಾರಿಸಲಾದ ಹಸಿರು ಬಣ್ಣವನ್ನು ಗಾಜಿನ ಚಿತ್ರ ರಚನೆಯಲ್ಲಿ ಬಳಸುತ್ತಿದ್ದರು.

### ನೀಲಿ ವರ್ಣ

ನೀಲಿ ಬಣ್ಣವನ್ನು ನೈಸರ್ಗಿಕ ಮೂಲವಾಗಿ ಪ್ರಾಚೀನ ಕಲಾವಿದರು ತಯಾರಿಸಿ ಉಪಯೋಗಿಸುತ್ತಿದ್ದ ವಿವರಗಳು ಅನೇಕ ರೀತಿಯಿಂದ ದೊರೆಯುತ್ತಿದೆ. ಇಂಡಿನೋ, ಫೆರಾ ಎಂಬ ಸಸ್ಯದಿಂದ ನೀಲಿ ಬಣ್ಣವನ್ನು ತಯಾರಿಸಲಾಗುತ್ತಿತ್ತು. ನೀಲಿ ಕಲ್ಲು ಮತ್ತು ಮಣ್ಣುಗಳಿಂದಲೂ ಈ ಬಣ್ಣವನ್ನು ಪಡೆಯಲಾಗುತ್ತಿತ್ತು. ನೀಲಿ ವರ್ಣವನ್ನು ತುಂಬೆ ಹೂವು ಮತ್ತು ಎಲೆಗಳನ್ನು ಕೂಡ ಬಳಸಿ ತಯಾರಿಸಿಕೊಳ್ಳುತ್ತಿದ್ದರು. ನೀಲಿ ಬಣ್ಣದ ಬಳಕೆ ಗಾಜಿನ ಚಿತ್ರಗಳಲ್ಲಿ ಹೆಚ್ಚು ಹೆಚ್ಚು ಪ್ರಮಾಣಗಳಲ್ಲಿ ಕಾಣಸಿಗುತ್ತದೆ. ನೀಲಿಯ ವಿವಿಧ ವರ್ಣಛಾಯೆಯನ್ನು ಗಾಜಿನ ಚಿತ್ರಗಳಲ್ಲಿ ಕಾಣಬಹುದಾಗಿದೆ.

### ಹಳದಿ ವರ್ಣ

ಗಾಜಿನ ಚಿತ್ರಕಾರರು ಚಿತ್ರ ರಚನೆಯಲ್ಲಿ ಹಳದಿ ಬಣ್ಣವನ್ನು ಬಳಸಿದ್ದು ಕಂಡುಬರುತ್ತದೆ. ಈ ಹಳದಿ ಬಣ್ಣವನ್ನು ವಿವಿಧ ಛಾಯೆಯಾಗಿ ಬಳಸಿದ್ದಾರೆ. ಹಳದಿಯ ವರ್ಣವನ್ನು ಬೇರೆ ಬೇರೆ ಮೂಲಗಳಿಂದ ಪಡೆದುಕೊಂಡು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿದ್ದಾರೆ. ಇದರ ಕುರಿತು ಅನೇಕ ವಿವರಗಳು ದೊರೆಯುತ್ತವೆ. ಹಳದಿ ವರ್ಣವು ಆಕರ್ಷಕ ವರ್ಣವಾಗಿರುವುದರಿಂದ ಕಲಾವಿದರು ಚಿತ್ರ ರಚನೆಯಲ್ಲಿ ಹೆಚ್ಚು ಪ್ರಮಾಣದಲ್ಲಿ ಬಳಸಿರುವುದು ಕಂಡುಬರುತ್ತದೆ. ಕಪಿಲದ ಬೀಜಗಳಿಂದ ಹಳದಿ ವರ್ಣಗಳನ್ನು ತಯಾರಿಸಿಕೊಳ್ಳಲಾಗುತ್ತದೆ.

### ಮಿಶ್ರ ವರ್ಣಗಳು

ಮೂಲವರ್ಣಗಳಾದ ಕೆಂಪು, ನೀಲಿ, ಹಳದಿ, ಕಪ್ಪು, ಬಿಳಿ ವರ್ಣಗಳನ್ನು ಒಂದನ್ನೊಂದು ಸೇರಿಸಿ ಅವುಗಳಿಂದ ಉಂಟಾಗುವ ದ್ವಿತೀಯ, ತೃತೀಯ ಹಾಗೂ ಚತುರ್ಥ ವರ್ಗಗಳ ಬಣ್ಣಗಳನ್ನು ಬಳಸಿದ್ದು ಗಾಜಿನ ಚಿತ್ರಗಳಲ್ಲಿ ಕಾಣುತ್ತೇವೆ. ಈ ಕಲೆಯ ಕಲಾವಿದರೂ ಯಾವ ಬಣ್ಣಕ್ಕೆ ಇನ್ನೊಂದು ಬಣ್ಣವನ್ನು ಎಷ್ಟು ಪ್ರಮಾಣಗಳಲ್ಲಿ ಮಿಶ್ರಣ ಮಾಡಿದರೆ ಯಾವ ಛಾಯೆ ಉಂಟಾಗುತ್ತದೆ ಎಂಬುದನ್ನು ಚೆನ್ನಾಗಿ ತಿಳಿದವರಾಗಿದ್ದರು.

ದೇವಾನುದೇವತೆಗಳ ಆಕೃತಿಗಳಿಗೆ ಸಾಮಾನ್ಯ ಸ್ತ್ರೀ, ಪುರುಷರ ಆಕೃತಿಗಳಿಗೆ ಚಿತ್ರಗಳಲ್ಲಿ ಬಳಸಲಾದ ಪ್ರಾಣಿಗಳಿಗೆ ವಿವಿಧ ವಸ್ತುಗಳಿಗೆ ಮತ್ತು ಪ್ರಕೃತಿಗೆ ಹಾಗೂ ಚಿತ್ರದ ಹಿನ್ನೆಲೆಗೆ, ಡ್ರಾಪರಿಗೆ, ವೇಷಭೂಷಣಗಳಿಗೆ, ಆಭರಣಗಳಿಗೆ ಹೊಂದಾಣಿಕೆಯಾಗುವಂತೆ ವರ್ಣಗಳನ್ನು ಬಳಸಿರುವರು. ಆಕೃತಿಗಳ

ಮೈಬಣ್ಣಗಳನ್ನು ಬಿಳಿ ವರ್ಣವು ಪ್ರಧಾನವಾಗಿದ್ದು ಅದಕ್ಕೆ ತಕ್ಕದಾದ ಹಳದಿ ಮಿಶ್ರಿತ ಬಿಳಿಯ ಬಣ್ಣ, ಗುಲಾಬಿ ಮಿಶ್ರಿತ ಬಿಳಿಯ ಬಣ್ಣ, ಕಂದು ಮಿಶ್ರಿತ ಬಿಳಿಯ ಬಣ್ಣ, ಹಸಿರು ಮಿಶ್ರಿತ ಬಿಳಿಯ ಬಣ್ಣಗಳನ್ನು ಅತ್ಯಂತ ಸೊಗಸಾಗಿ ಲೇಪಿಸಿದ್ದಾರೆ. ರಾಮನ ಪಟ್ಟಾಭಿಷೇಕ ಚಿತ್ರಗಳಲ್ಲಿ ರಾಮನ ಚಿತ್ರಕ್ಕೆ ಹಸಿರು ಮಿಶ್ರಿತ ಬಣ್ಣವನ್ನೇ ಬಳಸಿದ್ದು, ಬಹುಸಂಖ್ಯೆಯ ಗಾಜಿನ ಚಿತ್ರಗಳಲ್ಲಿ ಕಾಣುತ್ತೇವೆ.

'ಕೃಷ್ಣನ ಆಕೃತಿ'ಗೆ ನೀಲಿ ಮಿಶ್ರಿತ ಬಿಳಿ ಬಣ್ಣಗಳನ್ನು ಬಳಸಿದ್ದು ಕೆಲವು ಚಿತ್ರಗಳಲ್ಲಿ ಕಾಣುತ್ತೇವೆ. ಇನ್ನೂ ಕೆಲವು ಚಿತ್ರಗಳಲ್ಲಿ ಕೃಷ್ಣನನ್ನು ಸಾಮಾನ್ಯರ ಮೈಬಣ್ಣದಂತೆಯೇ ನೀಡಿದ್ದಾರೆ. ಕೆಂಪು, ಕಂದು, ಹಳದಿ, ಗುಲಾಬಿ ಮಿಶ್ರಿತ ಬಿಳಿಯ ಬಣ್ಣವನ್ನು ಬಳಸಿದ್ದಾರೆ. ಇಲ್ಲಿ ಗಮನಿಸಬೇಕಾದುದು ಎರಡು ವರ್ಣಗಳ ನಡುವಿನ ವರ್ಣಛಾಯೆಯನ್ನು ಮಾತ್ರ. ಯಾಕೆಂದರೆ ಎರಡು ವರ್ಣಗಳ ನಡುವಿನ ಮಿಶ್ರಣದಲ್ಲಿ ಯಾವುದೇ ರೀತಿಯ ಸಣ್ಣ ತೆಪೆಗಳು(Stroke) ಕಾಣುವುದಿಲ್ಲ. ಅಷ್ಟೊಂದು ಸೂಕ್ಷ್ಮತರವಾದ ಛಾಯೆಯನ್ನು ತಂದಿದ್ದಾರೆ. ಗಾಜಿನ ಮೇಲೆ ಈ ರೀತಿ ತರುವುದು ಕಷ್ಟಸಾಧ್ಯವಾದುದರಿಂದ ಆ ಕಲಾವಿದನ ತಾಳ್ಮೆ ಹಾಗೂ ಅನುಭವವು ಎದ್ದು ಕಾಣುತ್ತದೆ.

ಗಾಜಿನ ಚಿತ್ರದ ಹಿನ್ನೆಲೆಗೆ ಬಹುತೇಕ ಮೂಲವರ್ಣಗಳಾದ ನೀಲಿ, ಕೆಂಪು, ಹಳದಿ, ಕಪ್ಪು, ಬಿಳಿ, ಹಸಿರು ಬಣ್ಣಗಳನ್ನು ಏಕ ವರ್ಣವಾಗಿ, ಚಪ್ಪಟೆ(Flate Colours)ಯಾಗಿ ಬಳಸಿದ್ದಾರೆ. ಅದರಂತೆ ಆಕೃತಿಗಳ ಕೂದಲಿಗೆ(ಕೇಶ) ಬಾಹ್ಯ ರೇಖೆಗಳಿಗೆ, ಕಣ್ಣುಗಳಿಗೆ, ಚಪ್ಪಟೆಯಾಗಿ ಕಪ್ಪು ವರ್ಣಗಳನ್ನೇ ಬಳಸಿದ್ದಾರೆ. ಆಕೃತಿಗಳ ಉಡುಗೆ-ತೊಡುಗೆಗಳಿಗೆ ಚಪ್ಪಟೆಯಾಗಿಯೂ, ವರ್ಣಛಾಯೆಯಾಗಿಯೂ ಬಣ್ಣಗಳನ್ನು ಲೇಪನ ಮಾಡಿರುವರು. ಚಿತ್ರಗಳ ಹಿನ್ನೆಲೆಯ ಡ್ರ್ಯಾಪರಿ(ಪರದೆ)ಗಳಲ್ಲಿ ಪ್ರಥಮ ವರ್ಗದ ಬಣ್ಣಗಳನ್ನು ವಿವಿಧ ಛಾಯೆಯ ಕಲ್ಪನೆಯನ್ನು ತಂದಿದ್ದಾರೆ.

**ಕುಂಚಗಳು**

ಯಾವುದೇ ಚಿತ್ರ ರಚನೆ ಮಾಡಬೇಕಾದರೆ ಬಣ್ಣಗಳ ತಯಾರಿಕೆ ಹಾಗೂ ಅವುಗಳ ಬಳಸುವ ವಿಧಾನವು ಎಷ್ಟು ಪ್ರಾಮುಖ್ಯವೋ ಅದೇ ರೀತಿ ಆ ಬಣ್ಣಗಳನ್ನು ಹಚ್ಚಲು ಬಳಸುವ ಕುಂಚಗಳು ಅಷ್ಟೇ ಪ್ರಮುಖವಾಗಿದೆ. ಈ ಕುಂಚಗಳ ಇತಿಹಾಸ ಆದಿ ಕಾಲದ ಮಾನವ ಕಲಾವಿದನಿಂದಲೇ ಪ್ರಾರಂಭವಾಗುತ್ತದೆ. ಕೈಯ ಬೆರಳಿನಿಂದ ಹಿಡಿದು ಇಂದಿನ ಆಧುನಿಕ ರೀತಿಯ ಕುಂಚಗಳ ಬೆಳವಣಿಗೆ ಅಗಾಧವಾದುದು.

ಆಯಾ ಕಾಲಮಾನದ ಕಲಾವಿದನು ತಾನು ತಯಾರಿಸಿಕೊಂಡಿದ್ದ ಕುಂಚಗಳನ್ನು ಅತ್ಯಂತ ಸಮರ್ಪಕವಾಗಿ ಚಿತ್ರ ರಚನೆಯಲ್ಲಿ ಬಳಕೆ ಮಾಡಿಕೊಂಡಿರುವನು. ಆದರೆ ಈಗ ದೊರೆತಿರುವ ಗಾಜಿನ ಚಿತ್ರ ಕೃತಿಗಳೆಲ್ಲವೂ ೧೮-೧೯ನೇ ಶತಮಾನದವುಗಳಾದ್ದರಿಂದ ಆಧುನಿಕ ರೀತಿಯ ಉತ್ಕೃಷ್ಟವಾದ ಹಾಗೂ ವೈವಿಧ್ಯಮಯವಾದ ಕುಂಚಗಳ ಬಳಕೆಯನ್ನು ಕಾಣಬಹುದು. ಒಂದು ಹಂತದಲ್ಲಿ ಕಲಾವಿದರು ತಮಗೆ ಬೇಕಾದ ಚಪ್ಪಟೆಯಾದ, ದುಂಡಾದ ಕುಂಚಗಳನ್ನು ತಾನೇ ತಯಾರಿಸಿಕೊಳ್ಳುತ್ತಿದ್ದರು. ಇದಕ್ಕೆ ಬೇಕಾದ ಬೇರೆ ಬೇರೆ ಪ್ರಾಣಿಗಳ ಕೂದಲುಗಳನ್ನು, ತುಪ್ಪಳನ್ನು ಉಪಯೋಗಿಸುತ್ತಿದ್ದರು. ೨೦ನೆಯ ಶತಮಾನದ

ಪ್ರಥಮಾರ್ಧದ ಹೊತ್ತಿಗೆ ಕುಂಚಗಳನ್ನೇ ತಯಾರಿಸುವ ಕುಶಲಕರ್ಮಿಗಳು ಹುಟ್ಟಿಕೊಂಡರು. ಕಲಾವಿದರಿಗೆ ಅನುಕೂಲವಾಗುವಂತಹ ಸ್ಥೂಲವಾದ, ನವಿರಾದ, ಸೂಕ್ಷ್ಮಾತಿ ಸೂಕ್ಷ್ಮದ ಕುಂಚಗಳನ್ನು ಒದಗಿಸತೊಡಗಿದರು. ಸೂಕ್ಷ್ಮವಾದ ಚಿತ್ರ ರಚನೆಗೆ ಮೃದು ತುಪ್ಪಳದ, ಕೂದಲಿನ ಕುಂಚಗಳನ್ನು ಹಾಗೆಯೇ ಚಪ್ಪಟೆಯಾಗಿ ಬಣ್ಣ ಹಚ್ಚಲು ಗಡಸು ಕೂದಲು ಹೊಂದಿದ ಸ್ಥೂಲವಾದ ಕುಂಚಗಳನ್ನು ತಯಾರಿಸುತ್ತಿದ್ದರು. ಈ ಕುಂಚಗಳ ಹಿಡಿಕೆಯು ಸಹ ಉದ್ದವಾದ, ಗಿಡ್ಡವಾದ, ಚಿತ್ರ ಬರೆಯಲು ಅನುಕೂಲವಾಗುವ ಕಟ್ಟಿಗೆಯಿಂದ ತಯಾರಿಸುತ್ತಿದ್ದರು. ಸ್ಥೂಲ ಕುಂಚಗಳಿಗೆ ದಪ್ಪ ಕಟ್ಟಿಗೆಯನ್ನು ಸೂಕ್ಷ್ಮತರ ಕುಂಚಗಳಿಗೆ ಸಣ್ಣ ಕಟ್ಟಿಗೆಯನ್ನು ಅತ್ಯಂತ ನವುರಾಗಿ ಸಿದ್ದಪಡಿಸಿ ಕುಂಚಗಳಿಗೆ ಬಳಸುತ್ತಿದ್ದರು.

ಇಂದು ಮಾರುಕಟ್ಟೆಯಲ್ಲಿ ವಿವಿಧ ರೀತಿಯ ಕುಂಚಗಳು ಲಭ್ಯ ಇವೆ. ವಿವಿಧ ಪ್ರಾಣಿಗಳ ಕೂದಲು, ತುಪ್ಪಳಗಳಿಂದ ತಯಾರಿಸಿದ ಹಾಗೂ ಪ್ಲಾಸ್ಟಿಕ್ ಕೂದಲಿನಿಂದ ತಯಾರಾದ ಚಪ್ಪಟೆಯಾದ ಹಾಗೂ ದುಂಡಾದ ಕುಂಚಗಳು ಲಭ್ಯ ಇವೆ. ಸೂಕ್ಷ್ಮವಾದ ಹಾಗೂ ಸ್ಥೂಲವಾದ ಕುಂಚಗಳನ್ನು ಕಲಾವಿದನಿಗೆ ಅನುಕೂಲವಾಗುವಂತೆ ಕುಂಚ ತಯಾರಿಕೆಯ ಕಂಪನಿಗಳು ಇಂದು ತಯಾರಿಸುತ್ತಲಿವೆ.

**ಲೇಖನಿಗಳು**

'ಲೇಖನಿ' ಎಂದರೆ ಬರೆಯುವ ಸಾಧನ. ಇಲ್ಲಿ ಎರಡು ರೀತಿ ಸಾಧನಗಳನ್ನಾಗಿ ವಿಂಗಡಿಸಿ ಹೇಳಬಹುದು. ಒಂದು ಘನರೂಪದ ಲೇಖನಿಗಳು, ಇನ್ನೊಂದು ದ್ರವರೂಪದ ಬಣ್ಣಗಳನ್ನು ಅದ್ದಿ ಬರೆಯುವ ಲೇಖನಿಗಳು. ಘನರೂಪದಲ್ಲಿ ಬಳಸಲಾಗುವ ಲೇಖನಿಗಳು ಬಳಪದ ಕಲ್ಲು, ಸುಣ್ಣದ ಕಲ್ಲು ಹಾಗೂ ವಿವಿಧ ಕಲ್ಲುಗಳು. ಇದರಲ್ಲಿಯೇ ಮೃದುವಾದ ಘನರೂಪದ ಲೇಖನಿಗಳನ್ನು ಹೆಸರಿಸಬಹುದು. ಮೇಣದಿಂದ ಕೂಡಿದ ಬಣ್ಣದ ಲೇಖನಿಗಳು, ಗ್ರಾಫೈಟ್ ಮತ್ತು ಜೇಡಿಮಣ್ಣಿನಿಂದ ತಯಾರಿಸಿದ ಪೆನ್ಸಿಲ್ಸ್ ಇತ್ಯಾದಿ. ಈ ರೀತಿಯಾದ ಲೇಖನಿಗಳನ್ನು ದಪ್ಪ(ಸ್ಥೂಲ)ನಾದ ರೇಖೆ ಎಳೆಯಲು, ಸೂಕ್ಷ್ಮತರನಾದ ರೇಖೆ ಎಳೆಯಲು ಬಳಸಲಾಗುತ್ತಿತ್ತು. ಇವುಗಳನ್ನು ಕಲಾವಿದರು ತಮಗೆ ಹೇಗೆ ಬೇಕೋ ಹಾಗೆ ಚಿತ್ರ ಬರೆಯಲು ಅಣಿ ಮಾಡಿಕೊಳ್ಳುತ್ತಿದ್ದರು.

ಯಾವುದೇ ತರನಾದ ಚಿತ್ರ ಬರೆಯಬೇಕಾದರೆ ಅದಕ್ಕೆ ಮೊದಲು ರೇಖಾಚಿತ್ರ ಬರೆಯಬೇಕಾಗುತ್ತಿತ್ತು. ನಂತರ ಬೇಕಾದ ವರ್ಣಸಂಯೋಜನೆ ಮಾಡಿ ನಂತರ ಅಂತಿಮವಾದ ರೇಖೆಯನ್ನು ಹಾಕಲಾಗುತ್ತಿತ್ತು. ಇದಕ್ಕೆ ನಮ್ಮ ಸಾಂಪ್ರದಾಯಿಕ ಚಿತ್ರಗಳು ಉದಾಹರಣೆಯಾಗಿವೆ. ಇದಕ್ಕೆ ಗಾಜಿನ ಚಿತ್ರಕಾರರೂ ಹೊರತಾಗಿಲ್ಲ. ಗಾಜಿನ ಮೇಲೆ ಸರಿಯಾಗಿ ಮೂಡುವಂತಹ, ಸ್ಪಷ್ಟವಾಗಿ ಕಾಣುವಂತಹ ರೇಖೆಗಳನ್ನು ಬರೆಯಲು ಮೇಣದಂತಹ ಲೇಖನಿಗಳನ್ನು ಬಳಸುತ್ತಿದ್ದರು. ರೇಖಾಚಿತ್ರ ಬರೆದುಕೊಂಡ ನಂತರ ಅದರ ಹಿಮ್ಮುಖವಾಗಿ ಸುಂದರವಾದ, ಗಾಢವಾದ ಕಪ್ಪು ವರ್ಣದ ಸೂಕ್ಷ್ಮ ರೇಖೆಯನ್ನು ಬರೆದುಕೊಂಡು ನಂತರ ವರ್ಣ ಸಂಯೋಜನೆ ಮಾಡಬೇಕು.

ಗಾಜಿನ ಚಿತ್ರ ಕಲಾವಿದರು ನೇರವಾಗಿ ಗಾಜಿನ ಮೇಲೆ ಚಿತ್ರ ಬರೆಯದೇ ಮೊದಲು ಪ್ರತ್ಯೇಕ ರೇಖಾಚಿತ್ರಗಳನ್ನು ಬರೆದುಕೊಂಡು, ಅದರ ಕರಡನ್ನು ಗಾಜಿನ ಮೇಲೆ ಚಿತ್ರಿಸಿಕೊಂಡು ಚಿತ್ರ ಬರೆಯುತ್ತಿದ್ದರು. ಒಮ್ಮೆ ಒಂದು ರೇಖಾಚಿತ್ರ ಸಿದ್ಧಪಡಿಸಿಕೊಂಡರೆ ಅದರ ಸಹಾಯದಿಂದ ಸಾವಿರಾರು ಚಿತ್ರಗಳನ್ನು ಪ್ರತಿಕೃತಿ ಮಾಡಿ ಗಾಜಿನ ಚಿತ್ರಗಳನ್ನು ರಚಿಸಬಹುದು. ಇಂಥ ರೇಖಾಚಿತ್ರಗಳನ್ನು ಸೂಕ್ಷ್ಮ ತೆರನಾದ ವಿವಿಧ ಬಣ್ಣಗಳ ಲೇಖನಿಗಳನ್ನು, ಮೇಣದಂತಹ ಲೇಖನಿಗಳನ್ನು ಗ್ರಾಫೈಟ್‌ನಿಂದ ತಯಾರಾದ ಲೇಖನಿಗಳನ್ನು ಬಳಸುತ್ತಿದ್ದರು. ಇಂದು ಮಾರುಕಟ್ಟೆಯಲ್ಲಿ ವಿವಿಧ ತರಹದ ಲೇಖನಿಗಳು ಲಭ್ಯ ಇವೆ.

**ಅಂಟು ದ್ರಾವಕಗಳು(ಬಂಧಕಗಳು)**

ಗಾಜಿನ ಚಿತ್ರಗಳ ರಚನೆಯಲ್ಲಿ ಚಿತ್ರಕಲಾವಿದರು ಬೇರೆ ಬೇರೆ ಮೂಲದಿಂದ ತಯಾರಿಸಲಾದ ಅಂಟು ದ್ರಾವಕಗಳನ್ನು ಬಳಸಿರುವರು. ಮರದ ಅಂಟು ದ್ರಾವಕಗಳನ್ನು ಬಣ್ಣಗಳ ಮಿಶ್ರಣದಲ್ಲಿ ಹಾಗೂ ತಿಳಿಯಾದ ಪಾರದರ್ಶಕ ಅಂಟು ದ್ರಾವಕಗಳನ್ನು ಗಾಜಿನ ಮೇಲ್ಮೈ ಮೇಲೆ ಲೇಪಿಸಿ, ಬೇಕಾದ ಮೆರಗು ಕಾಗದಗಳನ್ನು ಅಂಟಿಸಲು ಮತ್ತು ಮೆರಗು ದ್ರವ್ಯಗಳನ್ನು ಲೇಪಿಸಲು ಬಳಸಲಾಗಿದೆ. ಮರಗಳಿಂದ ಸ್ವಾಭಾವಿಕವಾಗಿ ಉತ್ಪತ್ತಿಯಾದ ಅಂಟು ಪದಾರ್ಥವನ್ನು ಗಾಜಿನ ಚೂರಿನಂತೆ ಮಾರ್ಪಡಿಸಿ ಮಾರುಕಟ್ಟೆಯಲ್ಲಿ ಇಂದು ಮಾರಲಾಗುತ್ತಿದೆ. ಇದನ್ನು ಮೀನು ಸರಿ ಎಂದು ಕರೆಯುವರು. ಈ ಮೀನುಸರಿಯನ್ನು ಚೆನ್ನಾಗಿ ಕಾಯಿಸಿ ಹುಡಿ ವರ್ಣಗಳೊಂದಿಗೆ ಬೆರೆಸಿ ವರ್ಣಗಳನ್ನು ತಯಾರು ಮಾಡುತ್ತಾರೆ. ಈ ರೀತಿ ತಯಾರಿಸಿದ ಬಣ್ಣವನ್ನು ಯಾವುದೇ ಆಧಾರದ ಮೇಲೆ ಬಳಸಲಾಗುತ್ತಿದೆ. ಹೆಚ್ಚಾಗಿ ಬೇವಿನಮರದ ಅಂಟು, ಜಾಲಿಮರದ ಅಂಟನ್ನು ಬಳಸಲಾಗುತ್ತಿದೆ. ಜಾಲಿಮರದ ಅಂಟು ದ್ರಾವಕವನ್ನು ಬೇರೆ ಬೇರೆ ಪದಾರ್ಥಗಳನ್ನು ತಯಾರು ಮಾಡಲು ಬಳಸುತ್ತಾರೆ.

ಬೇರೆ ಬೇರೆ ಸಸ್ಯ, ಮರದ ಬೀಜಗಳಿಂದ ಅಂಟು ದ್ರಾವಕಗಳನ್ನು ತಯಾರಿಸಲಾಗುತ್ತಿದೆ. ಎಣ್ಣೆ ಬೀಜಗಳಾದ ಅಗಸೆ, ಪೆರಿಲ್ಲಾ, ಟಂಗೆ, ಅಮ್ಪಿ ಸಿಕಾ, ಗಸಗಸೆ ಇತ್ಯಾದಿಗಳನ್ನು ಬಳಸಿಕೊಂಡು ಪೈಂಟ್ಸ್ ಮತ್ತು ವಾರ್ನಿಷ್‌ಗಳನ್ನು ತಯಾರಿಸಲಾಗುತ್ತದೆ. ಗಾಜಿನ ಕಲಾವಿದರು ತೈಲಬಂಧಕಗಳನ್ನು ಬಣ್ಣಗಳ ಸಂಯೋಜನೆಯಲ್ಲಿ ಬಳಸಿದರೆ ನೀರು ಬಂಧಕಗಳನ್ನು ಬೇಕಾದ ವಸ್ತುಗಳನ್ನು ಅಂಟಿಸಲು ಬಳಸಿದ್ದಾರೆ. ಗೋಲ್ಡ್ ಲೀಫ್‌ಗಳನ್ನು ಅಂಟಿಸಲು ಈ ಪಾರದರ್ಶಕ ಅಂಟು ದ್ರಾವಕವನ್ನು ಬಳಸಿದ್ದು ವಿಶೇಷ. ಇಂದು ಮಾರುಕಟ್ಟೆಯಲ್ಲಿ ಲಭ್ಯವಿರುವ ಅಂಟು ದ್ರಾವಕಗಳನ್ನು ಚಿತ್ರರಚನೆಯಲ್ಲಿ ಬಳಸುತ್ತಿದ್ದಾರೆ. ಪ್ರಾಚೀನ ಮಾನವನು ಪ್ರಾಣಿಗಳ ಕೊಬ್ಬನ್ನು ಶೇಖರಿಸಿ ಬಣ್ಣದಲ್ಲಿ ಬೆರೆಕೆ ಮಾಡಿ ಚಿತ್ರ ರಚಿಸುತ್ತಿದ್ದನೆಂಬುದನ್ನು ಇಲ್ಲಿ ನೆನೆಯಬಹುದು.

**ಮೆರಗು ಕಾಗದಗಳು**

ಮೆರಗು ಕಾಗದಗಳನ್ನು ಗಾಜಿನ ಚಿತ್ರಗಳಲ್ಲಿ ವಿಫುಲವಾಗಿ ಬಳಸಿದ್ದನ್ನು ಕಾಣಬಹುದು. ಚಿತ್ರಗಳ ಬಹುತೇಕ ಅರ್ಧದಷ್ಟು ಭಾಗವನ್ನು ಈ ಮೆರಗು ಕಾಗದಗಳು ಆವರಿಸಿವೆ. ಪ್ರಧಾನವಾಗಿ ಕೆಂಪು, ಹಸಿರು, ಹಳದಿ, ಗುಲಾಬಿ ವರ್ಣದ ಮೆರಗು ಕಾಗದಗಳು ಬಳಕೆಯಾಗಿವೆ. ಚಿತ್ರದ ಹಿನ್ನೆಲೆಯ ಡ್ರ್ಯಾಪರಿಗಳಿಗೆ ಹಾಗೂ ಆಕೃತಿಗಳ ಉಡುಪುಗಳಿಗೆ, ಆಭರಣಗಳಿಗೆ ಈ ಮೆರಗು ಕಾಗದಗಳನ್ನು ಕಲಾವಿದರು ಅಂಟಿಸಿದ್ದಾರೆ.

**ಚಿನ್ನದ ಹಾಳೆ(Gold leaf)**

ಗಾಜಿನ ಚಿತ್ರಗಳ ರಚನೆಯಲ್ಲಿ ಮಾನವ ಆಕೃತಿಗಳ ಕಿರೀಟಾಭರಣಗಳಿಗೆ, ಉಡುಪುಗಳಿಗೆ, ಹಿನ್ನೆಲೆಯ ಡ್ರ್ಯಾಪರಿಗಳಿಗೆ ಹಾಗೂ ವಿವಿಧ ವಸ್ತುಗಳ ಚಿತ್ರಗಳಿಗೆ ಚಿನ್ನದ ಹಾಳೆಯನ್ನು ಗಾಜಿನ ಕಲಾಕಾರರು ಬಳಸಿದ್ದಾರೆ. ಚಿನ್ನದ ಹಾಳೆಯನ್ನು ತಂಜಾವೂರು ಮತ್ತು ಮೈಸೂರು ಶೈಲಿಯ ಚಿತ್ರಗಳಲ್ಲಿ ಹೆಚ್ಚು ಹೆಚ್ಚು ಪ್ರಮಾಣಗಳಲ್ಲಿ ಬಳಸಿದ್ದು ಕಂಡುಬರುತ್ತದೆ. ಸುರಪುರ ಚಿತ್ರಶೈಲಿಯ ಕಲಾವಿದರೂ ಸಹಿತ ಈ ಸೂಕ್ಷ್ಮತೆರನಾದ ಚಿನ್ನದ ಹಾಳೆಯನ್ನು ಸೀಮಿತವಾಗಿ ಬಳಸಿದ್ದು ಆ ಚಿತ್ರಗಳಿಂದ ತಿಳಿಯುತ್ತದೆ. ಚಿನ್ನದ ಹಾಳೆಯನ್ನು ೨೪ ಕ್ಯಾರೆಟ್ ಅಂಶದ ಚಿನ್ನದಿಂದ ತಯಾರಿಸಲಾಗುತ್ತದೆ. ಪ್ರಾಚೀನ ಕಲಾವಿದರು ಗಟ್ಟಿ ಚಿನ್ನವನ್ನು ಅರೆಯುವ ಕಲ್ಲಿನ ಮೇಲೆ ಚೆನ್ನಾಗಿ ತಿಕ್ಕಿ ತಿಕ್ಕಿ ಚಿನ್ನವನ್ನು ಪುಡಿಯಾಗುವಂತೆ ಮಾಡಿ ನಂತರ ಅದನ್ನು ಶುದ್ಧವಾದ ನೀರಿಗೆ ಹಾಕಿ, ಚೆನ್ನಾಗಿ ಸೋಸಿ ಶುದ್ಧ ಚಿನ್ನದ ಪುಡಿಯನ್ನು ಶೇಖರಿಸಲಾಗುತ್ತಿತ್ತು. ನಂತರ ಕಲಾವಿದರು ಆ ಸಿದ್ಧಪಡಿಸಿದ ಚಿನ್ನದ ಪುಡಿಯನ್ನು ಪಾರದರ್ಶಕ ಬಂಧಕದೊಡನೆ ಬೆರೆಸಿ ಚಿತ್ರ ರಚನೆ ಮಾಡುತ್ತಿದ್ದರು.

**ಬೆಳ್ಳಿಯ ಹಾಳೆ(ಬ್ಯಾಗಡಿ ಪೇಪರ್ಸ್)**

ಗಾಜಿನ ಚಿತ್ರಗಳಲ್ಲಿ ಬೆಳ್ಳಿ ಅಥವಾ ಬ್ಯಾಗಡಿಯ ಕಾಗದಗಳನ್ನು ಬಳಸುತ್ತಿದ್ದರು. ಇವುಗಳನ್ನು ಆಕೃತಿಗಳ ಆಭರಣಗಳಲ್ಲಿ ಹಾಗೂ ಚಿತ್ರದ ಅಂಚಿನಲ್ಲಿ ಆಕರ್ಷಕವಾಗಿ ಕಾಣುವಂತೆ ಅಂಟಿಸಲಾಗುತ್ತಿತ್ತು. ಪ್ರಾರಂಭದ ಹಂತದಲ್ಲಿ ಚಿನ್ನದ ಮಾದರಿಯಂತೆಯೇ ಬೆಳ್ಳಿಯನ್ನು ಚಿತ್ರಗಳಿಗೆ ಬಳಸಲಾಗುತ್ತಿತ್ತು. ಗಟ್ಟಿಯಾದ ಬೆಳ್ಳಿಯನ್ನು ಹಾಳೆಯಂತೆ ಪರಿವರ್ತಿಸಿ ಅದನ್ನು ಬೇಕಾದ ಸ್ಥಳಾವಕಾಶದಲ್ಲಿ ಬಳಸುತ್ತಿದ್ದರು. ಆದರೆ ನಂತರ ಇದರ ಬಳಕೆ ಕಡಿಮೆಯಾಗಿ ಬ್ಯಾಗಡಿಯಂತಹ ಬೆಳ್ಳಿ ಹೊಳಪು ಕಾಗದಗಳನ್ನು ಉಪಯೋಗಿಸತೊಡಗಿದರು. ಇಂದು ಕೂಡ ಇಂಥ ಅನೇಕ ಮಾದರಿಯ ಕಾಗದಗಳು ಲಭ್ಯವಿರುವುದರಿಂದ ಇಂದಿನ ಕಲಾವಿದರು ಗಾಜಿನ ಚಿತ್ರಗಳಲ್ಲಿ ಅವನ್ನೇ ಬಳಸುತ್ತಿದ್ದಾರೆ.

**ಪಾರದರ್ಶಕ ಕಾಗದಗಳು**

ಪಾರದರ್ಶಕ ಕಾಗದಗಳನ್ನು ರೇಖಾಚಿತ್ರಗಳನ್ನು ಪ್ರತಿಕೃತಿ ಮಾಡಿಕೊಳ್ಳಲು ಬಳಸಲಾಗುತ್ತದೆ. ಗಾಜಿನ ಚಿತ್ರಕಾರರು ನೇರವಾಗಿ ಯಾವುದೇ ಚಿತ್ರಗಳನ್ನು ಗಾಜಿನ ಮೇಲೆ ಬರೆಯದೇ ಮೊದಲು ಚಿತ್ರದ ರೇಖಾಚಿತ್ರವನ್ನು ಬರೆದುಕೊಂಡು ನಂತರ ಪಾರದರ್ಶಕ ಕಾಗದಗಳ ಸಹಾಯದಿಂದ ಗಾಜಿನ ಮೇಲೆ ಆ ರೇಖಾಚಿತ್ರವನ್ನು ಮೂಡಿಸಿಕೊಳ್ಳುತ್ತಾರೆ. ಬಹುತೇಕ ಗಾಜಿನ ಚಿತ್ರಗಳು ಮೈಸೂರು ಮತ್ತು ತಾಂಜಾವೂರು ಶೈಲಿಯ ಮೂಲಚಿತ್ರಗಳನ್ನು ಅನುಕರಿಸುತ್ತವೆ. ಗಾಜಿನ ಚಿತ್ರಕಲಾವಿದರು ಈ ಸಾಂಪ್ರದಾಯಿಕ ಚಿತ್ರಗಳನ್ನು ಪಾರದರ್ಶಕ ಕಾಗದಗಳ ಚಿತ್ರವನ್ನಾಗಿ ಪರಿವರ್ತಿಸಿಕೊಂಡು ತಮ್ಮ ಅನುಕೂಲಕ್ಕೆ ತಕ್ಕಂತೆ ಚಿತ್ರರಚನೆಗೆ ಬಳಸಿಕೊಂಡಿದ್ದಾರೆ. ಈ ಪಾರದರ್ಶಕ ಕಾಗದಗಳನ್ನು ರೇಖಾ ಚಿತ್ರದಲ್ಲಿ ಕುಶಲ ಕಲಾವಿದರು ಹೆಚ್ಚು ಬಳಸಿಕೊಂಡು ಈ ಚಿತ್ರವೃತ್ತಿಯನ್ನು ಮಾಡುತ್ತಿದ್ದರು.

**ಚೌಕಟ್ಟುಗಳು(Frames)**

ತೂಗು ಹಾಕುವ ಗಾಜಿನ ಚಿತ್ರಗಳಿಗೆ ಸೂಕ್ತವಾದ ಮರದ ಚೌಕಟ್ಟನ್ನು ಹಾಕಿ ಅಲಂಕರಿಸುವುದು ವಾಡಿಕೆ. ದೊಡ್ಡದಾದ ಚಿತ್ರಗಳಿಗೆ ಅಗಲವಾದ ಕುಸುರಿ ಕೆಲಸದ ಮರದ ಚೌಕಟ್ಟನ್ನು ಹೊದಿಸಿದರೆ, ಚಿಕ್ಕ

ಚಿತ್ರಗಳಿಗೆ ಸಾಧಾರಣ ಚೌಕಟ್ಟು ಹಾಕಿರುವುದನ್ನು ನೋಡುತ್ತೇವೆ. ಈ ಚಿತ್ರಕಾರರು ಅಷ್ಟೇನು ದುಭಾರಿಯಲ್ಲದ ಸಾಧಾರಣ ಚೌಕಟ್ಟನ್ನು ಹಾಕಿ ಮಾರಾಟ ಮಾಡುತ್ತಿದ್ದರೆಂದು ತೋರುತ್ತದೆ. ಸಾಂಪ್ರದಾಯಿಕ ಚಿತ್ರಗಳಾದ ಮೈಸೂರು ಮತ್ತು ತಾಂಜಾವೂರು ಚಿತ್ರಗಳ ಚೌಕಟ್ಟುಗಳನ್ನು ಹೋಲಿಸಿದರೆ, ಈ ಚಿತ್ರಕಾರರು ಸಾಧಾರಣ ಚೌಕಟ್ಟನ್ನು ಬಳಸುತ್ತಿದ್ದುದು ಕಂಡುಬರುತ್ತದೆ.

**ರಕ್ಷಣಾ ಹಲಗೆಗಳು**

ಗಾಜಿನ ಚಿತ್ರಕಾರರು ಚಿತ್ರಗಳಿಗೆ ಎರಡು ರೀತಿಯ ರಕ್ಷಣಾ ಹಲಗೆಗಳನ್ನು ಬಳಸಿದವರು. ಒಂದು ಮರದ ತೆಳುವಾದ ಹಲಗೆಗಳನ್ನು, ಇನ್ನೊಂದು ಗಟ್ಟಿಯಾದ ತಗಡಿನ ಹಾಳೆಗಳನ್ನು ಬಳಸಿದ್ದಾರೆ. ಸಾಧಾರಣ ಮರದ ಹಗುರವಾದ ಹಲಗೆಗಳನ್ನು ಬಳಸಿದ್ದನ್ನು ಕಾಣಬಹುದು. ತಗಡಿನ ಹಾಳೆಗಳು ತೆಳುವಾಗಿರುವುದರಿಂದ ಚೌಕಟ್ಟಿಗೆ ಹೊಂದಿಕೆಯಾಗಿ ಕೂಡುತ್ತದೆ. ಯಾವುದೇ ತರದ ಕಿಂಡಿ ಬೀಳುವುದಿಲ್ಲ. ಇದರ ಒಳಗೆ ಯಾವುದೇ ರೀತಿಯ ಕ್ರಿಮಿಕೀಟಗಳು ಒಳಗೆ ಹೋಗಲು ಆಸ್ಪದವಿಲ್ಲ.

ಕರ್ನಾಟಕದಲ್ಲಿ ಕಂಡುಬರುವ ತೂಗುಹಾಕುವ ಗಾಜಿನ ಚಿತ್ರಗಳನ್ನು ವಿದೇಶಿ ಕಲಾವಿದರು ರಚಿಸಿದ ಗಾಜಿನ ಚಿತ್ರಗಳು, ಸ್ವದೇಶಿ ಕಲಾವಿದರು ರಚಿಸಿದ ಗಾಜಿನ ಚಿತ್ರಗಳೆಂದು ವಿಂಗಡಿಸಿಕೊಳ್ಳಬಹುದಾಗಿದೆ.

ಚಿತ್ರಕಲೆ ಕ್ಯಾನ್ವಾಸ್, ಕಾಗದ, ಹಲಗೆ, ಭಿತ್ತಿಗಳಂತಹ ಫಲಕಗಳ ಮೇಲೆ ರೇಖಾಚಿತ್ರ ಬರೆದು ಪ್ರಾಥಮಿಕ ಹಂತ, ಮಧ್ಯಂತರ ಹಂತ ಮತ್ತು ಕೊನೆಯ ಹಂತಗಳಾಗಿ ಯಥಾವತ್ತಾಗಿ ವರ್ಣಸಂಯೋಜನೆಗಳ ಮೂಲಕ ರೂಪ ತಾಳಿದರೆ, ಗಾಜಿನ ಮೇಲೆ ತದ್ವಿರುದ್ಧ ರಚನಾ ವಿಧಾನವನ್ನು ಅನುಸರಿಸಬೇಕಾಗುತ್ತದೆ. ಮೇಲಿನ ಫಲಕಗಳ ಮೇಲೆ ಪ್ರಾರಂಭದಿಂದ ಹಂತ ಹಂತವಾಗಿ ಪರಿಪೂರ್ಣಗೊಳಿಸಿದರೆ ಗಾಜಿನ ಮೇಲೆ ಕೊನೆಯ ಹಂತದಿಂದ ಪ್ರಾರಂಭವಾಗಿ ಮೊದಲ ಹಂತಗಳನ್ನು ತರಬೇಕಾಗುತ್ತದೆ. ಯಾಕೆಂದರೆ ಇಲ್ಲಿ ರೇಖಾ ಪ್ರಧಾನವಾದ ಸಾಂಪ್ರದಾಯಿಕ ಚಿತ್ರಗಳಾಗಿರಬಹುದು ಅಥವಾ ನೈಜ ಚಿತ್ರಗಳಾಗಿರಬಹುದು. ಗಾಜಿನ ಒಂದು ಮೈಪಾತಳಿಯ ಮೇಲೆ ಚಿತ್ರ ಬರೆದು ಅದರ ಇನ್ನೊಂದು ಮೈಪಾತಳಿಯ ಮೂಲಕ ವೀಕ್ಷಿಸುವುದಾಗಿದೆ. ನಂತರ ಇದಕ್ಕೆ ಬೇಕಾದ ಚೌಕಟ್ಟನ್ನು ಹಾಕಿ ಅಲಂಕರಿಸುವುದಾಗಿದೆ. ಈ ರೀತಿಯ ಚಿತ್ರ ರಚನೆ ಮಾಡಲು ಕಲಾವಿದನಲ್ಲಿ ತಾಳ್ಮೆ ಹೆಚ್ಚು ಹಾಗೂ ಅನುಭವ ಬೇಕಾಗುತ್ತದೆ.

**iii. ಚಿತ್ರಗಳ ವಸ್ತುವಿಷಯ**

ಜಿಲ್ಲೆಯ ಗಾಜಿನ ಚಿತ್ರಗಳು ಗುಳೇದಗುಡ್ಡದ ಬಸವಪ್ರಭು, ಗಂಗಾವತಿ ಅವರ ಮನೆಯಲ್ಲಿ ಹೇರಳವಾಗಿ ಸಂಗ್ರಹವಾಗಿವೆ. ಈ ಗಾಜಿನ ಮೇಲಿನ ಚಿತ್ರಗಳನ್ನು ಮೂರು ತಲೆಮಾರುಗಳಿಂದ ಸಂರಕ್ಷಿಸಿಕೊಂಡು ಬರಲಾಗಿದೆ. ಹಾಗೆಯೇ ಅಮೀನಗಡದ ಶೀಲವಂತಪ್ಪ ಗರಡಿ ಅವರ ಮನೆಯಲ್ಲೂ ಗಾಜಿನ ಚಿತ್ರಗಳು ಸಂಗ್ರಹವಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಈ ಚಿತ್ರಗಳನ್ನು ಎರಡು ವಿಭಾಗಗಳನ್ನಾಗಿ ಮಾಡಿಕೊಳ್ಳಲಾಗಿದೆ. ಶಿವ, ವೀರಭದ್ರ, ಗಣಪತಿ ಚಿತ್ರಗಳನ್ನು ಶೈವ ಪರಂಪರೆ ಚಿತ್ರಗಳೆಂದು, ಬಾಲಕೃಷ್ಣನ ಲೀಲೆಗಳು, ರಾಮ, ವಿಷ್ಣು ಮೊದಲಾದ ವೈಷ್ಣವ ಪರಂಪರೆಯ ಚಿತ್ರಗಳನ್ನು, ಇದಲ್ಲದೆ ದಂಪತಿ, ರಾಜರು, ಹಾಗೆ ಗಂಧರ್ವರ, ಅಪ್ಸರೆಯರ ಚಿತ್ರಗಳನ್ನು ಪೌರಾಣಿಕ ಎಂದೂ, ವೀಣೆ

ಹಿಡಿದು ಬಾರಿಸುವ ಸಂಗೀತಾಸಕ್ತ, ಮತ್ತು ಗಿಳಿ, ಹಂಸಗಳೊಂದಿಗೆ ಕ್ರೀಡಾಸಕ್ತ ಮಹಿಳೆಯರು ಸೇರಿದಂತೆ ಆಂಗ್ಲ, ಗುಜರಾತಿ ಮಹಿಳೆಯರ ಚಿತ್ರಗಳನ್ನು ಆಧುನಿಕ ಪರಂಪರೆ ಚಿತ್ರಗಳೆಂದು ವಿಭಾಗಿಸಿಕೊಳ್ಳಲಾಗಿದೆ.

ಸಂಗ್ರಹಿತ ಮನೆಗಳ ಯಜಮಾನರುಗಳು ೩೦೦ ವರ್ಷಗಳಿಂದ ತಮ್ಮ ಮನೆಯಲ್ಲಿರುವ ಚಿತ್ರಗಳ ಕುರಿತು ಇವು ತಮ್ಮ ತಾತ, ಮುತ್ತಾತರು ವ್ಯಾಪಾರಕ್ಕೆಂದು ರಾಜಸ್ಥಾನ ಹಾಗೂ ಮಹಾರಾಷ್ಟ್ರಗಳಿಗೆ ತಿಂಗಳಾನುಗಟ್ಟಲೆ ಹೋಗುತ್ತಿರು. ಅವರ ಮೇಲೆ ಪ್ರಭಾವ ಬೀರಿದ ಈ ಚಿತ್ರಗಳು ಶ್ರೀಮಂತಿಕೆ, ಮೇಲಂತಸ್ತಿನ ಕುರುಹುಗಳಾಗಿದ್ದವು. ಮನೆಗಳಲ್ಲಿ ಹಬ್ಬ, ಹರಿದಿನ ಹಾಗೂ ಮದುವೆ ಸಮಾರಂಭಗಳಲ್ಲಿ ತಮ್ಮ ಕಲಾಪ್ರೇಮದ ಅಥವಾ ಕಲಾಭಿರುಚಿಯ ಸಂಕೇತವಾಗಿರುವಂತೆ ತಮ್ಮ ಶ್ರೀಮಂತಿಕೆಯನ್ನು ತೋರ್ಪಡಿಸುವಂತಿರುತ್ತಿದ್ದವು. ಒಂದು ಸಾರಿ ಗಾಜು ಒಡೆದರೆ ಇಡೀ ಚಿತ್ರ ಹಾಳಾಗಿ ಹೋಗುತ್ತದೆ. ಆದ್ದರಿಂದ ಬಹು ನಾಜೂಕಾಗಿ ಪ್ರತೀ ದೀಪಾವಳಿಗೊಂದು ಸಲ ಕೆಳಕ್ಕಿಳಿಸಿ, ಸ್ವಚ್ಛಗೊಳಿಸಿ ಮತ್ತೆ ಅದೇ ಸ್ಥಳಕ್ಕೆ ನೇತು ಹಾಕುವ ಪರಂಪರೆಯನ್ನು ಇಂದಿಗೂ ಪಾಲಿಸುತ್ತಾ ಕಲಾಕೃತಿಗಳ ಸಂಗ್ರಹವನ್ನು ಕಾಪಾಡಿಕೊಂಡು ಬಂದದ್ದಿದೆ. ಬೇರೆ ರಾಜ್ಯಗಳಿಂದ ತಂದ ಈ ಕೃತಿಗಳು ಇಂದಿಗೂ ನಮ್ಮ ಜಿಲ್ಲೆಯ ಸ್ವತ್ತಾಗಿವೆ.

**ಅ. ಪೌರಾಣಿಕ ಚಿತ್ರಗಳು**

**೧. ಶಿವಪಾರ್ವತಿ, ಗಣೇಶ ಮತ್ತು ನಂದಿ**

ಗುಳೇದಗುಡ್ಡದ ಬಸವಪ್ರಭು, ಗಂಗಾವತಿ ಅವರ ಮನೆಯಲ್ಲಿ ರಾರಾಜಿಸುತ್ತಿರುವ ಈ ಚಿತ್ರದ ಮಧ್ಯದಲ್ಲಿ ಶಿವ ಕುಳಿತಿದ್ದು, ಶಿವನಿಗೆ ಜಟೆಯ ಬದಲು ಕಿರೀಟವನ್ನು ಹಾಕಲಾಗಿದೆ. ಅಲ್ಲಿಯೇ ಸರ್ಪವನ್ನು ಸುತ್ತಿ ಗಂಗೆಯನ್ನು ಇರಿಸಲಾಗಿದೆ. ಕಿರೀಟವು ರುದ್ರಾಕ್ಷಿಯಿಂದ ಅಲಂಕೃತವಾಗಿದೆ. ಮೂರು ಬೆರಳು ವಿಭೂತಿಯ ಬದಲು ಒಂದೇ ಒಂದು ಕೆಂಪು ಅಡ್ಡ ನಾಮವನ್ನು ಹಣೆಯ ಮೇಲೆ ಹಾಕಲಾಗಿದೆ. ಕೆಳಗೊಂದು ಚುಕ್ಕೆ, ಇಲ್ಲಿ ಶಿವನಿಗೆ ದಪ್ಪನೆಯ ಮೀಸೆ ಇರುವುದು ವಿಶೇಷ. ಕೊರಳಲ್ಲಿ ರುದ್ರಾಕ್ಷಿಯ ಮಾಲೆ, ನಕ್ಲೆಸ್ಸಿನಂತಹ ಸರ, ಮೇಲ್‌ಬಲಗೈಯಲ್ಲಿ ತ್ರಿಶೂಲ ಹಿಡಿದಿದ್ದು, ಕೆಳ ಬಲಗೈಯನ್ನು ಬಲತೊಡೆಯ ಮೇಲೆ ಕುಳಿತ ಗಣೇಶನ ಹೆಗಲ ಮೇಲೆ ಇಟ್ಟು, ಶಂಖ ಎಡಗೈ ಹಿಡಿದ ಎಡಗಡೆ ಕುಳಿತ ಪಾರ್ವತಿ ಹೆಗಲ ಮೇಲೆ ಇರಿಸಲಾಗಿದೆ. ಕೆಳ ಎಡಗೈಯನ್ನು ಪಾರ್ವತಿಯ ನಡುವನ್ನು ಬಳಸಿ ಹಿಡಿದುಕೊಳ್ಳಲಾಗಿದೆ. ಹುಲಿಯ ಚರ್ಮದೊಂದಿಗೆ ಹಳದಿ ಧೋತ್ರವನ್ನು ಉಡಿಸಿದ್ದು ಇನ್ನೊಂದು ವಿಶೇಷ. ಬಲಬದಿಯಲ್ಲಿರುವ ಗಣೇಶ ಎಡದ ಕೈಯಲ್ಲಿ ಕಮಲವನ್ನು ಹಿಡಿದಿದ್ದು, ಬಲಗೈಯಲ್ಲಿ ಉಂಡಿ, ಬಲ ಮೇಲ್ಕೈಯಲ್ಲಿ ಕೊಡಲಿ ಇದೆ. ಎಡ ಮೇಲ್ಕೈ ಗೌಣವಾಗಿದೆ. ಇನ್ನೂ ಪಾರ್ವತಿಗೆ ತಿಳಿ ಹಸಿರು ಬಣ್ಣವನ್ನು ಮೈಬಣ್ಣವನ್ನಾಗಿ ಬಳಸಿದೆ. ಪಾರ್ವತಿಗೆ ಕಿರೀಟ ಧರಿಸಿ ತಿಳಿ ಕೆಂಪು ಸೀರೆಯನ್ನು ಉಡಿಸಲಾಗಿದೆ. ಅಗಲವಾದ ಕಣ್ಣುಗಳು, ನತ್ತು, ಕುತ್ತಿಗೆಗೊಂದು ಸರ, ಹೆಣ್ಣು ದೇವತೆಗಿರುವ ಅತೀ ಹೆಚ್ಚು ಆಭರಣ ಇಲ್ಲದಿರುವುದು ಇನ್ನೊಂದು ವಿಶೇಷ. ಶಿವನ ವಾಹನ ನಂದಿ ಮೂವರ ಮುಂದಿದ್ದು, ಶಿವನ ಎಡಗಾಲು ನಂದಿಯ ಬೆನ್ನಿನ ಮೇಲೆ ಊರಿದ್ದು, ನಂದಿಯ ಚಿತ್ರವನ್ನು ಕಪ್ಪನೆಯ ಕೋಡುಗಳು, ಮೂಗುದಾರ, ಗೆಜ್ಜೆಸರ ಮತ್ತು ಜೂಲಗಳಿಂದ

ಅಲಂಕೃತಗೊಳಿಸಲಾಗಿದೆ. ಮೂವರನ್ನು ಸಿಂಹಾಸನದ ಮೇಲೆ ಕುಳ್ಳರಿಸಿ, ಆಚೆ, ಈಚೆ ಸಿಂಹದ ಮುಖ ಚಿತ್ರಿಸಲಾಗಿದೆ. ಒಟ್ಟು ಚಿತ್ರವು ಒಂದು ಉತ್ತಮ ಸಂಯೋಜನೆಯಾಗಿದೆ.

**೨. ಕಾಲಾಂತಕ ಶಿವ**

ಬಾಗಲಕೋಟೆಯ ಕೃಷ್ಣದಾಸ್, ಹನುಮದಾಸ್ ಗೋಣೆ ಅವರ ಮನೆಯಲ್ಲಿ ಸಂಗ್ರಹಿತವಾದ ಭಕ್ತ ಮಾರ್ಕಂಡೆಯನ ಕಥೆಯಾಧಾರಿತ ಚಿತ್ರ ಇದಾಗಿದ್ದು, ಇಲ್ಲಿ ಎಲ್ಲಾ ಚಿತ್ರಗಳಲ್ಲಿರುವಂತೆ ನೀಲಿ ಬಣ್ಣದ ಹಿನ್ನೆಲೆ ವಿನ್ಯಾಸದ ಬದಲು, ಹಳದಿ ಬಣ್ಣದ ವಿನ್ಯಾಸವನ್ನು ರಚಿಸಲಾಗಿದೆ. ಶಿವನಿಗೆ ನೀಲಿ ಮೈಬಣ್ಣದ ಬದಲು ತೆಳುಗೆಂಪು ಮೈಬಣ್ಣವಿದ್ದು, ಭಕ್ತ ಮಾರ್ಕಂಡೆಯನಿಗೂ ಅದೇ ಬಣ್ಣವನ್ನು ಹಾಕಲಾಗಿದೆ. ಎದುರು ಕೋಣದ ಮೇಲೆ ಕುಳಿತ ಯಮನಿಗೆ ನೀಲಿ ಬಣ್ಣವನ್ನು ಬಳಸಲಾಗಿದೆ. ಹಾರಿದ ಚೂಪಾದ ಕೂದಲುಗಳು ಬಲ ಮೇಲ್‌ಗೈಯಲ್ಲಿ ಗದೆ ಎಡ ಮತ್ತು ಬಲ ಕೆಳ ಕೈಗಳಲ್ಲಿ ಪಾಶವನ್ನು ಹಿಡಿದು ಮಾರ್ಕಂಡೇಯ ಪ್ರಾಣ ಸೆಳೆಯಲು ಮುಂದಾದ ಯಮ ಕೋಣದ ಮೇಲೆ ಇದ್ದಾನೆ. ಶಿವಲಿಂಗವನ್ನು ಒಡೆದು ಪ್ರತ್ಯಕ್ಷನಾದ ಶಿವ ಬಲಗಾಲನ್ನು ಮುಂದೆ ಚಾಚಿ ಕೋಣನ ಕೋಡಿಗೆ ಒದ್ದು ಯಮನನ್ನು ದಂಡಿಸುವ ಚಿತ್ರ ಇದಾಗಿದೆ. ಮೇಲ್ಗಡೆ ಹೂವು ತುಂಬಿದ ಹಸಿರು ಗಿಡವನ್ನು ರಚಿಸಲಾಗಿವೆ. ಹಿಮ್ಮುಖವಾಗಿ ನೋಡಿದ ಮಾರ್ಕಂಡೆಯ ಕೆಂಪು ಬಣ್ಣದ ಪಂಜೆಯನ್ನು ಉಟ್ಟಿದ್ದಾನೆ. ಒಟ್ಟು, ಮಾರ್ಕಂಡೆಯನನ್ನು ಸಾವಿನ ದವಡೆಯಿಂದ ಪಾರು ಮಾಡುವ ಶಿವ ಮತ್ತು ಯಮನ ಹೋರಾಟ ಇದಾಗಿದ್ದು, ಉಳಿದ ಎಲ್ಲಾ ಚಿತ್ರಗಳಿಗಿಂತ ಇದು ತೀರಾ ಭಿನ್ನವಾದ ಸಂಯೋಜನೆಯಾಗಿದೆ.

**೩. ವೀರಭದ್ರ**

ಗುಳೇದಗುಡ್ಡದ ಬಸವಪ್ರಭು, ಗಂಗಾವತಿ ಅವರ ಮನೆಯಲ್ಲಿರುವ ತಿಳಿ ನೀಲಿ ಬಣ್ಣದ ಹಿನ್ನೆಲೆ ವಿನ್ಯಾಸದೊಂದಿಗೆ ನಿಂತ ವೀರಭದ್ರನ ರೌದ್ರತೆಯನ್ನು ಬಿಂಬಿಸಲು ಅವನ ಇಡೀ ದೇಹವನ್ನು ಕೆಂಪು ವರ್ಣದಲ್ಲಿ ರಚಿಸಲಾಗಿದೆ. ಎತ್ತರವಾದ ಕಿರೀಟ ಉರಿಯ ಓಘವನ್ನು ಹೊಂದಿದ ಪ್ರಭಾವಳಿ, ತೆರೆದ ಅಗಲವಾದ ಕಣ್ಣುಗಳು, ವಿಭೂತಿ, ಕೋರೆ ಹಲ್ಲು ಮತ್ತು ಕೋರೆ ಮೀಸೆ, ಕಿವಿಗಳಲ್ಲಿ ಓಲೆ, ಕೊರಳು, ಮೈ, ಕೈ, ಕಾಲು ಮುಂತಾದ ಕಡೆ ಮೂರು ಬೆರಳು ವಿಭೂತಿಯನ್ನು ಬಳಿಯಲಾಗಿದೆ. ಒಟ್ಟು ಆರು ಕೈಗಳಿದ್ದು, ಮುಂದಿನ ಎರಡು ಕೈಗಳಲ್ಲಿ ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಗುರಾಣಿ ಇವೆ. ಮೇಲಿನ ಎಡಗೈಯಲ್ಲಿ ಶಂಖ, ಕೆಳ ಎಡಗೈಯಲ್ಲಿ ಹೂವು, ಮೇಲ್‌ಬಲಗೈಯಲ್ಲಿ ಹೂವು, ಕೆಳ ಬಲಗೈಯಲ್ಲಿ ತ್ರಿಶೂಲ, ಹನುಮಂತನಂತಹ ಚಡ್ಡಿಯನ್ನು ಧರಿಸಿ ಮುಂದೆ ಉದ್ದವಾಗಿ ಬಟ್ಟೆಯನ್ನು ಜೋತು ಬಿಡಲಾಗಿದೆ. ತಿಳಿ ಹಸಿರು ಬಣ್ಣದ ಶೆಲ್ಯವನ್ನು ಮೊಣಕಾಲಿನವರೆಗೆ ಅಲಂಕೃತವಾಗಿ ಇಳಿಬಿಡಲಾಗಿದೆ. ಗೆಜ್ಜೆಸರ, ಕೊರಳಲ್ಲಿ ಅಗಲವಾದ ಕಾಸಿನ ಸರದಂತಿರುವ ಹಾರ, ಕಾಲುಗಳಲ್ಲಿ ಎರಡು ಗೆಜ್ಜೆಗಳು, ಉರಿಯ ಮೇಲೆ ನಿಂತ ಅನುಭವ ಕೊಡುವ ದಿಬ್ಬವೊಂದನ್ನು ಕಾಲ ಕೆಳಗೆ ಚಿತ್ರಿಸಲಾಗಿದೆ. ಚಿತ್ರದ ಸುತ್ತಲೂ ಅಲಂಕೃತವಾದ

ಹೂವುಗಳಿಂದ ಕಮಾನುವೊಂದನ್ನು ರಚಿಸಲಾಗಿದೆ. ಒಟ್ಟು ಚಿತ್ರವು ವೀರಭದ್ರನ ಭಯಂಕರ ಅವತಾರವನ್ನು ಬಿಂಬಿಸುತ್ತದೆ.

**೪. ನಟರಾಜ**

ಗುಳೇದಗುಡ್ಡದ ಬಸವಪ್ರಭು, ಗಂಗಾವತಿ ಅವರ ಮನೆಯಲ್ಲಿರುವ ಶಿವನ ಒಂದು ಅವತಾರವಾದ ನಟರಾಜನ ಚಿತ್ರ ತುಂಬಾ ಸುಂದರವಾದ ಮೈಮಾಟವನ್ನು ಹೊಂದಿದೆ. ಅಲಂಕೃತ ಮುಖದ ಸುತ್ತಲಿನ ಆಭರಣ ವಿನ್ಯಾಸ ಇಂತಹ ಚಿತ್ರದಲ್ಲಿ ಮಾತ್ರ ಕಾಣಬಹುದು. ಮೈ ಕಾಣದಷ್ಟು ಆಭರಣಗಳ ಸರಮಾಲೆಗಳು, ನಗು ಮುಖವಿದ್ದು, ಅಗಲವಾದ ಕಣ್ಣುಗಳು, ಹಣೆಯ ಮೇಲಿನ ವಿಭೂತಿಯೊಂದಿಗೆ ನಡುವೆ ದುಂಡು ಕುಂಕುಮ, ತಲೆಯಲ್ಲಿ ಜಟೆಯೊಂದಿಗೆ ಅಲಂಕೃತ ಕಿರೀಟದ ಪಟ್ಟಿಯೊಂದು ಕಾಣುತ್ತದೆ. ಅಲ್ಲಿ ಗಂಗೆಯನ್ನಿರಿಸಲಾಗಿದೆ. ಹಿನ್ನೆಲೆ ವಿನ್ಯಾಸವನ್ನು ಕಪ್ಪು ಬಣ್ಣದಿಂದ ರಚಿಸಿ ಅದರ ಹಿಂದೆ ಹಲವು ರಾಜ ವೈಭವದ ವಿನ್ಯಾಸಗಳನ್ನು, ಬಟ್ಟೆ ಪರದೆಗಳನ್ನು ಕೆಂಪು ಮತ್ತು ಹಳದಿ ಬಣ್ಣಗಳಲ್ಲಿ ರಚಿಸಲಾಗಿದೆ. ಶಿವನ ಮೇಲಿನ ಬಲಗೈ ಎರಡು ಬೆರಳುಗಳನ್ನು ಮೇಲೆ ಮಾಡಿ ಢಮರುಗವನ್ನು ಹಿಡಿದಿದ್ದು, ಬಲ ಮೇಲ್‌ಗೈಯಲ್ಲಿ ಉರಿಯುವ ಅಗ್ನಿಜ್ವಾಲೆಯನ್ನು ಹಿಡಿಸಲಾಗಿದೆ. ಕೆಳ ಕೈಗಳನ್ನು, ಎಡಗಾಲನ್ನು ಮೇಲೆತ್ತಿ ನೃತ್ಯ ಮಾಡುವಂತೆ ಚಿತ್ರವಿದ್ದು, ಅದಕ್ಕೆ ಸಮಾನಾಂತರವಾಗಿ ಕೈಗಳನ್ನು ಇರಿಸಲಾಗಿದೆ. ಮೊಣಕಾಲಿನವರೆಗೆ ಕಾಸಿನ ಸರದಂತೆ ಹಾರವೊಂದನ್ನು ದುಂಡಗೆ ಜೋತುಬಿಡಲಾಗಿದೆ. ಕೆಂಪು ಬಣ್ಣದ ಶೈಲ್ಯಯನ್ನು ಹೆಗಲ ಮೇಲೆ ಇಳಿಬಿಡಲಾಗಿದೆ. ಕಾಲುಗಳ ಕೆಳಗೆ ರಾಕ್ಷಸನ ಚಿತ್ರವಿದ್ದು, ನಟರಾಜ ಅವನನ್ನು ತುಳಿಯುತ್ತಾ ನೃತ್ಯ ಮಾಡುತ್ತಿದ್ದಾನೆಂದು ಭಾಸವಾಗುತ್ತದೆ. ಎಡಬದಿಯಲ್ಲಿ ಅದೇ ಕೆಂಪು ಸೀರೆಯೊಂದಿಗೆ ಹಸಿರು ಮೈಬಣ್ಣವನ್ನು ಹೊಂದಿದ ಪಾರ್ವತಿ ನಟರಾಜನ ಕಡೆಗೆ ಮುಖ ಮಾಡಿ ನಿಂತಂತೆ ಚಿತ್ರಿಸಲಾಗಿದೆ. ಪಾರ್ವತಿಗೆ ಕೊರಳಲ್ಲಿ ಆಭರಣ, ಕಿರೀಟ ವಿನ್ಯಾಸ, ನಡುಪಟ್ಟಿ ಮತ್ತು ತೋಳುಬಂದಿಗಳನ್ನು ಹಾಕಲಾಗಿದೆ. ಬಲಬದಿಯಲ್ಲಿ ನಂದಿಯು ಮೃದಂಗವನ್ನು ಬಾರಿಸುತ್ತಿರುವಂತಿದೆ. ಹಳದಿ ಬಣ್ಣದ ಧೋತ್ರವನ್ನು ಉಡಿಸಿ, ಕಿರೀಟವನ್ನು ತೊಡಿಸಿ, ಆಭರಣದೊಂದಿಗೆ ಅಲಂಕರಿಸಲಾಗಿದೆ. ಒಟ್ಟು ಚಿತ್ರವು ಹೆಚ್ಚು ಕೆಂಪು ಬಣ್ಣವನ್ನು ಹೊಂದಿದ್ದು, ಅಲ್ಲಲ್ಲಿ ತಿಳಿ ಹಸಿರು, ಹಳದಿ, ತೆಳು ನೀಲಿಗಳಿಂದ ವರ್ಣಸಂಯೋಜನೆ ಮಾಡಲಾಗಿದೆ.

**೫. ಗಣೇಶ**

ಬಾಗಲಕೋಟೆಯ ಎಸ್.ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹಗೊಂಡ ಗಣೇಶನ ಚಿತ್ರ ತೆಳು ನೀಲಿ ಬಣ್ಣದ ಹಿನ್ನೆಲೆ ವಿನ್ಯಾಸವನ್ನು ಹೊಂದಿದೆ. ಮೇಲಿನಿಂದ ವರ್ಣಿಸುತ್ತ ಬರುವುದಾದರೆ ಪ್ರಭಾವಳಿಯ ಮೇಲೆ ಛತ್ರಿ ಆಕಾರದ ವಿನ್ಯಾಸವಿದ್ದು ಅದನ್ನು ಕಪ್ಪು ಬಣ್ಣದಲ್ಲಿ ರಚಿಸಿ, ಕೆಂಪು ಗೆರೆಗಳಿಂದ ವಿನ್ಯಾಸಗೊಳಿಸಲಾಗಿದೆ. ಕಪ್ಪು ಬಣ್ಣದ ಎದುರು, ಬದುರು ಭಗವಾ ಧ್ವಜವನ್ನು ಕಪ್ಪು ಬಣ್ಣದಲ್ಲಿ ರಚಿಸಿ ಅದಕ್ಕೂ ಕೆಂಪು ಹೊರರೇಖೆಗಳನ್ನು ರಚಿಸಲಾಗಿದೆ. ಗಣಪತಿಯ ಹಿಂದೆ ವರ್ತುಲಾಕಾರದ ಪ್ರಭಾವಳಿ ಇದ್ದು, ಕೆಂಪು ಮತ್ತು ಕಪ್ಪು ಬಣ್ಣಗಳಿಂದ ಕಮಾನಿನಂತೆ ವಿನ್ಯಾಸಗೊಳಿಸಲಾಗಿದೆ.

ಸಾಮಾನ್ಯವಾಗಿ ಗಣೇಶನ ಚಿತ್ರ ದೊಡ್ಡದಿದ್ದು, ಚಿಕ್ಕದಾದ ಇಲಿಯ ಮೇಲೆ ಕುಳಿತಿರುವಂತಿರುವ ಚಿತ್ರಗಳೇ ಹೆಚ್ಚಾಗಿರುವ ಸಂದರ್ಭದಲ್ಲಿ ಇಲ್ಲಿ ಇಲಿಯನ್ನು ದೊಡ್ಡದಾಗಿ ಅಡ್ಡಲಾಗಿ ನಿರ್ಮಿಸಿ ಅದರ ಮೇಲೆ ಗಣೇಶ ವಿರಾಜಮಾನವಾದ ಎದುರು ಚಿತ್ರ ಇದಾಗಿದೆ. ಕೊರಳಲ್ಲಿ ಆಭರಣಗಳು ವಿಶಿಷ್ಟವಾದ ಕಿರೀಟ, ಹಣೆಯ ಮೇಲೆ ನಾಮ, ಬಂಗಾರ ಬಣ್ಣದ ಶೆಲ್ಯ ಅಲ್ಲದೆ ಕೆಳ ಎರಡೂ ಕೈಗಳಿಂದ ಆಚೆ, ಈಚೆ ರಿದ್ಧಿ, ಸಿದ್ಧಿಯರನ್ನು ಇಲಿಯ ಮೇಲೆ ತನ್ನ ತೊಡೆಯ ಪಕ್ಕಕ್ಕೆ ಕುಳ್ಳರಿಸಿಕೊಂಡ ವಿಶೇಷವಾದ ಚಿತ್ರ ಇದಾಗಿದೆ. ಇಲಿಯನ್ನು ನಂದಿಯಂತೆ ಅಲಂಕೃತಗೊಳಿಸಲಾಗಿದೆ. ಇಲಿಯ ಹೊಟ್ಟೆಯ ಕೆಳಗೆ ಗಂಟೆಯೊಂದನ್ನು ಜೋತು ಬಿಡಲಾಗಿದೆ. ಇಲಿಯ ಹಿಂಗಾಲು ಮತ್ತು ಮುಂಗಾಲು ಬಳಿ ಚಿಕ್ಕದಾಗಿ ಇಬ್ಬರು ಗಣಂಗಳನ್ನು ರಚಿಸಲಾಗಿದೆ. ಅಂತಿಮವಾಗಿ ಇಲಿಯ ನಾಲ್ಕೂ ಕಾಲುಗಳನ್ನು ಕಪ್ಪು ಮತ್ತು ಕೆಂಪು ಮಿಶ್ರಿತ ಗದ್ದಿಗೆಯ ಮೇಲೆ ನಿಲ್ಲಿಸಲಾಗಿದೆ.

**೬. ಶ್ವೇತವರ್ಣ ಗಣಪತಿ**

ಬಾಗಲಕೋಟೆಯ ಎಸ್.ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹಗೊಂಡ ಗಣೇಶನ ಚಿತ್ರ ತೆಳು ಕೆಂಪು ಬಣ್ಣದ ಹಿನ್ನೆಲೆ ವಿನ್ಯಾಸವನ್ನು ಹೊಂದಿದೆ. ಮೇಲಿನಿಂದ ವರ್ಣಿಸುತ್ತ ಬರುವುದಾದರೆ ಪ್ರಭಾವಳಿಯ ಮೇಲೆ ಛತ್ರಿ ಆಕಾರದ ವಿನ್ಯಾಸವಿದ್ದು, ಕಪ್ಪು ಬಣ್ಣದಲ್ಲಿ ರಚಿಸಿ, ಕೆಂಪು ಗೆರೆಗಳಿಂದ ವಿನ್ಯಾಸಗೊಳಿಸಲಾಗಿದೆ. ಕೇಸರಿ ಬಣ್ಣದ ಎದುರು, ಬದುರು ಭಗವಾ ಧ್ವಜವನ್ನು ಕೇಸರಿ ಬಣ್ಣದಲ್ಲಿ ರಚಿಸಿ, ಅದಕ್ಕೂ ತೆಳು ನೀಲಿ ಹೊರರೇಖೆಗಳನ್ನು ರಚಿಸಲಾಗಿದೆ. ಗಣಪತಿಯ ಹಿಂದೆ ವರ್ತುಲಾಕಾರದ ಪ್ರಭಾವಳಿ ಇದ್ದು, ತೆಳು ಹಸಿರು ಮತ್ತು ಬಿಳಿಯ ಬಣ್ಣಗಳಿಂದ ಕಮಾನಿನಂತೆ ವಿನ್ಯಾಸಗೊಳಿಸಲಾಗಿದೆ. ಇಲ್ಲಿಯೂ ಇಲಿಯನ್ನು ತೆಳು ನೀಲಿ ಬಣ್ಣದಲ್ಲಿ ದೊಡ್ಡದಾಗಿ ಅಡ್ಡಲಾಗಿ ನಿರ್ಮಿಸಿ ಮುಂದಿನ ಬಲಗಾಲನ್ನು ಮೇಲೆತ್ತಿಸಿ ಊರ್ಧ್ವಮುಖವಾಗಿ ಚಿತ್ರಿಸಿ, ಅದರ ಮೇಲೆ ಸಿಂಹಾಸನದಲ್ಲಿ ಗಣೇಶ ವಿರಾಜಮಾನವಾಗಿರುವಂತೆ ಕಾಲನ್ನು ಇಲಿಯ ಮೇಲೆ ಇಡಲಾಗಿದೆ. ಗಣೇಶನ ಮೈಬಣ್ಣ ಬಿಳಿಯದಾಗಿದ್ದು, ಕೊರಳಲ್ಲಿ ಆಭರಣಗಳು ವಿಶಿಷ್ಟವಾದ ಕಿರೀಟ, ಹಣೆಯ ಮೇಲೆ ನಾಮ, ತೆಳು ನೀಲಿ, ಕೇಸರಿ ಮತ್ತು ಬಿಳಿಯ ಬಣ್ಣದ ಹೂವುಗಳ ಅಲಂಕೃತ ಶೆಲ್ಯ ಅಲ್ಲದೆ ಕೆಳ ಎರಡೂ ಕೈಗಳಿಂದ ಆಚೆ, ಈಚೆ ಹಿಂದಿನ ಚಿತ್ರಕ್ಕಿಂತಾ ದೊಡ್ಡದಾಗಿ ಮತ್ತು ಸ್ಪಷ್ಟವಾಗಿ ರಿದ್ಧಿ, ಸಿದ್ಧಿಯರನ್ನು ಸಿಂಹಾಸನದ ಮೇಲೆ ತನ್ನ ತೊಡೆಯ ಪಕ್ಕಕ್ಕೆ ಕುಳ್ಳರಿಸಿಕೊಂಡ ಚಿತ್ರ ಇದಾಗಿದೆ. ಇಲಿಯ ವಿನ್ಯಾಸವನ್ನು ನಂದಿಯಂತೆ ಅಲಂಕೃತಗೊಳಿಸಲಾಗಿದೆ. ಇಲಿಯ ಹಿಂಗಾಲು ಮತ್ತು ಮುಂಗಾಲು ಬಳಿ ಚಿಕ್ಕದಾಗಿ ಇಬ್ಬರು ಬಿಳಿಯ ಬಣ್ಣದ ಗಣಂಗಳನ್ನು ರಚಿಸಲಾಗಿದೆ. ಅವರಲ್ಲಿ ಬಲಬದಿಯವನಿಗೆ ಹಸಿರು ನಡು ಬಟ್ಟೆಯನ್ನು, ಎಡಬದಿಯವನಿಗೆ ಕೆಂಪು ನಡುಬಟ್ಟೆಯನ್ನು ಚಿತ್ರಿಸಲಾಗಿದೆ. ತಲೆ, ಕೈ. ರಟ್ಟೆ ಮತ್ತು ಕೊರಳುಗಳಲ್ಲಿ ರುದ್ರಾಕ್ಷಿಯನ್ನು ರಚಿಸಲಾಗಿದೆ.

**೭. ಬೆಣ್ಣೆ ತಿನ್ನುವ ಕೃಷ್ಣ**

ಅಮೀನಗಡದ ಶೀಲವಂತಪ್ಪ ಗರಡಿಯವರ ಮನೆಯಲ್ಲಿ ಸಂಗ್ರಹಿತ ತೆಳುನೀಲಿ ಬಣ್ಣದ ಕೃಷ್ಣನ ಚಿತ್ರ ಇದಾಗಿದ್ದು, ಎಡಗೈಯಲ್ಲಿ ಬೆಣ್ಣೆ ಮಡಕೆಯನ್ನು ಹಿಡಿದುಕೊಂಡು ಬಲಗೈಯಿಂದ ದುಂಡನೆಯ

ಬೆಣ್ಣೆಯನ್ನು ತಿನ್ನುತ್ತಿರುವಂತಿದೆ. ಬಾಲಕ ಕೃಷ್ಣ ಒಬ್ಬನೇ ಕತ್ತಲೆಯ ಕೋಣೆಯಲ್ಲಿ ಕುಳಿತು ಬೆಣ್ಣೆ ತಿನ್ನುವ ಚಿತ್ರ ಇದಾಗಿದೆ. ಕೃಷ್ಣನಿಗೆ ಬಂಗಾರದ ಆಭರಣಗಳನ್ನು ಕೊರಳು, ರಟ್ಟೆ ಮತ್ತು ಕೈಗಳಲ್ಲಿ ಹಾಕಲಾಗಿದೆ. ಕಾಲಿಗೆ ತೋಡೆ ಧರಿಸಿ ಸಿಂಹಾಸನದ ಮೇಲೆ ಕುಳಿತಿದ್ದಾನೆ. ಬದಿಯಲ್ಲಿ ಬಟ್ಟೆಯ ಅಲಂಕೃತ ಪರದೆಯನ್ನು ಬಿಡಲಾಗಿದೆ. ಕೆಂಪು ಬಣ್ಣದ ಪರದೆಗೆ ಹಳದಿ ಬಣ್ಣದ ದಡಿಯನ್ನು ರಚಿಸಲಾಗಿದೆ. ಇದು ಬೆಣ್ಣೆ ಗಡಿಗಿಗೆ ಸಮಾನಾಂತರ ಬಣ್ಣವಾಗಿದ್ದು, ಸಂಯೋಜನೆ ಪ್ರಬುದ್ಧವಾಗಿ ಎದ್ದು ಕಾಣುತ್ತದೆ. ಒಟ್ಟು ಓರೆ ಕಳ್ಳ ನೋಟದ ಕೃಷ್ಣ ಬೆಣ್ಣೆ ತಿನ್ನುವ ಚಿತ್ರ ಇದಾಗಿದೆ.

### ೮. ಯಶೋಧೆ ಮತ್ತು ಬಾಲಕೃಷ್ಣ

ಅಮೀನಗಡದ ಶೀಲವಂತಪ್ಪ ಗರಡಿ ಅವರ ಮನೆಯಲ್ಲಿ ಸಂಗ್ರಹಿತವಾಗಿರುವ ಚಿತ್ರದಲ್ಲಿ ಬೆಣ್ಣೆ ತಿಂದ ನಂತರ ತಾಯಿ ಯಶೋಧೆ ಕೃಷ್ಣನನ್ನು ಕಂಭಕ್ಕೆ ಕಟ್ಟಿ ಕೋಲಿನಿಂದ ಶಿಕ್ಷಿಸುತ್ತಿರುವ ಚಿತ್ರ ಇದಾಗಿದೆ. ಯಶೋಧೆಯು ಎರಡೂ ಕೈಗಳನ್ನು ಮೇಲೆತ್ತಿ ಕೈಯಲ್ಲಿ ಚಿಕ್ಕ ಕೋಲೊಂದನ್ನು ಹಿಡಿದಂತಿದೆ. ಯಶೋಧೆಗೆ ವೇಷಭೂಷಣ ಅಲಂಕೃತವಾಗಿದ್ದು, ಕೆಂಪು, ಹಸಿರು ಮತ್ತು ಹಳದಿ ಪಟ್ಟೆ ಪಟ್ಟೆ ಸೀರೆಯನ್ನು ತೊಡಿಸಲಾಗಿದೆ. ಅದೇ ಬಣ್ಣದ ರವಿಕೆಯನ್ನು ತೊಡಿಸಲಾಗಿದ್ದು, ದೊಡ್ಡ ಪದಕವುಳ್ಳ ಕೊರಳ ಹಾರ, ಬಳೆತೊಟ್ಟು, ಮೊಣಕಾಲೂರಿ ಕುಳಿತ ಚಿತ್ರ ಇದಾಗಿದೆ. ತಪ್ಪು ಮಾಡಿದ ಕೃಷ್ಣ ಕೈ ಕಟ್ಟಿಕೊಂಡು ನಿಂತ ತೆಳುನೀಲಿ ಬಣ್ಣ ಕೃಷ್ಣನ ಇಡೀ ಮೈಯನ್ನು ಅಲಂಕೃತಗೊಳಿಸಲಾಗಿದೆ. ಅಲ್ಲಲ್ಲಿ ಪುಟ್ಟಪುಟ್ಟ ಆಭರಣಗಳನ್ನು ಹಾಕಿ ಹಿಂದೆ ಶೆಲ್ಯವೊಂದನ್ನು ಜೋತುಬಿಡಲಾಗಿದೆ. ಒಟ್ಟು ಕೆಂಪು ಬಣ್ಣದ ಹಿನ್ನೆಲೆ ವಿನ್ಯಾಸದಲ್ಲಿ ರಚಿತಗೊಂಡಿರುವ ಕೃಷ್ಣನ ಚಿತ್ರದ ಆಚೆ, ಈಚೆ ಕಂಭಗಳಿದ್ದು, ಅರಮನೆಯಲ್ಲಿನಂತೆ ಬಟ್ಟೆ ಪರದೆಗಳನ್ನು ನೇತು ಬಿಡಲಾಗಿದೆ.

### ೯. ಸಖಿಯರೊಂದಿಗೆ ಬಾಲಕೃಷ್ಣ

ಅಮೀನಗಡದ ಶೀಲವಂತಪ್ಪ ಗರಡಿಯವರ ಮನೆಯಲ್ಲಿ ಸಂಗ್ರಹಿತಗೊಂಡ ತೆಳು ನೀಲಿ ಬಣ್ಣದ ಕೃಷ್ಣನ ಚಿತ್ರ ಇದಾಗಿದ್ದು, ಎಡಗೈಯಲ್ಲಿ ಬೆಣ್ಣೆ ಮಡಕೆಯನ್ನು ಹಿಡಿದುಕೊಂಡು ಬಲಗೈಯಿಂದ ದುಂಡನೆಯ ಬೆಣ್ಣೆಯನ್ನು ತಿನ್ನುತ್ತಿರುವ ಕೃಷ್ಣನ ಚಿತ್ರ ಬಾಲಕನಿದ್ದಾಗ ಕೃಷ್ಣನ ಅತೀ ಮಹತ್ವದ ಘಟ್ಟ ಬೆಣ್ಣೆ ಕದಿಯುವ ಆಚೆ, ಈಚೆ ಇಬ್ಬರು ಸಖ, ಸಖಿಯರಿದ್ದು, ಹಿನ್ನೆಲೆಯಾಗಿ ಚಿತ್ರಿಸಲಾಗದೆ ಸುಂದರವಾದ ಕಟ್ಟೆಯ ಮೇಲೆ ಕುಳಿತು ಬೆಣ್ಣೆ ತಿನ್ನುವ ಚಿತ್ರ ಇದಾಗಿದೆ. ಕೃಷ್ಣನಿಗೆ ಬಂಗಾರದ ಅಲಂಕೃತ ಆಭರಣಗಳನ್ನು ಕೊರಳು, ರಟ್ಟೆ ಮತ್ತು ಕೈಗಳಲ್ಲಿ ಹಾಕಲಾಗಿದೆ. ಕಾಲಿಗೆ ತೋಡೆ ಧರಿಸಿ ಸಿಂಹಾಸನದ ಮೇಲೆ ಕುಳಿತಿದ್ದಾನೆ. ಬದಿಯಲ್ಲಿ ಬಟ್ಟೆಯ ಅಲಂಕೃತ ಪರದೆಯನ್ನು ಇಳಿ ಬಿಡಲಾಗಿದೆ. ಕೆಂಪು ಬಣ್ಣದ ಪರದೆಗೆ ಹಳದಿ ಬಣ್ಣದ ದಡಿಯನ್ನು ರಚಿಸಲಾಗಿದೆ. ತೊಡೆಗೆ ಕೆಂಪು ಬಣ್ಣದ ಬಟ್ಟೆಯನ್ನು ಹೊದಿಸಲಾಗಿದೆ. ಹಿನ್ನೆಲೆಗೆ ತೆಳುಹಸಿರು ಮತ್ತು ತೆಳುಗೆಂಪು ಬಣ್ಣಗಳನ್ನು ಬಳಸಲಾಗಿದೆ. ಇದು ಬೆಣ್ಣೆ ಗಡಿಗಿಗೆ ಸಮಾನಾಂತರ ಬಣ್ಣವಾಗಿದ್ದು, ಸಂಯೋಜನೆ ಪ್ರಬುದ್ಧವಾಗಿ ಎದ್ದು ಕಾಣುತ್ತದೆ. ಹತ್ತಿರದಲ್ಲಿದ್ದರೂ ಅವರಿಗೆ ಗೊತ್ತಾಗದಂತೆ ಬೆಣ್ಣೆ ತಿನ್ನುವ ಓರೆ ನೋಟದ ಕೃಷ್ಣನ ಚಿತ್ರ ಇದಾಗಿದೆ.

### ೧೦. ಯಶೋಧೆ-ಕೃಷ್ಣ

ಅಮೀನಗಡದ ಶೀಲವಂತಪ್ಪ ಗರಡಿ ಅವರ ಮನೆಯಲ್ಲಿ ಸಂಗ್ರಹಿತವಾಗಿರುವ ಬಾಲಕೃಷ್ಣನನ್ನು ಯಶೋಧೆ ಎತ್ತಿಕೊಂಡಿರುವ ಚಿತ್ರ ಇದಾಗಿದೆ. ತೆಳು ನೀಲಿ ಬಣ್ಣದ ಹಿನ್ನೆಲೆ ವಿನ್ಯಾಸ ಅರಮನೆಯ ಕಂಬ ಮತ್ತು ಬಟ್ಟೆಯ ನೆರೆಗೆಗಳೊಂದಿಗೆ ಮುಂದೆ ಅಲಂಕೃತವಾಗಿರುವ ಕಡುಗೆಂಪು ಬಣ್ಣದ ಸೀರೆಯನ್ನುಟ್ಟುಕೊಂಡ ಯಶೋಧೆ ಬಲಗಾಲನ್ನು ಮಡಚಿಕೊಂಡು ಕೃಷ್ಣನ ಮುಖಕ್ಕೆ ಮುಖ ಹಚ್ಚಿಕೊಂಡು ಕುಳಿತಿದ್ದಾಳೆ. ಯಶೋಧೆಯ ತಲೆಯ ಕಪ್ಪು ಕೂದಲುಗಳಲ್ಲಿ ಬಂಗಾರದ ಆಭರಣಗಳನ್ನು ಸಿಕ್ಕಿಸಲಾಗಿದೆ. ಅದರಂತೆ ಕೃಷ್ಣನಿಗೂ ಜಡೆಯ ಜೊತೆ ಆಭರಣಗಳನ್ನು ಹಾಕಲಾಗಿದೆ. ಬೆನ್ನ ಹಿಂದೆ ಕೆಂಪು ಶೆಲ್ಯೆಯನ್ನು ಜೋತು ಬಿಡಲಾಗಿದೆ. ಇಬ್ಬರ ಮೈ ಬಣ್ಣವೂ ತೆಳು ಕೆಂಪು ಬಣ್ಣದಾಗಿದ್ದು, ಕೃಷ್ಣ ತನ್ನ ಎಡಗಾಲನ್ನು ಎತ್ತಿ ತಾಯಿಯ ಮೇಲೆ ಇಟ್ಟಿರುವ ಹಾಗೂ ಬಲಗಾಲನ್ನು ಹಿಂದೆ ಚಾಚಿರುವ ವಿನ್ಯಾಸ ಇದಾಗಿದೆ. ಕೃಷ್ಣ ತನ್ನ ಬಲಗೈಯನ್ನು ತಾಯಿಯ ಹೆಗಲ ಮೇಲೆ ಹಾಕಿ, ಎಡಗೈಯಿಂದ ಬಲಗೈಯನ್ನು ಹಿಡಿಯುವಂತೆ ತಾಯಿಯ ಕುತ್ತಿಗೆಯನ್ನು ಬಳಸಿಕೊಂಡಿದ್ದಾನೆ. ಒಟ್ಟು ಚಿತ್ರವು ಹೆಚ್ಚು ಬಣ್ಣಗಳಿಲ್ಲದ ಅಲಂಕೃತ ಸಂಯೋಜನೆಯಾಗಿದೆ.

### ೧೧. ಯಶೋಧೆ-ಕೃಷ್ಣ

ಬಾಗಲಕೋಟೆಯ ಎಸ್.ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ಬಾಲಕೃಷ್ಣನನ್ನು ಯಶೋಧೆ ಎತ್ತಿಕೊಂಡಿರುವ ಚಿತ್ರ ಇದಾಗಿದೆ. ತೆಳು ನೀಲಿ ಬಣ್ಣದ ಹಿನ್ನೆಲೆ ವಿನ್ಯಾಸ ಅರಮನೆಯ ಕಂಭ ಮತ್ತು ಬಟ್ಟೆಯ ನೆರೆಗೆಗಳೊಂದಿಗೆ ಮುಂದೆ ಅಲಂಕೃತವಾಗಿರುವ ಕಡುಗೆಂಪು ಬಣ್ಣದ ಸೀರೆಯನ್ನುಟ್ಟುಕೊಂಡ ಯಶೋಧೆ ಎಡಗಾಲನ್ನು ಮಡಚಿಕೊಂಡು ಕುಳಿತು ಕೃಷ್ಣನನ್ನು ತೊಡೆಯ ಮೇಲೆ ಅಂಗಾತ ಮಲಗಿಸಿಕೊಂಡಿದ್ದಾಳೆ. ಯಶೋಧೆಯ ತಲೆಯ ಕಪ್ಪು ಕೂದಲುಗಳಲ್ಲಿ ಬಂಗಾರದ ಆಭರಣಗಳನ್ನು ಸಿಕ್ಕಿಸಲಾಗಿದೆ. ಅದರಂತೆ ಕೃಷ್ಣನಿಗೂ ಜಡೆಯ ಜೊತೆ ಆಭರಣಗಳನ್ನು ಹಾಕಲಾಗಿದೆ. ಬೆನ್ನ ಕೆಳಗೆ ಕೆಂಪು ಶೆಲ್ಯೆಯನ್ನು ಜೋತು ಬಿಡಲಾಗಿದೆ. ಇಬ್ಬರ ಮೈ ಬಣ್ಣವೂ ತೆಳು ಕೆಂಪು ಬಣ್ಣದಾಗಿದ್ದು, ಕೃಷ್ಣ ತನ್ನ ಬಲಗಾಲನ್ನು ತನ್ನ ಎಡಗಾಲು ಮೇಲೆ ಹಾಕಿ, ಎಡಗಾಲನ್ನು ಮುಂದಕ್ಕೆ ಚಾಚಿದ್ದಾನೆ. ಬಲಗೈಯನ್ನು ತಾಯಿಯ ಗದ್ದಕ್ಕೆ ಹಿಡಿದು, ಎಡಗೈಯಲ್ಲಿ ಹೂವು ಹಿಡಿದು ಮಲಗಿದ್ದಾನೆ. ಯಶೋಧೆಯ ಮುಖದ ಹತ್ತಿರ ಹಾರಿಬಂದ ಹಂಸವೊಂದು ಆಕಾಶದಲ್ಲಿ ಕಂಡುಬರುತ್ತದೆ. ಬಿಳಿಯ ಬಣ್ಣದ ವಿನ್ಯಾಸ ಪಕ್ಷಿಗಿದೆ. ಒಟ್ಟು ಚಿತ್ರವು ನೀಲಿ, ಕೆಂಪು, ಕಪ್ಪು ಮತ್ತು ತೆಳುಗೆಂಪು ಬಣ್ಣದ ವಿನ್ಯಾಸವಾಗಿದೆ.

### ೧೨. ಯಶೋಧೆ-ಕೃಷ್ಣ

ಗುಳೇದಗುಡ್ಡದ ಬನ್ನಿಲಾಲ್ ಕಾಬ್ರಾ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಬಾಲಕೃಷ್ಣನನ್ನು ಯಶೋಧೆ ಎತ್ತಿಕೊಂಡಿದ್ದಾಳೆ. ತೆಳುನೀಲಿ ಬಣ್ಣದ ಹಿನ್ನೆಲೆ ವಿನ್ಯಾಸ ಅರಮನೆಯ ಕಂಭ ಮತ್ತು ಬಟ್ಟೆಯ ನೆರೆಗೆಗಳೊಂದಿಗೆ ಮುಂದೆ ಅಲಂಕೃತವಾಗಿರುವ ಕಡುಗೆಂಪು ಬಣ್ಣದ ಸೀರೆಯನ್ನುಟ್ಟುಕೊಂಡ ಯಶೋಧೆ ಎಡಗಾಲನ್ನು ಮಡಚಿಕೊಂಡು ಕುಳಿತು ಕೃಷ್ಣನನ್ನು ತೊಡೆಯ ಮೇಲೆ

ನಿಲ್ಲಿಸಿಕೊಂಡಿದ್ದಾಳೆ. ಕೃಷ್ಣ ತನ್ನ ಬಲಗೈಯನ್ನು ತಾಯಿಯ ಕುತ್ತಿಗೆಗೆ ಬಳಸಿ, ಬಲಗಾಲನ್ನು ಮೇಲೆತ್ತಿ, ಎಡಗಾಲನ್ನು ಹಿಂದೆ ಚಾಚಿ ನಿಂತಿದ್ದಾನೆ. ಹಿಂದಿನ ಎರಡೂ ಚಿತ್ರಗಳಲ್ಲಿ ತಾಯಿ ಯಶೋಧೆಯ ಚಿತ್ರ ಅಪೂರ್ಣವಾಗಿದ್ದು ಇಲ್ಲಿ ತೆಳುಗೆಂಪು ಬಣ್ಣದ ಸೀರೆಯಲ್ಲಿ ಕಪ್ಪು ಬಣ್ಣದ ಚುಕ್ಕೆಗಳನ್ನಿಟ್ಟು ಅಲಂಕರಿಸಿದ, ಸಂಪೂರ್ಣವಾಗಿ ಕಾಲುಮೇಲೆ ಕಾಲಿಟ್ಟುಕೊಂಡು ಕುಳಿತಿರುವ ಚಿತ್ರ ಇದಾಗಿದೆ. ಚಿತ್ರದ ಸುತ್ತಲೂ ಕಮಾನಿನಂತಹ ಹೂವು ಅಲಂಕೃತ ಫ್ರೇಮ್‌ನಲ್ಲಿ ಚಿತ್ರ ಕಂಗೊಳಿಸುತ್ತದೆ.

**೧೩. ಕಾಳಿಂಗಮರ್ಧನ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿಯವರ ಮನೆಯಲ್ಲಿರುವ ಕಾಳಿಂಗಮರ್ಧನ ಚಿತ್ರವು ಸಮುದ್ರದ ವಿನ್ಯಾಸಕ್ಕಾಗಿ ನೀಲಿ ಬಣ್ಣದ ಹಿನ್ನೆಲೆಯಲ್ಲಿದೆ. ಕೃಷ್ಣನು ಕಾಳಿಂಗನ ಹೆಡೆಯ ಮೇಲೆ ಬಲಗಾಲನ್ನು ಊರಿ, ಕೆಳಗೆ ಕುತ್ತಿಗೆಯ ಮೇಲೆ ಎಡಗಾಲನ್ನು ಊರಿ, ಎಡಗೈಯಲ್ಲಿ ಬಾಲವನ್ನು ಎತ್ತಿ, ಕುಣಿಯುತ್ತಿರುವ ಚಿತ್ರ ಇದಾಗಿದೆ. ಚಿತ್ರದಲ್ಲಿ ಕೃಷ್ಣನಿಗೆ ತೆಳುನೀಲಿ ಬಣ್ಣದ ಬದಲು ಕೆಂಪು ವರ್ಣದ ಮೈಬಣ್ಣವನ್ನು ಬಳಸಿದ್ದು ವಿಶೇಷವಾಗಿದೆ. ಬೆತ್ತಲೆಯಾದ ಕೃಷ್ಣ ಅಲ್ಲಲ್ಲಿ ಚಿಕ್ಕ ಚಿಕ್ಕ ಆಭರಣಗಳನ್ನು ಹೊಂದಿದ್ದಾನೆ. ತೀರಾ ಹಿನ್ನೆಲೆಯಾಗಿ ಹಸಿರು ಎಲೆಗಳುಳ್ಳ ಮರವೊಂದನ್ನು ಚಿತ್ರಿಸಲಾಗಿದ್ದು, ಋಷಿಯೊಬ್ಬ ಕೃಷ್ಣನ ಬಲಬದಿಯಲ್ಲಿ ನಮಸ್ಕರಿಸುತ್ತಾ ನಿಂತಿರುವುದು ಕಂಡುಬರುತ್ತದೆ. ಕಾಳಿಂಗನ ಮುಖದ ಮೇಲ್ಭಾಗದ ಸುತ್ತಲೂ ಬಿಳಿಯ ಬಣ್ಣದ ನೀರನ್ನು ಸೃಷ್ಟಿಸಿ ಅರ್ಧ ಚಂದ್ರಾಕಾರದ ಸರೋವರದ ಕಟ್ಟೆಯಂತೆ ಚೌಕಟ್ಟು ಹಾಕಲಾಗಿದೆ. ಬಿಳಿಯ ಬಣ್ಣದ ನೀರಿನೊಳಗೆ ಜಲಚರಗಳನ್ನು ಸಾಂಕೇತಿಕವಾಗಿ ಸೃಷ್ಟಿಸಲಾಗಿದೆ.

**೧೪. ಬೆಣ್ಣೆಕೃಷ್ಣ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿಯವರ ಮನೆಯಲ್ಲಿರುವ ಕೆಂಪು ಮೈಬಣ್ಣವನ್ನು ಹೊಂದಿದ ಕೃಷ್ಣ ಕಪ್ಪು ಬಣ್ಣದ ಅಂಗಿಯೊಂದನ್ನು ಹಾಕಿಕೊಂಡು ಎಡಗೈಯಲ್ಲಿ ಬೆಣ್ಣೆ ಮಡಕೆಯನ್ನು ಹಿಡಿದುಕೊಂಡು ಬಲಗೈಯಿಂದ ದುಂಡನೆಯ ಬೆಣ್ಣೆಯನ್ನು ತಿನ್ನುತ್ತಿರುವ ಚಿತ್ರ ಇದಾಗಿದೆ. ಒಬ್ಬನೇ ಕುಳಿತು ಬೆಣ್ಣೆ ತಿನ್ನುವ ಚಿತ್ರ ಇದಾಗಿದೆ. ಕೃಷ್ಣನಿಗೆ ಬಂಗಾರದ ಅಲಂಕೃತ ಆಭರಣಗಳನ್ನು ಕೊರಳು, ರಟ್ಟೆ ಮತ್ತು ಕೈಗಳಲ್ಲಿ ಹಾಕಲಾಗಿದೆ. ಕೊರಳಲ್ಲಿ ದೊಡ್ಡ ಹೂವಿನ ಹಾರವೊಂದು ಕಾಲವರೆಗೂ ಜೋತುಬಿಡಲಾಗಿದೆ. ಹಾಸಿಗೆಯ ದಿಂಬುಗಳ ಮಧ್ಯ ಕುಳಿತು ಬೆಣ್ಣೆ ತಿನ್ನುತ್ತಿರುವ ಚಿತ್ರ ಇದಾಗಿದೆ. ಕಾಲಿಗೆ ತೋಡೆ ಧರಿಸಿ, ಬದಿಯಲ್ಲಿ ಕಟ್ಟೆಯಂತಹ ಅಲಂಕೃತ ವಸ್ತುವೊಂದನ್ನು ಇಡಲಾಗಿದೆ.

**೧೫. ಗಾರುಡಿಗ ಕೃಷ್ಣ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿಯವರ ಮನೆಯಲ್ಲಿರುವ ತೆಳುಗೆಂಪು ಮೈಬಣ್ಣ ಹೊಂದಿದ ಗಾರುಡಿಗ ಕೃಷ್ಣನ ಚಿತ್ರ ಇದಾಗಿದೆ. ಅರಮನೆಯ ಕಂಭಗಳು ತೆಳು ನೀಲಿ ಬಣ್ಣದಿಂದ ಅಲಂಕೃತವಾಗಿದ್ದು, ನೀಲಿ ಬಣ್ಣದ ಬಟ್ಟೆ ನೀರಿಗೆಗಳನ್ನು ಪರದೆಗಳಂತೆ ಬಿಡಲಾಗಿದೆ. ದೂರದಲ್ಲಿ ನಿಂತ ಕೃಷ್ಣ ಕೊರಳಲ್ಲಿ ಹಾವನ್ನು ಹಾಕಿಕೊಂಡು ನಿಂತಿದ್ದಾನೆ. ಇನ್ನೂ ಮೂರು ಹಾವುಗಳು ಮುಂಭಾಗದಲ್ಲಿ ಹೆಡೆ ಎತ್ತಿ ನಿಂತಿವೆ.

ಚಿತ್ರದ ಎಡಬದಿಯಲ್ಲಿ ತುಂಬಾ ಸುಂದರವಾದ ಯುವತಿ ಪುಂಗಿಯನ್ನು ಊದುತ್ತಾ ಮೇಲ್ಮುಖವಾಗಿ ಹಾರಿ ನರ್ತಿಸುತ್ತಿರುವುದು ತುಂಬಾ ವಿಶೇಷವೆನಿಸುತ್ತದೆ. ಸಣ್ಣನೆಯ ನಡುವಿನ ನಂತರ ಅಗಲವಾದ ಲಂಗ ವಿನ್ಯಾಸ ಕೆಂಪು, ಹಸಿರು ಬಣ್ಣಗಳಿಂದ ಕೂಡಿದ್ದು, ಅಂಚು ಬಂಗಾರ ಬಣ್ಣದ್ದಾಗಿದೆ. ಕಪ್ಪು ರವಿಕೆ, ತಲೆಯ ಕೂದಲಿನಲ್ಲಿ ಬಂಗಾರದ ಆಭರಣವಿದೆ. ಜೋತು ಬಿದ್ದ ಜಡೆ, ಹಿಂದೆ ಚಾಚಿದ ಕಾಲು, ನೆಲದಿಂದ ಅಂತರವಾಗಿ ನಿಂತಂತೆ ಕಾಣುವ ಈ ಚಿತ್ರ ತುಂಬಾ ಆಕರ್ಷಕವಾದ ಸಂಯೋಜನೆಯಾಗಿದೆ.

### ೧೬. ರಾಮ ಪಟ್ಟಾಭಿಷೇಕ

ಗುಳೇದಗುಡ್ಡದ ಬಸವಪ್ರಭು ಗಂಗಾವತಿಯವರ ಮನೆಯಲ್ಲಿರುವ ಹಸಿರು ಮೈಬಣ್ಣವನ್ನು ಹೊಂದಿದ ರಾಮನ ಪಟ್ಟಾಧಿಕಾರ ಮಹೋತ್ಸವದ ಚಿತ್ರ ಸಡಗರ, ಸಂಭ್ರಮದಿಂದ ಹತ್ತಾರು ಆಕೃತಿಗಳನ್ನು ಹೊಂದಿದೆ. ಪ್ರಮುಖ ಸ್ಥಾನದಲ್ಲಿ ಹಸಿರು ಬಣ್ಣದ ಮೈಬಣ್ಣವನ್ನು ಹೊಂದಿದ ರಾಮ ಎಡಗಾಲನ್ನು ಮಡಚಿಕೊಂಡು, ಬಲಗಾಲನ್ನು ಕೆಳಗೆ ಬಿಟ್ಟು, ಸಿಂಹಾಸನದ ಮೇಲೆ ಕುಳಿತಿದ್ದು, ಎದೆಯ ತುಂಬೆಲ್ಲಾ ಬಂಗಾರದ ಆಭರಣಗಳನ್ನು ಚಿತ್ರಿಸಲಾಗಿದೆ. ಬಿಳಿಯ ಹೂವುಗಳ ದಪ್ಪನೆಯ ಮಾಲೆ ಹೆಗಲ ಮೇಲಿಂದ ಕಾಲು ಕೆಳಗಿನವರೆಗೆ ಅಲಂಕಾರವಾಗಿ ಇಳಿಬಿದ್ದಿದೆ. ಹಿನ್ನೆಲೆಯಾಗಿ ಅದೇ ಹಸಿರು ಮೈಬಣ್ಣವನ್ನು ಹೊಂದಿದ ಲಕ್ಷ್ಮಣ ಕುಳಿತಿದ್ದಾನೆ. ಎಡಬದಿಗೆ ಮುಖ ಮಾಡಿದ ಸೀತೆ ಆಭರಣ ಅಲಂಕೃತಳಾಗಿ ಕುಳಿತಿದ್ದಾಳೆ. ಬಂಗಾರ ಬಣ್ಣದ ಬಟ್ಟೆಯನ್ನು ಧರಿಸಿದ್ದಾಳೆ. ರಾಮ, ಲಕ್ಷ್ಮಣ, ಸೀತೆ ಮೂವರಿಗೂ ಉದ್ದನೆಯ ಅಲಂಕೃತ ಕಿರೀಟವನ್ನು ಹಾಕಲಾಗಿದೆ. ಎರಡೂ ಬದಿಗಳಲ್ಲಿ ಸೇವಕರು ಬಿಳಿ ಬಣ್ಣದ ಚಾಮರವನ್ನು ಬೀಸುತ್ತಿರುವಂತೆ ರಚಿಸಲಾಗಿದೆ. ಹನುಮಂತನ ಮೈಬಣ್ಣ ತೆಳುಹಸಿರು, ಕೆಂಪು ಮುಖ ಜನರ ಕಡೆಗೆ ನೋಡುತ್ತಾ, ಮಂಡೆಗಾಲೂರಿ ರಾಮನ ಮುಂದೆ ಕುಳಿತಿರುವಂತೆ ಚಿತ್ರಿಸಲಾಗಿದೆ. ಬಲಬದಿಗೆ ಆನೆ ಇದ್ದು, ಮೂರು ಜನ ಸೇವಕರು, ಸಾಮಂತರು ಕೈಮುಗಿದು ನಿಂತಂತೆ ಬಲಬದಿಯಲ್ಲೂ ಜನರು ಕೈಮುಗಿದು ನಿಂತಿದ್ದಾರೆ. ಸಿಂಹಾಸನದ ಹಿಂಬದಿಯಲ್ಲಿ ದೇವಸ್ಥಾನದ ಶಿಖರವಿದ್ದು, ಸಣ್ಣ ಸಣ್ಣ ಗುಮ್ಮಟಗಳನ್ನು ಹೊಂದಿದೆ. ಒಟ್ಟು ಚಿತ್ರವು ವರ್ಣ ಸಂಯೋಜನೆ ಶಿಸ್ತುಬದ್ಧವಾಗಿ ಕಾಣುತ್ತದೆ. ಆಕಾಶದಲ್ಲಿರುವ ಬಿಳಿ ಬಣ್ಣ, ಚಾಮರ, ಸಿಂಹಾಸನದ ಕೆಳಭಾಗ, ರಾಮನ ಹಾರ, ಆನೆ ಮತ್ತು ಕೆಳಗೆ ನಿಂತವರ ಮೈ ಬಣ್ಣಕ್ಕೆ ಸಮತೋಲನವಾಗಿ ರಚಿತಗೊಂಡಿದೆ.

### ೧೭. ರಾಮ ಪಟ್ಟಾಭಿಷೇಕ

ಅಮೀನಗಡದ ಶೀಲವಂತಪ್ಪ ಗರಡಿ ಅವರ ಮನೆಯಲ್ಲಿ ಸಂಗ್ರಹಿತವಾಗಿರುವ ಈ ಚಿತ್ರದಲ್ಲಿ ಹಸಿರು ಮೈಬಣ್ಣವನ್ನು ಹೊಂದಿದ ಮತ್ತು ಕೆಂಪು ಬಣ್ಣದ ಬಟ್ಟೆಯನ್ನು ಧರಿಸಿದ ರಾಮನ ಪಟ್ಟಾಧಿಕಾರ ಮಹೋತ್ಸವದ ಚಿತ್ರ ಸಡಗರ, ಸಂಭ್ರಮದ್ದಾಗಿದೆ. ಒಟ್ಟು ಇಪ್ಪತ್ತೇಳು ಆಕೃತಿಗಳನ್ನು ಹೊಂದಿದೆ. ಪ್ರಮುಖ ಸ್ಥಾನದಲ್ಲಿ ಹಸಿರು ಬಣ್ಣದ ರಾಮ ಎಡಗಾಲನ್ನು ಮಡಚಿಕೊಂಡು, ಬಲಗಾಲನ್ನು ಕೆಳಗೆ ಬಿಟ್ಟು, ಸಿಂಹಾಸನದ ಮೇಲೆ ಕುಳಿತಿದ್ದಾನೆ. ಎದೆಯ ತುಂಬೆಲ್ಲಾ ಬಂಗಾರದ ಆಭರಣಗಳನ್ನು ಚಿತ್ರಿಸಲಾಗಿದೆ. ಬಿಳಿಯ ಹೂವುಗಳ ಮಾಲೆಯ ಸರಗಳು ಮೂರ್ನಾಲ್ಕು ಕಡೆ ಹೆಗಲ ಮೇಲಿಂದ ಕಾಲು ಕೆಳಗಿನವರೆಗೆ ಅಲಂಕೃತವಾಗಿ ಇಳಿಬಿದ್ದಿದೆ.

ಹಿನ್ನೆಲೆಯಾಗಿ ಅದೇ ಹಸಿರು ಮೈಬಣ್ಣವನ್ನು ಹೊಂದಿದ ಲಕ್ಷ್ಮಣ ಕುಳಿತಿದ್ದಾನೆ. ಎಡಬದಿಯಲ್ಲಿ ಒಂದು ಬದಿಗೆ ಮುಖ ಮಾಡಿಕೊಂಡು ಆಭರಣಗಳ ಅಲಂಕೃತ ಸೀತೆ ಕುಳಿತಿದ್ದಾಳೆ. ಬಂಗಾರ ಬಣ್ಣದ ಬಟ್ಟೆಯನ್ನು ಧರಿಸಿದ್ದಾಳೆ. ರಾಮ, ಲಕ್ಷ್ಮಣ, ಸೀತೆ ಮೂವರಿಗೂ ಉದ್ದನೆಯ ಅಲಂಕೃತ ಕಿರೀಟವನ್ನು ಹಾಕಲಾಗಿದೆ. ಎರಡೂ ಬದಿಗಳಲ್ಲಿ ಸೇವಕರು ಬಿಳಿ ಬಣ್ಣದ ಚಾಮರವನ್ನು ಬೀಸುತ್ತಿರುವಂತೆ ರಚಿಸಲಾಗಿದೆ. ಹನುಮಂತನನ್ನು ಹಸಿರು ಮೈಬಣ್ಣದಿಂದ ಕೆಂಪು ಮುಖ ಮಾಡಿಕೊಂಡು ಜನರ ಕಡೆಗೆ ನೋಡುತ್ತಾ ಮಂಡೆಗಾಲೂರಿ ರಾಮನ ಮುಂದೆ ಕುಳಿತಿರುವಂತೆ ಚಿತ್ರಿಸಲಾಗಿದೆ. ಬಲಬದಿಗೆ ಆನೆ ಇದ್ದು, ಮೂರು ಜನ ಸೇವಕರು, ನೀಲಿ ಮುಖವುಳ್ಳ ಸಾಮಂತ ಕೈಮುಗಿದು ನಿಂತಿದ್ದು, ಬಲಬದಿಯಲ್ಲೂ ಕುದುರೆ ಇದ್ದು, ಅದರ ಮೇಲ್ಭಾಗದಲ್ಲಿ ಮೂರು ಜನರು ಕೈಮುಗಿದು ನಿಂತಿದ್ದಾರೆ. ಮತ್ತೆ ಅದರ ಮೇಲೆ ಮೂರು ಮೂರು ಜನರಂತೆ ಒಟ್ಟು ಒಂಭತ್ತು ಜನ ಬಲಬದಿಯಲ್ಲಿ ಕೈಮುಗಿದು ನಿಂತಿದ್ದಾರೆ. ಸಿಂಹಾಸನವು ಬಿಳಿಯ ಮುತ್ತುಗಳಿಂದ ಅಲಂಕೃತಗೊಂಡಿದ್ದು, ಹಿಂಬದಿಯಲ್ಲಿ ದೇವಸ್ಥಾನದ ಶಿಖರವಿದ್ದು, ಒಟ್ಟು ಚಿತ್ರದ ವರ್ಣ ಸಂಯೋಜನೆ ಅಂದವಾಗಿ ಕಾಣುತ್ತದೆ. ಆಕಾಶದಲ್ಲಿರುವ ಬಿಳಿ ಬಣ್ಣ, ಚಾಮರ, ಸಿಂಹಾಸನದ ಕೆಳಭಾಗ, ರಾಮನ ಹಾರ, ಆನೆ, ಕುದುರೆ ಮತ್ತು ಕೆಳಗೆ ನಿಂತವರ ಮೈ ಬಣ್ಣಕ್ಕೆ ಸಮತೋಲನವಾಗಿ ರಚಿತಗೊಂಡಿದೆ.

### ೧೮. ಶ್ರೀದೇವಿ, ಭೂದೇವಿ ಸಹಿತ ವೆಂಕಟೇಶ್ವರ

ಅಮೀನಗಡದ ಬಸವೇಶ್ವರ ದೇವಸ್ಥಾನದಲ್ಲಿ ಸಂಗ್ರಹಿತವಾಗಿರುವ ವೆಂಕಟೇಶ್ವರನ ಚಿತ್ರವು ತೆಳು ನೀಲಿ ಬಣ್ಣದ ಮುಖದ ವೆಂಕಟೇಶ್ವರನ ಮೈಯೆಲ್ಲಾ ಬಂಗಾರದ ಆಭರಣಗಳಿಂದ ಅಲಂಕೃತಗೊಂಡಿದೆ. ಶಂಖ, ಚಕ್ರಗಳಿಂದ ಮೇಲ್ಮಾಡಿದ ಕೈಗಳು ಕೆಳಗೆ ಆಶೀರ್ವದಿಸಿದ ಬಲಗೈ, ಆಭರಣವನ್ನು ಹಿಡಿದುಕೊಂಡ ಎಡಗೈ, ಬೆಳ್ಳಿ ಬಣ್ಣದ ಶಲ್ಯ ಪಾದದವರೆಗೂ ಇಳಿಬಿದ್ದಿದೆ. ಬದಿಯಲ್ಲಿ ಬಣ್ಣ ಬಣ್ಣದ ವರ್ತುಲಾಕಾರದ ವಸ್ತುಗಳಿಂದ ಬದಿಯ ಸ್ಥಳವನ್ನು ತುಂಬಲಾಗಿದೆ. ಜೊತೆಯಲ್ಲಿ ಲಕ್ಷ್ಮಿ ಎತ್ತರವಾದ ಕಿರೀಟ ಕೈಯಲ್ಲಿ ಹೂವೊಂದನ್ನು ಹಿಡಿದು ಕೆಂಪು ಸೀರೆಯನ್ನುಟ್ಟು ಎಡಗಡೆಗೆ ನಿಂತಿದ್ದಾಳೆ. ಬಲಗಡೆಗೂ ಒಬ್ಬ ಮಹಿಳೆ ಇದ್ದು ಲಕ್ಷ್ಮಿಯಂತಹ ಲಕ್ಷಣಗಳನ್ನು ಹೊಂದಿದ್ದು, ಎಡಗೈಯಲ್ಲಿ ಹೂವನ್ನು ಹಿಡಿದು ನಿಂತಿದ್ದಾಳೆ. ದೇವಸ್ಥಾನದ ಹಿಂದಿನ ವಿನ್ಯಾಸ ಬಂಗಾರ ಬಣ್ಣದ ಕಂಭಗಳು ಕೆಂಪು ಬಣ್ಣದ ಬಟ್ಟೆ ನೀರಿಗೆಗಳು ಕಂಡುಬರುತ್ತವೆ. ಹಿಂದಿನ ಗೋಡೆಗೆ ಕಡುನೀಲಿ ಬಣ್ಣವನ್ನು ಬಳಿಯಲಾಗಿದ್ದು, ಚಿತ್ರವು ಆಧುನಿಕ ಪರಿಷ್ಕೃತ ವೆಂಕಟೇಶ್ವರನ ಚಿತ್ರಕ್ಕಿಂತ ಭಿನ್ನವಾಗಿದೆ.

### ೧೯. ಶೇಷಶಯನ ಮಹಾವಿಷ್ಣು

ಬಾಗಲಕೋಟೆಯ ಮಹೇಂದ್ರ ಸರಾಫ ಅವರ ಮನೆಯಲ್ಲಿ ಸಂಗ್ರಹಿತವಾಗಿರುವ ಈ ಚಿತ್ರದಲ್ಲಿ ತೆಳು ನೀಲಿ ಬಣ್ಣದ ಆಕಾಶ ಹಿನ್ನೆಲೆಗಿದೆ. ವಿಷ್ಣು ಆದಿಶೇಷನ ಮೇಲೆ ಮಲಗಿದ್ದು, ಕಾಲಬದಿಯಲ್ಲಿ ಲಕ್ಷ್ಮಿ ಕಾಲು ಒತ್ತುತ್ತಾ ಕುಳಿತಿರುವಂತೆ ಚಿತ್ರಿಸಲಾಗಿದೆ. ಉದ್ದವಾದ ಮೂಗು, ಹಿಂದೆ ಹಾಯ್ದ ತುರುಬು, ತುರುಬಿಗೊಂದು ಹೂವುಹಾರ, ಕೆಂಪು ಬಣ್ಣದ ಸೀರೆ, ಕಪ್ಪು ಬಣ್ಣದ ರವಿಕೆ ಉಟ್ಟು ಕುಳಿತಿದ್ದಾಳೆ. ಮಲಗಿದ ವಿಷ್ಣು ನೀಲಿ ಮೈಬಣ್ಣವನ್ನು ಹೊಂದಿದ್ದು, ಉದ್ದವಾದ ನೀಲಿ ಬಣ್ಣದ ಶಲ್ಯಯನ್ನು ಕೆಳಕ್ಕೆ

ಜೋತು ಬಿಡಲಾಗಿದೆ. ಉದ್ದನೆಯ ಬಿಳಿ ಹೂವುಗಳ ಹಾರವೂ ಅದರೊಂದಿಗೆ ಜೊತೆಯಾಗಿದೆ. ಎಡಬದಿಯಲ್ಲಿ ಹನುಮಂತ ತನ್ನ ಉದ್ದನೆಯ ಬಾಲವನ್ನು ಎತ್ತರಕ್ಕೇರಿಸಿ ಒಂಟಿಗಾಲಿನಲ್ಲಿ ಕೈಮುಗಿದು ನಿಂತುಕೊಂಡಿದ್ದಾನೆ. ಬಲಬದಿಯಲ್ಲಿ ಗರುಡ ತನ್ನ ಪಂಕಗಳನ್ನು ಎತ್ತಿ ಅವನೂ ಒಂಟಿಗಾಲಿನಿಂದ ಕೈಮುಗಿದು ನಿಂತಿದ್ದಾನೆ. ಅವಾಸ್ತವಿಕವಾಗಿ ತೆಂಗಿನ ಕಾಯಿಗಳೊಂದಿಗೆ ಮರವೊಂದು ವೈಕುಂಠದಲ್ಲಿ ಬೆಳೆದು ನಿಂತಿದೆ. ಮೇಲೆ ನಾಭಿಯಿಂದ ಮೇಲೆದ್ದ ಹೂವಿನಲ್ಲಿ ಬ್ರಹ್ಮನನ್ನು ಚಿತ್ರಿಸಲಾಗಿದೆ. ಬ್ರಹ್ಮನ ಹಿಂದೆ ಪ್ರಭಾವಳಿ ಕಪ್ಪು ಬಣ್ಣದ್ದಾಗಿದ್ದು, ಬ್ರಹ್ಮನ ಮುಖ ಎದ್ದು ಕಾಣುತ್ತದೆ. ಹೀಗೆ ವಿಷ್ಣುವಿನ ವಿಶ್ರಾಂತಿ ಸಮಯದ ಚಿತ್ರವನ್ನು ಕಲಾವಿದನು ಸಂಯೋಜನಾಬದ್ಧವಾಗಿ ರಚಿಸಿದ್ದಾನೆ.

**೨೦. ಕೃಷ್ಣ-ರಾಧೆಯ ಸಲ್ಲಾಪ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ರಾಜನು ತನ್ನ ಎಡಗೈಯನ್ನು ರಾಣಿಯ ಎಡಗೈಯನ್ನು ಜಗ್ಗಿರುವುದು ಮಾತ್ರ ವಿಶೇಷ. ಇಲ್ಲಿ ರಾಣಿಯ ರವಿಕೆ ಕಪ್ಪಾಗಿದ್ದು, ಸೀರೆ ಹಳದಿ ಮತ್ತು ಕೆಂಪು ವರ್ಣದ ಪಟ್ಟಿ ಪಟ್ಟಿಯಾಗಿದೆ. ಬಂಗಾರ ವರ್ಣದ ದಡಿಯನ್ನು ಚಿತ್ರಿಸಲಾಗಿದೆ. ಮುಖವನ್ನು ರಾಜನ ಮುಖಕ್ಕೆ ಓರೆ ಮಾಡಿ ಬೇರೆ ಕಡೆ ನೋಡಿದಂತೆ ನಿಂತುಕೊಂಡಿದ್ದಾಳೆ. ಇಲ್ಲಿ ರಾಜನು ಹಳದಿ ಬಣ್ಣದ ಧೋತ್ರವನ್ನು ಉಟ್ಟಿದ್ದು, ಹೆಗಲ ಮೇಲೆ ನಡದಿಂದ ಮುಂದುವರೆದ ಕೆಂಪು ವರ್ಣದ ಶೆಲ್ಯ ಆಭರಣಗಳಿಂದ ತುಂಬಿದ್ದು, ಹೆಗಲ ಮೇಲೆ ಹೋಗಿ ಹಿಂದಿನವರೆಗೂ ಬಿದ್ದಿದೆ. ರಾಜನಿಗೂ ಮುಂದೆ ಒಂದು ತುರುಬನ್ನು ರಚಿಸಿ ಅದಕ್ಕೆ ಆಭರಣವನ್ನು ಚಿತ್ರಿಸಲಾಗಿದೆ. ಮೀಸೆ ಇಲ್ಲದಿರುವುದು ಇನ್ನೊಂದು ವಿಶೇಷ. ಸ್ಪಷ್ಟವಾದ ಚಿತ್ರವಾಗಿದ್ದು, ಹಿಂದಿನ ಎಲ್ಲಾ ಚಿತ್ರಗಳಲ್ಲಿರುವಂತೆ ಅರಮನೆಯ ಪರದೆಯನ್ನೂ ಇಲ್ಲಿ ಕೆಂಪಾಗಿ ಚಿತ್ರಿಸಿದೆ. ಹಿನ್ನೆಲೆ ವಿನ್ಯಾಸ ಕೆಂಪು ಮಿಶ್ರಿತ ನೀಲಿ ಬಣ್ಣವನ್ನು ಹೊಂದಿದೆ.

**ಬ. ಆಧುನಿಕ ಗಾಜಿನ ಚಿತ್ರಗಳು**

**೨೧. ರಾಜ ದಂಪತಿಗಳು**

ಗುಳೇದಗುಡ್ಡದ ಶೇಖರಪ್ಪ ಉಮಚಗಿ ಅವರ ಮನೆಯಲ್ಲಿ ಸಂಗ್ರಹಿತವಾಗಿರುವ ಚಿತ್ರದಲ್ಲಿ ಪತಿಯು ಸಿಂಹಾಸನದ ಮೇಲೆ ಕುಳಿತಿದ್ದು, ಸತಿ ಅವನ ಹಿಂದೆ ನಿಂತಿದ್ದಾಳೆ. ಕೆಂಪು ಪ್ಯಾಂಟ್‌ನ್ನು ಧರಿಸಿದ, ಬೂಟು ಹಾಕಿದ ಪತಿ ಬಲಗಾಲನ್ನು ಎಡಗಾಲ ಮೇಲೆ ಹಾಕಿ ಹಳದಿ ಮತ್ತು ಕೆಂಪು ಬಣ್ಣದ ಚುಕ್ಕೆಗಳನ್ನು ಹೊಂದಿದ ಕೋಟನ್ನು ಧರಿಸಿ ಕುಳಿತಿದ್ದಾನೆ. ಹೆಚ್ಚು ಬಿಳಿದಾದ ಕೆಂಪು ಬಣ್ಣದ ಮುಖ ಹೊಂದಿದ ಪತಿ ಚೂಪಾದ ಮೀಸೆಗಳನ್ನು ಹೊಂದಿದ್ದು, ಅಲಂಕೃತ ಕಿರೀಟವನ್ನು ಧರಿಸಿದ್ದಾನೆ. ಹಿಂದೆ ಬಿದ್ದ ಕೂದಲು ಅಲಂಕೃತವಾಗಿವೆ. ಸಿಂಹಾಸನವು ತೆಳು ಹಸಿರು ಬಣ್ಣದ ಒಳ ಬಟ್ಟೆಯನ್ನು ಹೊಂದಿದ್ದು, ಕೆಂಪು ಬಣ್ಣದ ಅಂಚಿನಿಂದ ರಚಿತವಾಗಿದೆ. ಪತಿಯ ಎಡಭಾಗದಲ್ಲಿ ಎದ್ದುನಿಂತ ಸತಿ ಎಡಗೈಯನ್ನು ನಡುವಿನ ಮೇಲಿಟ್ಟು, ಬಲಗೈಯನ್ನು ಪತಿಯ ಎಡ ಹೆಗಲ ಮೇಲೆ ಇಟ್ಟುಕೊಂಡು, ಮುಂದೆ ಮಾಡಿದ ಕೆಂಪು ಬಣ್ಣದ ಸೆರಗು ಸೀರೆಯನ್ನುಟ್ಟು, ಬಿಳಿ ಬಂಗಾರ ಬಣ್ಣದ ಅಂಚುಳ್ಳ ಲಂಗವನ್ನು ಧರಿಸಿದ್ದಾಳೆ. ಕಪ್ಪು ಬಣ್ಣದ ರವಿಕೆಗೆ ಬಂಗಾರ ಬಣ್ಣದ ಅಂಚಿದೆ. ಶೃಂಗಾರದ ಈ ಚಿತ್ರ ಮಲಗುವ ಕೊಠಡಿಗಳಲ್ಲಿ ಹಾಕುವ ದಂಪತಿಗಳ ಇಚ್ಛಾನುಸಾರ ರಚಿತಗೊಂಡ

ಚಿತ್ರವಾಗಿರಬೇಕು. ರಾಜ ಅಥವಾ ಶ್ರೀಮಂತ ದಂಪತಿಗಳ ಕಾಲ್ಪನಿಕ ವಾದ ೯೯ ಕೃತಿಗಳು ಲಭ್ಯವಾಗಿದ್ದು, ಒಂದಕ್ಕೊಂದು ಸಾಮ್ಯತೆ ಇದೆ. ಹೆಚ್ಚು ವಿವರಗಳು ಒಂದರಂತೆ ಒಂದಿವೆ. ಕಾರಣ ಮುಂದಿನ ಚಿತ್ರಗಳಲ್ಲಿ ಮೊದಲಿನ ಚಿತ್ರಗಳಲ್ಲಿಲ್ಲದ ಪ್ರಮುಖ ಅಂಶಗಳನ್ನು ಮಾತ್ರ ವಿವರಿಸಲಾಗಿದೆ.

### ೨೨. ಶಯ್ಯಾಗೃಹದಲ್ಲಿ ರಾಜ ದಂಪತಿಗಳು

ಅಮೀನಗಡದ ಶೀಲವಂತಪ್ಪ ಗರಡಿ ಅವರ ಮನೆಯಲ್ಲಿ ಸಂಗ್ರಹಿತವಾಗಿರುವ ಚಿತ್ರದಲ್ಲಿ ಮಲಗುವ ಕೋಣೆಯಲ್ಲಿ ದಂಪತಿಗಳ ಪಿಸುಮಾತು ಇಲ್ಲಿ ಪ್ರಧಾನವಾಗುತ್ತದೆ. ಇಬ್ಬರ ಬಟ್ಟೆಗಳಲ್ಲೂ ಏಕತಾಣತೆ ಇದ್ದು, ಚೌಕಡಿ ಬಣ್ಣದ ಕೆಳ ಉಡುಪನ್ನು ಧರಿಸಿದ್ದಾರೆ. ಅದರ ಕೆಳಗೆ ಕಾಲ ಕೊನೆಯವರೆಗೆ ಹಳದಿ ಬಣ್ಣದ ಪ್ಯಾಂಟ್ ಧರಿಸಿದ್ದಾರೆ. ಕೇಸರಿ ಬಣ್ಣದ ಅಂಗಿ ಮತ್ತು ರವಿಕೆಗಳಲ್ಲಿ ಬಿಳಿ ಮತ್ತು ಕಪ್ಪು ಬಣ್ಣದ ಮುತ್ತಿನ ಅಲಂಕಾರಗಳು ಕಂಡುಬರುತ್ತವೆ. ಸತಿಯಾದವಳು ತನ್ನ ಟೊಂಕದ ಮೇಲೆ ಎಡಗೈಯನ್ನಿಟ್ಟು ಬಲಗಾಲನ್ನು ಕತ್ರಿಗಾಲನ್ನು ಹಾಕಿದ್ದಾಳೆ. ಮಂಚದ ಮೇಲೆ ಕುಳಿತ ಪತಿಯ ತಲೆಯ ಮೇಲೆ ಕೈ ಆಡಿಸುತ್ತಿರುವ ಚಿತ್ರ ಪತಿಯೂ ಕೂಡ ಬಲಗೈಯಲ್ಲಿ ಹೂವೊಂದನ್ನು ಹಿಡಿದು, ಎಡಗೈಯನ್ನು ತೊಡೆಯ ಮೇಲೆ ಇಟ್ಟುಕೊಂಡು ಕುಳಿತಿದ್ದಾನೆ. ಮಲಗುವ ಕೊಠಡಿಗೆ ಕೆಂಪು ಬಣ್ಣದ ಪರದೆಗಳನ್ನು ಹಿಂದೆ ಬಿಡಲಾಗಿದೆ. ಬಟ್ಟೆಗಳಲ್ಲಿ ಹೆಚ್ಚು ನಕ್ಷೆಗಳನ್ನು ಹೊಂದಿದ ಚಿತ್ರ ಇದಾಗಿದೆ.

### ೨೩. ರಾಣಿಯ ಓಲೈಕೆ

ಗುಳೇದಗುಡ್ಡದ ವೀರಸಂಗಪ್ಪ ಭಾವಿ ಅವರ ಮನೆಯಲ್ಲಿ ಸಂಗ್ರಹಿತವಾಗಿರುವ ಚಿತ್ರದಲ್ಲಿ ಸತಿಯನ್ನು ಸಿಂಹಾಸನದಲ್ಲಿ ಕುಳ್ಳರಿಸಿದ ಪತಿ ಎಡಗೈಯಲ್ಲಿ ಹೂವನ್ನು ಹಿಡಿದು ಬಲಗೈಯನ್ನು ಅವಳ ಹೆಗಲ ಮೇಲೆ ಹಾಕಿ ಪ್ರೀತಿದ್ಯೋತಕ ಚಿತ್ರ ಇದಾಗಿದೆ. ಪೂರ್ಣ ಪ್ರಮಾಣದ ಕಪ್ಪು ಬಣ್ಣದ ರಾಜ ಪೋಷಾಕಿನಲ್ಲಿರುವ ಪತಿ ತೆಳು ಹಸಿರು ಬಣ್ಣದ ಕಿರೀಟವನ್ನು ಧರಿಸಿದ್ದಾನೆ. ಚೂಪಾದ ಮೀಸೆ, ಅಗಲವಾದ ಕಣ್ಣುಗಳು, ಕೊರಳಲ್ಲಿ ಆಭರಣಗಳು, ಕಾಲಲ್ಲಿ ಬೂಟು ಧರಿಸಿದ್ದಾನೆ. ಸತಿಯ ಹೆಗಲ ಮೇಲೆ ತೆಳು ಹಸಿರು ಬಣ್ಣದ ಬಟ್ಟೆಯಿದ್ದು ಅದಕ್ಕೆ ಆಭರಣವು ಜೊತೆಯಾಗಿದೆ. ಕೆಂಪು ಬಣ್ಣದ ಲಂಗವನ್ನುಟ್ಟ ಸತಿ ಬಲಗೈಯಲ್ಲಿ ಸೀರೆಯ ಅಂಚನ್ನು ಹಿಡಿದಿದ್ದಾಳೆ. ಹಿನ್ನೆಲೆ ವಿನ್ಯಾಸವು ತೆಳು ನೀಲಿ ಬಣ್ಣದ್ದಾಗಿದ್ದು, ಇಲ್ಲಿಯೂ ಕೂಡ ಅರಮನೆಯ ಕೆಂಪು ಬಣ್ಣದ ಬಟ್ಟೆಯನ್ನು ಪರದೆಯಂತೆ ಬಿಟ್ಟು ಬಂಗಾರ ಬಣ್ಣದ ದಡಿಗಳನ್ನು ದಪ್ಪದಾಗಿ ಅಲಂಕರಿಸಲಾಗಿದೆ. ಸಿಂಹಾಸನದ ಹಿಂದೆ ಕೆಂಪು ವರ್ತುಲಾಕಾರವಿದ್ದು, ಬಿಳಿಯ ಬಣ್ಣದ ಅವಳ ಮೈ ಎದ್ದು ಕಾಣುವಂತೆ ರಚಿಸಲಾಗಿದೆ.

### ೨೪. ರಾಜ-ರಾಣಿಯರ ಆಪ್ತ ಚಿಂತನೆ

ಬಾಗಲಕೋಟೆಯ ಎಸ್.ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ಸತಿಯನ್ನು ಸಿಂಹಾಸನದಲ್ಲಿ ಕುಳ್ಳರಿಸಿದ ಪತಿ ಎಡಗೈಯನ್ನು ತನ್ನ ಟೊಂಕದ ಮೇಲಿಟ್ಟು, ಬಲಗೈಯಲ್ಲಿ ಉದ್ದನೆಯ ದೇಟುಳ್ಳ ಹೂವನ್ನು ಹಿಡಿದು, ಪೂರ್ಣ ಪ್ರಮಾಣದ ಕಪ್ಪು ಬಣ್ಣದ ರಾಜ ಪೋಷಾಕಿನಲ್ಲಿರುವ ಪತಿ ತೆಳು ಹಸಿರು ಬಣ್ಣದ ಕಿರೀಟವನ್ನು ಧರಿಸಿದ್ದಾನೆ. ಚೂಪಾದ ಮೀಸೆ, ಅಗಲವಾದ ಕಣ್ಣುಗಳು, ಕೊರಳಲ್ಲಿ

ಆಭರಣಗಳು, ಕಾಲಲ್ಲಿ ಬೂಟು ಧರಿಸಿದ್ದಾನೆ. ಕೆಂಪು ಬಣ್ಣದ ಗೀರು ಗೀರುಳ್ಳ ಲಂಗವನ್ನುಟ್ಟ ಸತಿ ತೆಳು ನೀಲಿ ಬಣ್ಣದ ರವಿಕೆಯನ್ನು ತೊಟ್ಟಿದ್ದಾಳೆ. ಹಿನ್ನೆಲೆ ವಿನ್ಯಾಸವು ತೆಳು ನೀಲಿ ಬಣ್ಣದ್ದಾಗಿದ್ದು, ಇಲ್ಲಿಯೂ ಕೂಡ ಅರಮನೆಯ ಕೆಂಪು ಬಣ್ಣದ ಬಟ್ಟೆಯನ್ನು ಪರದೆಯಂತೆ ಬಿಟ್ಟು ಬಂಗಾರ ಬಣ್ಣದ ದಡಿಗಳನ್ನು ದಪ್ಪದಾಗಿ ಅಲಂಕರಿಸಲಾಗಿದೆ. ಕಾಲಲ್ಲೂ ನೀಲಿ ಬಣ್ಣದ ನೆಲದ ವಿನ್ಯಾಸವನ್ನು ರಚಿಸಲಾಗಿದೆ. ಒಟ್ಟು ಚಿತ್ರವು ಅಲಂಕೃತ ಸಂಯೋಜನೆಯಾಗಿದೆ.

**೨೫. ನಾಯಕ-ನಾಯಕಿ**

ಬಾಗಲಕೋಟೆಯ ಎಸ್.ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ಸತಿಪತಿಗಳು ಯಾರಾದರೊಬ್ಬರು ಕುಳಿತುಕೊಳ್ಳುವ ಹಿಂದಿನ ಚಿತ್ರಗಳಲ್ಲಿರುವಂತೆ ಇಲ್ಲಿಲ್ಲ. ಸತಿಪತಿಗಳಿಬ್ಬರೂ ನಿಂತುಕೊಂಡ ಚಿತ್ರ ಇದಾಗಿದೆ. ಪತಿಯು ತನ್ನ ಟೊಂಕದ ಮೇಲೆ ಎರಡೂ ಕೈಗಳನ್ನಿಟ್ಟು ನಿಂತುಕೊಂಡಿದ್ದಾನೆ. ಬಲಗೈ ಮೇಲೆ ತನ್ನ ಕೈಗಳನ್ನೂರಿ ಸತಿಯು ಎದ್ದು ನಿಂತಿದ್ದಾಳೆ. ಈ ಚಿತ್ರವು ಇತರೆ ಚಿತ್ರಗಳಿಗಿಂತ ಭಿನ್ನವಾಗಿರದೇ ಇದ್ದರೂ ಇಬ್ಬರೂ ಎದ್ದುನಿಂತದ್ದು ವಿಶೇಷ. ಕಪ್ಪು ಬಣ್ಣದ ರಾಜಪೋಷಾಕಿನಲ್ಲಿ ಪತಿ ಎಡ ಟೊಂಕದಲ್ಲಿ ಚಿಕ್ಕ ಖಡ್ಗವೊಂದನ್ನು ಇರಿಸಿಕೊಂಡಿದ್ದಾನೆ. ಹಿಂದೆ ಬೆನ್ನಿಗೆ ಹಳದಿಯಲ್ಲಿ ಕಪ್ಪು ಚುಕ್ಕೆಗಳಿರುವ ದೊಡ್ಡ ಬಟ್ಟೆಯೊಂದನ್ನು ಜೋತು ಬಿಡಲಾಗಿದೆ. ತೆಳು ನೀಲಿ ಬಣ್ಣದ ಗೋಡೆ, ಕಂಭ, ಕೆಂಪು ಪರದೆ ಬಟ್ಟೆ, ಇವೆಲ್ಲವೂ ಮಾಮೂಲು ಇನ್ನು ಸತಿಯು ಏನನ್ನೋ ಹೇಳುತ್ತಿರುವಂತೆ ಕೈಯನ್ನು ಪತಿಯ ಬಲಗೈ ಮೇಲಿಟ್ಟು ನಗುಮುಖದೊಂದಿಗೆ ಕಾಣುತ್ತಾಳೆ. ಇಬ್ಬರಿಗೂ ಕಿರೀಟವಿದೆ. ಸತಿಯು ಕಪ್ಪು ಬಣ್ಣದ ರವಿಕೆ, ಕೆಂಪು ವರ್ಣದ ಅರ್ಧಲಂಗ, ಅದರ ಕೆಳಗೆ ಹಸಿರು ಪೈಜಾಮು, ಕೆಂಪು ಬಣ್ಣದ ಬೂಟನ್ನು ಧರಿಸಿದ್ದಾಳೆ.

**೨೬. ಸತಿ-ಪತಿ ಸರಸ ಶೃಂಗಾರ**

ಬಾಗಲಕೋಟೆಯ ಎಸ್.ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ಹಿಂದಿನ ಎಲ್ಲಾ ಚಿತ್ರಗಳಲ್ಲಿರುವಂತೆ ಸತಿ, ಪತಿಗಳ ವೇಷಭೂಷಣವಿದ್ದು, ಹಿನ್ನೆಲೆ ವಿನ್ಯಾಸ, ಕಂಭ, ಪರದೆ, ಎಲ್ಲವೂ ಹಿಂದಿನಂತಿದ್ದರೂ, ಇಲ್ಲಿ ಒಬ್ಬರನ್ನೊಬ್ಬರು ಅಪ್ಪಿಕೊಂಡ ಹಾಗೂ ಸತಿಯ ತೊಡೆಯ ಮೇಲೆ ಎರಡೂ ಕಾಲುಗಳನ್ನು ಮುಂದೆ ಚಾಚಿ ಮಗುವಿನಂತೆ ಪತಿ ಕುಳಿತದ್ದು ಇಲ್ಲಿ ವಿಶೇಷ. ಮೂರು ವರ್ತುಲಾಕಾರದ ವಿಭಾಗಗಳಾಗಿ ಕಾಣುವ ಸಿಂಹಾಸನದ ಮೇಲೆ ಕುಳಿತಿದ್ದಾರೆ. ಸತಿಯ ಲಂಗವನ್ನು ದೊಡ್ಡದಾಗಿ ಮತ್ತು ಅಗಲವಾಗಿ ಚಿತ್ರಿಸಿ ಚಿತ್ರವನ್ನು ಪೂರ್ಣಗೊಳಿಸಲಾಗಿದೆ.

**೨೭. ಸಲ್ಲಾಪದಲ್ಲಿ ಸತಿ-ಪತಿ**

ಬಾಗಲಕೋಟೆಯ ಎಸ್.ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿಯೂ ಕೂಡ ಹಿಂದಿನ ಚಿತ್ರದ ಎಲ್ಲಾ ಅಂಶಗಳು ಅಡಕವಾಗಿವೆ. ಆದರೆ ಇಲ್ಲಿ ಪತಿ ಅಥವಾ ಸತಿ ಸುಮ್ಮನೆ ನಿಂತುಕೊಳ್ಳದೆ ಅಥವಾ ಕುಳಿತುಕೊಳ್ಳದೆ ಪತಿಯು ಸತಿಯ ಎಡಗೈಯನ್ನು ಹಿಡಿದು ಸರಸ ಸಲ್ಲಾಪಕ್ಕೆ ಆಹ್ವಾನಿಸುವಂತೆ ಚಿತ್ರಿಸಲಾಗಿದೆ. ಸತಿಯು ತನ್ನ ಎಡಗೈಯನ್ನು ಬೇಡವೆನ್ನುವಂತೆ ಮಾಡಿದ್ದಾಳೆ. ಇಲ್ಲಿಯೂ

ಕೂಡ ಸತಿಯ ಲಂಗವನ್ನು ಕಲಾತ್ಮಕವಾಗಿ ಮತ್ತು ನಕ್ಷಾ ಮಾದರಿಗಳಿಂದ ಕೆಂಪು ವರ್ಣದಲ್ಲಿಯೇ ಅದ್ಭುತವಾಗಿ, ಅಗಲವಾಗಿ ಚಿತ್ರಿಸಿ ಚಿತ್ರವನ್ನು ಪೂರ್ಣಗೊಳಿಸಲಾಗಿದೆ.

**೨೮. ಸಲ್ಲಾಪದಲ್ಲಿ ಸತಿ-ಪತಿ**

ಬಾಗಲಕೋಟೆಯ ಎಸ್.ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿಯೂ ಕೂಡ ಹಿಂದಿನ ಚಿತ್ರದ ಎಲ್ಲಾ ಅಂಶಗಳು ಅಡಕವಾಗಿವೆ. ಆದರೆ ಇಲ್ಲಿ ಪತಿ ಅಥವಾ ಸತಿ ಸುಮ್ಮನೆ ನಿಂತುಕೊಳ್ಳದೆ ಅಥವಾ ಕುಳಿತುಕೊಳ್ಳದೆ ಸತಿಯು ತನ್ನ ಪತಿಯ ಎಡಗೈಯನ್ನು ಹಿಡಿದು ಸರಸ ಸಲ್ಲಾಪಕ್ಕೆ ಆಹ್ವಾನಿಸುವಂತೆ ಚಿತ್ರಿಸಲಾಗಿದೆ. ಪತಿಯು ತನ್ನ ಎಡಗೈಯನ್ನು ಸುಮ್ಮನೆ ಕೆಳಗೆ ಬಿಟ್ಟು ಪ್ರೀತಿಯಿಂದ ಓರೆನೋಟ ಬೀರಿ ಒಪ್ಪುವಂತೆ ತೋರುತ್ತದೆ.

**೨೯. ನಾವಿನಲ್ಲಿ ವಾದ್ಯ ನುಡಿಸುವ ಪ್ರೇಮಿ**

ಗುಳೇದಗುಡ್ಡದ ಅಶೋಕ ತಿಪ್ಪಾ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ನದಿ ತೀರದಲ್ಲಿ ದೊಡ್ಡದಾದ ಮರವೊಂದರ ನೆರಳಿನಲ್ಲಿ ದೇವತೆಯಂತಹ ರಾಣಿ ಎಡಗೈಯಲ್ಲಿ ಪುಷ್ಪವನ್ನು ಹಿಡಿದು ರಾಜನಿಗೆ ಪ್ರೀತಿಯಿಂದ ಹೂವುನ್ನು ಕೊಡುತ್ತಿರುವಂತೆ ಚಿತ್ರಿಸಲಾಗಿದೆ. ರಾಣಿಯ ನೋಟವು ಎದುರಿಗಿದ್ದು, ರಾಜನ ಮುಖವನ್ನು ನೋಡಿ ಹೂವು ಕೊಡುವ ಧೈರ್ಯ ಅವಳಿಗಿಲ್ಲ ಎನಿಸುವಂತೆ ತಿಳಿಸಲಾಗಿದೆ. ರಾಣಿಯ ಕಪ್ಪು ರವಿಕೆ, ಕಿರೀಟ, ಮೇಲೊಂದು ಗುಚ್ಚ, ನಡುಕಟ್ಟು, ಕೊರಳಾಭರಣ, ಸೀರೆಗೆ ಮತ್ತೊಂದು ವೇಲ್ ತರಹ ಬಟ್ಟೆಯನ್ನು ಹಿಂದೆ ಹಾಕಿಕೊಂಡು ಅದರ ತುದಿಯನ್ನು ಬಲಗೈಯಲ್ಲಿ ಹಿಡಿದುಕೊಂಡಂತೆ ಚಿತ್ರಿಸಲಾಗಿದೆ. ಇನ್ನು ರಾಜನ ಚಿತ್ರ ವಿಶೇಷವಾಗಿದ್ದು, ನದಿಯ ದಡಕ್ಕೆ ನಾವೆಯಲ್ಲಿ ಬಂದ ರಸಿಕ ರಾಜ ಗಿಟಾರ್‌ನಂತಹ ವಾದ್ಯ ನುಡಿಸುತ್ತಾ ನೃತ್ಯ ಭಂಗಿಯಲ್ಲಿ ನಿಂತಂತೆ ಚಿತ್ರಿಸಲಾಗಿದೆ. ನಾವೆಯ ಮುಂಭಾಗವು ನವಿಲಿನಂತೆ ಕಾಣುತ್ತದೆ. ನದಿಯ ಮೆಟ್ಟಿಲುಗಳ ಬಳಿ ದಂಡೆಗೆ ಬಂದ ರಾಜನನ್ನು ಹೂವು ಕೊಡುವ ಮೂಲಕ ತನ್ನ ಪ್ರೀತಿಯನ್ನು ತೋರಿದ ರಾಣಿಯ ಚಿತ್ರವಿದು. ನದಿಯ ನೀರು, ಆಕಾಶ ವ್ಯತ್ಯಾಸವಿಲ್ಲದಂತೆ ಒಟ್ಟು ಚಿತ್ರದ ಹಿನ್ನೆಲೆ ವಿನ್ಯಾಸವನ್ನು ನೀಲಿ ಬಣ್ಣದಲ್ಲಿ ಚಿತ್ರಿಸಲಾಗಿದೆ. ಮರದಲ್ಲಿ ಎಲೆ, ಹೂವುಗಳನ್ನು ಕಂಡೂಕಾಣದಂತೆ ಹಸಿರು ಮತ್ತು ಕೆಂಪು ವರ್ಣಗಳಿಂದ ರಚಿಸಲಾಗಿದೆ. ಚಿತ್ರವು ಹಿಂದಿನ ಎಲ್ಲಾ ಚಿತ್ರಗಳಿಗಿಂತ ವಿಭಿನ್ನವಾಗಿದೆ.

**೩೦. ಸಲ್ಲಾಪದಲ್ಲಿ ರಾಜ-ರಾಣಿ**

ಗುಳೇದಗುಡ್ಡದ ಅಶೋಕ ತಿಪ್ಪಾ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ರಾಜನು ತನ್ನ ಎಡಗೈಯನ್ನು ರಾಣಿಯ ಸೊಂಟಕ್ಕೆ ಬಳಸಿರುವುದು ಮಾತ್ರ ವಿಶೇಷ. ಇಲ್ಲಿ ರಾಣಿಯ ರವಿಕೆ ಕೆಂಪಾಗಿದ್ದು, ಸೀರೆ ಕಪ್ಪು ಮತ್ತು ಕೆಂಪು ವರ್ಣದ ಪಟ್ಟಿ ಪಟ್ಟಿಯಾಗಿದೆ. ಕೆಳಗಡೆ ಲಂಗವು ಬಿಳಿಯದಾಗಿದ್ದು, ಬಂಗಾರ ವರ್ಣದ ದಡಿಯನ್ನು ಚಿತ್ರಿಸಲಾಗಿದೆ. ರಾಣಿಯು ತನ್ನ ಎರಡೂ ಕೈಗಳನ್ನು ಕಟ್ಟಿಕೊಂಡು ಸಮ್ಮತಿಸಿದಂತೆ ತನ್ನ ಮುಖವನ್ನು ರಾಜನ ಮುಖಕ್ಕೆ ಓರೆ ಮಾಡಿ ಹಚ್ಚಿ ನಿಂತುಕೊಂಡಿದ್ದಾಳೆ. ರಾಜ ತನ್ನ ಬಲಗೈಯಿಂದ ಕರೆಯುತ್ತಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ರಾಜನ ಪೈಜಾಮೂ ಬಿಳಿಯದಾಗಿರುವುದು ವಿಶೇಷ. ಹಿಂದಿನ ಎಲ್ಲಾ ಚಿತ್ರಗಳಲ್ಲಿರುವಂತೆ ಅರಮನೆಯ ಪರದೆಯನ್ನೂ ಇಲ್ಲಿ ಕೆಂಪಾಗಿ ಚಿತ್ರಿಸಿದೆ. ಬಿಳಿಯ ವರ್ಣದಿಂದ

ಚಿತ್ರಿಸಿ ರಾಣಿಯ ಲಂಗ ಮತ್ತು ರಾಜನ ಪೈಜಾಮುಗಳಿಗಿರುವ ಬಿಳಿಯ ವರ್ಣಕ್ಕೆ ಸಮತೋಲನ ನೀಡಲಾಗಿದೆ. ಹಿನ್ನೆಲೆ ವಿನ್ಯಾಸ ಕೆಂಪು ಮಿಶ್ರಿತ ನೀಲಿ ಬಣ್ಣವನ್ನು ಹೊಂದಿದೆ.

**೩೧. ಪ್ರೀತಿ ಹೂವು ಕೊಡುವ ರಾಣಿ**

ಗುಳೇದಗುಡ್ಡದ ಅಶೋಕ ತಿಪ್ಪಾ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ರಾಜ, ರಾಣಿಯರು ಹಿಂದಿನ ಎಲ್ಲಾ ಸರಸ ಸಲ್ಲಾಪದ ಚಿತ್ರಗಳಲ್ಲಿನಂತೆ ವೇಷಭೂಷಣಗಳನ್ನು ತೊಟ್ಟಿದ್ದಾರೆ. ತೀರಾ ಬಿಳಿ ಮಿಶ್ರಿತ ನೀಲ ವರ್ಣವನ್ನು ಗೋಡೆಗೆ ಬಳಿಯಲಾಗಿದೆ. ಒಂದು ರಾಜನು ತನ್ನ ಎಡಗೈಯನ್ನು ರಾಣಿಯ ಹೆಗಲ ಮೇಲೆ ಹಾಕಿ ರಾಣಿಯ ಎಡಗೈಯ ರಟ್ಟೆಯನ್ನು ಹಿಡಿದಂತಿದೆ. ಬಲಗೈಯನ್ನು ಮುಂದೆ ಮಾಡಿ ಕರೆಯುತ್ತಿರುವಂತೆ ಚಿತ್ರಿಸಲಾಗಿದೆ. ಎರಡನೆಯದಾಗಿ ರಾಣಿ ತನ್ನ ಎಡಗೈಯಿಂದ ದೊಡ್ಡದಾದ ಹೂವೊಂದನ್ನು ನೀಡುತ್ತಿರುವಂತೆ ಚಿತ್ರಿಸಿದ್ದು ವಿಶೇಷ.

**೩೨. ಸಲ್ಲಾಪದಲ್ಲಿ ರಾಜ-ರಾಣಿ**

ಗುಳೇದಗುಡ್ಡದ ಅಶೋಕ ತಿಪ್ಪಾ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ರಾಜನು ತನ್ನ ಬಲಗೈಯನ್ನು ರಾಣಿಯ ಹೆಗಲ ಮೇಲೆ ಬಳಸಿರುವುದು ಮಾತ್ರ ವಿಶೇಷ. ಇಲ್ಲಿ ರಾಣಿಯ ರವಿಕೆ ಬಿಳಿಯದಾಗಿದ್ದು, ಸೀರೆ ಕಪ್ಪು ಮತ್ತು ಕೆಂಪು ವರ್ಣದ ಪಟ್ಟಿ ಪಟ್ಟಿಯಾಗಿದೆ. ಬಂಗಾರ ವರ್ಣದ ದಡಿಯನ್ನು ಚಿತ್ರಿಸಲಾಗಿದೆ. ರಾಣಿಯು ತನ್ನ ಬಲಗೈಯಿಂದ ಕಮಲದ ಹೂವೊಂದನ್ನು ಕೊಡುತ್ತಿರುವಂತೆ ಚಿತ್ರಿಸಲಾಗಿದೆ. ರಾಜ ತನ್ನ ಎಡಗೈಯಿಂದ ತನ್ನ ಹಿಂಬದಿ ಬಿಟ್ಟ ದೊಡ್ಡ ಬಟ್ಟೆಯನ್ನು ಕೈಯಲ್ಲಿ ಹಿಡಿದು ಕರೆಯುತ್ತಿರುವಂತೆ ಚಿತ್ರಿಸಲಾಗಿದೆ. ಹಿನ್ನೆಲೆ ವಿನ್ಯಾಸ ಕೆಂಪು ಮಿಶ್ರಿತ ನೀಲಿ ಬಣ್ಣವನ್ನು ಹೊಂದಿದೆ.

**೩೩. ಸುಖ ಸಲ್ಲಾಪದಲ್ಲಿ ರಾಜ-ರಾಣಿ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ರಾಜನು ತನ್ನ ಎಡಗೈಯನ್ನು ರಾಣಿಯ ಬಲಭುಜ ಹಿಡಿದು ಬೆನ್ನ ಹಿಂದೆ ನಿಂತಿರುವುದು, ಒಂದೇ ಕಾಲು ಕಾಣುತ್ತಿರುವುದು ಮಾತ್ರ ವಿಶೇಷ. ಇಲ್ಲಿ ರಾಣಿಯ ರವಿಕೆ ಬಿಳಿಯದಾಗಿದ್ದು, ಸೀರೆ ಕೆಂಪು ವರ್ಣದ ಪಟ್ಟಿ ಪಟ್ಟಿಯಾಗಿದೆ. ಕೆಳಗಡೆ ಲಂಗವು ಹಳದಿಯದಾಗಿದ್ದು, ಬಂಗಾರ ವರ್ಣದ ದಡಿಯನ್ನು ಚಿತ್ರಿಸಲಾಗಿದೆ. ರಾಣಿಯು ತನ್ನ ಬಲಗೈ ಮೇಲೆ ಹಸಿರು ಬಣ್ಣದ ಗಿಳಿಯೊಂದನ್ನು ಕುಳ್ಳಿರಿಸಿಕೊಂಡದ್ದು ಇಡೀ ಚಿತ್ರದ ಒಟ್ಟು ವಿಶೇಷತೆ. ರಾಜ ತನ್ನ ಮುಖವನ್ನು ರಾಣಿಯ ಕಿವಿಯ ಬಳಿ ಹಚ್ಚಿ ನಿಂತುಕೊಂಡಿದ್ದಾನೆ. ಇಲ್ಲಿ ರಾಜನ ಪೈಜಾಮೂ ಕಪ್ಪಾಗಿರುವುದು ವಿಶೇಷ. ಹಿಂದಿನ ಎಲ್ಲಾ ಚಿತ್ರಗಳಲ್ಲಿರುವಂತೆ ಅರಮನೆಯ ಪರದೆಯನ್ನೂ ಇಲ್ಲಿ ಕೆಂಪಾಗಿ ಚಿತ್ರಿಸಿದೆ. ಹಿನ್ನೆಲೆ ವಿನ್ಯಾಸ ಕೆಂಪು ಮಿಶ್ರಿತ ನೀಲಿ ಬಣ್ಣವನ್ನು ಹೊಂದಿದೆ.

**೩೪. ಸಲ್ಲಾಪದಲ್ಲಿ ಸತಿ, ಪತಿ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ಹಿಂದಿನ ಚಿತ್ರದ ಎಲ್ಲಾ ಅಂಶಗಳು ಅಡಕವಾಗಿವೆ. ಆದರೆ ಇಲ್ಲಿ ಪತಿ ಅಥವಾ ಸತಿ ಸುಮ್ಮನೆ ನಿಂತುಕೊಳ್ಳದೆ

ಅಥವಾ ಕುಳಿತುಕೊಳ್ಳದೆ ಪತಿಯು ಸತಿಯ ಎಡಗೈಯನ್ನು ಹಿಡಿದು ಸರಸ ಸಲ್ಲಾಪಕ್ಕೆ ಆಹ್ವಾನಿಸುವಂತೆ ಚಿತ್ರಿಸಲಾಗಿದೆ. ಸತಿಯು ತನ್ನ ಎಡಗೈಯನ್ನು ಬೇಡವೆನ್ನುವಂತೆ ಮಾಡಿದ್ದಾಳೆ. ಇಲ್ಲಿಯೂ ಕೂಡ ಸತಿಯ ಲಂಗ ಹರಡಿಕೊಂಡಂತೆ ಕಲಾತ್ಮಕವಾಗಿ ಮತ್ತು ನಕ್ಷಾ ಮಾದರಿಗಳಿಂದ ಕೆಂಪು ವರ್ಣದಲ್ಲಿಯೇ ಅದ್ಭುತವಾಗಿ, ಚಿತ್ರಿಸಿ ಚಿತ್ರವನ್ನು ಪೂರ್ಣಗೊಳಿಸಲಾಗಿದೆ.

**೩೫. ಏಣಿಯ ಮೇಲೆ ರಾಜ ಪ್ರೇಮಿ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ರಾಜನು ಅಟ್ಟದ ಮೇಲೆ ಮಲಗಿರುವ ರಾಣಿಯನ್ನು ಮುದ್ದಿಸಲು ಏಣಿಯನ್ನು ಹತ್ತಿನಿಂತು ರಾಣಿಯನ್ನು ಸಂಧಿಸುವ ವಿಶಿಷ್ಟವಾದ ಚಿತ್ರ ಇದಾಗಿದೆ. ಅರಮನೆಯ ವಿನ್ಯಾಸದಲ್ಲಿ ಕಟಂಜನವನ್ನು ಬಿಳಿದಾದ ಚಿಕ್ಕ ಚಿಕ್ಕ ಕಂಭಗಳಿಂದ ಕೆಂಪು ಹಿನ್ನೆಲೆಯಲ್ಲಿ ರಚಿಸಿ, ಕೆಳಗಡೆ ಕಂದು ವರ್ಣದ ಕಲ್ಲಿನ ಗೋಡೆಯನ್ನು ತೋರಿಸಲಾಗಿದೆ. ಕಪ್ಪು ಬಣ್ಣದ ಪೋಷಾಕು ತೊಟ್ಟ ರಾಜ ಬೆನ್ನ ಹಿಂದೆ ಕೆಂಪು ವರ್ಣದ ಶೆಲ್ಯಯನ್ನು ಹಾಕಿಕೊಂಡಿದ್ದಾನೆ. ಉದ್ದನೆಯ ಖಡ್ಗವೊಂದು ಕೆಳಗೆ ಜೋತು ಬಿದ್ದಿದೆ. ಹಗ್ಗದ ಏಣಿಯ ಹಲ್ಲುಗಳ ಮೇಲೆ ಕಾಲು ಇಲ್ಲದೆ ಅವಾಸ್ತವಿಕವೆನಿಸಿದರೂ, ಆ ನಾಯಕನ ಸಾಹಸಕ್ಕೆ ಪುಷ್ಟಿ ನೀಡುತ್ತದೆ. ಪೈಜಾಬಿನ ಬಣ್ಣ ತೆಳು ನೀಲಿಯಾಗಿದ್ದು, ಅದೇ ಬಣ್ಣವನ್ನು ರಾಣಿಯ ರವಿಕೆಗೆ ಲೇಪಿಸಿ ಹಾಗೂ ಹಿನ್ನೆಲೆ ಪರದೆಗೆ ಹಾಕಿ ಸಮತೋಲನ ಕಾಯ್ದುಕೊಳ್ಳಲಾಗಿದೆ. ಕೆಂಪು ಮತ್ತು ಹಳದಿ ವರ್ಣದ ಅಡ್ಡಡ್ಡ ಪಟ್ಟಿಗಳುಳ್ಳ ಸೀರೆಯನ್ನುಟ್ಟ ರಾಣಿ ಬೋರಲಾಗಿ ಮಲಗಿಕೊಂಡು ರಾಜನ ಮುಖಕ್ಕೆ ತನ್ನ ಮುಖವನ್ನು ಹಚ್ಚಿದ್ದಾಳೆ. ಎಡಗೈಯನ್ನು ಕಟಂಜನದ ಮೇಲೆ ಊರಿ ಬಲಗೈಯಿಂದ ರಾಜನ ಬೆನ್ನನ್ನು ಬಳಸಿದ್ದಾಳೆ. ಕೊರಳ ಆಭರಣಗಳು ಅಂದ ಹೆಚ್ಚಿಸಿವೆ. ತೆಳು ನೀಲಿ ಬಣ್ಣದ ಹಿನ್ನೆಲೆ ಗೋಡೆಯನ್ನು ರಚಿಸಲಾಗಿದ್ದು, ಪರದೆಯಲ್ಲಿ ಕೆಂಪು ಹಳದಿಗಳ ಜೊತೆಗೆ ತೆಳು ನೀಲಿ ಪಟ್ಟಿಯೊಂದನ್ನು ಇಟ್ಟು ಹಿಂದಿರುವ ಎಲ್ಲಾ ಚಿತ್ರಗಳಿಗಿಂತ ಇಲ್ಲಿ ಪರದೆ ವಿಶೇಷತೆಯನ್ನು ಕಾಣಬಹುದು.

**೩೬. ಸುಖ ಸಲ್ಲಾಪದಲ್ಲಿ ರಾಜ-ರಾಣಿ**

ಗುಳೇದಗುಡ್ಡದ ವೀರಸಂಗಪ್ಪ ಭಾವಿ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ರಾಜನು ತನ್ನ ಎಡಗೈಯನ್ನು ರಾಣಿಯ ಬಲರಟ್ಟೆಗೆ ಹಿಡಿದು ಬೆನ್ನ ಹಿಂದೆ ನಿಂತಿರುವಂತೆ ಒಂದೇ ಕಾಲು ಕಾಣುತ್ತಿರುವುದು ವಿಶೇಷ. ಇಲ್ಲಿ ರಾಣಿಯ ರವಿಕೆ ತೆಳು ಹಸಿರು ಬಣ್ಣದಾಗಿದ್ದು, ಸೀರೆ ಕೆಂಪು ವರ್ಣದ ಪಟ್ಟಿ ಪಟ್ಟಿಯಾಗಿದೆ. ಬಂಗಾರ ವರ್ಣದ ದಡಿಯನ್ನು ಚಿತ್ರಿಸಲಾಗಿದೆ. ರಾಣಿಯು ತನ್ನ ಎಡಗೈ ಮೇಲೆ ಬಿಳಿ ಬಣ್ಣದ ಕೆಂಪು ಚುಂಚವುಳ್ಳ ಗಿಳಿಯೊಂದನ್ನು ಕುಳ್ಳರಿಸಿಕೊಂಡದ್ದು ಇಡೀ ಚಿತ್ರದ ಒಟ್ಟು ವಿಶೇಷತೆ. ರಾಜ ತನ್ನ ಮುಖವನ್ನು ರಾಣಿಯ ಗಲ್ಲದ ಬಳಿ ಹಚ್ಚಿ ನಿಂತುಕೊಂಡಿದ್ದಾನೆ. ಹಿಂದಿನ ಎಲ್ಲಾ ಚಿತ್ರಗಳಲ್ಲಿರುವಂತೆ ಅರಮನೆಯ ಪರದೆಯನ್ನೂ ಇಲ್ಲಿ ಕೆಂಪಾಗಿ ಚಿತ್ರಿಸಿದೆ. ಹಿನ್ನೆಲೆ ವಿನ್ಯಾಸ ಕೆಂಪು ಮಿಶ್ರಿತ ನೀಲಿ ಬಣ್ಣವನ್ನು ಹೊಂದಿದೆ.

## ೩೭. ಸಿಂಹಾಸನದ ಮೇಲೆ ಪತಿ

ಗುಳೇದಗುಡ್ಡದ ವೀರಸಂಗಪ್ಪ ಭಾವಿ ಅವರ ಮನೆಯಲ್ಲಿ ಸಂಗ್ರಹಿತವಾಗಿರುವ ಚಿತ್ರದಲ್ಲಿ ಪತಿಯು ಸಿಂಹಾಸನದ ಮೇಲೆ ಕುಳಿತಿದ್ದು, ಸತಿ ಅವನ ಹಿಂದೆ ನಿಂತಿದ್ದಾಳೆ. ಕೆಂಪು ಪ್ಯಾಂಟ್‌ನ್ನು ಧರಿಸಿದ, ಬೂಟು ಹಾಕಿದ ಪತಿ ಎಡಗಾಲನ್ನು ಬಲಗಾಲ ಮೇಲೆ ಹಾಕಿ ಕಪ್ಪು ಬಣ್ಣದ ಕೋಟನ್ನು ಧರಿಸಿ ಕುಳಿತಿದ್ದಾನೆ. ಹೆಚ್ಚು ಬಿಳಿದಾದ ಕೆಂಪು ಬಣ್ಣದ ಮುಖಬಣ್ಣವನ್ನು ಹೊಂದಿದ ಪತಿ ಚೂಪಾದ ಮೀಸೆಗಳನ್ನು ಹೊಂದಿದ್ದು, ಅಲಂಕೃತ ಕಿರೀಟವನ್ನು ಧರಿಸಿದ್ದಾನೆ. ಹಿಂದೆ ಬಿದ್ದ ಕೂದಲು ಅಲಂಕೃತವಾಗಿವೆ. ಸಿಂಹಾಸನವು ತೆಳು ಹಸಿರು ಬಣ್ಣದ ಒಳ ಬಟ್ಟೆಯನ್ನು ಹೊಂದಿದ್ದು, ಕೆಂಪು ಬಣ್ಣದ ಅಂಚಿನಿಂದ ಸಿಂಹಾಸನ ರಚಿತವಾಗಿದೆ. ಪತಿಯ ಎಡಭಾಗದಲ್ಲಿ ಎದ್ದು ನಿಂತ ಸತಿ ಎಡಗೈಯನ್ನು ನಡುವಿನ ಮೇಲಿಟ್ಟು, ಬಲಗೈಯನ್ನು ಪತಿಯ ಬಲ ಹೆಗಲ ಮೇಲೆ ಇಟ್ಟುಕೊಂಡು, ಮುಂದೆ ಸೆರಗು ಮಾಡಿದ ಕೆಂಪು ಬಣ್ಣದ ಸೀರೆಯನ್ನುಟ್ಟು, ಬಿಳಿ ಬಂಗಾರ ಬಣ್ಣದ ಅಂಚುಳ್ಳ ಲಂಗವನ್ನು ಧರಿಸಿದ್ದಾಳೆ. ಕಪ್ಪು ಬಣ್ಣದ ರವಿಕೆಗೆ ಬಂಗಾರ ಬಣ್ಣದ ಅಂಚಿದೆ. ಈ ಚಿತ್ರದಲ್ಲಿ ಕಡುನೀಲಿ ಬಣ್ಣದ ಹಿನ್ನೆಲೆ ವಿನ್ಯಾಸ ವಿಶೇಷವಾಗಿದೆ.

## ೩೮. ಸಿಂಹಾಸನಾರೂಢ ರಾಜ

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದ ಮಧ್ಯದಲ್ಲಿ ರಾಜನೊಬ್ಬ ಸಿಂಹಾಸನದ ಮೇಲೆ ಕುಳಿತಿರುವ ಚಿತ್ರವಿದೆ. ಕೆಂಪು ಕಿರೀಟ, ಬಂಗಾರದ ಅಂಚು, ಚೂಪಾದ ಮೀಸೆ, ರಾಜ ವೈಭವದ ಪೋಷಾಕು, ಕೊರಳಲ್ಲಿ ಆಭರಣಗಳು, ನೀಲಿ ಬಣ್ಣದ ಕೋಟಿನಂತಹ ನಿಲುವಂಗಿ, ಅದರ ಅಂಚುಗಳಲ್ಲಿ ಬಂಗಾರ ಬಣ್ಣದ ಪಟ್ಟಿ ಪಟ್ಟಿಗಳ ವಿನ್ಯಾಸವಿದೆ. ಎಡಗೈಯನ್ನು ಸಿಂಹಾಸನದ ಕೈಮೇಲೆ ಇಟ್ಟುಕೊಂಡು ತೋರು ಬೆರಳು ಮತ್ತು ಕಿರು ಬೆರಳುಗಳನ್ನು ಇಳಿಬಿಟ್ಟಿದ್ದಾನೆ. ಎಡಗೈಯನ್ನು ಮೊಣಕಾಲವರೆಗೆ ಜೋತು ಬಿಟ್ಟಿದ್ದಾನೆ. ಮೊಣಕಾಲಿನವರೆಗೆ ಕೋಟಿನಂತಹುದೇ ಪ್ಯಾಂಟನ್ನು ಧರಿಸಿ ಬಂಗಾರ ಬಣ್ಣದ ಕಾಲು ಚೀಲದಂತಹ ಉಡುಪನ್ನು ಪಾದಗಳಿಗೆ ಕೆಂಪು ಬಣ್ಣದ ಬೂಟುಗಳನ್ನು ಧರಿಸಿದ್ದಾನೆ. ಬಲಗಾಲನ್ನು ಮಡಿಚಿಕೊಂಡು ಸ್ವಲ್ಪ ಮೇಲೆತ್ತಿ ತುದಿಗಾಲನ್ನು ಊರಿದ್ದಾನೆ. ಇನ್ನು ಸಿಂಹಾಸನವು ಬಂಗಾರ ಬಣ್ಣದ್ದಾಗಿದ್ದು, ಹಿನ್ನೆಲೆ ಆಧಾರ ವರ್ತುಲ ಕೆಂಪಾಗಿದ್ದು, ಕುಳಿತುಕೊಳ್ಳುವ ಸ್ಥಳ ಕಡು ಹಸಿರು ಬಣ್ಣದಾಗಿದೆ. ಅರಮನೆಯ ಹಿನ್ನೆಲೆ ಬಟ್ಟೆ, ನೆರೆಗೆಗಳು ಕೆಂಪು ಬಣ್ಣದಾಗಿದ್ದು ಬಂಗಾರ ಬಣ್ಣದ ಅಂಚನ್ನು ಹೊಂದಿ ಅಲಂಕೃತವಾಗಿದೆ. ಸಿಂಹಾಸನದ ಕೆಳಗೆ ಹೂವೊಂದನ್ನು ಇರಿಸಿ, ಬಲಗಡೆಯಲ್ಲಿ ಹಣ್ಣುಗಳನ್ನಿರಿಸಿ ವರ್ಣ ಸಮತೋಲನ ಕಾಯ್ದುಕೊಳ್ಳಲಾಗಿದೆ.

## ೩೯. ರಾಜನ ಅರ್ಧ ಭಾವ ಚಿತ್ರ

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರವು ಚೌಕಾಕಾರದಲ್ಲಿ ಇದ್ದರೂ, ದೀರ್ಘ ವರ್ತುಲದ ಕಟ್ಟಿನಿಂದ ಚಿತ್ರವನ್ನು ಪೂರ್ಣಗೊಳಿಸಲಾಗಿದೆ. ಉಳಿದ ಸ್ಥಳದಲ್ಲಿ ನಾಲ್ಕೂ ಮೂಲೆಗೆ ಬಂಗಾರ ಬಣ್ಣದ ನಕ್ಷಾ ಚಿತ್ರವನ್ನು ರಚಿಸಲಾಗಿದೆ. ರಾಜನು ಗಂಭೀರ ವದನನಾಗಿದ್ದು, ಅಗಲವಾದ ಕಣ್ಣುಗಳು, ಉದ್ದವಾದ ಮೊಣಚಾದ ಮೀಸೆ, ಕಿರೀಟದಲ್ಲಿ ಜೋತುಬಿದ್ದ

ಮುತ್ತಿನ ಹಾರಗಳು ಕಪ್ಪನೆಯ ಕೂದಲು, ಕಿರೀಟದ ವಿನ್ಯಾಸವೂ ವಿಭಿನ್ನವಾಗಿದ್ದು, ಆಚೆ ಈಚೆ ಚೂಪಾಗಿ ಹೊರಗಡೆ ಹಾಯ್ದಿದೆ. ಭುಜದ ಮೇಲೆ ದಪ್ಪನೆಯ ಬಟ್ಟೆ ವಿನ್ಯಾಸವಿದ್ದು, ಕೊರಳಲ್ಲಿ ದಪ್ಪ ಪದಕವುಳ್ಳ ಮುತ್ತಿನ ಗೊಂಡೆಗಳನ್ನು ಹಾಕಲಾಗಿದೆ. ಮುಖದ ಬಳಿ ದೀರ್ಘ ವರ್ತುಲಕ್ಕೆ ಅಂಟಿಕೊಂಡು ಎರಡು ಅಲಂಕೃತವಾದ ಕಾಂಡಲೀಯರ್ ದೀಪಗಳನ್ನು ಮೇಲ್ಮುಖವಾಗಿ ಚಿತ್ರಿಸಲಾಗಿದೆ.

**೪೦. ರಸಿಕ ರಾಜ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ದಪ್ಪ ಮುಖದ, ದೊಡ್ಡದಾದ ಕಣ್ಣುಗಳುಳ್ಳ, ಚೂಪಾದ ಮೀಸೆ, ಹಣೆಯ ಮೇಲೊಂದು ಕುಂಕುಮ ಬೊಟ್ಟು, ಕಪ್ಪನೆಯ ಕೂದಲು, ಕಿವಿಯಲ್ಲಿ ವಿನ್ಯಾಸಭರಿತ ಓಲೆ, ಮುಸ್ಲಿಂ ಟೋಪಿಯಂತಹ ಕಿರೀಟದಲ್ಲಿ ಕೆಂಪು, ಹಸಿರು ಬಣ್ಣದ ಪಟ್ಟಿಗಳಿದ್ದು, ಅದಕ್ಕೆ ಹಳದಿ ಬಣ್ಣದ ಅಂಚನ್ನು ನೀಡಲಾಗಿದೆ. ಮುಖದ ಹತ್ತಿರ ಭಾಗಕ್ಕೆ ಕಿರೀಟದಲ್ಲಿ ಬೆಳ್ಳಿ ಬಣ್ಣದ ಚೌಕಾಕಾರದ ಪಟ್ಟಿಗಳನ್ನಿರಿಸಲಾಗಿದೆ. ಮುಖದ ಬಲಬದಿಗೆ ಮುತ್ತಿನ ಗೊಂಡೆಯವೊಂದನ್ನು ಜೋತುಬಿಡಲಾಗಿದೆ. ಕೆಂಪು ಬಣ್ಣದ ಬಟ್ಟೆಯನ್ನು ಧರಿಸಿದ್ದು, ಬಟ್ಟೆಯ ಅಲ್ಲಲ್ಲಿ ಹಳದಿ ಮತ್ತು ಹಸಿರು ಬಣ್ಣದ ಹೂವು ವಿನ್ಯಾಸವನ್ನು ರಚಿಸಲಾಗಿದೆ. ಕೊರಳಲ್ಲಿ ದೊಡ್ಡ ಪದಕವುಳ್ಳ ಬಿಳಿ ಮುತ್ತಿನ ಸರವನ್ನು ಹಾಕಲಾಗಿದೆ. ಬಿಳಿಯ ತೋಳುಳ್ಳ ಬಲಗೈಯಲ್ಲಿ ಕೆಂಪು ಬಣ್ಣದ ಗುಲಾಬಿ ಹೂವೊಂದನ್ನು ಹಿಡಿದಿದ್ದು, ಹೂವಿನ ಸುತ್ತಲೂ ಹಸಿರು ಬಣ್ಣದ ಎಲೆಗಳನ್ನು ಚಿತ್ರಿಸಲಾಗಿದೆ. ತೆಳು ನೀಲಿ ಬಣ್ಣದ ಹಿನ್ನೆಲೆ ಇದೆ. ಅಂಗಿಗೆ ಸಮಾನಾಂತರವಾಗಿ ಮೇಲೆ ಕೆಂಪು ಬಣ್ಣದ ಬಟ್ಟೆಗಳನ್ನು ಇಳಿಬಿಟ್ಟು ಸಮತೋಲನವನ್ನು ಕಾಯಲಾಗಿದೆ.

**೪೧. ಆಂಗ್ಲ ರಾಜನ ಭಾವ ಚಿತ್ರ**

ಬಾಗಲಕೋಟೆಯ ಮಹೇಂದ್ರ ಸರಾಫ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರ ಚೌಕಾಕಾರದ್ದಾಗಿದ್ದರೂ, ದೀರ್ಘ ವರ್ತುಲದಲ್ಲಿ ಚಿತ್ರವನ್ನು ಪೂರ್ಣಗೊಳಿಸಲಾಗಿದೆ. ರಾಜನು ಗಂಭೀರ ವದನನಾಗಿದ್ದು, ಅಗಲವಾದ ಕಣ್ಣುಗಳು, ಉದ್ದವಾದ ಮೊನಚಾದ ಮೀಸೆ, ದಾಡಿ, ಕಪ್ಪನೆಯ ಕೂದಲು, ಕಿರೀಟದ ವಿನ್ಯಾಸವೂ ಅಧಿಕ ಆಕಾರದಲ್ಲಿ ಕೆಂಪು ಬಣ್ಣದಿಂದ ರಚಿತಗೊಂಡಿದೆ. ಭುಜದ ಮೇಲೆ ದಪ್ಪನೆಯ ಬಟ್ಟೆ ವಿನ್ಯಾಸವಿದ್ದು, ಕೊರಳಲ್ಲಿ ದಪ್ಪ ಮುತ್ತಿನ ಹಾರಗಳನ್ನು ಹಾಕಲಾಗಿದೆ. ದೀರ್ಘ ವರ್ತುಲದಲ್ಲಿ ನೀಲಿ ಬಣ್ಣದ ಹಿನ್ನೆಲೆ ವಿನ್ಯಾಸ ಇರುವ ಈ ಚಿತ್ರ ಕಪ್ಪು ಬಣ್ಣದ ಚೌಕಾಕಾರವನ್ನು ಹೊಂದಿದೆ. ಇದು ಬ್ರಿಟಿಷ್ ಅಧಿಕಾರಿಯೊಬ್ಬನ ಚಿತ್ರ ಆಗಿರಬಹುದು.

**೪೨. ಕುದುರೆ ಮೇಲೆ ಮೈಲಾರ**

ಅಮೀನಗಡದ ಬಸಪ್ಪ ಗರಡಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಬಿಳಿ ಕುದುರೆಯ ಮೇಲೆ ಕುಳಿತ ರಾಜ ಬಲಗೈಯಲ್ಲಿ ಬಿಲ್ಲೆಯನ್ನು ಹಿಡಿದು ಆಭರಣಗಳಿಂದ ಶೋಭೆಗೊಂಡು ರಾಣಿಯನ್ನು ತನ್ನ ಪಕ್ಕಕ್ಕೆ ಕುಳ್ಳರಿಸಿಕೊಂಡು ಎಡಗೈಯಿಂದ ಹಿಡಿದುಕೊಂಡಿದ್ದಾನೆ ಹಾಗೂ ತನ್ನ ಮುಂದೆ ಇನ್ನೊಬ್ಬ

ಚಿಕ್ಕ ಮಹಿಳೆಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಮೇಲೆ ಛತ್ರಚಾಮರ ರಾರಾಜಿಸುತ್ತಿವೆ. ಕೆಂಪು ಬಣ್ಣದ ಧ್ವಜವನ್ನು ಕುದುರೆಯ ಮುಂದೆ ಕಟ್ಟಲಾಗಿದೆ. ಹಿಂದೆ ಸೇವಕ ಚಾಮರವನ್ನು ಹಿಡಿದು ಹೊರಟಿದ್ದಾನೆ. ಮುಂದೊಬ್ಬ ಸೇವಕ ಕಹಳೆಯನ್ನು ಊದುತ್ತಾ ಸಾಗಿದ್ದಾನೆ. ಕುದುರೆಯ ಕಾಲು ಕೆಳಗೆ ಎರಡು ಜೋಡಿ ನಾಯಿಗಳು ವೇಗವಾಗಿ ಹೊರಟಿವೆ. ಹಿಂದೆ ಚಾಚಿದ ಕಿರೀಟ, ಮೀಸೆ, ಮೈತುಂಬ ಆಭರಣಗಳು, ಕೆಂಪು ಬಣ್ಣದ ಬಟ್ಟೆ, ಹಳದಿ ಬಣ್ಣದ ಧೋತ್ರ, ಕಾಲಿಗೆ ಚಪ್ಪಲಿಯನ್ನು ಹಾಕಿಕೊಂಡು ಕುದುರೆಯ ಮೇಲೆ ಕುಳಿತಿರುವ ಈ ಚಿತ್ರ ಇತರ ಎಲ್ಲಾ ಚಿತ್ರಗಳಿಗಿಂತ ಭಿನ್ನವಾಗಿದೆ.

**೪೩. ಕುದುರೆ ಮೇಲೆ ಮಲ್ಲಾರಿ**

ಬಾಗಲಕೋಟೆಯ ಎಸ್.ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ನೀಲಿ ಮಿಶ್ರಿತ ಬಿಳಿ ಕುದುರೆಯ ಮೇಲೆ ಅಲಂಕೃತ ರಾಜ ಬಲಗೈಯಲ್ಲಿ ಈಟಿಯನ್ನು ಹಿಡಿದು ಆಭರಣಗಳಿಂದ ಅಲಂಕೃತಗೊಂಡ ಎಡಗೈಯಿಂದ ರಾಣಿಯನ್ನು ತನ್ನ ಪಕ್ಕಕ್ಕೆ ಕುಳ್ಳಿರಿಸಿಕೊಂಡಂತೆ. ತನ್ನ ಮುಂದೆ ಇನ್ನೊಬ್ಬ ಚಿಕ್ಕ ಮಹಿಳೆಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಸೇವಕ ಧ್ವಜವನ್ನು ಹಿಡಿದು ಹೊರಟಿದ್ದಾನೆ. ಮುಂದೊಬ್ಬ ಸೇವಕ ಚಾಮರವನ್ನು ಹಿಡಿದು ಸಾಗಿದ್ದಾನೆ. ಕುದುರೆಯ ಮುಂದಿನ ಎರಡು ಕಾಲು ಮೇಲೆಕ್ಕೆತ್ತಿದೆ. ಕೆಳಗೆ ಎರಡು ಜೋಡಿ ನಾಯಿಗಳು ವೇಗವಾಗಿ ಹೊರಟಿವೆ. ಚಾಚಿ ಕಟ್ಟಿದ ಮುಡಿ ಕಿರೀಟ, ಮೀಸೆ, ಮೈತುಂಬ ಆಭರಣಗಳು, ಕೆಂಪು ಬಣ್ಣದ ಬಟ್ಟೆ, ಹಳದಿ ಬಣ್ಣದ ಧೋತ್ರ, ಕಾಲಿಗೆ ಚಪ್ಪಲಿಯನ್ನು ಹಾಕಿಕೊಂಡು, ಕುದುರೆಯ ಮೇಲೆ ಕುಳಿತಿರುವ ಈ ಚಿತ್ರ ಹಿಂದಿನ ಚಿತ್ರದ ಎಲ್ಲಾ ಹೋಲಿಕೆಗಳನ್ನು ಹೊಂದಿವೆ. ಈ ಎರಡೂ ಚಿತ್ರಗಳು ಮೈಲಾರ ಮತ್ತು ಅವನ ಮಡದಿಯರ ಚಿತ್ರವಿರಬಹುದೆನಿಸುತ್ತದೆ.

**ಕ. ಕಾಲ್ಪನಿಕ ಚಿತ್ರಗಳು**

ಜಗತ್ತಿನ ಪ್ರಸಿದ್ಧ ಪಾಶ್ಚಿಮಾತ್ಯ ಮತ್ತು ಭಾರತೀಯ ಕಲಾವಿದರು ಒಂದು ಕಾಲಘಟ್ಟದಲ್ಲಿ ರೆಕ್ಕೆ ಇರುವ ಮನುಷ್ಯರನ್ನು, ಮಕ್ಕಳನ್ನು ದೇವ ಮಾನವರು ಎಂಬಂತೆ ದೇವಾನುದೇವತೆಗಳಿಗೆ ಸಂಬಂಧಿಸಿದ ವ್ಯಕ್ತಿತ್ವಗಳೆಂಬ ಕಲ್ಪನೆಯಿಂದ ಚಿತ್ರರಚನೆ ಮಾಡಿರುವುದುಂಟು. ಪ್ರಸಿದ್ಧ ಕಲಾವಿದರೆಲ್ಲ ಏಸುವಿನ ಕುರಿತು ರಚಿಸಿದ ಬಹುತೇಕ ಚಿತ್ರಗಳಲ್ಲಿ ರೆಕ್ಕೆಗಳಿರುವ ಮಾನವರು, ಮಕ್ಕಳು ಮೇಲಿಂದ ಪುಷ್ಪವೃಷ್ಟಿಯನ್ನು ಗೈಯುವುದು ಸಾಮಾನ್ಯವಾಗಿತ್ತು. ಆ ಕಾಲದ ಹಲವು ಅಂಶಗಳನ್ನು ಉಳಿಸಿಕೊಂಡು ಭಾರತದಲ್ಲಿ ರಾಜಸ್ಥಾನ, ಗುಜರಾತ್ ಮತ್ತು ಪ್ರಮುಖ ರಾಜ್ಯದ ಕಲಾ ಶಾಲೆಗಳಿರುವ ಊರುಗಳಲ್ಲಿ ಇಂತಹ ಗಂಧರ್ವ ದಂಪತಿಗಳ ಕಾಲ್ಪನಿಕ ಚಿತ್ರಗಳಿದ್ದುದು ಕಂಡುಬರುತ್ತದೆ. ಇಂದಿಗೂ ಬಾಗಲಕೋಟೆ ಜಿಲ್ಲೆಯ ಹಲವರ ಮನೆಗಳಲ್ಲಿ ಗಾಜಿನ ಮೇಲಿನ ಕಾಲ್ಪನಿಕವಾದ ಗಂಧರ್ವರ ಚಿತ್ರಗಳು ಲಭ್ಯವಾಗಿವೆ. ಮಾನವ ಗಂಧರ್ವ ಸಂಬಂಧಗಳನ್ನು ಕಲ್ಪಿಸಿಕೊಂಡು ಅನೇಕ ರೋಚಕ ಚಿತ್ರಗಳನ್ನು ಚಿತ್ರಿಸಿದ್ದು ಇದೆ. ದಂಪತಿಗಳ ಚಿತ್ರದಂತೆಯೇ ಇದ್ದು, ಸ್ತ್ರೀಗೆ ಮಾತ್ರ ಬೆನ್ನಿಗೆ ರೆಕ್ಕೆಗಳಿರುವುದು ಇಲ್ಲಿನ ಚಿತ್ರಗಳ ವಿಶೇಷತೆ. ಒಂದನ್ನೊಂದು ಹೋಲುತ್ತಿದ್ದು ಭಿನ್ನವಾಗಿರುವ ಅಂಶಗಳನ್ನು ಮಾತ್ರ ಇಲ್ಲಿ ಹೇಳಲಾಗಿದೆ.

**೪೪. ಸುಂದರಿಯನ್ನು ಕೊಂಡೊಯ್ಯುವ ಗಂಧರ್ವ ಸ್ತ್ರೀ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಆಕಾಶದಲ್ಲಿ ಕೆಂಪು ಬಣ್ಣದ ಸೀರೆಯನ್ನುಟ್ಟು ಒಂದು ಕಾಲನ್ನು ಮೇಲೆತ್ತಿ, ಎಡಗೈ ತೋರ್ಬೆರಳನ್ನು ಮೇಲೆ ತೋರುತ್ತಾ, ರೆಕ್ಕೆಗಳನ್ನು ಬಡಿಯುತ್ತಾ, ಹಾರಿ ಹೋಗುತ್ತಿರುವ ಗಂಧರ್ವ ಮಹಿಳೆ ಚಿತ್ರವಿದೆ. ಇನ್ನೊಬ್ಬ ಕನ್ಯೆಯನ್ನು ಎತ್ತಿಕೊಂಡು ಹಾರಿ ಹೋಗುವುದಾಗಿದೆ. ತಾಯಿಯ ಎದೆಯನ್ನು ಅಪ್ಪಿಕೊಂಡು ಹಾರುತ್ತಿರುವಂತೆ ಚಿತ್ರಿಸಲಾಗಿದ್ದು, ಸಣ್ಣ ಹುಡುಗಿಗೆ ಕಿರೀಟದೊಂದಿಗೆ ಉದ್ದವಾದ ಕೂದಲು, ತೆಳು ಹಸಿರು ಬಣ್ಣದ ಲಂಗವನ್ನು ಚಿತ್ರಿಸಲಾಗಿದೆ. ತಾಯಿ ಆಕೃತಿಯ ಬಲಗೈ ಸಣ್ಣ ಹುಡುಗಿಯ ಸೊಂಟವನ್ನು ಹಿಡಿದುಕೊಂಡು ಹಾರುತ್ತಿರುವಂತೆ ಕಂಡುಬರುತ್ತದೆ. ಇಡೀ ಚಿತ್ರದ ಆಕೃತಿಯನ್ನು ಬಿಟ್ಟು ಉಳಿದೆಲ್ಲಾ ಭಾಗವು ಆಕಾಶ ಎಂಬಂತೆ ತೆಳು ನೀಲಿ ಬಣ್ಣದಿಂದ ರಚಿಸಲಾಗಿದೆ.

**೪೫. ಪುರುಷ ಪ್ರಿಯ- ಗಂಧರ್ವ ಪ್ರಿಯೆ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಸತಿ ಗಂಧರ್ವ ಕನ್ಯೆ. ಎದುರುಬದುರು ನಿಂತ ಪತಿ ಮಾತ್ರ ಗಂಧರ್ವನೆನಿಸುವುದಿಲ್ಲ. ಏಕೆಂದರೆ ಅವನಿಗೆ ರೆಕ್ಕೆಗಳಿಲ್ಲ. ಗಂಧರ್ವ ಕನ್ಯೆಯನ್ನು ವರಿಸಲು ವಿನಂತಿಸಿಕೊಳ್ಳುತ್ತಿರುವಂತೆ ಅವಳ ಎರಡೂ ಕೈಗಳನ್ನು ಹಿಡಿದು ನಿಂತಿದ್ದಾನೆ. ಅವಳಿಗೆ ಕೆಂಪು ಬಣ್ಣದ ಉದ್ದ ತೋಳಿನ ರವಿಕೆ ಇದ್ದು, ಹಳದಿ ಬಣ್ಣದ ಕೆಂಪು ಪಟ್ಟಿಗಳುಳ್ಳ ಹಾರ ಎರಡು ವಿಭಾಗಗಳಾಗಿ ಬಿಳಿ ಬಣ್ಣದ ಲಂಗ, ಅದರೊಳಗೆ ಕಪ್ಪು ಮತ್ತು ನೀಲಿ ಮಿಶ್ರಿತ ಪೈಜಾಮು, ಕೆಂಪಾದ ಬೂಟುಗಳು, ಬಲಗಾಲನ್ನು ಎತ್ತಿಟ್ಟು ತುದಿಗಾಲಿನ ಮೇಲೆ ನಿಂತಿರುವಂತಿದೆ. ಹೆಣ್ಣಿಗೆ ಮಾತ್ರ ದೊಡ್ಡದಾದ ರೆಕ್ಕೆಗಳಿದ್ದು ಟೋಪಿ, ಜಡೆ, ನತ್ತು ಮುಂತಾದ ವಿಶೇಷ ಅಂಶಗಳು ಎದ್ದುಕಾಣುತ್ತವೆ. ಪುರುಷನ ಚಿತ್ರದಲ್ಲಿ ಮಾತ್ರ ಅದೇ ಕಪ್ಪು ನಿಲುವಂಗಿ, ಕೆಂಪು ಪೈಜಾಮು, ಕತ್ತಿ, ಗುರಾಣಿ, ಕಪ್ಪು ಬೂಟುಗಳೊಂದಿಗೆ ನಿಂತಿದ್ದಾನೆ. ಮೇಲ್ಭಾಗದಲ್ಲಿ ಕೆಂಪು ಮತ್ತು ನೀಲಿ ಮಿಶ್ರಿತ ಕಪ್ಪು ಬಣ್ಣಗಳ ಪರದೆಗಳಿದ್ದು, ಬಂಗಾರ ಬಣ್ಣದ ಅಂಚುಗಳಿವೆ. ಕೆಳಗೆ ನೆಲದಲ್ಲಿ ಕಡುಹಳದಿ ಬಣ್ಣವನ್ನು ಲೇಪಿಸಿ, ಕೆಂಪು ಬಣ್ಣದ ಹೂವುಗಳನ್ನು ಹಾಸಲಾದ ಈ ಚಿತ್ರವು ಒಂದು ಪೂರ್ಣ ಪ್ರಮಾಣದ ಸಂಯೋಜನೆಯಾಗಿದೆ.

**೪೬. ಅರಸು ಕುಮಾರ, ಗಂಧರ್ವ ಸತಿ**

ಗುಳೇದಗುಡ್ಡದ ವೀರಸಂಗಪ್ಪ ಭಾವಿ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿ ಪುರುಷ ಸಿಂಹಾಸನದ ಮೇಲೆ ಕುಳಿತಿದ್ದು, ಗಂಧರ್ವ ಕನ್ಯೆ ಅವನ ಹಿಂದೆ ನಿಂತಿದ್ದಾಳೆ. ಕೆಂಪು ಪ್ಯಾಂಟ್‌ನ್ನು ಧರಿಸಿದ, ಬೂಟು ಹಾಕಿದ ಪುರುಷ ಬಲಗಾಲನ್ನು ಎಡಗಾಲ ಮೇಲೆ ಹಾಕಿ ಕಪ್ಪು ಬಣ್ಣದ ಬಿಳಿ ಬಣ್ಣದ ಚುಕ್ಕೆ ಹೊಂದಿದ ಕೋಟನ್ನು ಧರಿಸಿ ಕುಳಿತಿದ್ದಾನೆ. ಹೆಚ್ಚು ಬಿಳಿ ನಸು ಕೆಂಪು ಬಣ್ಣದ ಮುಖ ಹೊಂದಿದ ಪುರುಷ ಚೂಪಾದ ಮೀಸೆಗಳನ್ನು ಹೊಂದಿದ್ದು, ಅಲಂಕೃತ ಕಿರೀಟವನ್ನು ಧರಿಸಿದ್ದಾನೆ. ಹಿಂದೆ ಬಿದ್ದ ಕೂದಲು ಅಲಂಕೃತವಾಗಿವೆ. ಪುರುಷ ಎಡಭಾಗದಲ್ಲಿ ಎದ್ದುನಿಂತ ಗಂಧರ್ವ ಕನ್ಯೆಯು ತನ್ನ ಬಲಗೈಯನ್ನು ಪುರುಷನ

ಎಡಭುಜದ ಮೇಲಿಟ್ಟು, ಎಡಗೈಯನ್ನು ತನ್ನ ಸೊಂಟದ ಮೇಲೆ ಇಟ್ಟುಕೊಂಡು, ಬಿಳಿಯ ಬಂಗಾರ ಬಣ್ಣದ ಅಂಚುಳ್ಳ ಲಂಗವನ್ನು ಧರಿಸಿದ್ದಾಳೆ. ಕಪ್ಪು ಬಣ್ಣದ ರವಿಕೆಗೆ ಬಂಗಾರ ಬಣ್ಣದ ಅಂಚಿದೆ. ಒಂದು ವಿಶೇಷತೆ ಎಂದರೆ ಗಂಧರ್ವ ಕನ್ಯೆಯ ಕೊರಳಲ್ಲಿ ಯಾವ ಚಿತ್ರದಲ್ಲೂ ಇಲ್ಲದಂತ ಕೆಂಪು, ಹಳದಿ, ನೀಲಿ ಮತ್ತು ಬಿಳಿ ಬಣ್ಣದ ಹೂವುಗಳಿಂದ ಅಲಂಕೃತವಾದ ದೊಡ್ಡ ಹಾರವೊಂದಿದೆ. ಅವಳಿಗೆ ರೆಕ್ಕೆಗಳಿದ್ದು, ಪುರುಷನಿಗೆ ರೆಕ್ಕೆಗಳಿರುವುದಿಲ್ಲ.

### ೪೭. ಗಂಧರ್ವ ಕನ್ಯೆಯ ಒಲುಮೆಗಾಗಿ ಪುರುಷ

ಗುಳೇದಗುಡ್ಡದ ವೀರಸಂಗಪ್ಪ ಭಾವಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಪುರುಷನು ತನ್ನ ಬಲಗೈಯಿಂದ ಕನ್ಯೆಯ ಕೆನ್ನೆಯನ್ನು ಹಿಡಿಯುತ್ತಾ, ಪ್ರೀತಿಗೆ ಆಹ್ವಾನಿಸುವಂತೆ ಚಿತ್ರಿಸಲಾಗಿದೆ. ದೊಡ್ಡ ದೊಡ್ಡ ರೆಕ್ಕೆಗಳುಳ್ಳ ಕನ್ಯೆ ತನ್ನ ಎರಡೂ ಕೈಗಳನ್ನು ಕಟ್ಟಿ ನಿಂತಿದ್ದಾಳೆ. ಪುರುಷನ ವೇಷ ಕಪ್ಪು ಬಣ್ಣದ ಬಿಳಿ ಚುಕ್ಕೆಗಳಿರುವ ಅಂಗಿಯೊಂದಿಗೆ ಕೆಂಪು ಬಣ್ಣದ ಪೈಜಾಮು ಧರಿಸಿದ್ದಾನೆ. ನೆಲದಲ್ಲಿ ಹಳದಿ ಬಣ್ಣ ಲೇಪಿಸಿದ್ದು, ಉಳಿದೆಲ್ಲಾ ಭಾಗದಲ್ಲಿ ತೆಳು ನೀಲಿ ಬಣ್ಣವನ್ನು ಲೇಪಿಸಲಾಗಿದ್ದು, ಮೇಲ್ಭಾಗದಲ್ಲಿ ಕೆಂಪು ಬಣ್ಣದ ಪರದೆಗಳನ್ನು ಬಿಡಲಾಗಿದೆ. ಇಲ್ಲಿಯೂ ಕೂಡ ಕನ್ಯೆಯ ಲಂಗವನ್ನು ಕಲಾತ್ಮಕವಾಗಿ ಮತ್ತು ನಕ್ಷಾ ಮಾದರಿಗಳಿಂದ ಕೆಂಪು ವರ್ಣದಲ್ಲಿಯೇ ಅದ್ಭುತವಾಗಿ, ಅಗಲವಾಗಿ ಚಿತ್ರಿಸಿ ಚಿತ್ರವನ್ನು ಪೂರ್ಣಗೊಳಿಸಲಾಗಿದೆ.

### ೪೮. ಗಂಧರ್ವ ಕನ್ಯೆಯನ್ನು ಅಪ್ಪಿಕೊಂಡ ಪುರುಷ

ಗುಳೇದಗುಡ್ಡದ ವೀರಸಂಗಪ್ಪ ಭಾವಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಪುರುಷನು ಉದ್ದನೆಯ ಸೋಫಾದಂತಹ ಸಿಂಹಾಸನದಲ್ಲಿ ಕನ್ಯೆಯನ್ನು ತನ್ನ ಎರಡೂ ಕಾಲುಗಳ ಮಧ್ಯ ಸೆಳೆದುಕೊಂಡು ಸೊಂಟವನ್ನು ಬಳಸಿದ್ದಾನೆ. ಸ್ತ್ರೀ ಕೂಡ ತನ್ನ ಬಲಗೈಯನ್ನು ನಡುವಿನ ಮೇಲಿಟ್ಟು ನಿಂತುಕೊಂಡಿದ್ದಾಳೆ. ಹಿಂದೆ ಬಿಳಿದಾದ ರೆಕ್ಕೆಗಳು ಹರಡಿಕೊಂಡಿವೆ. ಕಪ್ಪು ಬಣ್ಣದ ಪೋಷಾಕು ಧರಿಸಿದ ರಾಜ ಸಿಂಹಾಸನದ ಮೇಲಿದ್ದು, ಕನ್ಯೆ ಅವನ ಎರಡೂ ಕಾಲುಗಳ ಮಧ್ಯ ನಿಂತಿದ್ದಾಳೆ. ಹಸಿರು ಬಣ್ಣದ ರವಿಕೆ, ಕೆಂಪು ಬಣ್ಣದ ಸೀರೆಯನ್ನುಟ್ಟಿದ್ದಾಳೆ. ಉಳಿದೆಲ್ಲಾ ಭಾಗದಲ್ಲಿ ತೆಳು ನೀಲಿ ಬಣ್ಣವನ್ನು ಲೇಪಿಸಲಾಗಿದ್ದು, ಮೇಲ್ಭಾಗದಲ್ಲಿ ಕೆಂಪು ಬಣ್ಣದ ಪರದೆಗಳನ್ನು ಬಿಡಲಾಗಿದೆ. ಇಲ್ಲಿಯೂ ಕೂಡ ಕನ್ಯೆಯ ಲಂಗವನ್ನು ಕಲಾತ್ಮಕವಾಗಿ ಮತ್ತು ನಕ್ಷಾ ಮಾದರಿಗಳಿಂದ ಕೆಂಪು ವರ್ಣದಲ್ಲಿಯೇ ಅದ್ಭುತವಾಗಿ, ಅಗಲವಾಗಿ ಚಿತ್ರಿಸಿ ಚಿತ್ರವನ್ನು ಪೂರ್ಣಗೊಳಿಸಲಾಗಿದೆ.

### ೪೯. ಪುರುಷ ಮತ್ತು ಗಂಧರ್ವ ಕನ್ಯೆಯ ಸರಸ

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಪುರುಷನು ಗಂಧರ್ವ ಕನ್ಯೆಯ ಹೆಗಲ ಮೇಲೆ ಬಲಗೈಯನ್ನು ಹಾಕಿ, ಎಡಗೈಯನ್ನು ಟೊಂಕಕ್ಕೆ ಸಿಕ್ಕಿಸಿದ ಕತ್ತಿಯ ಮೇಲೆ ಇಟ್ಟುಕೊಂಡಿದ್ದಾನೆ. ಕನ್ಯೆಯ ಕೊರಳಲ್ಲಿ ದೊಡ್ಡದೊಂದು ಹಾರವಿದೆ. ತೆಳು ನೀಲಿ ಬಣ್ಣದ ಎರಡು ವಿಭಾಗಗಳುಳ್ಳ ಲಂಗವನ್ನು ಧರಿಸಿದ್ದಾಳೆ. ಕೆಂಪು ಪೈಜಾಮು, ಕರಿಯ ಬೂಟುಗಳನ್ನು

ಧರಿಸಿದ್ದಾನೆ. ಹಿಂದೆ ದೊಡ್ಡದಾದ ರೆಕ್ಕೆ ಇದೆ. ಕಾಲಲ್ಲಿ ಕೆಂಪು ಬಣ್ಣದ ಕಟ್ಟೆಯಿದ್ದು, ಹಿನ್ನೆಲೆಗೆ ನೀಲಿ ಬಣ್ಣವನ್ನು ಬಳಸಲಾಗಿದೆ. ಮೇಲ್ಭಾಗದಲ್ಲಿ ಕೆಂಪು ಮತ್ತು ಹಳದಿ ಮಿಶ್ರಿತ ಪರದೆಗಳನ್ನು ಬಿಡಲಾಗಿದೆ.

**೫೦. ರಾಜಕುಮಾರನೊಡನೆ ಗಂಧರ್ವ ಸ್ತ್ರೀ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಮುಂದೆ ನಿಂತ ಪತಿ ಕಪ್ಪು ಬಣ್ಣದ ಪೋಷಾಕು ಧರಿಸಿ ಬಲಗೈಯನ್ನು ನಡುವಿಗೆ ಸಿಕ್ಕಿಸಿದ ಖಡ್ಗದ ಮೇಲೆ ಇಟ್ಟುಕೊಂಡಿದ್ದಾನೆ. ಸತಿ ಅವನ ಹಿಂದೆ ನಿಂತು ತನ್ನ ಬಲಗೈಯನ್ನು ಅವನ ಬಲಗೈ ರಟ್ಟೆಯ ಮೇಲಿಟ್ಟು ನಿಂತುಕೊಂಡಿದ್ದಾಳೆ. ಇಬ್ಬರಿಗೂ ಬೆನ್ನ ಹಿಂದೆ ರೆಕ್ಕೆಗಳಿವೆ. ಸತಿಗೆ ಹಾವಿನ ಹೊಟ್ಟೆಯಾಕಾರದ ವಿನ್ಯಾಸವಿರುವ ಹೂವಿನ ಹಾರವನ್ನು ತೊಡಿಸಲಾಗಿದೆ. ಕೆಂಪು ರವಿಕೆ, ಬಿಳಿ ಲಂಗ, ತಲೆಯ ಮೇಲೆ ಪಟಕದಂತೆ ಕಿರೀಟ ಧರಿಸಿದ ಸತಿ ನಗು ಮುಖದೊಂದಿಗೆ ಪತಿಯೊಂದಿಗೆ ನಿಂತಿದ್ದಾಳೆ.

**೫೧. ಗಂಧರ್ವ ಕನ್ಯೆಯರು**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಗಂಧರ್ವ ರಿಬ್ಬರಿಗೂ ದೊಡ್ಡದಾದ ರೆಕ್ಕೆಗಳಿದ್ದು, ಒಬ್ಬರನ್ನೊಬ್ಬರು ಎಡಗೈ, ಬಲಗೈಯಿಂದ ಹಿಡಿದುಕೊಂಡಿದ್ದಾರೆ. ಇಲ್ಲಿ ಒಬ್ಬರಿಗೆ ಕಪ್ಪು ಬಣ್ಣದ ಪೋಷಾಕು ಬಿಳಿ ಬಣ್ಣದ ಚುಕ್ಕೆಗಳಿಂದ ರಚಿತಗೊಂಡಿದ್ದು, ದೊಡ್ಡ ಪದಕವುಳ್ಳ ಹಾರ ಮತ್ತು ಕೆಂಪು, ಹಳದಿ ಮತ್ತು ನೀಲಿ ವರ್ಣದ ಹೂವಿನ ಹಾರವಿದ್ದು, ಇಬ್ಬರಿಗೂ ಎರಡು ಭಾಗಗಳಿರುವ ಅರ್ಧಲಂಗವನ್ನು ಕೆಂಪು ಮತ್ತು ಬಿಳಿ ಬಣ್ಣಗಳಲ್ಲಿ ತೊಡಿಸಲಾಗಿದೆ. ಎಡಗಡೆ ಇರುವ ಸ್ತ್ರೀಯು ತನ್ನ ಎಡಗೈಯಲ್ಲಿ ವೀಣೆಯನ್ನು ಹಿಡಿದಿದ್ದಾಳೆ. ಬಲಗಡೆ ಇರುವ ಮಹಿಳೆಗೆ ಟೋಪಿಯಂತಹ ಕಿರೀಟವನ್ನು ಧರಿಸಲಾಗಿದೆ. ಎಡಗಡೆ ಇರುವ ಸ್ತ್ರೀಗೆ ಜಡೆಯನ್ನು ಕಟ್ಟಿ ಬಂಗಾರದ ಆಭರಣಗಳ ವಿನ್ಯಾಸ ಮಾಡಲಾಗಿದೆ. ಒಬ್ಬರು ಕಪ್ಪು ವರ್ಣದ ಪೈಜಾಮು, ಇನ್ನೊಬ್ಬರು ಕೆಂಪು ವರ್ಣದ ಪೈಜಾಮು ಧರಿಸಿ ಇಬ್ಬರೂ ಕಾಲಲ್ಲಿ ಬೂಟುಗಳನ್ನು ಧರಿಸಿದ್ದಾರೆ. ನೆಲದಲ್ಲಿ ಕಡು ಹಳದಿ ವರ್ಣವನ್ನು ಲೇಪಿಸಿ, ಕೆಂಪು ಬಣ್ಣದ ಗೆರೆಗಳನ್ನು ಹಾಕಲಾಗಿದೆ. ಸರಳ ಮತ್ತು ವಕ್ರ ರೇಖೆಗಳ ವಿನ್ಯಾಸ ಮಾಡಲಾಗಿದೆ. ಹಿನ್ನೆಲೆ ವಿನ್ಯಾಸವು ಸಂಪೂರ್ಣ ಕಪ್ಪು ಬಣ್ಣದಾಗಿದ್ದು, ಆಕೃತಿಗಳು ಎದ್ದು ಕಾಣುತ್ತವೆ.

**೫೨. ನಗ್ನ ವೀಣಾಪಾಣಿ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಮಹಿಳೆಯನ್ನು ರವಿಕೆ ಇಲ್ಲದೆ ನಗ್ನವಾಗಿ ಚಿತ್ರಿಸಲಾಗಿದೆ. ದೊಡ್ಡದಾದ ವೀಣೆಯನ್ನು ಹಿಡಿದುಕೊಂಡ ಮಹಿಳೆ ಸೆರಗನ್ನು ಎಡಗೈ ಮೇಲೆ ಹಾಕಿಕೊಂಡಿದ್ದಾಳೆ. ಕೊರಳಲ್ಲಿ ಆಭರಣ, ತಲೆಯಲ್ಲಿ ಶೃಂಗಾರ ಅಷ್ಟಾಗಿ ಕಾಣುವುದಿಲ್ಲ. ಅಂದವಾದ ವೀಣೆ ಬಿಗಿಗೊಳಿಸುತ್ತಿರುವಂತೆ ಎಡಗೈಯನ್ನು ವೀಣೆಕೀಲಿ ತಿರುವುತ್ತಿರುವಂತೆ ಚಿತ್ರಿಸಲಾಗಿದೆ. ಬಿಳಿಯ ಬಣ್ಣದ ಸೀರೆಯಲ್ಲಿ ನೀಲಿ ಬಣ್ಣದ ರೇಖೆಗಳು, ನೀರಿಗೆಗಳು ಕಂಡುಬರುತ್ತವೆ. ಅಂಚಿನಲ್ಲಿ ಬಂಗಾರದ ಬಣ್ಣದ ವಿನ್ಯಾಸವಿದೆ. ಬಲಗೈಯಿಂದ ವೀಣೆಯ ತಂತಿಯನ್ನು ಮೀಟುತ್ತಿರುವಂತೆ

ಚಿತ್ರಿಸಲಾಗಿದೆ. ಬೆಳ್ಳನೆಯ ಮಹಿಳೆ, ಬಿಳಿಯ ಸೀರೆ ಎಲ್ಲವೂ ಎದ್ದು ಕಾಣುವಂತೆ ಹಿನ್ನೆಲೆ ವಿನ್ಯಾಸವನ್ನು ಸಂಪೂರ್ಣವಾಗಿ ಕಪ್ಪು ಬಣ್ಣದಿಂದ ಪೂರ್ಣಗೊಳಿಸಲಾಗಿದೆ. ಮೇಲ್ಭಾಗದಲ್ಲಿ ಬಿಳಿಯ ಕಂಭಕ್ಕೆ ಹೊಂದಿಕೊಂಡು ಕೆಂಪು ಮತ್ತು ನೀಲಿ ಬಣ್ಣದ ಪರದೆಯನ್ನು ಬಿಡಲಾಗಿದೆ. ಅದಕ್ಕೆ ಮೇಲೆ ಕೇಸರಿ ಬಣ್ಣದ ಬಟ್ಟೆಯೊಂದನ್ನು ನೇತುಬಿಡಲಾಗಿದೆ. ಒಟ್ಟು ಚಿತ್ರವು ವರ್ಣವಿನ್ಯಾಸದಲ್ಲಿ ಸಮತೋಲನವನ್ನು ಕಾಯ್ದುಕೊಳ್ಳುತ್ತಾ ಕಲಾತ್ಮಕತೆಯನ್ನು ಮೆರೆದಿದೆ.

**೫೩. ನಗ್ನ ವೀಣಾಪಾಣಿ**

ಗುಳೇದಗುಡ್ಡದ ವೀರಗಂಟೆಪ್ಪ ಕರಡಿ ಅವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರದಲ್ಲಿಯೂ ಮಹಿಳೆಯು ರವಿಕೆ ಇಲ್ಲದೆ ಅರೆ ನಗ್ನವಾಗಿ ಚಿತ್ರಿಸಲಾಗಿದೆ. ದೊಡ್ಡದಾದ ವೀಣೆ ಹಿಡಿದುಕೊಂಡ ಮಹಿಳೆ ಕೊರಳ ಆಭರಣ, ತಲೆಯ ಶೃಂಗಾರ ಅಷ್ಟಾಗಿ ಕಾಣುವುದಿಲ್ಲ. ಅಂದವಾದ ವೀಣೆ, ಬಿಳಿಯ ಬಣ್ಣದ ಸೀರೆಯಲ್ಲಿ ನೀಲಿ ಬಣ್ಣದ ರೇಖೆಗಳು, ನೀರಿಗೆಗಳು ಕಂಡುಬರುತ್ತವೆ. ಎದೆಯ ಮೇಲೆ ಸೆರಗಿನ ತುದಿಯನ್ನು ನೀಳವಾಗಿ ಬಿಟ್ಟುಕೊಳ್ಳಲಾಗಿದೆ. ಅಂಚಿನಲ್ಲಿ ಬಂಗಾರದ ಬಣ್ಣದ ವಿನ್ಯಾಸವಿದೆ. ಬಲತೊಡೆಯ ಮೇಲೆ ಮೃದಂಗವನ್ನಿಟ್ಟುಕೊಂಡು ಬಲಗೈಯಿಂದ ಬಾರಿಸುತ್ತಿರುವಂತೆ ಚಿತ್ರಿಸಲಾಗಿದೆ. ಬೆಳ್ಳನೆಯ ಮಹಿಳೆ, ಬಿಳಿಯ ಸೀರೆ ಎಲ್ಲವೂ ಎದ್ದು ಕಾಣುವಂತೆ ಹಿನ್ನೆಲೆ ವಿನ್ಯಾಸವನ್ನು ಸಂಪೂರ್ಣವಾಗಿ ಕಪ್ಪು ಮಿಶ್ರಿತ ನೀಲಿ ಬಣ್ಣದಿಂದ ಪೂರ್ಣಗೊಳಿಸಲಾಗಿದೆ. ಕೆಂಪು ಬಣ್ಣದ ಪರದೆಯನ್ನು ಬಿಡಲಾಗಿದೆ. ಒಟ್ಟು ಚಿತ್ರವು ವರ್ಣವಿನ್ಯಾಸದಲ್ಲಿ ಸಮತೋಲನವನ್ನು ಕಾಯ್ದುಕೊಳ್ಳುತ್ತಾ ಕಲಾತ್ಮಕತೆಯನ್ನು ಮೆರೆದಿದೆ.

**೫೪. ವೀಣಾಪಾಣಿ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಅಲಂಕೃತ ವೇದಿಕೆಯ ಮುಂದೆ ಸ್ತ್ರೀಯೊಬ್ಬಳು ಕೆಂಪು ಬಣ್ಣದ ಸೀರೆಯನ್ನುಟ್ಟು ಕಡುನೀಲಿ ಬಣ್ಣದ ರವಿಕೆಯನ್ನು ತೊಟ್ಟು, ಆಭರಣಾಲಂಕೃತಳಾಗಿ ತಲೆಯಲ್ಲಿ ಹೂವು ಮುಡಿದಿದ್ದಾಳೆ. ಎಡಗೈಯಿಂದ ವೀಣೆಯನ್ನು ಹಿಡಿದು ಬಲಗೈಯ ತೋರ್‌ಬೆರಳಿನಿಂದ ತಂತಿಯನ್ನು ಮೀಟುತ್ತಿರುವಂತಿದೆ. ಬಲ ಭುಜದ ಮೇಲೆ ಬಿಳಿಯ ಬಣ್ಣದ ಗಿಳಿಯೊಂದು ಕುಳಿತಿದೆ. ತೊಡೆಯ ಅಕ್ಕಪಕ್ಕದಲ್ಲಿ ಹೂಗುಚ್ಛವನ್ನಿರಿಸುವ ಕಟ್ಟಿಗೆಯ ವಿನ್ಯಾಸ ಮೇಲೆ ಹೂವುಗಳು, ಅದರ ಮೇಲೆ ಮೇಲ್ಮುಖವಾದ ಎರಡು ಎದುರು ಬದುರು ಕ್ಯಾಂಡಿಲಿಯರ್ ದೀಪಗಳು, ಮೂರು ಕಮಾನುಗಳುಳ್ಳ, ಕಮಾನಿನ ವರ್ತುಲದ ಮಧ್ಯ ದೀಪವನ್ನು ನೇತುಬಿಟ್ಟಂತೆ ಚಿತ್ರಿಸಲಾಗಿದೆ. ಕಮಾನಿನ ಮೇಲ್ಭಾಗ ನಕ್ಷಾಲಂಕೃತವಾಗಿ ಕೆಂಪು ಮತ್ತು ಹಳದಿ ವರ್ಣದಲ್ಲಿ ಗೋಚರಿಸುತ್ತದೆ. ಹಿನ್ನೆಲೆ ವಿನ್ಯಾಸವು ಸಂಪೂರ್ಣ ಕಪ್ಪಾಗಿದ್ದು, ರಾತ್ರಿ ವೇಳೆಯ ಸಂಗೀತ ಕಚೇರಿಯ ಪರಿಣಾಮವನ್ನು ಬೀರುತ್ತದೆ.

**೫೫. ಸಿಂಹಾಸನಾರೂಢ ವೀಣಾಪಾಣಿ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಅಲಂಕೃತ ಸಿಂಹಾಸನದಲ್ಲಿ ಸ್ತ್ರೀಯೊಬ್ಬಳು ಕೆಂಪು ಬಣ್ಣದ ಸೀರೆಯನ್ನುಟ್ಟು ಕಪ್ಪು ಬಣ್ಣದ ರವಿಕೆಯನ್ನು

ತೊಟ್ಟು, ಆಭರಣಾಲಂಕೃತಳಾಗಿ ತಲೆಯಲ್ಲಿ ಹೂವು, ಮುಡಿದು ಎಡಗೈಯಿಂದ ವೀಣೆ ಹಿಡಿದು ಬಲಗೈಯ ತೋರ್‌ಬೆರಳಿನಿಂದ ತಂತಿಯನ್ನು ಮೀಟುತ್ತ ಆಕರ್ಷಕ ನೋಟವನ್ನು ಬೀರಿದೆ. ಎಡಗಾಲನ್ನು ಬಲಗಾಲಿನ ಮೇಲೆ ಹಾಕಿ ಕುಳಿತಿದ್ದಾಳೆ. ಹಿನ್ನೆಲೆ ವಿನ್ಯಾಸವು ಸಂಪೂರ್ಣ ತೆಳು ನೀಲಿ ಬಣ್ಣದಾಗಿದ್ದು, ಅರಮನೆಯ ಸಿಂಹಾಸನದ ಮೇಲೆ ಸುಖಾಸೀನಳಾಗಿ ಸಂಗೀತ ನುಡಿಸುತ್ತಿದ್ದಾಳೆ. ಬಿಳಿಯ ಬಣ್ಣದ ಕಂಭಕ್ಕೆ ಕೆಂಪು ಬಣ್ಣದ ಬಟ್ಟೆ ಪರದೆಗಳನ್ನು ಇಳಿಬಿಡಲಾಗಿದೆ.

**೫೬. ಹಾರಿಬಂದ ಪಾರಿವಾಳ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಸಿಂಹಾಸನದ ಮೇಲೆ ಅಲಂಕೃತ ವಿಲಾಸಿನಿ ಮಹಿಳೆ ಕುಳಿತಿದ್ದು, ಅವಳ ಬಳಿ ಆಕಾಶದಿಂದ ಹಾರಿ ಬರುತ್ತಿರುವ ಸಂದೇಶ ಹೊತ್ತ ಬಿಳಿ ಬಣ್ಣದ ಪಾರಿವಾಳ ಪಕ್ಷಿಯ ಕಡೆಗೆ ತನ್ನ ಬಲಗೈಯನ್ನು ಚಾಚಿದ, ಎದುರು ಮುಖದ ಚಿತ್ರ ಇದಾಗಿದೆ. ಸಿಂಹಾಸನದ ಮೇಲೆ ಕುಳಿತ ಮಹಿಳೆ ತನ್ನ ಎಡಗೈಯನ್ನು ಸಿಂಹಾಸನದ ಕೈಮೇಲೆ ಊರಿದ್ದಾಳೆ. ಕೆಂಪು ಬಣ್ಣದ ಸೀರೆ, ಕಪ್ಪು ಬಣ್ಣದ ರವಿಕೆ, ದುಂಡನೆಯ ತುರುಬು ಆಕರ್ಷಕವಾಗಿವೆ. ಸಿಂಹಾಸನವೂ ಕೆಂಪಾಗಿದ್ದು, ಸೀರೆ ಉಟ್ಟ ಮಹಿಳೆಯ ಕೈ ಮತ್ತು ಮುಖ ಕಾಲುಗಳಿಗೆ ತೆಳುಗೆಂಪು ಬಣ್ಣದ ಲೇಪನವಿದ್ದು, ಹಿನ್ನೆಲೆಯ ಆಕಾಶಕ್ಕಾಗಿ ತೆಳು ನೀಲಿ ಬಣ್ಣವನ್ನು ಬಳಿಯಲಾಗಿದೆ. ಚಿತ್ರದ ಮೇಲ್ಭಾಗದಲ್ಲಿ ಅರಮನೆಯ ಬಟ್ಟೆ ವಿನ್ಯಾಸ ಕಾಣಬಹುದು.

**೫೭. ಉಯ್ಯಾಲೆಯಲ್ಲಿ ಮಹಿಳೆ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದ ಮಹಿಳೆ ದುಂಡನೆಯ ಕಿರೀಟದಿಂದ ಅಲಂಕೃತಳಾಗಿ ತನ್ನ ಎರಡೂ ಕೈಗಳನ್ನು ಮೇಲೆತ್ತಿ ಜೋಕಾಲಿ ಹಗ್ಗವನ್ನು ಹಿಡಿದು ಕುಳಿತು ಕಾಲು ಚಾಚಿ ಆಡುತ್ತಿರುವ ಚಿತ್ರ ಇದಾಗಿದೆ. ಕೆಳಗಡೆ ಹಾರಿಹೋದ ಸೀರೆ, ಹಿಂದೆ ಚಾಚಿದ ಸೆರಗು, ಕೊರಳಲ್ಲಿ ಆಭರಣ ಮತ್ತು ಮಾಲೆ, ಮುತ್ತಿನಲಂಕೃತ ನಡುಪಟ್ಟಿ, ಕಾಲಿನಲ್ಲಿ ಗೆಜ್ಜೆ, ಕೆಂಪು ಗೀರುಗೀರಿನ ಸೀರೆ, ಕಪ್ಪು ರವಿಕೆ ಇದೆಲ್ಲದಕ್ಕೂ ಸಮತೋಲನ ಎನ್ನುವುದಕ್ಕೆ ಇಡೀ ಚಿತ್ರದ ಕಾಲುಭಾಗವನ್ನು ಕೆಂಪು ಬಟ್ಟೆಯ ಪರದೆಯೊಂದಿಗೆ ಅಲಂಕೃತಗೊಳಿಸಲಾಗಿದೆ. ಇಲ್ಲಿಯೂ ಸಂದೇಶವಾಹಿ ಪಾರಿವಾಳವು ಹಾರಿಬಂದು ಅವಳನ್ನು ಸೇರುವಂತೆ ಚಿತ್ರಿಸಲಾಗಿದೆ. ಆಕಾಶದಲ್ಲಿ ಹಾರಿಬಂದ ಪಕ್ಷಿಗಾಗಿ ಹಿಂದಿನ ಎಲ್ಲಾ ವಿನ್ಯಾಸವನ್ನು ತೆಳು ನೀಲಿ ಬಣ್ಣದಿಂದ ರಚಿಸಲಾಗಿದೆ.

**೫೮. ಮಹಿಳೆ ಮತ್ತು ಹಂಸ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಬಹುಶಃ ದಮಯಂತಿಯ ತೊಡೆಯ ಮೇಲೆ ರಾಜ ಹಂಸವು ಕುಳಿತಿದೆ. ಆಕೆ ಎಡಗೈಯನ್ನು ಅದರ ಬೆನ್ನ ಮೇಲೆ ಇಟ್ಟು, ಬಲಗೈಯಿಂದ ಮೈ ಸವರುವಂತೆ ಚಿತ್ರಿಸಲಾಗಿದೆ. ಕೆಂಪು ಬಣ್ಣದ ಹೊರ ರೇಖೆಗಳುಳ್ಳ ಕಪ್ಪು ಬಣ್ಣದ ಒಳ ವಿನ್ಯಾಸವಿರುವ ಸಿಂಹಾಸನದಲ್ಲಿ ಕುಳಿತ ಮಹಿಳೆ ಅಂದವಾದ ಕೆಂಪು ಮತ್ತು ಹಳದಿ

ನಕ್ಷಾ ವಿನ್ಯಾಸವನ್ನು ಹೊಂದಿದ ಸೀರೆಯನ್ನುಟ್ಟುಕೊಂಡು ಆಭರಣ, ಕೈಬಳೆ, ಕಾಲ್ಗೆಜ್ಜೆಗಳಿಂದ ಶೋಭಿಸುತ್ತಲಿದ್ದಾಳೆ. ತಲೆಯ ಕೂದಲನ್ನು ಬಾಚಿ ಹಿಂದೆ ಬಿಡಲಾಗಿದೆ. ಮೇಲ್ಗಡೆ ಹಂಸದ ಬಣ್ಣಕ್ಕೆ ತಕ್ಕಂತೆ ಅರಮನೆಯ ಪರದೆಗಳನ್ನು ಬಿಳಿಯ ಬಣ್ಣಕ್ಕೆ ತಿರುಗಿಸಲಾಗಿದೆ. ನೆಲ ಮತ್ತು ಆಕಾಶದಲ್ಲಿ ತೆಳುನೀಲಿ ಬಣ್ಣವನ್ನು ಲೇಪಿಸಲಾಗಿದೆ.

### ೫೯. ಹಂಸದೊಂದಿಗೆ ಮಹಿಳೆ

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿಯೂ ಹಿಂದಿನ ಚಿತ್ರಗಳಲ್ಲಿರುವಂತೆ ರಾಜಹಂಸವು ತೊಡೆಯ ಮೇಲೆ ಕುಳಿತಿದೆ. ಇಲ್ಲಿ ಹಂಸದ ಚುಂಚವು ಕೆಂಪಾಗಿದ್ದು, ತನ್ನ ಪುಚ್ಛಗಳನ್ನು ಉರಿಯಂತೆ ಮೇಲಕ್ಕೆತ್ತಿದೆ. ಆಕೆ ಎಡಗೈಯನ್ನು ಅದರ ಬೆನ್ನ ಮೇಲೆ ಇಟ್ಟು, ಬಲಗೈಯಿಂದ ಮೈ ಸವರುವಂತೆ ಚಿತ್ರಿಸಲಾಗಿದೆ. ಹಳದಿ ಮತ್ತು ಕೆಂಪು ವಿನ್ಯಾಸವಿರುವ ಸಿಂಹಾಸನದಲ್ಲಿ ಕುಳಿತ ಮಹಿಳೆ ಅಂದವಾದ ಕೆಂಪು ಮತ್ತು ಹಳದಿ ನಕ್ಷಾ ವಿನ್ಯಾಸವನ್ನು ಹೊಂದಿದ ಅಂದವಾದ ಗೀರುಗೀರನ್ನು ಹೊಂದಿದ ಸೀರೆಯನ್ನುಟ್ಟುಕೊಂಡು, ಹಳದಿ ರವಿಕೆಯನ್ನು ತೊಟ್ಟುಕೊಂಡು, ಆಭರಣ, ಕೈಬಳೆ, ಕಾಲ್ಗೆಜ್ಜೆ ಎಲ್ಲವೂ ಹಿಂದಿನಂತಿದ್ದು, ಮೇಲ್ಗಡೆ ಎಲ್ಲವೂ ಅರಮನೆ ಕೆಂಪು ಬಣ್ಣದ ಪರದೆ ವಿನ್ಯಾಸ ರಚಿಸಲಾಗಿದೆ. ಇಡೀ ಹಿನ್ನೆಲೆ ವಿನ್ಯಾಸವು ಕಡುನೀಲಿ ಬಣ್ಣದ್ದಾಗಿದೆ.

### ೬೦. ಹಂಸ ಮತ್ತು ಮಹಿಳೆ

ಅಮೀನಗಡದ ಶೀಲವಂತಪ್ಪ ಗರಡಿ ಅವರ ಮನೆಯಲ್ಲಿ ಸಂಗ್ರಹಿತವಾಗಿರುವ ಈ ಚಿತ್ರವಲ್ಲಿ ಕತ್ತಲೆಯ ಹಿನ್ನೆಲೆ ವಿನ್ಯಾಸದಲ್ಲಿ ಅಲಂಕೃತ ಮಹಿಳೆ ಹಳದಿ ಬಣ್ಣದ ಸೀರೆಯನ್ನುಟ್ಟು, ತೆಳು ನೀಲಿ ಬಣ್ಣದ ರವಿಕೆಯನ್ನು ತೊಟ್ಟು, ಎಡಗೈಯನ್ನು ಕೆನ್ನೆಗೆ ಹಚ್ಚಿಕೊಂಡು, ಬಲಗೈಯನ್ನು ಎಡಗೈ ಮೊಣಕೈಗೆ ಇಟ್ಟುಕೊಂಡು ಕಟ್ಟೆಗೆ ಒರಗಿ ನಿಂತುಕೊಂಡಿದ್ದಾಳೆ. ಕಟ್ಟೆಯ ಕಂಬಗಳು, ಹಿಂದಿನ ಕಂಬಗಳು ಅಲಂಕೃತ ನಕ್ಷೆಗಳೊಂದಿಗೆ ರಾತ್ರಿಯಾದರೂ ಮಿಂಚುತ್ತಿವೆ. ಮಹಿಳೆಯ ಕೊರಳು, ತೋಳುಬಂಧಿ, ನಡುಪಟ್ಟಿಗಳ ಆಭರಣಗಳು, ವಜ್ರಖಚಿತದಂತೆ ಮಿಂಚುತ್ತಿವೆ. ರಾಜಹಂಸವು ಅವಳ ಕಡೆಗೆ ನೋಡುತ್ತಾ ಶಾಂತವಾಗಿ ನಿಂತುಕೊಂಡಿವೆ. ಕಪ್ಪು ಹಿನ್ನೆಲೆ ವಿನ್ಯಾಸದಲ್ಲಿ ಹಂಸವು ಎದ್ದು ಕಾಣುವಂತೆ ಚಿತ್ರಿಸಲಾಗಿದೆ. ಕಾಲುಗಳ ಕೆಳಗೆ ತೆಳು ನೀಲಿ ಬಣ್ಣದ ನೆಲವನ್ನು ರಚಿಸಲಾಗಿದೆ.

### ೬೧. ನಿಂತಿರುವ ತರುಣಿ

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಬಹು ಅಲಂಕೃತಳಾದ ಒಳಗೆಲ್ಲಾ ಹಳದಿ ಬಣ್ಣದ ಹೂವುಗಳಿರುವ ಕೆಂಪು ಬಣ್ಣದ ಸೀರೆಯನ್ನುಟ್ಟು, ಮಹಿಳೆಯು ಸ್ವಲ್ಪ ಕೆಳಮುಖ ಮಾಡಿ, ಎಡಗೈಯನ್ನು ಹೂದಾನಿಯ ಕಟ್ಟೆಯ ಮೇಲಿಟ್ಟು, ಬಲಗೈಯನ್ನು ಕೆಳಗೆ ಬಿಟ್ಟು, ಬಲಗಾಲನ್ನು ಕತ್ತರಿಗಾಲು ಮಾಡಿ ನಿಂತುಕೊಂಡಿರುವ ಚಿತ್ರ ಇದಾಗಿದೆ. ತಲೆಯ ಮೇಲೆ ಸೆರಗು ಹೊದ್ದು ಏಕೈಕ ಚಿತ್ರ ಇದಾಗಿದೆ. ಕೆಂಪು ರವಿಕೆ ತೊಟ್ಟಿದ್ದಾಳೆ. ಪದಕವುಳ್ಳ ಕೊರಳಾಭರಣಗಳು,

ಜಡೆಯ ಅಲಂಕಾರ, ಕೊನೆಗೊಂದು ಗೊಂಡೆ, ಹಿನ್ನೆಲೆ ವಿನ್ಯಾಸ ಸಂಪೂರ್ಣವಾಗಿ ಕಪ್ಪು ಬಣ್ಣದ್ದಾಗಿದೆ. ಕಾಲಿಟ್ಟ ಸ್ಥಳದಲ್ಲಿ ಕೆಂಪು ಬಣ್ಣದ ರತ್ನಗಂಬಳಿಯನ್ನು ಹಾಸಲಾಗಿದೆ. ತಲೆಯ ಮೇಲ್ಭಾಗದಲ್ಲಿ ಕಮಾನಿನಾಕಾರದ ಅರ್ಧ ವರ್ತುಲವಿದ್ದು, ಅಲ್ಲಿ ಪರದೆ ಬಿಡುವ ವಿನ್ಯಾಸವನ್ನು ತುಂಬಾ ವಿಭಿನ್ನವಾಗಿ ಬಿಳಿಯ ಬಣ್ಣದ ಬಟ್ಟೆ ನೀರಿಗೆಗಳನ್ನು ಮಾಡಿ, ಕೆಂಪು ಮತ್ತು ಹಳದಿ ಬಣ್ಣದ ಹೊರರೇಖೆ ಹೊಂದಿದ ಅಂಚು ಎರಡೂ ಕಡೆ ಮೂಲೆಗಳಲ್ಲಿ ಕೆಂಪು ಮತ್ತು ಹಸಿರು ಬಣ್ಣಗಳ ನಕ್ಷಾ ವಿನ್ಯಾಸ ರಚಿಸಲಾಗಿದೆ. ಕೆಲವೇ ಬಣ್ಣಗಳಲ್ಲಿ ಅತ್ಯುತ್ತಮವಾದ ಸಂಯೋಜನೆ ಇದಾಗಿದೆ.

**೬೨. ನಿಂತಿರುವ ಮಹಿಳೆ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಲಂಗ ಓಡಣಿ ರವಿಕೆಗಳೊಂದಿಗೆ ಮಹಿಳೆ ನಿಂತಿದ್ದಾಳೆ. ತೆಳು ನೀಲಿ ಬಣ್ಣದ ರವಿಕೆ, ಪದಕವುಳ್ಳ ಕೊರಳಾಭರಣಗಳು, ಜಡೆಯ ಅಲಂಕಾರಗಳಿವೆ. ಕಾಲಿಟ್ಟ ಸ್ಥಳದಲ್ಲಿ ಕೆಂಪು ಬಣ್ಣದ ರತ್ನಗಂಬಳಿಯನ್ನು ಹಾಸಲಾಗಿದೆ. ತಲೆಯ ಮೇಲ್ಭಾಗದಲ್ಲಿ ತೆಳು ನೀಲಿ ಮತ್ತು ಕೆಂಪು ಹಳದಿ ಬಣ್ಣಗಳ ಬಟ್ಟೆ ಅಲಂಕೃತ ಪರದೆ ಬಿಡುವ ವಿನ್ಯಾಸವನ್ನು ತುಂಬಾ ವಿಭಿನ್ನವಾಗಿ ರಚಿಸಿದ್ದಾರೆ. ಬಿಳಿಯ ಲಂಗ, ಬಂಗಾರ ಬಣ್ಣದ ದಡಿ, ಎಡಗೈ ಮೊಣಕೈಯನ್ನು ಒಂದು ಮೇಜಿಗೆ ಊರಲಾಗಿದೆ. ಬಲಗೈ ಮೊಣಕೈಯನ್ನು ಸಿಂಹಾಸನದ ತಲೆಗೆ ಇಡಲಾಗಿದೆ. ಊರಿದ ಕಾಲು ತುಂಬಾ ಮುಂದಕ್ಕಿದ್ದು, ಸಿಂಹಾಸನದ ಮೇಲೆ ಊರಿದ ಕೈ ಅವಾಸ್ತವಿಕ ಎನಿಸುತ್ತದೆ.

**೬೩. ಕುಳಿತಿರುವ ಮಹಿಳೆ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಕಪ್ಪು ಬಣ್ಣದ ಹಿನ್ನೆಲೆ ವಿನ್ಯಾಸವಿದ್ದು, ಮಹಿಳೆಯೋರ್ವಳು ಹಳದಿ ಮಿಶ್ರ ಕೆಂಪು ಬಣ್ಣದ ಚುಕ್ಕೆಗಳ ಅಲಂಕೃತ ಸೀರೆಯೊಂದಿಗೆ ಕುಳಿತಿದ್ದಾಳೆ. ಕಪ್ಪು ಬಣ್ಣದ ರವಿಕೆ ಧರಿಸಿದ್ದಾಳೆ. ತೆಳು ನೀಲಿ ಬಣ್ಣದ ಸಿಂಹಾಸನಕ್ಕೆ ಆಧಾರವಾಗಿ ಕುಳಿತಿದ್ದಾಳೆ. ಅಗಲವಾದ ಕಣ್ಣುಗಳು, ಕಿವಿಯಲ್ಲಿ ಓಲೆ, ಕೊರಳಿನಲ್ಲಿ ಪದಕದೊಂದಿಗೆ ಹಾರ, ತಲೆಯ ತುರುಬು ಮತ್ತು ಹೂವು ಅಲ್ಲದೆ ಬಲಗೈ ಬೆರಳುಗಳ ಮೇಲೆ ಗಿಳಿಯನ್ನು ಕೂಡಿಸಿಕೊಂಡು ಎಡಗೈಯಿಂದ ಮಾವಿನಹಣ್ಣನ್ನು ತಿನ್ನಿಸುವಂತೆ ಚಿತ್ರಿಸಲಾಗಿದೆ. ಬಲಗಾಲನ್ನು ಮಡಚಿ, ಎಡಗಾಲ ಮೇಲೆ ಹಾಕಿ ಕುಳಿತ ಚಿತ್ರದ ಮೇಲೆ ಕಡುಗೆಂಪು ಬಣ್ಣದ ಬಟ್ಟೆ ಪರದೆಯನ್ನು ಬಿಡಲಾಗಿದೆ. ತೆಳು ನೀಲಿ ಬಣ್ಣದ ಗಿಳಿ, ಸಿಂಹಾಸನ, ಬಟ್ಟೆಯ ಅಂಚು ಮೊದಲಾದ ಅಂಶಗಳಿಂದ ವರ್ಣರಂಜಿತವಾದ ಚಿತ್ರ ಇದಾಗಿದೆ.

**೬೪. ನಿಂತಿರುವ ಮಹಿಳೆ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಬಹು ಅಲಂಕೃತ ಹಳದಿ ಮಿಶ್ರ ಕೆಂಪು ಬಣ್ಣದ ಒಳಗೆಲ್ಲಾ ಹಳದಿ ಬಣ್ಣದ ಹೂವುಗಳಿರುವ ಸೀರೆಯನ್ನುಟ್ಟು

ಮಹಿಳೆಯು ಎದುರುಮುಖ ಮಾಡಿ, ಬಲಗೈಯನ್ನು ಕಪಾಟಿನ ಮೇಲಿಟ್ಟು, ಎಡಗೈಯನ್ನು ಮಡಿಚಿ ನಡುವಿನ ಮೇಲಿಟ್ಟು, ಎರಡೂ ಕಾಲುಗಳನ್ನು ಸಮನಾಂತರದ ಮೇಲೆ ಇಟ್ಟು ನಿಲ್ಲಿಸಲಾಗಿದೆ. ಕೆಂಪು ರವಿಕೆ ತೊಟ್ಟಿದ್ದಾಳೆ. ಪದಕವುಳ್ಳ ಕೊರಳಾಭರಣಗಳು, ತುರುಬಿನ ಅಲಂಕಾರ, ಹಿನ್ನೆಲೆ ವಿನ್ಯಾಸ ಸಂಪೂರ್ಣವಾಗಿ ನೀಲಿ ಬಣ್ಣದ್ದಾಗಿದೆ. ಕಾಲಿಟ್ಟ ಸ್ಥಳದಲ್ಲಿ ಕೆಂಪು ಬಣ್ಣದ ರತ್ನಗಂಬಳಿಯನ್ನು ಹಾಸಲಾಗಿದೆ. ತಲೆಯ ಮೇಲ್ಭಾಗದಲ್ಲಿ ಕಮಾನಿನಾಕಾರದ ಪರದೆ ಬಿಡುವ ವಿನ್ಯಾಸವನ್ನು ತುಂಬಾ ವಿಭಿನ್ನವಾಗಿ ಬಿಳಿಯ ಬಣ್ಣದ ಬಟ್ಟೆ ನೀರಿಗೆಗಳನ್ನು ಮಾಡಿ, ಕೆಂಪು ಮತ್ತು ಹಳದಿ ಬಣ್ಣದ ಹೊರರೇಖೆ ಹೊಂದಿದ ಅಂಚು ಎರಡೂ ಕಡೆ ಮೂಲೆಗಳಲ್ಲಿ ಕೆಂಪು ಮತ್ತು ಹಸಿರು ಬಣ್ಣಗಳ ನಕ್ಷಾ ವಿನ್ಯಾಸ ರಚಿಸಲಾಗಿದೆ. ಕೆಲವೇ ಬಣ್ಣಗಳಲ್ಲಿ ಅತ್ಯುತ್ತಮವಾದ ಸಂಯೋಜನೆ ಇದಾಗಿದೆ.

**೬೫. ಕರವಸ್ತ್ರ ಹಿಡಿದು ನಿಂತ ಮಹಿಳೆ**

ಗುಳೇದಗುಡ್ಡದ ಬಸವಪ್ರಭು ಗಂಗಾವತಿ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಲಂಗ ಓಡಣಿ ರವಿಕೆಗಳೊಂದಿಗೆ ಮಹಿಳೆ ನಿಂತಿದ್ದಾಳೆ. ಬಿಳಿ ಬಣ್ಣದ ರವಿಕೆ, ಪದಕವುಳ್ಳ ಕೊರಳಾಭರಣಗಳು, ತುರುಬಿನ ಅಲಂಕಾರ, ಕಾಲಿಟ್ಟ ಸ್ಥಳದಲ್ಲಿ ಕೆಂಪು ಮತ್ತು ಹಳದಿ ಬಣ್ಣದ ರತ್ನಗಂಬಳಿಯನ್ನು ಹಾಸಲಾಗಿದೆ. ತಲೆಯ ಮೇಲ್ಭಾಗದಲ್ಲಿ ತೆಳು ನೀಲಿ ಮತ್ತು ಕೆಂಪು ಹಳದಿ ಬಣ್ಣಗಳ ಬಟ್ಟೆ ಅಲಂಕೃತ ಪರದೆ ಬಿಡುವ ವಿನ್ಯಾಸವನ್ನು ತುಂಬಾ ವಿಭಿನ್ನವಾಗಿ ರಚಿಸಿದ್ದಾರೆ. ಬಿಳಿಯ ಲಂಗ, ಬಂಗಾರ ಬಣ್ಣದ ದಡಿ, ಎಡಗೈ ಮೊಣಕೈಯನ್ನು ಒಂದು ಮೇಜಿಗೆ ಊರಲಾಗಿದೆ. ಬಲಗೈ ಮೊಣಕೈಯನ್ನು ಸಿಂಹಾಸನದ ತಲೆಗೆ ಇಡಲಾಗಿದೆ. ಊರಿದ ಕಾಲು ತುಂಬಾ ಮುಂದಕ್ಕಿದ್ದು, ಸಿಂಹಾಸನದ ಮೇಲೆ ಊರಿದ ಕೈ ಅವಾಸ್ತವಿಕ ಎನಿಸುತ್ತದೆ. ಹಿನ್ನೆಲೆ ವಿನ್ಯಾಸ ಕಪ್ಪು ಮತ್ತು ನೀಲಿ ಮಿಶ್ರಿತವಾಗಿದ್ದು, ಎಡಗೈಯಲ್ಲಿ ಹಸಿರು ಬಣ್ಣದ ಗಿಳಿಯೊಂದನ್ನು ಹಿಡಿದುಕೊಂಡು ನಿಂತಿರುವುದು ಈ ಚಿತ್ರದ ಪ್ರಮುಖ ವೈಶಿಷ್ಟ್ಯ. ಚಿತ್ರ ೬೧ ಕೂಡ ಇದೇ ಚಿತ್ರವಾಗಿದ್ದು ವರ್ಣವಿನ್ಯಾಸ ಮಾತ್ರ ಭಿನ್ನವಾಗಿದೆ.

**೬೬. ಕೈಯಲ್ಲಿ ದಾವಣಿ ಹಿಡಿದ ಮಹಿಳೆ**

ಬಾಗಲಕೋಟೆಯ ಮಹೇಂದ್ರ ಸರಾಫ್ ಎಂಬುವರ ಮನೆಯಲ್ಲಿ ಲಭ್ಯವಾದ ಒಟ್ಟು ಆರು ಚಿತ್ರಗಳು ಗುಜರಾತಿ ಮಹಿಳೆಯರ ಚಿತ್ರಗಳೆಂದು ಮನೆಯ ಯಜಮಾನರು ಹೇಳುತ್ತಾರೆ. ಮದುವೆಯ ಸಂದರ್ಭದಲ್ಲಿ ತಮ್ಮ ಮನೆಯ ಅಲಂಕಾರಕ್ಕಾಗಿ ಅವರ ತಾತ ಗುಜರಾತಿಗೆ ವ್ಯಾಪಾರಕ್ಕೆ ಹೋದಾಗ ತಂದ ಚಿತ್ರಗಳೆಂದು ಹೇಳುತ್ತಾರೆ. ಹೆಚ್ಚು ಅಲಂಕಾರಿಕವಲ್ಲದ ಈ ಚಿತ್ರಗಳು ವಿಶಿಷ್ಟವಾಗಿವೆ. ಮೊದಲು ಕೃತಿಯನ್ನು ರಚಿಸಿ ಉಳಿದ ಗಾಜಿನಲ್ಲಿ ಆಕಾಶಕ್ಕೆ ನೀಲಿ, ಮಧ್ಯದಲ್ಲಿ ಕಪ್ಪು, ನೆಲಕ್ಕೆ ಕೆಂಪು ಬಣ್ಣ ಲೇಪಿಸಿ ಅಂತಿಮಗೊಳಿಸಿದ್ದು ಇಲ್ಲಿ ಸರ್ವೇಸಾಮಾನ್ಯ. ಆದರೂ ಒಂದು ಚಿತ್ರದಿಂದ ಚಿತ್ರಕ್ಕೆ ಆಕೃತಿ ಅಲಂಕಾರದಲ್ಲಿ ಸಾಮ್ಯವಿದ್ದರೂ ಭಂಗಿಗಳಲ್ಲಿ ಬದಲಾವಣೆ ಇದ್ದೇ ಇದೆ. ಹಾಗಾಗಿ ಹೆಚ್ಚು ಬದಲಾವಣೆ ಇರುವ ಅಂಶಗಳನ್ನು ಮಾತ್ರ ಇಲ್ಲಿ ಗಮನಿಸಬಹುದು.

ಬಾಗಲಕೋಟೆಯ ಮಹೇಂದ್ರ ಸರಾಫ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಕೆಂಪು ಬಣ್ಣದ ಮೈಮಾಟವನ್ನು ಹೊಂದಿದ ಮಹಿಳೆ ದುಂಡು ಮುಖದ ಹೆಚ್ಚು ಅಲಂಕಾರವಲ್ಲದ ಬಟ್ಟೆ ಕಪ್ಪು ಬಣ್ಣದ ಲಂಗ ಧರಿಸಿ, ಮೇಲೆ ಕೆಂಪು ಬಣ್ಣದ ಬಟ್ಟೆಯನ್ನು ಹೊದ್ದುಕೊಂಡಿದ್ದಾಳೆ. ತಲೆಯ ಮೇಲೆ ಹಾಕಿದ ಸೆರಗಿನಂತಿರುವ ಓಡಣಿಯನ್ನು ಬಲಗೈಯಿಂದ ಎತ್ತಿ ಹಿಡಿದು, ಎಡಗೈಯನ್ನು ಮುಂದೆ ಚಾಚಿದ ಚಿತ್ರ ಇದಾಗಿದೆ. ಕಾಲಲ್ಲಿ ಗೆಜ್ಜೆ, ಕೆಂಪು ಪೈಜಾಮು, ಕಪ್ಪು ಎತ್ತರ ಹಿಂಬಡಿಗಳುಳ್ಳ ಚಪ್ಪಲಿ ಹಾಕಿಕೊಂಡಿದ್ದಾಳೆ. ಆಕೃತಿ ಮಧ್ಯದಲ್ಲಿದ್ದು, ಮೇಲಿನಿಂದ ಅರ್ಧದವರೆಗೆ ತೆಳು ನೀಲಿ ಬಣ್ಣವನ್ನು ಚಪ್ಪಟೆಯಾಗಿ ಹಾಕಲಾಗಿದೆ. ಅದಾದ ನಂತರ ತೆಳುಗೆಂಪು ಬಣ್ಣದ ಮತ್ತೊಂದು ಪಟ್ಟಿಯನ್ನು ಹಾಕಿ ನಿಸರ್ಗದಲ್ಲಿ ಒಂದೇ ತರಹದ ನೀಲಿ ಬಣ್ಣದ ಗಿಡಮರಗಳನ್ನು ಚಿತ್ರಿಸಲಾಗಿದೆ. ಮತ್ತೆ ಕಪ್ಪು ಬಣ್ಣ, ಅದಾದ ಮೇಲೆ ನೆಲಕ್ಕೆ ಸಂಪೂರ್ಣ ಕೆಂಪು ಬಣ್ಣವನ್ನು ಬಳಸಲಾಗಿದೆ. ಒಟ್ಟು ಚಿತ್ರವು ಹಿಂದಿನ ಚಿತ್ರಗಳಂತೆ ಯಾವುದೇ ಸೃಜನಶೀಲ ಸಂಯೋಜನೆಯಿಲ್ಲದೆ ವಾಸ್ತವಕ್ಕೆ ಹತ್ತಿರ ಎನಿಸುತ್ತದೆ.

**೬೭. ಹೂ ಹಿಡಿದು ನಿಂತ ಮಹಿಳೆ**

ಬಾಗಲಕೋಟೆಯ ಮಹೇಂದ್ರ ಸರಾಫ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರವು ಕೂಡ ವಾಸ್ತವಕ್ಕೆ ಹತ್ತಿರವಾದುದು. ತೆಳುಗೆಂಪು ಮೈಬಣ್ಣ ಹೊಂದಿದ ದುಂಡು ಮುಖದ ಮಹಿಳೆ ಹೆಚ್ಚು ಅಲಂಕಾರವಲ್ಲದ ಬಟ್ಟೆ, ಕೆಂಪು ಬಣ್ಣದ ಲಂಗ ಧರಿಸಿ, ಮೇಲೆ ನೀಲಿ ಬಣ್ಣದ ಬಟ್ಟೆಯನ್ನು ಹೊದ್ದುಕೊಂಡಿದ್ದಾಳೆ. ಎಡಗೈಯಿಂದ ಹಿಂದಿನ ಓಡಣಿಯನ್ನು ಹಿಡಿದುಕೊಂಡಿದ್ದಾಳೆ. ಬಲಗೈ ಮೇಲೆತ್ತಿ ಹೂವೊಂದನ್ನು ಹಿಡಿದುಕೊಂಡಿದ್ದಾಳೆ. ಕೆಂಪು ಬಣ್ಣದ ಹೂವು ಸುತ್ತಲೂ ಎಲೆಗಳ ವಿನ್ಯಾಸವಿದೆ. ಕೆಂಪು ಲಂಗಕ್ಕೆ ಮುತ್ತಿನ ಹಾರವನ್ನು ಜೋತು ಬಿಡಲಾಗಿದೆ. ಲಂಗಕ್ಕೆ ನೀಲಿ ಬಣ್ಣದ ಅಂಚನ್ನು ಹಾಕಿ ಅದರೊಳಗೆ ಬಿಳಿ ಬಣ್ಣದಿಂದ ನಕ್ಷೆಯನ್ನು ಬರೆಯಲಾಗಿದೆ. ಕಾಲಲ್ಲಿ ಗೆಜ್ಜೆ, ಕೆಂಪು ಪೈಜಾಮು, ಕಪ್ಪು ಎತ್ತರ ಹಿಂಬಡಿಗಳುಳ್ಳ ಚಪ್ಪಲಿ ಹಾಕಿಕೊಂಡಿದ್ದಾಳೆ. ಆಕೃತಿ ಮಧ್ಯದಲ್ಲಿದ್ದು, ಮೇಲಿನಿಂದ ಅರ್ಧದವರೆಗೆ ತೆಳು ನೀಲಿ ಬಣ್ಣವನ್ನು ಚಪ್ಪಟೆಯಾಗಿ ಹಾಕಲಾಗಿದೆ. ಅದಾದ ನಂತರ ತೆಳುಗೆಂಪು ಬಣ್ಣದ ಮತ್ತೊಂದು ಪಟ್ಟಿಯನ್ನು ಹಾಕಿ ನಿಸರ್ಗದಲ್ಲಿ ಒಂದೇ ತರಹದ ನೀಲಿ ಬಣ್ಣದ ಗಿಡಮರಗಳನ್ನು ಚಿತ್ರಿಸಲಾಗಿದೆ. ಮತ್ತೆ ಚಿಕ್ಕ ಕಂಪೌಂಡಿನಂತಹ ಗೋಡೆಯನ್ನು ಚಿತ್ರಿಸಲಾಗಿದೆ. ಅದಾದ ಮೇಲೆ ನೆಲಕ್ಕೆ ಸಂಪೂರ್ಣ ಕೆಂಪು ಬಣ್ಣವನ್ನು ಬಳಸಲಾಗಿದೆ.

**೬೮. ಸೀರೆಯುಟ್ಟು ನಿಂತ ಮಹಿಳೆ**

ಬಾಗಲಕೋಟೆಯ ಮಹೇಂದ್ರ ಸರಾಫ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ತೆಳುಗೆಂಪು ಬಣ್ಣದ ಮೈಬಣ್ಣ ಹೊಂದಿದ ಮಹಿಳೆ ದುಂಡು ಮುಖ, ಹೆಚ್ಚು ಅಲಂಕಾರವಲ್ಲದ ಬಟ್ಟೆ, ಕೆಂಪು ಬಣ್ಣದ ಸೀರೆ ಧರಿಸಿ, ಎಡಗೈಯಿಂದ ಹೂವಿನ ಬುಟ್ಟಿ ಹಿಡಿದುಕೊಂಡು, ಬಲಗೈ ಮೇಲೆತ್ತಿ ಗಿಡದಲ್ಲಿನ ಹೂವುಗಳನ್ನು ಹರಿಯುತ್ತಿರುವಂತಿದೆ. ಆಕೃತಿ ಮಧ್ಯದಲ್ಲಿದ್ದು, ಮೇಲಿನಿಂದ ಕಾಲುಭಾಗ ತೆಳು ನೀಲಿ ಬಣ್ಣವನ್ನು ಚಪ್ಪಟೆಯಾಗಿ ಹಾಕಲಾಗಿದೆ. ಅದಾದ ನಂತರ ತೆಳುಗೆಂಪು ಬಣ್ಣದ ಮತ್ತೊಂದು ಪಟ್ಟಿಯನ್ನು

ಹಾಕಿ ನಿಸರ್ಗದಲ್ಲಿ ಒಂದೇ ತರಹದ ನೀಲಿ ಬಣ್ಣದ ಗಿಡಮರಗಳನ್ನು ಚಿತ್ರಿಸಲಾಗಿದೆ. ಮತ್ತೆ ಚಿಕ್ಕ ಕಂಪೌಂಡಿನಂತಹ ಗೋಡೆಯನ್ನು ಚಿತ್ರಿಸಲಾಗಿದೆ. ಅದಾದ ಮೇಲೆ ನೆಲಕ್ಕೆ ಸಂಪೂರ್ಣ ಕಡುನೀಲಿ ಬಣ್ಣವನ್ನು ಬಳಸಲಾಗಿದೆ. ಚಿತ್ರದಲ್ಲಿ ಸೀರೆ ಉಟ್ಟುಕೊಂಡು ಮುಖ ಮತ್ತು ಕೈಭಾಗ ಮಾತ್ರ ಕಾಣುವಂತೆ ಚಿತ್ರಿಸಿದ ಚಿತ್ರಿಸಲಾದ ಈ ಚಿತ್ರವು ಹಿಂದಿನ ಚಿತ್ರಗಳಂತಿರದೆ ಒಂದು ಸರಳ ಸಂಯೋಜನೆಯ ಸಾಮಾನ್ಯ ಚಿತ್ರವಾಗಿದೆ.

**೬೯. ಆಧುನಿಕ ಸ್ತ್ರೀ**

ಬಾಗಲಕೋಟೆಯ ಮಹೇಂದ್ರ ಸರಾಫ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ತೆಳುಗೆಂಪು ಬಣ್ಣದ ಮೈಬಣ್ಣ ಹೊಂದಿದ ಮಹಿಳೆ ದುಂಡು ಮುಖ, ಹೆಚ್ಚು ಅಲಂಕಾರವಲ್ಲದ ಬಟ್ಟೆ, ಕೆಂಪು ಬಣ್ಣದ ಲಂಗ ಧರಿಸಿ, ಮೇಲೆ ಉದ್ದ ತೋಳಿನ ಅಂಗಿಯನ್ನು ಧರಿಸಿದ್ದಾಳೆ. ಹೆಗಲ ಮೇಲೆ ಅಲಂಕಾರಿಕ ನೀಲಿ ಬಣ್ಣದ ಬಟ್ಟೆಯ ದೊಡ್ಡ ಗಂಟನ್ನು ಸೊಂಟಕ್ಕೆ ಕಟ್ಟಿಕೊಂಡು ಲಂಗದ ಜೊತೆಗೆ ಇಳಿಬಿಟ್ಟಿದ್ದಾಳೆ. ತಲೆಯ ಮೇಲೆ ಹ್ಯಾಟ್‌ವೊಂದನ್ನು ಧರಿಸಿ ಕೂದಲುಗಳನ್ನು ಉದ್ದವಾಗಿ ಬಿಟ್ಟಿದ್ದಾಳೆ. ಎಡಗೈಯಿಂದ ಹ್ಯಾಟನ್ನು ತೋರ್ಬೆರಳಿನಿಂದ ಹಿಡಿದುಕೊಂಡು, ಬಲಗೈಯನ್ನು ಸೊಂಟದ ಮೇಲೆ ತಿರುವಿ ಇಟ್ಟುಕೊಂಡಿದ್ದಾಳೆ. ಅದಾದ ಮೇಲೆ ನೆಲಕ್ಕೆ ಸಂಪೂರ್ಣ ಕೆಂಪು ಬಣ್ಣವನ್ನು ಬಳಸಲಾಗಿದೆ. ಚಿತ್ರದಲ್ಲಿ ಲಂಗ ಉಟ್ಟುಕೊಂಡು ಹ್ಯಾಟ್ ಹಾಕಿ ನಿಲ್ಲಿಸಿದ ಚಿತ್ರವಾಗಿದೆ. ಚಿತ್ರವು ಹಿಂದಿನ ಚಿತ್ರಗಳಂತೆ ಯಾವುದೇ ಸಂಯೋಜನೆಯಿಲ್ಲದ ಪೂರ್ಣಪ್ರಮಾಣದ ವ್ಯಕ್ತಿಯ ಭಾವ ಚಿತ್ರದಂತಿದೆ.

**೭೦. ಕುಳಿತಿರುವ ಮಹಿಳೆ**

ಬಾಗಲಕೋಟೆಯ ಮಹೇಂದ್ರ ಸರಾಫ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಕಪ್ಪು ಬಣ್ಣದ ಹಿಂದಿನ ವಿನ್ಯಾಸವನ್ನು ಹೊಂದಿದ ಮಹಿಳೆಯ ಕುಳಿತ ಭಾವಚಿತ್ರ ಇದ್ದಂತಿದೆ. ಕೆಂಪು ಮುಖದ ಮಹಿಳೆ ಅಗಲವಾದ ಕಣ್ಣುಗಳು, ಅರ್ಧಚಂದ್ರಾಕೃತಿಯಲ್ಲಿ ಕುಂಕುಮ, ಕಿವಿಯಲ್ಲೊಂದು ರಿಂಗು, ಕುತ್ತಿಗೆತನಕ ಕೆಂಪು ರವಿಕೆಯನ್ನು ಧರಿಸಿ ಅಧಕ್ಕೆ ಬಿಳಿ ಬಣ್ಣದ ರೇಖಾ ವಿನ್ಯಾಸಗಳನ್ನು ರಚಿಸಲಾಗಿದೆ. ರವಿಕೆಯ ಕೆಳಗೆ ಬಿಳಿ ಬಣ್ಣದ ವಸ್ತ್ರವನ್ನು ಸೆರಗಿನಂತೆ ಹಾಕಿಕೊಳ್ಳಲಾಗಿದೆ. ಅದರಲ್ಲಿ ಕೆಂಪು ಮತ್ತು ಹಸಿರು ಬಣ್ಣದ ಹೂವಿನ ನಕ್ಷೆಯನ್ನು ರಚಿಸಲಾಗಿದೆ. ಬಲಗೈಯನ್ನು ಎತ್ತರಕ್ಕಿಟ್ಟುಕೊಂಡು, ಎಡಗೈಯನ್ನು ಸಹಜವಾಗಿ ಬಲಗೈ ಜೊತೆಗೆ ಸೇರಿಸಿಕೊಂಡು ಕುಳಿತಿದ್ದಾಳೆ. ಮುಖದ ಪ್ರಮಾಣ ದೊಡ್ಡದಾಗಿದ್ದು, ಪ್ರಮಾಣಬದ್ಧ ಚಿತ್ರ ಎನಿಸುವುದಿಲ್ಲ.

**೭೧. ಬೀಸಣಿಕೆ ಹಿಡಿದ ಮಹಿಳೆ**

ಬಾಗಲಕೋಟೆಯ ಮಹೇಂದ್ರ ಸರಾಫ ಅವರ ಮನೆಯಲ್ಲಿ ಸಂಗ್ರಹಗೊಂಡ ಈ ಚಿತ್ರದಲ್ಲಿ ಕೆಂಪು ಬಣ್ಣದ ಮುಖವುಳ್ಳ ಮಹಿಳೆ ಕೂದಲುಗಳನ್ನು ಬಾಚಿ ಹಿಂದೆ ಬಿಟ್ಟಿದ್ದಾಳೆ. ಕೆಂಪು ಬಣ್ಣದ ರವಿಕೆಯನ್ನು ಧರಿಸಿ ಬಿಳಿಯ ಚುಕ್ಕಿಗಳಿಂದ ಸಾಮಾನ್ಯ ನಕ್ಷೆಯನ್ನು ರಚಿಸಲಾಗಿದೆ. ಹೆಗಲ ಮೇಲೊಂದು ನೀಲಿ ಬಣ್ಣದ ಹೆಚ್ಚುವರಿ ಬಟ್ಟೆಯನ್ನು ಧರಿಸಿ ಅದರಲ್ಲೂ ಚಿಕ್ಕ ಚಿಕ್ಕ ನಕ್ಷೆಗಳಿವೆ. ಬಲಗೈಯನ್ನು ಮೇಲೆತ್ತಿ ಅಲಂಕೃತ

ಬೀಸಣಿಕೆಯೊಂದನ್ನು ಎತ್ತಿ ಹಿಡಿದಿರುವುದು ಇಡೀ ಚಿತ್ರದ ಪ್ರಮುಖ ಅಂಶ. ಎಡಗೈಯನ್ನು ತೊಡೆಯ ಮೇಲೆ ಊರಿದ್ದಾಳೆ. ಕುಳಿತ ಸ್ಥಳದಲ್ಲಿ ಹಳದಿ ಬಣ್ಣದ ಕೆಂಪು ಚುಕ್ಕೆಗಳಿರುವ ಹಾಸಿಗೆಯನ್ನು ಹಾಸಲಾಗಿದೆ. ಹಣೆಯ ಮೇಲೆ ಕುಂಕುಮ ಇತ್ಯಾದಿ ಇರುವುದಿಲ್ಲ. ಹಿನ್ನೆಲೆ ವಿನ್ಯಾಸದಲ್ಲಿ ಸಂಪೂರ್ಣ ನೀಲಿ ಬಣ್ಣವನ್ನು ಬಳಸಿಕೊಳ್ಳಲಾಗಿದೆ. ಒಟ್ಟು ಚಿತ್ರವು ಮೊಣಕಾಲುವರೆಗೆ ಇದ್ದು, ಅರ್ಧಭಾವ ಚಿತ್ರ ಇದಾಗಿದೆ.

### iv. ಗಾಜಿನ ಚಿತ್ರಗಳ ವಿಶೇಷತೆ

* ದುಂಡು ಮುಖದ ಕುಳ್ಳನೆಯ ಆಕೃತಿಗಳನ್ನು ರಚಿಸಲಾಗಿದೆ. ಅದರಲ್ಲಿ ಪ್ರಮುಖವಾಗಿ ಶರೀರ ಭಾಗಗಳು ಒಂದೇ ಆಕಾರದಲ್ಲಿದ್ದು, ಭಂಗಿಯನ್ನು ಬದಲಾಯಿಸುತ್ತಾ ಹೋಗಿದ್ದಾರೆ. ಉದಾಹರಣೆಗೆ: ರಾಜ-ರಾಣಿಯರ ಚಿತ್ರದಲ್ಲಿ ರಾಣಿಯ ಕೈ ಹಿಡಿದುಕೊಂಡ ರಾಜ, ರಾಣಿಯ ಕಡೆಗೇ ನೋಡಿರುತ್ತಾನೆ. ಇನ್ನೊಂದು ಕಡೆ ಅದೇ ರಾಜ, ಅದೇ ರಾಣಿಯ ಕೈ ಹಿಡಿದು ವಿರುದ್ಧ ದಿಕ್ಕಿನಲ್ಲಿ ನೋಡಿರುತ್ತಾನೆ. ಇಲ್ಲಿ ವೇಷಭೂಷಣಗಳ ಬಣ್ಣ ಮಾತ್ರ ಬದಲಾಗಿರುತ್ತದೆ.

* ಕತೆ ಹೇಳುವ ಚಿತ್ರಗಳು ಉದಾಹರಣೆಗೆ: ದಮಯಂತಿ ನಳನ ಸಂದೇಶವನ್ನು ಹಂಸದಿಂದ ತೆಗೆದುಕೊಳ್ಳುವ ಚಿತ್ರ ಮೂರ್‍ನಾಲ್ಕು ಇದ್ದು, ಅವುಗಳಲ್ಲಿ ದಮಯಂತಿಯ ಭಾವನೆ ಒಂದೇ ರೀತಿಯದಾಗಿದ್ದು, ಹಂಸವನ್ನು ಕೈಯಲ್ಲಿ ಹಿಡಿದು, ತೊಡೆಯ ಮೇಲೆ ಕುಳ್ಳರಿಸಿಕೊಂಡು ಹಾಗೂ ಕಟ್ಟೆಯ ಮೇಲೆ ಇರುವಾಗ ಅದರ ಎದುರಿಗೆ ಎದ್ದುನಿಂತು ನಿರೀಕ್ಷಿಸುವಂತೆ ಚಿತ್ರಿಸಲಾಗಿದೆ. ಇಲ್ಲಿ ಕತೆ ಒಂದೇ ಆದರೂ ಭಂಗಿಗಳು ಮತ್ತು ವೇಷಭೂಷಣಗಳು ಬೇರೆ ಬೇರೆಯಾಗಿವೆ.

* ಕಾಲ್ಪನಿಕ ಚಿತ್ರಗಳಲ್ಲಿ ದೇವಲೋಕದ ಜನರಂತೆ ಕಲ್ಪಿಸಿಕೊಂಡು ಮನುಷ್ಯನಿಗೇ ರೆಕ್ಕೆಗಳನ್ನಿರಿಸಿ ದಂಪತಿಗಳು, ಸ್ನೇಹಿತರು, ಗೆಳೆತಿಯರು ಇತ್ಯಾದಿಯಾಗಿ ಚಿತ್ರಿಸಲಾಗಿದೆ. ಇಲ್ಲಿ ಸಂಭಾಷಣೆ ನಿರತರು ಏನು ಕಾರ್ಯ ಮಾಡುತ್ತಿದ್ದಾರೆಂಬುದು ಹಾಗೂ ಏನನ್ನು ಯೋಚಿಸುತ್ತಿದ್ದಾರೆಂಬುದು ನಿಚ್ಚಳವಾಗಿ ಹೇಳಲಾಗುವುದಿಲ್ಲ. ಹಾಗಾಗಿ ಕಾಲ್ಪನಿಕ ಚಿತ್ರಗಳು ಮನುಷ್ಯನ ಕಲಾತ್ಮಕ ಮತ್ತು ಸೃಜನಶೀಲ ಸೃಷ್ಟಿಗೆ ಕಾರಣವಾಗಿವೆ.



# ಗಾಜಿನ ಚಿತ್ರಗಳು



ಪೌರಾಣಿಕ ಗಾಜಿನ ಚಿತ್ರಗಳು ೧) ಶಿವಪಾರ್ವತಿ, ಗಣೇಶ ಮತ್ತು ನಂದಿ



೨) ಕಾಲಾಂತಕ ಶಿವ



೧೩) ಕಾಳಿಂಗ ಮರ್ಧನ



೧೪) ಬೆಣ್ಣೆಕೃಷ್ಣ



೧೫) ಗಾರುಡಿಗ ಕೃಷ್ಣ



೧೬) ರಾಮ ಪಟ್ಟಾಭಿಷೇಕ



೧೭) ರಾಮಪಟ್ಟಾಭಿಷೇಕ



೧೮) ಶ್ರೀದೇವಿ, ಭೂದೇವಿ ಸಹಿತ ವೆಂಕಟೇಶ್ವರ



ಆಧುನಿಕ ಗಾಜಿನ ಚಿತ್ರಗಳು

೨೦) ಕೃಷ್ಣ ರಾಧೆ ಸಲ್ಲಾಪ



೨೭) ಸಲ್ಲಾಪದಲ್ಲಿ ಸತಿಪತಿ



೨೮) ಸಲ್ಲಾಪದಲ್ಲಿ ಸತಿಪತಿ



೨೯) ವಾದ್ಯ ನುಡಿಸುವ ಪ್ರೇಮಿ



೩೦) ಸಲ್ಲಾಪದಲ್ಲಿ ರಾಜ ರಾಣಿ



೩೧) ಪ್ರೀತಿ ಹೂ ಕೊಡುತ್ತಿರುವ ರಾಣಿ



೩೨) ಸಲ್ಲಾಪದಲ್ಲಿ ರಾಜ ರಾಣಿ



೩೩) ಸುಖ ಸಲ್ಲಾಪದಲ್ಲಿ ರಾಜ ರಾಣಿ



೩೪) ಸಲ್ಲಾಪದಲ್ಲಿ ಸತಿ ಪತಿ



೩೬) ಸುಖ ಸಲ್ಲಾಪದಲ್ಲಿ ರಾಜ ರಾಣಿ



೩೭) ಸಿಂಹಾಸನದ ಮೇಲೆ ಪತಿ



೩೮) ಸಿಂಹಾಸನಾರೂಢ ರಾಜ



೩೯) ರಾಜನ ಅರ್ಧಭಾವ ಚಿತ್ರ


೪೦) ರಸಿಕ ರಾಜ


೪೧) ರಾಜನ ಭಾವ ಚಿತ್ರ



೪೭) ಕುದುರೆ ಮೇಲೆ ಮೈಲಾರ



೪೩) ಕುದುರೆಯ ಮೇಲೆ ಮಲ್ಲಾರಿ



ಕಾಲ್ಪನಿಕ ಗಾಜಿನ ಚಿತ್ರಗಳು    ೪೪) ಸುಂದರಿಯನ್ನು ಕೊಂಡೊಯ್ಯುವ ಗಂಧರ್ವ ಸ್ತ್ರೀ



೪೭) ಪುರುಷ ಪ್ರೀಯ-ಗಂಧರ್ವ ಪ್ರಿಯೆ



೪೮) ಅರಸುಕುಮಾರ ಗಂಧರ್ವಸತಿ



೪೭) ಗಂಧರ್ವ ಕನ್ಯೆಯ ಒಲುಮೆಗಾಗಿ ಪುರುಷ



೪೮) ಕನ್ಯೆಯನ್ನು ಅಪ್ಪಿಕೊಂಡ ಪುರುಷ



೪೯) ಪುರುಷ ಮತ್ತು ಗಂಧರ್ವ ಕನ್ಯೆಯ ಸರಸ



೫೦) ರಾಜ ಕುಮಾರನೊಡನೆ ಗಂಧರ್ವ ಶ್ರೀ



೫೧) ಗಂಧರ್ವ ಕನ್ಯೆಯರು



ಸ್ತ್ರೀಯರ ಚಿತ್ರಗಳು

೫೨) ನಗ್ನ ವೀಣಾ ಪಾಣಿ



೫೫) ಸಿಂಹಾಸನಾರೂಢ ವೀಣಾಪಾಣಿ



೫೬) ಹಾರಿಬಂದ ಪಾರಿವಾಳ



೫೭) ಉಯ್ಯಾಲೆಯಲ್ಲಿ ಮಹಿಳೆ



೫೮) ಮಹಿಳೆ ಮತ್ತು ಹಂಸ



೫೯) ಹಂಸದೊಂದಿಗೆ ಮಹಿಳೆ



೬೦) ಹಂಸ ಮತ್ತು  ಮಹಿಳೆ



೬೮) ನಿಂತಿರುವ ತರುಣಿ



೬೭) ನಿಂತ ಮಹಿಳೆ



೬೩) ಕುಳಿತಿರುವ ಮಹಿಳೆ



೬೪) ನಿಂತ ಮಹಿಳೆ



೬೫) ಕರವಸ್ತ್ರ ಹಿಡಿದು ನಿಂತ ಮಹಿಳೆ



೬೬) ಕೈಯಲ್ಲಿ ದಾವಣಿ ಹಿಡಿದ ಮಹಿಳೆ



೬೭) ಹೂ ಹಿಡಿದು ನಿಂತ ಮಹಿಳೆ



೬೮) ಸೀರೆಯುಟ್ಟು ನಿಂತ ಮಹಿಳೆ



೭೮ )ಬೀಸಣಿಕೆ ಹಿಡಿದ ಮಹಿಳೆ

# ಸಮಾರೋಪ

ಬಾಗಲಕೋಟೆ ಜಿಲ್ಲೆಯು ಸಾಮಾಜಿಕ, ಶೈಕ್ಷಣಿಕ, ರಾಜಕೀಯ ಕ್ಷೇತ್ರಗಳಂತೆ ಸಾಂಸ್ಕೃತಿಕ ಕ್ಷೇತ್ರದಲ್ಲೂ ಮೇಲ್‌ಸ್ಥರದಲ್ಲಿದೆ. ಸಾಂಸ್ಕೃತಿಕ ಕ್ಷೇತ್ರದ ಸಂಗೀತ, ನೃತ್ಯ, ನಾಟಕ, ಶಿಲ್ಪಕಲೆಗಳಂತೆಯೇ ಚಿತ್ರಕಲಾ ವಲಯವೂ ಭವ್ಯ ಪರಂಪರೆಯನ್ನು ಹೊಂದಿದೆ. ಸುಮಾರು ೨೦೦೦ ವರ್ಷಗಳಷ್ಟು ಹಿಂದಿನ ಪರಂಪರೆ ಜಿಲ್ಲೆಯ ಚಿತ್ರಕಲಾ ಕ್ಷೇತ್ರಕ್ಕಿದೆ. ಮಾನವನ ಉಗಮದೊಂದಿಗೇ ಹುಟ್ಟಿಕೊಂಡು ಬಂದ ಪ್ರಾಗೈತಿಹಾಸಿಕ ಶಿಲಾಶ್ರಯ ಚಿತ್ರಕಲೆಯಿಂದ ಇಂದಿನ ಶಿಷ್ಟ ಕಲಾವಿದರಾದ ಆರ್.ಎಂ. ಹಡಪದ್, ಬಿ.ಕೆ. ಹಿರೇಮಠ, ವಿಜಯ ಸಿಂಧೂರ ಮುಂತಾದವರವರೆಗೂ ಜಿಲ್ಲೆಯ ಚಿತ್ರಕಲಾ ಕ್ಷೇತ್ರ ತನ್ನ ವಲಯದಲ್ಲಿಯೇ ಉನ್ನತಿಯನ್ನು ಸಾಧಿಸುತ್ತಾ ಬಂದಿದೆ. ಕಾರಣ ಜಿಲ್ಲೆಯ ಒಟ್ಟು ಚಿತ್ರಕಲಾ ಪರಂಪರೆಯನ್ನು ಒಂದುಗೂಡಿಸಿ, ಸಂಗ್ರಹಿಸಿ, ಅಭ್ಯಸಿಸುವ ಉದ್ದೇಶದಿಂದ "ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ" ಅಧ್ಯಯನವನ್ನು ಕೈಗೊಂಡು ಪ್ರಸ್ತುತಪಡಿಸಿದ್ದೇನೆ.

ಅಧ್ಯಾಯ ಒಂದರಲ್ಲಿ "ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ" ಎಂಬ ವಿಷಯದ ಮೇಲೆ ಅಧ್ಯಯನ ನಡೆಸಲು ಇರುವ ಉದ್ದೇಶ, ಆ ಅಧ್ಯಯನದ ಸ್ವರೂಪ, ವ್ಯಾಪ್ತಿ ಹಾಗೂ ವೈಧಾನಿಕತೆಯ ಕುರಿತು ಹೇಳಲಾಗಿದೆ. ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಬಾಗಲಕೋಟೆ ಜಿಲ್ಲೆಯ ಚಿತ್ರಕಲೆಯೂ ಕೂಡ ಪ್ರಾಚೀನ ಕಾಲದಿಂದ ಇಂದಿನವರೆಗೂ ತನ್ನ ಭವ್ಯತೆಯನ್ನು ಉಳಿಸಿಕೊಂಡು ಬಂದಿದೆ. ಕಲಾಪೋಷಕರಾದ, ಚಾಲುಕ್ಯರ ನಾಡಾದ ಜಿಲ್ಲೆಯ ಒಟ್ಟು ಚಿತ್ರಕಲೆಯ ಕುರಿತು ಅಧ್ಯಯನ ನಡೆಸುವ ಉದ್ದೇಶದಿಂದ ಈ ಸಂಶೋಧನೆಯನ್ನು ಒಟ್ಟು ಎಂಟು ಅಧ್ಯಾಯಗಳಾಗಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಅಧ್ಯಯನವು ಜಿಲ್ಲೆಯ ಆರೂ ತಾಲ್ಲೂಕುಗಳಲ್ಲಿಯ ಚಿತ್ರಕಲೆಯ ವಿವಿಧ ಮಾಧ್ಯಮಗಳನ್ನು ಒಳಗೊಂಡಿದೆ. ಈ ಅಧ್ಯಯನದಲ್ಲಿ ಭಿತ್ತಿ, ಹಸ್ತಪ್ರತಿ, ತೊಗಲು, ಬಟ್ಟೆ, ಗಾಜು, ಚಿತ್ರಗಳ ಒಟ್ಟು ಹರವನ್ನು ಪ್ರಸ್ತುತಪಡಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಜಿಲ್ಲೆಯ ಶಿಲಾಶ್ರಯ ಚಿತ್ರಗಳ ಕುರಿತು ವಿವರಿಸಲಾಗಿದೆ. ಜಿಲ್ಲೆಯ ಮೂರು ತಾಲ್ಲೂಕುಗಳಲ್ಲಿ ಆದಿಮಾನವನಿಂದ ರಚಿಸಲ್ಪಟ್ಟ ಪ್ರಾಗೈತಿಹಾಸಿಕ ಶಿಲಾಶ್ರಯ ಭಿತ್ತಿ ಚಿತ್ರಗಳಿವೆ. ಬಾದಾಮಿ ತಾಲ್ಲೂಕಿನ ಸೀತಿದೋಣೆ, ಕುಟುಕನಕೇರಿ, ಸಿಡಿಲಫಡಿ, ಕಳ್ಳರಫಡಿ, ಅರೆಗುಡ್ಡ, ಹಿರೆಗುಡ್ಡ, ಮಹಾಕೂಟ, ತಟಕೋಟಿ ಅಲ್ಲದೇ ಬಾದಾಮಿ ನಗರದ ಸುತ್ತಮುತ್ತಲಿನ ಪರಿಸರದಲ್ಲಿ ಆದಿಮಾನವನಿಂದ ರಚಿತಗೊಂಡ

ಹಲವಾರು ಚಿತ್ರಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ. ಜಮಖಂಡಿ ತಾಲ್ಲೂಕಿನ ಕಲ್ಹಳ್ಳಿ ಸಮೀಪದ ಗೊಂಬಿಗುಡ್ಡದಲ್ಲಿ ಹಾಗೂ ಯಲ್ಲಟ್ಟಿಯ ಸಮೀಪದ ನೂರಾಳಫಡಿ ಎಂಬಲ್ಲಿ ಆದಿಮಾನವನ ಕೊರೆದ ಚಿತ್ರಗಳು ಅಂತೆಯೇ ಹುನಗುಂದ ತಾಲ್ಲೂಕಿನ ಐಹೊಳೆಯ ಸಮೀಪದಲ್ಲಿರುವ ಇತ್ತೀಚೆಗೆ ಆವಿಷ್ಕಾರಗೊಂಡ, ಹುಲಿಘಡಿಯಲ್ಲಿ ದೊರೆತ ಆದಿಮಾನವನಿಂದ ರಚಿಸಲ್ಪಟ್ಟ ಪ್ರಾಗೈತಿಹಾಸಿಕ ಚಿತ್ರಗಳನ್ನು ಸಂಗ್ರಹಿಸಿ ವಸ್ತುವಿಷಯಕ್ಕನುಸಾರವಾಗಿ ವಿಭಜಿಸಿ ವಿವರಿಸಲಾಗಿದೆ.

ಆದಿಮಾನವನು ನೈಸರ್ಗಿಕವಾಗಿ ದೊರೆತಂತಹ ವಸ್ತುಗಳನ್ನು ಬಳಸಿಕೊಂಡು ಚಿತ್ರರಚನೆ ಮಾಡಿದ್ದಾನೆ. ನೈಸರ್ಗಿಕವಾಗಿ ದೊರೆತ ಕೆಂಪುಮಣ್ಣು, ಸುಣ್ಣದ ಕಲ್ಲು, ಇದ್ದಿಲು, ರೆಡ್ ಹೆಮಟೈಟ್ ಎಂಬ ಖನಿಜ ಇವುಗಳನ್ನು ಮೊಟ್ಟೆಯೊಳಗಿನ ಲೋಳೆಯಂತಹ ದ್ರವ, ಪ್ರಾಣಿಗಳ ಕೊಬ್ಬು ಇತ್ಯಾದಿಗಳಲ್ಲಿ ಮಿಶ್ರ ಮಾಡಿಕೊಂಡು ಚಿತ್ರರಚನೆಯನ್ನು ಮಾಡಿದ್ದಾನೆ. ಅಂದರೆ ನೈಸರ್ಗಿಕವಾಗಿ ದೊರೆತ ಬಣ್ಣಗಳಲ್ಲಿ ಅಂಟು ಮಾಧ್ಯಮವನ್ನು ಬೆರೆಸಿಕೊಂಡು ಚಿತ್ರ ರಚಿಸಿದ್ದರಿಂದಲೇ ಆ ಎಲ್ಲಾ ಚಿತ್ರಗಳು ಪ್ರಕೃತಿ ವಿಕೋಪಗಳಿಗೆ ನಾಶವಾಗದೇ ಇಂದಿನವರೆಗೂ ಉಳಿದುಕೊಂಡಿವೆ. ಆದಿಮಾನವನ ಮುಖ್ಯ ಕೆಲಸ ಬೇಟೆಯೇ ಆಗಿದ್ದುದರಿಂದ ಆತನ ಚಿತ್ರಗಳಲ್ಲಿ "ಬೇಟೆ" ಮುಖ್ಯ ವಿಷಯವಾಗಿದೆ. ಜಿಲ್ಲೆಯಲ್ಲಿ ಕಂಡುಬಂದಿರುವ ಆದಿಮಾನವನ ಚಿತ್ರಗಳು ಮನುಷ್ಯಾಕೃತಿ, ಪ್ರಾಣಿಗಳು ಹಾಗೂ ಬೇಟೆಯ ದೃಶ್ಯಗಳನ್ನೊಳಗೊಂಡಿವೆ. ಕಲೆಯ ಕುರಿತ ತನ್ನ ಅನಿಸಿಕೆಗಳನ್ನು ಮೂಡಿಸಿದ ಆದಿಮಾನವ ಕೇವಲ ಮೂರ್ನಾಲ್ಕು ರೇಖೆಗಳನ್ನು ಬಳಸಿ ಚಿತ್ರಗಳನ್ನು ರಚಿಸಿದ್ದರೂ ಸಹ ಅವನ ಮೂಲಗ್ರಹಿಕೆ ಹಾಗೂ ಭಾವನೆಯನ್ನು ಅರ್ಥೈಸಿಕೊಳ್ಳುವ ರೀತಿಯಲ್ಲಿ ಚಿತ್ರಗಳು ರಚನೆಗೊಂಡಿದ್ದು ಗಮನಾರ್ಹ ಅಂಶವಾಗಿದೆ. ಹೀಗೆ ಪ್ರಾಗೈತಿಹಾಸಿಕ ನೆಲೆಗಳು ಚಿತ್ರರಚನೆಯ ತಂತ್ರವಿಧಾನ, ವಸ್ತುವಿಷಯ, ವಿಶೇಷತೆಗಳ ಕುರಿತು ಸಂಪೂರ್ಣವಾಗಿ ವಿವರಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಜಿಲ್ಲೆಯ ಭಿತ್ತಿ ಮಾಧ್ಯಮದ ಕುರಿತು ವಿವರಿಸಲಾಗಿದೆ. ಅಧ್ಯಯನದ ಉದ್ದೇಶದಿಂದ ಭಿತ್ತಿ ಮಾಧ್ಯಮವನ್ನು ಗುಹಾಭಿತ್ತಿ ಹಾಗೂ ಗೃಹಭಿತ್ತಿಗಳಾಗಿ ವಿಭಜಿಸಿಕೊಂಡು ಪ್ರಸ್ತುತಪಡಿಸಲಾಗಿದೆ. ಮಾನವ ಪ್ರಾಗೈತಿಹಾಸಿಕ ಕಾಲದಿಂದ ಐತಿಹಾಸಿಕ ಕಾಲಕ್ಕೆ ಬರುವುದರೊಳಗಾಗಿ ರಾಜಮನೆತನಗಳು, ಮಠಮಾನ್ಯಗಳು, ಬೌದ್ಧವಿಹಾರ, ಬಸದಿಗಳು ತಲೆಯೆತ್ತಿದ್ದವು. ಅಂತೆ ಜಿಲ್ಲೆಯನ್ನಾಳಿದ ಬಾದಾಮಿ ಚಾಲುಕ್ಯರ ರಾಜಧಾನಿ ಬಾದಾಮಿ ಆಗಿದ್ದರಿಂದ ಬಾದಾಮಿಯ ಸುತ್ತಮುತ್ತಲಿನ ಪರಿಸರದಲ್ಲಿ ಕಲಾಪೋಷಕರಾದ ಚಾಲುಕ್ಯ ಅರಸರು ಹಲವಾರು ಭಿತ್ತಿ ಚಿತ್ರಗಳ ರಚನೆಗೆ ಪೋಷಕರಾಗಿದ್ದಾರೆ. ಜಿಲ್ಲೆಯ ಬಾದಾಮಿ ಹಾಗೂ ಐಹೊಳೆಗಳಲ್ಲಿ ಮಾತ್ರ ಐತಿಹಾಸಿಕ ಗುಹಾಭಿತ್ತಿ ಚಿತ್ರಗಳನ್ನು ಕಾಣಬಹುದಾಗಿದೆ. ಬಾದಾಮಿ ಹತ್ತಿರದ ಉತ್ತರಬೆಟ್ಟ, ಮಾಲಗಿತ್ತಿ ಶಿವಾಲಯದ ಹತ್ತಿರದ ಸ್ವಾಭಾವಿಕ ಗುಹೆಗಳಲ್ಲಿ ಚಾಲುಕ್ಯರ ಕಾಲದ ಆರಂಭಿಕ ಭಿತ್ತಿ ಚಿತ್ರಗಳಿವೆ. ಇಲ್ಲಿ ಒಟ್ಟು ಮೂರು ಚಿತ್ರಗಳು ಕಂಡುಬಂದಿದ್ದು, ಎರಡರಲ್ಲಿ ಸ್ತ್ರೀಯರ ಚಿತ್ರಗಳಿದ್ದು, ಒಂದು ಕಾದಾಡುತ್ತಿರುವ ಸೈನಿಕರ ಚಿತ್ರವಿದೆ. ಇಲ್ಲಿ ಕೇವಲ ತೆಳುವಾದ ಲೇಪನದ ಭಿತ್ತಿಯನ್ನು ಸಿದ್ಧಪಡಿಸಿಕೊಂಡು ಕೇವಲ ಕೆಂಪುವರ್ಣದಿಂದ ಚಿತ್ರರಚನೆ ಮಾಡಲಾಗಿದೆ. ಈ ಚಿತ್ರಗಳ ತಂತ್ರ ವಿಧಾನಗಳನ್ನು ಗಮನಿಸಿದಾಗ ಇವು ಚಾಲುಕ್ಯರ ಆರಂಭಿಕ ಚಿತ್ರಗಳೆನ್ನುವುದು ಸ್ಪಷ್ಟವಾಗುತ್ತದೆ.

ನಂತರದಲ್ಲಿ ಚಾಲುಕ್ಯ ರಾಜರು ಕೊರೆದ ಗುಹೆಗಳನ್ನು ನಿರ್ಮಿಸಿ ಅದರಲ್ಲಿ ಶಿಲ್ಪಗಳ ಜೊತೆಗೆ ಭಿತ್ತಿ ಚಿತ್ರಗಳನ್ನು ರಚಿಸಿದ್ದಾರೆ. ಮೇಣ ಬಸದಿಯ ಮೂರನೇ ವೈಷ್ಣವ ಗುಹೆಯಲ್ಲಿ ರಾಜನ ಒಡ್ಡೋಲಗದ ಚಿತ್ರ, ಅರಮನೆಯ ದೃಶ್ಯ, ಚಾಮರಗಳನ್ನು ಬೀಸುತ್ತಿರುವ ಸ್ತ್ರೀಯರು, ಗಂಧರ್ವ ದಂಪತಿಗಳು ಇತ್ಯಾದಿ ಚಿತ್ರಗಳನ್ನು ರಚಿಸಲಾಗಿದೆ. ಇವುಗಳಲ್ಲಿ ಹಳದಿ, ಹಸಿರು, ಕೆಂಪು, ನೀಲಿ ಹೀಗೆ ಬಹುವರ್ಣಗಳನ್ನು ಬಳಸಿಕೊಂಡು ಚಿತ್ರ ರಚಿಸಲಾಗಿದೆ. ಈ ಚಿತ್ರಗಳು ಸಂಪೂರ್ಣವಾಗಿ ನಾಶವಾಗಿದ್ದು, ಹಲವು ವಿದ್ವಾಂಸರ ಸಂಗ್ರಹದಲ್ಲಿರುವ ಈ ಚಿತ್ರಗಳನ್ನು ದೊರಕಿಸಿಕೊಂಡು ವಿವರಿಸಲಾಗಿದೆ. ಅಂತೆಯೇ ಚಾಲುಕ್ಯರ ಕಾಲದ ಐಹೊಳೆಯ ರಾವಣಫಡಿ ಗುಹೆಯಲ್ಲಿ ಸಹ ವರ್ಣಭಿತ್ತಿ ಚಿತ್ರವನ್ನು ರಚಿಸಲಾಗಿದೆ. ಇಲ್ಲಿಯ ಚಿತ್ರದ ಸುತ್ತಲೂ ಹೂಬಳ್ಳಿ ನಕ್ಷೆಯನ್ನು ರಚಿಸಿರುವುದು ಭಿತ್ತಿ ಚಿತ್ರ ಪರಂಪರೆಯ ಮೊದಲ ಉದಾಹರಣೆ ಎನ್ನಬಹುದು. ಹೀಗೆ ಜಿಲ್ಲೆಯ ಐತಿಹಾಸಿಕ ಭಿತ್ತಿ ಚಿತ್ರಗಳ ನೆಲೆಗಳು, ತಂತ್ರವಿಧಾನಗಳು, ವಸ್ತುವಿಷಯ ವಿಶೇಷತೆಗಳ ಕುರಿತು ವಿಮರ್ಶಿಸಿ ವಿವರಿಸಲಾಗಿದೆ.

ಇನ್ನು ಗೃಹಭಿತ್ತಿ ಚಿತ್ರಕಲೆಯಲ್ಲಿ ಮನೆ, ಮಠ, ಅರಮನೆ ಹಾಗೂ ಸಂಗ್ರಹಾಲಯಗಳಲ್ಲಿ ರಚಿತಗೊಂಡು, ಸುಮಾರು ೨೫೦ ವರ್ಷಗಳಿಂದೀಚೆಗಿನ ಶಿಷ್ಟ ಹಾಗೂ ಜಾನಪದ ಭಿತ್ತಿ ಚಿತ್ರಕಲೆಯ ಕುರಿತು ಅಭ್ಯಸಿಸಲಾಗಿದೆ. ಜಿಲ್ಲೆಯ ಗುಳೇದಗುಡ್ಡದ ಹೊಸಮನಿ ಗೌಡರಮನೆ, ಮಹಾಲಿಂಗಪುರ ಮಠ, ಜಮಖಂಡಿ ಅರಮನೆ, ಬೆಳದಿಂಗಳ ಚಿತ್ರಕಲೆ, ಗರಡಿಮನೆ ಚಿತ್ರಕಲೆ ಹಾಗೂ ಬಾಗಲಕೋಟೆ ವಸ್ತುಸಂಗ್ರಹಾಲಯದಲ್ಲಿರುವ ಶಿಷ್ಟಪದ ಚಿತ್ರಗಳ ಕುರಿತು ವಿವರಿಸಲಾಗಿದೆ. ಸುಮಾರು ೨೦೦ ವರ್ಷದ ಇತಿಹಾಸವಿರುವ ಗುಳೇದಗುಡ್ಡದ ಹೊಸಮನಿ ಗೌಡರಮನೆಯಲ್ಲಿ ಒಂದು ಕೋಣೆಯ ತುಂಬೆಲ್ಲಾ ಗಣಪತಿ, ನವಿಲಿನ ಮೇಲೆ ಕುಳಿತ ಸರಸ್ವತಿ, ಕಾಳಿಂಗ ಮರ್ಧನದಂತಹ ಪೌರಾಣಿಕ ಕಥೆಗಳನ್ನಾಧರಿಸಿದ ಭಿತ್ತಿ ಚಿತ್ರಗಳಿದ್ದವು. ಈಗ ಆ ಮನೆಯನ್ನು ಸಂಪೂರ್ಣ ಪುನರ್‌ನಿರ್ಮಿಸಿದ್ದರಿಂದ ಅಲ್ಲಿಯ ಚಿತ್ರಗಳೆಲ್ಲವೂ ನಾಶವಾಗಿವೆ. ವಿದ್ವಾಂಸರ ಸಂಗ್ರಹದಲ್ಲಿರುವ ಚಿತ್ರಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ. ಮಹಾಲಿಂಗಪುರದ ಮಠದಲ್ಲಿಯೂ ಸಹ ದೇವತಾ ಚಿತ್ರಗಳು ಪೌರಾಣಿಕ ಕಥೆಗಳಾದ ಕಿರಾತಾರ್ಜುನ ಪ್ರಸಂಗ, ಗಿರಿಜಾ ಕಲ್ಯಾಣದಂತಹ ಚಿತ್ರಗಳೊಂದಿಗೆ ಮಹಾಲಿಂಗೇಶ್ವರರ ತಪಸ್ಸಿನ ಕುರಿತ ಭಿತ್ತಿ ಚಿತ್ರಗಳನ್ನು ಕಾಣಬಹುದಾಗಿದೆ. ಜಮಖಂಡಿ ಅರಮನೆಯ ಮಾಡುಗಳಲ್ಲಿ ರಚಿತವಾಗಿರುವ ಜಯ, ವಿಜಯ, ಲಕ್ಷ್ಮಿ, ಗಣಪತಿ ಚಿತ್ರಗಳು ಹಾಗೂ ವಿವಿಧ ನಕ್ಷಾ ಚಿತ್ರಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ. ಇಲ್ಲಿಯೂ ಸಹ ಚಿತ್ರಗಳು ಸಂಪೂರ್ಣವಾಗಿ ಅಳಿವಿನಂಚಿನಲ್ಲಿದ್ದು, ಅವುಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ. ಜಿಲ್ಲೆಯ ಏಕೈಕ ತಾಣವಾದ ಗುಳೇದಗುಡ್ಡದಲ್ಲಿ ಮಾತ್ರವೇ ಬೆಳದಿಂಗಳ ಚಿತ್ರಕಲೆ ಕೇವಲ ಬೆರಳೆಣಿಕೆಯಷ್ಟು ಮನೆತನಗಳಲ್ಲಿ ಉಳಿದುಕೊಂಡಿದ್ದು, ಐದು ದಿನಗಳವರೆಗೆ ಆಚರಣೆಯಲ್ಲಿರುತ್ತಿದ್ದ ಬೆಳದಿಂಗಳ ಚಿತ್ರಕಲೆ ಇಂದು ಕಾಟಾಚಾರಕ್ಕೆಂಬಂತೆ ಒಂದು ದಿನಕ್ಕೆ ಬಂದು ನಿಂತಿದೆ. ಈ ಕಾರಣದಿಂದಾಗಿ ಬೆಳದಿಂಗಳ ಚಿತ್ರಕಲೆಯ ನೆಲೆ ಹಾಗೂ ವಸ್ತುವಿಷಯಗಳನ್ನು ಸ್ಥೂಲವಾಗಿ ಪ್ರಸ್ತುತಪಡಿಸಲಾಗಿದೆ. ಅಂತೆಯೇ ಜನಪದರಿಂದ

ರಚಿತಗೊಂಡ ಅಳಿವಿನಂಚಿನಲ್ಲಿರುವ ಗರಡಿಮನೆಯ ಭಿತ್ತಿ ಚಿತ್ರಗಳನ್ನು ಕೂಡ ಸಂಗ್ರಹಿಸಿ ಅಭ್ಯಸಿಸಲಾಗಿದೆ. ತೀರಾ ಇತ್ತೀಚೆಗೆ ನಿರ್ಮಾಣಗೊಂಡ ಬಾಗಲಕೋಟೆಯ ಮುಳುಗಡೆ ವಸ್ತುಸಂಗ್ರಹಾಲಯದಲ್ಲಿ ವಿವಿಧ ಮಾಧ್ಯಮಗಳನ್ನು ಬಳಸಿ ಭಿತ್ತಿ ಚಿತ್ರಗಳನ್ನು ರಚಿಸಲಾಗಿದೆ. ಧಾರ್ಮಿಕ ಆಚರಣೆಗಳಾದ ಜಾತ್ರೆ, ನಾಗರಪಂಚಮಿ, ದೀಪಾವಳಿ, ಹೋಳಿ ಇತ್ಯಾದಿ ಚಿತ್ರಗಳನ್ನು ಬಣ್ಣ, ಸೀಸದ ಕಡ್ಡಿ, ದಾರ, ಬಟ್ಟೆಚೂರುಗಳು ಹೀಗೆ ಹಲವು ರೀತಿಯ ಮಾಧ್ಯಮಗಳನ್ನು ಬಳಸಿ ವಿಭಿನ್ನವಾದ ಬಿತ್ತಿ ಚಿತ್ರಗಳನ್ನು ರಚಿಸಲಾಗಿದ್ದು, ಅವುಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ತಾಳೆಗರಿ ಮತ್ತು ಫಲಕ ಮಾಧ್ಯಮಗಳ ಮೇಲಿನ ಚಿತ್ರ ರಚನೆಗಳನ್ನು ಆಧಾರವಾಗಿಟ್ಟುಕೊಂಡು ಅಭ್ಯಸಿಸಿ ವಿವರಿಸಲಾಗಿದೆ. ಜಿಲ್ಲೆಯ ಶಿವಯೋಗ ಮಂದಿರ, ಮುಧೋಳ ತಾಲ್ಲೂಕಿನ ಮಾಚಕನೂರಿನ ಕಲ್ಮಠ್ ಅವರ ಮನೆಯಲ್ಲಿ ಹಾಗೂ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘದಲ್ಲಿ ಸಂಗ್ರಹಿತವಾದ ಹಸ್ತಪ್ರತಿಗಳಲ್ಲಿನ ಚಿತ್ರಗಳನ್ನು ವರ್ಣಚಿತ್ರ, ರೇಖಾಚಿತ್ರ, ಕಟ್ಟಿಗೆಯ ಫಲಕಗಳ ಪಟ್ಟಿಕೆಗಳು ಎಂದು ವಿಂಗಡಿಸಿದೆ. ರೇಖಾ ಚಿತ್ರಗಳಲ್ಲಿ ಕಬ್ಬಿಣದ ಕೈವಾರಗಳಿಂದ ಬಳಸಿಕೊಂಡು ನಕ್ಷಾಚಿತ್ರಗಳನ್ನು ಪ್ರಾಣಿ, ಮನುಷ್ಯ, ಈಶ್ವರಲಿಂಗ, ನಂದಿ ಇತ್ಯಾದಿಗಳನ್ನು ರಚಿಸಲಾಗಿದೆ. ಜಾತಕ, ಪಂಚಾಂಗ, ಪೌರಾಣಿಕ ಹಿನ್ನೆಲೆಗಳನ್ನು ಆಧರಿಸಿದ ಹಾಗೆಯೇ ಅಂಥ ರೇಖಾಚಿತ್ರ ರಚನೆಗಳಿವೆ.

ತಾಳೆಗರಿಗಳ ಮೇಲಿನ ರೇಖಾ ಚಿತ್ರಗಳನ್ನು, ಉದ್ಧರಣೆಯ ಚಿತ್ರಗಳು ಹಾಗೂ ನಕ್ಷಾ ಚಿತ್ರಗಳೆಂದು ವಿಭಜಿಸಿಕೊಂಡು ವಿವರಿಸಲಾಗಿದೆ. ಫಲಕಗಳ ಮೇಲಿನ ವರ್ಣ ಚಿತ್ರಗಳನ್ನು ಸಾಂದರ್ಭಿಕ ಚಿತ್ರಗಳು ಹಾಗೂ ಅಲಂಕಾರಿಕ ವರ್ಣನಕ್ಷಾ ಚಿತ್ರಗಳೆಂದು ವಿಭಜಿಸಿಕೊಂಡು ಸ್ಥೂಲವಾಗಿ ಪ್ರಸ್ತುಪಡಿಸಲಾಗಿದೆ.

ಅಧ್ಯಾಯ ಐದರಲ್ಲಿ ಚಿತ್ರಕಲೆಯ ಇನ್ನೊಂದು ವಿಶಿಷ್ಟ ಮಾಧ್ಯಮವಾದ ತೊಗಲನ್ನು ಆಧರಿಸಿ ರಚನೆಗೊಂಡ ಚಿತ್ರಗಳ ಕುರಿತು ಅಧ್ಯಯನ ನಡೆಸಲಾಗಿದೆ. ಇಲ್ಲಿ ತೊಗಲುಗೊಂಬೆ, ಹಚ್ಚೆ ಹಾಗೂ ಮದರಂಗಿ ಕಲೆಯನ್ನು ಮೂರು ವಿಭಾಗಗಳಾಗಿ ವಿಂಗಡಿಸಿಕೊಂಡು, ಚಿತ್ರಗಳ ಕುರಿತು ವಿವರಿಸಲಾಗಿದೆ. ಬಾಗಲಕೋಟೆ ಜಿಲ್ಲೆಯಲ್ಲಿ ತೊಗಲುಗೊಂಬೆಗಳನ್ನಾಡಿಸುವ ಏಕೈಕ ಮನೆತನವಿರುವುದು ಬಾದಾಮಿ ತಾಲ್ಲೂಕಿನ ಕಾಕನೂರಿನಲ್ಲಿ. ಅನಕ್ಷರಸ್ಥನೊಬ್ಬ ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳನ್ನು ಕಡಿಮೆ ಅವಧಿಯಲ್ಲಿ ಜನಪದರಿಗೆ ಸೊಗಸಾಗಿ ತಿಳಿಯುವಂತೆ ಆಡಿಸುವ ನೆರಳು, ಬೆಳಕುಗಳ ವಿನ್ಯಾಸ ಕಲ್ಪನೆಯನ್ನು ಅವುಗಳ ವರ್ಣರೇಖೆ, ವಸ್ತುವಿಷಯ ಮುಂತಾದವುಗಳ ಕುರಿತು ಚರ್ಚಿಸಿ ಪ್ರಸ್ತಾಪಿಸಲಾಗಿದೆ. ರಾಮಾಯಣ, ಮಹಾಭಾರತದಲ್ಲಿ ಬರುವ ಪಾತ್ರಗಳಾದ ರಾಮ, ಸೀತೆ, ಹನುಮಂತ, ರಾವಣ, ಜಟಾಯು, ಜಿಂಕೆ, ಶೂರ್ಪನಕಿ ಅಂತೆಯೇ ಮಹಾಭಾರತದ ಪಾತ್ರಗಳಾದ ಅರ್ಜುನ, ಧರ್ಮರಾಯ, ಭೀಮ, ನಕುಲ, ಸಹದೇವ, ಕೃಷ್ಣ, ದುರ್ಯೋಧನ, ದುಶ್ಯಾಸನ, ಕಂಸ, ಶಕುನಿ, ದ್ರೌಪತಿ ಇತ್ಯಾದಿ ೪೩ ಚಿತ್ರಗಳನ್ನು ರಾಮಾಯಣ ಹಾಗೂ ಮಹಾಭಾರತದ ಚಿತ್ರಗಳಾಗಿ ವಿಭಜಿಸಿ ವಿವರಿಸಲಾಗಿದೆ. ತೊಗಲುಗೊಂಬೆಗಳನ್ನು ಚಿಗರಿ ತೊಗಲಿನಿಂದ ರಚಿಸಿ ಅದರ ಮೇಲೆ ಕೆಂಪು, ಕಪ್ಪು, ವರ್ಣಗಳನ್ನು ಮಾತ್ರ ಲೇಪಿಸಲಾಗಿದೆ.

ತೊಗಲುಗೊಂಬೆ ಆಭರಣಗಳಿರುವಲ್ಲಿ ತೊಗಲಿಗೆ ಸಣ್ಣಸಣ್ಣ ರಂಧ್ರಗಳನ್ನು ಹಾಕಿ ವಿರುದ್ಧ ದಿಕ್ಕಿನಿಂದ ಬೆಳಕು ಪಸರಿಸುವ ತಂತ್ರ ಬಳಸಿ ಆಭರಣಗಳು ಹೊಳೆಯುವಂತೆ ಮಾಡಿರುವುರೊಂದು ವಿಶೇಷ.

ಎರಡುನೂರು ವರ್ಷಗಳ ಹಿಂದೆಯೇ ರಚಿತವಾದ ಈ ತೊಗಲುಗೊಂಬೆಗಳನ್ನು ಕಾಕನೂರಿನ ಏಕೈಕ ಕಿಳ್ಳೀಕ್ಯಾತರ ಮನೆತನದವರು ಇಂದಿಗೂ ಕಾಯ್ದುಕೊಂಡು ಬಂದಿದ್ದು, ಈಗಲೂ ಗೊಂಬೆಗಳನ್ನಾಡಿಸುವ ಪರಂಪರೆಯನ್ನು ಮುಂದುವರೆಸಿದ್ದಾರೆ. ಆ ಮನೆತನದವರೇ ಹೇಳುವಂತೆ ಈ ಗೊಂಬೆಗಳನ್ನು ಅವರ ಪೂರ್ವಜ, ಮುತ್ತಜ್ಜ ಸುಭಾನಪ್ಪ ಶಾಸ್ತ್ರಿಗಳೇ ರಚಿಸಿದ್ದಾರೆಂದು ಹೇಳುತ್ತಾರೆ. ಅವರೇ ರಚಿಸಿದ ಬಗೆಗೆ ನಿಖರವಾದ ಮಾಹಿತಿ ದೊರೆತಿಲ್ಲ. ಅಪರೂಪವಾದ ಈ ತೊಗಲುಗೊಂಬೆಯಾಟದ ಪರಂಪರೆಯನ್ನು ಇಂದಿನ ಸಿನಿಮಾ, ದೂರದರ್ಶನದ ಕಾಲದಲ್ಲೂ, ಉಳಿಸಿಕೊಂಡು ಬಂದಿರುವುದು ಗಮನಾರ್ಹ.

ಇದರೊಂದಿಗೆ ತೊಗಲುಮಾಧ್ಯಮದ ಇನ್ನೊಂದು ಕಲೆ ಹಚ್ಚೆ. ಇಂದು ವಿಶ್ವದೆಲ್ಲೆಡೆ ಫ್ಯಾಶನ್ ವಸ್ತುವಾಗಿ ಪರಿಣಮಿಸಿದ್ದು ಇತಿಹಾಸ. ಇಲ್ಲಿ ಜಗತ್ತಿನಾದ್ಯಂತ ಇರುವ ಹಚ್ಚೆಗೂ ಭಾರತದಲ್ಲಿ ಮತ್ತು ಅದೂ ಕರ್ನಾಟಕದಲ್ಲಿ ವ್ಯಾಪಕವಾಗಿ ಬೆಳೆದು ಬಾಗಲಕೋಟೆ ಜಿಲ್ಲೆಯ ಜಮಖಂಡಿ, ಗುಳೇದಗುಡ್ಡ, ತೇರ್ದಾಳ ಮುಂತಾದ ಕಡೆಗಳಲ್ಲಿ  ಉಳಿದುಬಂದಿದೆ; ಅಲ್ಲಿ ಇಂದಿಗೂ ಹಚ್ಚೆ ಚುಚ್ಚುವವರು ಕಾಣಸಿಗುತ್ತಾರೆ. ಹಚ್ಚೆ ಹಾಕಿಸಿಕೊಂಡರೆ ಹಿಂದೂ ಸಂಪ್ರದಾಯದ ಪ್ರಕಾರ ಸತ್ತಮೇಲೂ ನಮ್ಮ ಜೊತೆಗೆ ಬರುವ ಏಕೈಕ ವಸ್ತು ಹಚ್ಚೆ ಎಂಬ ನಂಬಿಕೆ ಇದೆ. ನೂರು ವರ್ಷಗಳ ಹತ್ತಿರ ಹತ್ತಿರ ವಯೋಮಾನದವರು ಕಣ್ಣಿನ ಹಿಂದೆ ಮುಂಗೈ ಮೇಲೆ ಹಚ್ಚೆಗಳನ್ನು ಹಾಕಿಸಿಕೊಳ್ಳುತ್ತಿದ್ದರು. ಬರುಬರುತ್ತಾ ಅದು ಪ್ರೇಯಸಿ ಪ್ರಿಯಕರನ ಹೆಸರುಗಳನ್ನು ಹಚ್ಚೆ ಹಾಕಿಸಿಕೊಳ್ಳುವುದು ಆರಂಭವಾಯಿತು. ಇಂದಿಗೂ ೫೦ ವರ್ಷದ ವಯೋಮಾನದವರಲ್ಲಿ ಬರೆಸಿಕೊಂಡ ಹೆಸರುಗಳು ಕಾಣಸಿಗುತ್ತವೆ. ಸರ್ವಸಾಮಾನ್ಯವಾಗಿ ಹನುಮಂತ, ಬಾಸಿಂಗ, ಸರಳಗೈ ನಕ್ಷಾ ಚಿತ್ರಗಳನ್ನು ಹಾಕಿಸಿಕೊಳ್ಳುತ್ತಾರೆ. ಹಚ್ಚೆ ಹಾಕುವವರನ್ನು ಸಂದರ್ಶನ ನಡೆಸಿ ಮಾಹಿತಿ ಸಂಗ್ರಹಿಸಿ ಚಿತ್ರ ಸಮೇತ ವಸ್ತುವಿಷಯ, ಶೈಲಿ, ವಿನ್ಯಾಸವನ್ನು ಅಧ್ಯಯನ ನಡೆಸಲಾಗಿದೆ.

ಹಚ್ಚೆ ತೊಗಲಿನ ಒಳಪದರುಗಳನ್ನು ಪ್ರವೇಶಿಸಿ ಜೀವನಪೂರ್ತಿ ಉಳಿದುಕೊಳ್ಳುವ ಚಿತ್ರವಾದರೆ ಇದರೊಂದಿಗೆ ಹಬ್ಬಹರಿದಿನ, ಮದುವೆ ಸಮಾರಂಭಗಳಲ್ಲಿ ಹಾಕಿಕೊಳ್ಳುವ ಅಲ್ಪಕಾಲ ಬಾಳುವ ಚಿತ್ರಕಲೆ ಮದರಂಗಿ. ಮುಸ್ಲಿಮ್ ಅರಸರ ಪ್ರಭಾವ ಜಿಲ್ಲೆಗಾಗಿರುವುದರಿಂದ ಅಂದಿನ ಮೆಹೆಂದಿಕಲೆ ಇಂದಿಗೂ ಮುಸ್ಲಿಂ ಮಹಿಳೆಯರಲ್ಲಿ ವ್ಯಾಪಕವಾಗಿ ಕಂಡುಬರುತ್ತದೆ. ಅದೇ ರೀತಿ ಮಾರ್ವಾಡಿಗಳು ಮದರಂಗಿಗೆ ತುಂಬಾ ಪ್ರಾಶಸ್ತ್ಯ ನೀಡಿ ಯಾವಾಗಲೂ ಚಿತ್ರಿಸಿಕೊಳ್ಳುತ್ತಾರೆ. ಇದಲ್ಲದೇ ಸಾಮಾನ್ಯ ಮಹಿಳೆಯರು, ಕೂಲಿಕಾರ್ಮಿಕರೂ ಮೊದಲಾಗಿ ಇದಕ್ಕೆ ಮಾರು ಹೋಗದವರಿಲ್ಲ. ಜಿಲ್ಲೆಯಲ್ಲಿ ಲಭ್ಯವಿರುವ ಹಚ್ಚೆ ಚಿತ್ರಗಳನ್ನು ಬೇರೆ ಬೇರೆ ಸಮುದಾಯದ ಜನರ ಕೈಕಾಲುಗಳಲ್ಲಿ ಹಾಕಿಸಿಕೊಂಡ ಚಿತ್ರಗಳನ್ನು ಲಕ್ಷಿಸಿ, ಅವುಗಳ ವಸ್ತುವಿಷಯ, ವಿನ್ಯಾಸಗಳ ಅಧ್ಯಯನ ನಡೆಸಲಾಗಿದೆ.

ಅಧ್ಯಾಯ ಆರರಲ್ಲಿ ಇನ್ನೊಂದು ಪ್ರಮುಖ ಮಾಧ್ಯಮವಾದ ಶತಮಾನಗಳ ಇತಿಹಾಸವಿರುವ ಬಟ್ಟೆ ಮಾಧ್ಯಮವನ್ನು ರಂಗಪರದೆಗಳು ಹಾಗೂ ಜನಪದ, ಶಿಷ್ಟಪದ ಕಲಾವಿದರಿಂದ ರಚಿತಗೊಂಡ ಕಲಾವಿದರು

ಹಾಗೂ ಕಲಾಕೃತಿಗಳ ಕುರಿತು ವಿವರಿಸಲಾಗಿದೆ. ಚಿಲಕದ ವೆಂಕಣ್ಣ ಎಂಬ ಗ್ರಾಮೀಣ ಕಲಾವಿದ ರಚಿಸಿದ ಕವಾಟು ಕೃತಿಗಳಿಂದ ಆರಂಭಗೊಂಡ ಈ ಕಲೆ ರಸ್ತಾ, ಅರಣ್ಯ, ಅರಮನೆ, ಶ್ರೀಮಂತರ ದೋಮಜಲುಮನೆ, ಜೈಲು ಮುಂತಾದ ಸೀನು(ದೃಶ್ಯ)ಗಳನ್ನು ನೈಜವಾದವು ಎಂಬಂತೆ ರಚಿಸುವ ಕಲೆ ಅಪರೂಪದ್ದಾಗಿದೆ. ಅದರ ಮುಂದೆಯೇ ಪಾತ್ರಧಾರಿಗಳು ನಿಂತಂತೆ ಸನ್ನಿವೇಶಕ್ಕೆ ಅನುಗುಣವಾಗಿ ಅರಣ್ಯದಲ್ಲಿಯೇ ನಿಂತಂತೆ, ರಸ್ತೆಯಲ್ಲಿಯೇ ನಿಂತಂತೆ ಭಾಸವಾಗುವ ರೀತಿಯಲ್ಲಿ ೧೫x೨೨ ಅಡಿಗಳ ಪರದೆಗಳನ್ನು ಚಿತ್ರಿಸಲಾಗಿದೆ. ಜೈಲು ಕಂಬಿಗಳ ಹಿಂದೆ ನಿಂತ ಮನುಷ್ಯ ನಿಜವಾಗಿಯೂ ಜೈಲಿನಲ್ಲಿಯೇ ಇದ್ದಾನೆಂಬಂತೆ ಗೋಚರಿಸುತ್ತವೆ. ಇನ್ನು ಪೌರಾಣಿಕ ಚಿತ್ರಗಳಲ್ಲಂತೂ ಅರಮನೆ ಮತ್ತು ರಣರಂಗಗಳನ್ನು ಹಿನ್ನೆಲೆ, ಮುನ್ನೆಲೆಗಳ ಭ್ರಮೆಯುಂಟು ಮಾಡುವಂತೆ ವಿಶೇಷವಾಗಿ ಚಿತ್ರಿಸಿ ನೂರಾರು ವರ್ಷಗಳ ಹಿಂದಕ್ಕೆ ಕೊಂಡೊಯ್ಯುವ ಅಚ್ಚರಿ ಕಲೆ ಇದಾಗಿದೆ. ಬೇರೆ ಬೇರೆ ಕಲಾವಿದರು ಆಧುನಿಕ ಸಂದರ್ಭದಲ್ಲಿ ಸಾಮಾನ್ಯ ರಸ್ತೆ ಹೋಗಿ ವಿಧಾನಸೌಧದ ಮುಂದಿನ ರಸ್ತೆಯಾಗಿರುವುದು ಇಂದಿನ ಕಾಲಕ್ಕೆ ಹೊಂದಿಸಿಕೊಂಡು ರಚಿಸಿದ ಚಿತ್ರಗಳನ್ನು ವಸ್ತುವಿಷಯ ವಿನ್ಯಾಸದೊಂದಿಗೆ ವಿವರಿಸಲಾಗಿದೆ.

ಮಾತ್ರವಲ್ಲದೇ ಇಡೀ ಜಿಲ್ಲೆಯ ಕಲಾವಿದರು ಹಾಗೂ ಅವರ ವಿಭಿನ್ನ ಮಾಧ್ಯಮಗಳ ಅಕಾಡೆಮಿಕ್ ಶೈಲಿಯ ಕಲಾಕೃತಿಗಳ ಜೊತೆಗೆ ಮಠಮಾನ್ಯ, ವಸ್ತುಸಂಗ್ರಹಾಲಯಗಳಲ್ಲಿ ಸಂಗ್ರಹಗೊಂಡ ಕಲಾಕೃತಿಗಳು, ಚಿತ್ರಕಲಾ ಮಹಾವಿದ್ಯಾಲಯಗಳ ಕುರಿತು ಪ್ರಸ್ತುತಪಡಿಸಲಾಗಿದೆ.

ಬಾದಾಮಿಯ ಮಯೂರ ಹೊಟೇಲ್‌ನಲ್ಲಿ ಹಿರಿಯ ಕಲಾವಿದ ಎಂ.ಎಸ್. ಚಂದ್ರಶೇಖರ್‌ರವರ ಭೂದೃಶ್ಯಗಳ ಮೂಲಕಲಾಕೃತಿಗಳು ಹೊಟೇಲ್ ಬಾದಾಮಿ ಕೋರ್ಟ್‌ನಲ್ಲಿ ಲಿಂಗದೇವರು ಅವರ ಕೃತಿಗಳು ಒಂದೆಡೆಯಾದರೆ ಕೂಡಲಸಂಗಮದ ಮಾತೆಮಹಾದೇವಿಯವರ ಬಸವಾಶ್ರಮದಲ್ಲಿ ಗುಲಬರ್ಗಾದ ಶ್ರೀ ಹುಡುಗಿ ಅವರು ರಚಿಸಿದ ಎಲ್ಲಾ ಶರಣರ ಭಾವಚಿತ್ರಗಳು ಅವರವರ ಕಾಯಕದೊಂದಿಗೆ ರಚನೆಗೊಂಡ ಕಾಲ್ಪನಿಕ ಚಿತ್ರಗಳು ೧೨ನೇ ಶತಮಾನಕ್ಕೆ ಕೊಂಡೊಯ್ಯುತ್ತವೆ. ಇಲಕಲ್ಲ ಹಾಗೂ ಚಿತ್ತರಗಿ ಸಂಸ್ಥಾನ ಮಠಗಳಲ್ಲಿ ಸ್ವಾಮಿಗಳ ಲೀಲೆಗಳನ್ನು ಕುರಿತು ರಚಿಸಿದ ಚಿತ್ರಗಳು ಹಾಗೂ ಇತ್ತೀಚೆಗೆ ಶಿವಯೋಗ ಮಂದಿರದಲ್ಲಿ ಬೃಹತ್ ಗ್ಯಾಲರಿಯೊಂದು ಸಿದ್ಧಗೊಂಡು ಅಲ್ಲಿ ಹಿರಿಯ ಕಲಾವಿದ ಸಂಡೂರಿನ ನಾಡೋಜ ಶ್ರೀ ವಿ.ಟಿ. ಕಾಳೆಯವರ, ಹಾನಗಲ್ ಕುಮಾರಸ್ವಾಮಿಯವರ ಜೀವನ ಘಟನೆಗಳನ್ನು ಹಾಗೂ ಸಂದೇಶವನ್ನು ಸಾರುವ ತೈಲವರ್ಣ ಚಿತ್ರಗಳು ಅಪರೂಪದ ಧಾರ್ಮಿಕ ಕಲಾಸಂಗ್ರಹವಾಗಿ ಉಳಿದಿವೆ.

ಅಧ್ಯಾಯ ಏಳರಲ್ಲಿ ಜಿಲ್ಲೆಯಲ್ಲಿ ವಿಪುಲವಾಗಿ ಸಂಗ್ರಹವಾಗಿರುವ ವಿಶೇಷವಾಗಿ ಗುಳೇದಗುಡ್ಡ, ಬಾಗಲಕೋಟೆ ಮತ್ತು ಅಮೀನಗಡದ ಗಾಜಿನ ಚಿತ್ರಗಳನ್ನು ಅವಲೋಕಿಸಿ ಏಕ ರೂಪದ ಚಿತ್ರ, ಮಾಧ್ಯಮ ಮತ್ತು ತಂತ್ರ, ವಸ್ತುವಿಷಯಗಳು ಕೂಡ ಒಂದಕ್ಕೊಂದು ತುಂಬಾ ಹತ್ತಿರವಾಗಿವೆ. ಆದರೆ ಇವು ಕೇವಲ ಕೆಲವರ ಮನೆಯಲ್ಲಿ ಸಂಗ್ರಹಗೊಂಡ ಕಲಾಕೃತಿಗಳಾಗಿದ್ದು, ಚಿತ್ರ ರಚನಾಕಾರರ ಮಾಹಿತಿ ಲಭ್ಯವಿಲ್ಲ. ಈ ಮನೆಯವರು ಹೇಳುವ ಪ್ರಕಾರ ಹಿಂದೆ ತಮ್ಮ ಮುತ್ತಜ್ಜರು ಕುಬಸದ ಖಣಗಳ ವ್ಯಾಪಾರಕ್ಕೆಂದು

ರಾಜಸ್ಥಾನಕ್ಕೆ ಹೋದಾಗ ತಮ್ಮ ಮನೆಗಳಲ್ಲಿ ಮದುವೆಗಳಿರುವ ಸಂದರ್ಭದಲ್ಲಿ ಅಲಂಕಾರಕ್ಕಾಗಿ ಕೊಂಡುತಂದ ಕಲಾಕೃತಿಗಳೆಂದು ತಿಳಿದುಬರುತ್ತದೆ. ವಿಶೇಷವೆಂದರೆ ನೂರಾರು ವರ್ಷಗಳಿಂದ ಒಂದು ಕಾಜೂ ಒಡೆಯದಂತೆ ರಕ್ಷಿಸಿಕೊಂಡು ಬಂದಿದ್ದು, ಎರಡೂ ಮನೆತನದವರ ಕಲಾಪ್ರೇಮವನ್ನು ಕಲಾಕೃತಿಗಳಿಗೆ ನೀಡಿದ ಗೌರವವನ್ನು ಎತ್ತಿ ತೋರಿಸುತ್ತದೆ.

ಚಿತ್ರಗಳಲ್ಲಿ ಪೌರಾಣಿಕ, ಆಧುನಿಕ ಹಾಗೂ ಕಾಲ್ಪನಿಕ ಚಿತ್ರಗಳಾಗಿ ವಿಂಗಡಿಸಿದ್ದು, ಒಂದೊಂದು ಚಿತ್ರದ ಬಗೆಗೂ ವಸ್ತುವಿಷಯ, ತಂತ್ರಗಾರಿಕೆ, ವಿನ್ಯಾಸಗಳನ್ನು ಬಿಡಿ ಬಿಡಿಯಾಗಿ ಅಧ್ಯಯನ ನಡೆಸಲಾಗಿದೆ.

ಅಧ್ಯಾಯ ಎಂಟು ಸಮಾರೋಪದಲ್ಲಿ ಇದುವರೆಗೂ ನಡೆದ ಅಧ್ಯಯನದ ಎಲ್ಲಾ ಕಲಾಕೃತಿಗಳ ವಸ್ತುವಿಷಯ, ಮುಂತಾಗಿ ವಿಮರ್ಶೆ, ಫಲಿತಗಳನ್ನೊಳಗೊಂಡು, ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಿ ಮಾಹಿತಿಯ ಕುರಿತು ಖಚಿತ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

**ಫಲಿತಗಳು**

೧. 'ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ' ಎಂಬ ಶೀರ್ಷಿಕೆಯಿಂದ ಜಿಲ್ಲೆಯನ್ನು ಪ್ರಾಗೈತಿಹಾಸಿಕ, ಐತಿಹಾಸಿಕ ಮತ್ತು ಅರ್ವಾಚೀನ ಕಾಲಗಳಲ್ಲಿ ಕೇವಲ ಚಿತ್ರಕಲೆಯನ್ನು ಅನುಲಕ್ಷಿಸಿ ಅಧ್ಯಯನ ನಡೆಸಿದ್ದು, ಸಮಗ್ರ ಸಾಂಸ್ಕೃತಿಕ ಅಧ್ಯಯನಗಳು, ಜಿಲ್ಲೆಯ ಇತಿಹಾಸ ಸಂಶೋಧನೆಗಳು, ನೂರು ವರ್ಷಕ್ಕೊಮ್ಮೆ ಸಂಪಾದನೆಗೊಳ್ಳುವ ಗ್ಯಾಜೆಟಿಯರ್‌ಗಳಲ್ಲೂ ಸಮಗ್ರ ಸಾಂಸ್ಕೃತಿಕತೆಯಲ್ಲಿ 'ಚಿತ್ರಕಲೆ' ಒಂದು ಅತೀ ಚಿಕ್ಕ ಭಾಗವಾಗಿ ಪರಿಗಣಿಸಲ್ಪಟ್ಟಿದೆ. ಅಂಥಲ್ಲಿ ಹೇಳಿರದ ಹೇಳಿದ್ದರೂ ಒಂದು ಪರಿಮಿತಿಯಲ್ಲಿ ಸಂಕ್ಷೇಪವಾಗಿ ವಿವರಣೆ ಹೊಂದಿದ ಸಂದರ್ಭವು ಸಮಗ್ರ ಚಿತ್ರಕಲೆಯ ಇತಿಹಾಸದ ಹಿನ್ನೆಲೆಯಲ್ಲಿ ಒಂದು ಕೊರತೆಯಾಗಿ ಕಾಣುವುದು ಸಹಜ. ಅದನ್ನು ನಿವಾರಿಸಲೆಂದೇ ಜಿಲ್ಲೆಯ ಚಿತ್ರಕಲೆಗೇ ಸಂಬಂಧಿಸಿದ ಆಕರಗಳನ್ನು ಹೆಕ್ಕಿ, ಚಿತ್ರಕಲೆಯಲ್ಲಿರುವ ವಸ್ತುವಿಷಯ, ವಿನ್ಯಾಸ, ತಂತ್ರಗಳ ಜೊತೆಗೆ ಅವನ್ನು ವಿಮರ್ಶೆಗೊಳಪಡಿಸಲು ಯತ್ನಿಸಲಾಗಿದೆ. ಆ ಮೂಲಕ ಆ ಕೊರತೆಯನ್ನು ತುಂಬಿಕೊಳ್ಳಲಾಗಿದೆ. ಅದೂ ಅಲ್ಲದೆ ಚಿತ್ರಕಲೆಯ ಎಲ್ಲಾ ಮಗ್ಗಲುಗಳನ್ನು ಚರ್ಚಿಸಿ ದಾಖಲೆಗೊಳಿಸಲಾಗಿದೆ.

೨. ಇತಿಹಾಸಕಾರರ ಮತ್ತು ತಜ್ಞರ ಅಭಿಪ್ರಾಯದಂತೆ ಬಾದಾಮಿ ಪರಿಸರದಲ್ಲಿರುವ ೨೦೦೦ ವರ್ಷಗಳಷ್ಟು ಹಳೆಯದಾದ ಆದಿಮಾನವ ಶಿಲಾಶ್ರಯಗಳಲ್ಲಿ ಬರೆದ ಚಿತ್ರಗಳನ್ನು ವೈಜ್ಞಾನಿಕವಾಗಿ ವಿಂಗಡಿಸಿ ಒಂದೊಂದು ಚಿತ್ರದ ವಸ್ತುವಿಷಯ, ತಾಂತ್ರಿಕತೆಯ ಅಧ್ಯಯನ ನಡೆಸಲಾಗಿದೆ. ಚಿತ್ರದ ಮೂಲಕ ದಾಖಲಿಸಿದ್ದ ಆ ಕಲಾವಿದನ ಮನದಾಳದ ಸೆಳೆತಗಳನ್ನು, ತುಡಿತಗಳನ್ನು ಅವನ ಸಂಯೋಜನಾ ಸಾಮರ್ಥ್ಯಗಳನ್ನು ಒರೆಗೆ ಹಚ್ಚಿದ್ದು, ಪ್ರಮುಖ ವಸ್ತುವಿಷಯಗಳಾದ ಬೇಟೆ ಅಥವಾ ಆಹಾರವಾದ ಪ್ರಾಣಿ ಅದನ್ನು ವಶಪಡಿಸಿಕೊಳ್ಳಲು ಬಳಸುವ ತಂತ್ರ, ತಾನು ಮತ್ತು ತನ್ನ ಸುತ್ತಲಿನ ಪರಿಸರದ ನೈಜತೆಯನ್ನು ಚಿತ್ರದ ವಸ್ತುವಾಗಿ ಬಳಸಿಕೊಂಡುದು, ಅದನ್ನು ಸಮಗ್ರವಾಗಿ ಗ್ರಹಿಸಿ, ವಿಮರ್ಶಿಸಿ ದಾಖಲಿಸಲಾಗಿದೆ. ಅಲ್ಲದೆ ಕಲ್ಲಳ್ಳಿಯ ಗೊಂಬಿಗುಡ್ಡದ ಆದಿಮಾನವನ ಕೃತಿಗಳು ಬಾದಾಮಿ ಪರಿಸರದಷ್ಟು ಹಳೆಯವಲ್ಲ.

ಅಲ್ಲಿರುವ ವಸ್ತುವಿಷಯಗಳು ತೀರಾ ಆಧುನಿಕವಾಗಿದ್ದು, ಬಾದಾಮಿ ಪರಿಸರದ ಚಿತ್ರಗಳ ಕಾಲ ಮಿತಿಗಿಂತ ತುಂಬಾ ಇತ್ತೀಚಿನವೆನಿಸುವುದನ್ನು ದಾಖಲಿಸಲಾಗಿದೆ. ಅವುಗಳನ್ನು ಇತ್ತೀಚಿನ ಅಂದರೆ ಸುಮಾರು ೧೦೦ರಿಂದ ೨೦೦ ವರ್ಷಗಳಲ್ಲಿ ದನ ಕಾಯುವ ಹುಡುಗರು ಮೂಲಚಿತ್ರಗಳನ್ನು ತಿರುಚಿರಬಹುದೆಂದು ಅಭಿಪ್ರಾಯಿಸಿದೆ.

೩. ಜಿಲ್ಲೆಯ ಅರ್ವಾಚೀನ ಕಾಲದ ಗೃಹಭಿತ್ತಿ ಚಿತ್ರಗಳಂತೂ ಅದ್ಭುತವಾದವು. ಕೆಲವೇ ಕೆಲವು ಸ್ಥಳಗಳಲ್ಲಿರುವ ಚಿತ್ರಗಳು ಈಗ ಅವಾವು ಇಲ್ಲದಿರುವಾಗ ಬಹಳ ಹಿಂದೆಯೇ ತೆಗೆದಿಟ್ಟ ಛಾಯಾ ಚಿತ್ರಗಳನ್ನು ಸಂಗ್ರಹಿಸಿ, ಅನುಲಕ್ಷಿಸಿ ಅಧ್ಯಯನ ನಡೆಸಿದ್ದು ಬಿಡಿ ಬಿಡಿಯಾಗಿ ಪತ್ರಿಕೆಗಳು ಮತ್ತು ಹೊತ್ತಿಗೆಗಳಲ್ಲಿ ದಾಖಲಾದ ಚಿತ್ರಗಳನ್ನು, ವಸ್ತುವಿಷಯ, ವಿನ್ಯಾಸ, ತಂತ್ರದೊಂದಿಗೆ ವಿಮರ್ಶೆಗೊಳಪಡಿಸಿ ಕಲಾವಿದನ ಶಿಸ್ತು, ಸಾಮರ್ಥ್ಯ, ಸಂಯೋಜನಾ ವಿಧಾನ, ವರ್ಣವಿನ್ಯಾಸಗಳನ್ನು ವಿಶೇಷವಾಗಿ ದಾಖಲಿಸಲಾಗಿದೆ. ಆ ಮೂಲಕ ಕಳಚಿಕೊಳ್ಳುತ್ತಲಿದ್ದ ಕಲಾ ಪರಂಪರೆಯ ಕೊಂಡಿಯನ್ನು ಮತ್ತೆ ಜೋಡಿಸಿಕೊಡಲು ಪ್ರಯತ್ನಿಸಲಾಗಿದೆ.

೪. ಜಿಲ್ಲೆಯ ಹಸ್ತಪ್ರತಿಗಳ ಶೇಕಡ ೮೦ರಷ್ಟು ರಾಜ್ಯದ ಹಾಗೂ ದೇಶದ ಬೇರೆಡೆಗಳಲ್ಲಿ ಸಂಗ್ರಹವಾಗಿವೆ. ಇಲ್ಲಿ ಹುಟ್ಟಿದ ಹಸ್ತಪ್ರತಿ ಚಿತ್ರಗಳು ಬೇರೆ ಬೇರೆ ಕಾಲಮಾನಗಳಲ್ಲಿ ನಶಿಸಿದ್ದು ಮತ್ತು ಕೆಲವರ ಕಣ್ಣಿಗೆ ಅದರ ಮಹತ್ವ ತಿಳಿದು ಬೇರೆ ಕಡೆ ಸ್ಥಳಾಂತರಗೊಂಡಿದ್ದು ಈಗ ಇತಿಹಾಸ. ಲಭ್ಯವಿರುವ ಶಿವಯೋಗ ಮಂದಿರ ಹಾಗೂ ಬ.ವಿ.ವಿ. ಸಂಘದಲ್ಲಿನ ಸಂಗ್ರಹಗಳನ್ನು ಆಧರಿಸಿದ ಹಸ್ತಪ್ರತಿಗಳ ಚಿತ್ರಕಲೆಯ ವಸ್ತುವಿಷಯ, ತಂತ್ರಗಳ ಅಧ್ಯಯನ ನಡೆಸಿದ್ದು, ಆ ಮೂಲಕ ಐತಿಹಾಸಿಕ ಪ್ರಜ್ಞೆ ಬೆಳೆಸಲು, ಧಾರ್ಮಿಕ ಚೌಕಟ್ಟುಗಳನ್ನು ಅರಿಯಲು ಅಧ್ಯಯನದ ಆಕರಗಳನ್ನು ಕಲೆಹಾಕಲಾಗಿದೆ. ಧಾರ್ಮಿಕ ವಿಧಿವಿಧಾನಗಳು ಹಾಗೂ ದೇವತೆಗಳ ಕಾಲ್ಪನಿಕ ಚಿತ್ರಗಳ ಬೇರೆಡೆಗಿಂತ ವಿಭಿನ್ನವಾಗಿವೆ. ನಕ್ಷಾ ಮೂಲದ ರೇಖಾ ಚಿತ್ರಗಳಂತೂ ಮಾನವನ ಕಲಾತ್ಮಕ ಕ್ರಿಯಾಶಕ್ತಿಗೆ ಮೀರಿದ್ದು ಎನ್ನುವಂತಿವೆ. ಇಂಥ ಚಿತ್ರಕಲೆಯ ಸಂಗ್ರಹದ ನೆಲೆಗಳನ್ನು ಆಧುನಿಕ ತಂತ್ರಜ್ಞಾನ, ಆಧುನಿಕ ಪರಿಕಲ್ಪನೆಗಳನ್ನು ಬಳಸಿಕೊಳ್ಳುವ ಮೂಲಕ ನಶಿಸದಂತೆ ಆಯಾ ಸಂರಕ್ಷಣಾ ನೆಲೆಗಳನ್ನು ಇನ್ನಷ್ಟು ಆಧುನಿಕಗೊಳಿಸಲು ಈ ಅಧ್ಯಯನ ಸಹಕಾರಿಯಾಗಲಿದೆ.

೫. ಇಡೀ ಜಿಲ್ಲೆಯ ಏಕೈಕ ತಾಣದ ಕುಕನೂರಿನ ತೊಗಲುಗೊಂಬೆಗಳಂತೂ ಇಂದಿಗೂ ಜನಮನ ಸೆಳೆದ ಆಟಗಳನ್ನು ಪ್ರದರ್ಶಿಸುವ ಕಲಾವಸ್ತುಗಳಾಗಿವೆ. ಬಾದಾಮಿ ತಾಲ್ಲೂಕಿನ ಕಾಕನೂರಿನ ಕಿಳ್ಳೆಕ್ಯಾತರ ಮನೆತನದವರು ಇಂದಿಗೂ ಸಂರಕ್ಷಿಸಿಕೊಂಡು ಬಂದ ತೊಗಲುಗೊಂಬೆಗಳು ಜಿಲ್ಲೆಯ ಆಸ್ತಿಯಾಗಿದೆ. ತೊಗಲನ್ನೇ ರಂಧ್ರಗಳಾಗಿಸಿ ಬೆಳಕು ಹರಿದು, ಹಿಂಬೆಳಕಿನಿಂದ ಮಿಂಚುವ ವಸ್ತುಗಳಾಗಿ ಕಾಣುವ ಬಟ್ಟೆ ಅಂಚುಗಳು, ಆಭರಣಗಳು ಬಹು ವಿಭಿನ್ನವಾದ ಕಲ್ಪನೆ ಕೊಡುವ ವಿಷಯಗಳನ್ನು ದಾಖಲಿಸಿದೆ. ಅವುಗಳ ಸಂರಕ್ಷಣೆ ಮತ್ತು ಆಟದ ಮುಂದುವರಿಕೆಯು ಪೀಳಿಗೆಯಿಂದ ಪೀಳಿಗೆಗೆ ಸಾಗಬೇಕಾದ ಅವುಗಳ ಮಹತ್ವ ಮುಂತಾದ ಸಂಗತಿಗಳನ್ನು ಜನತೆಯಲ್ಲಿ ಹರಡಲು ಈ ಅಧ್ಯಯನ ಸಹಕಾರಿಯಾಗಿದೆ ಹಾಗೂ ಈ ಅಧ್ಯಯನ ಅವುಗಳ ಮಹತ್ವ ಸಾರಿ, ರಕ್ಷಿಸಿಡುವ ಎಚ್ಚರಿಕೆಯನ್ನು ನೀಡುತ್ತದೆ.

೬. ಬಟ್ಟೆ ಮಾಧ್ಯಮ ತೀರಾ ಇತ್ತೀಚಿನದು. ಅದು ೧೦೦ ವರ್ಷಕ್ಕಿಂತ ಹಿಂದೆಯೇ ಜಿಲ್ಲೆಯ ಜನಪದ ಕಲಾವಿದರು ತಮ್ಮ ಕೈಚಳಕಗಳನ್ನು ತೋರಿ ರಚಿಸಿದ ಚಿತ್ರಗಳನ್ನು ಸಂಗ್ರಹಿಸಿ ವಸ್ತುವಿಷಯ, ತಂತ್ರಗಳನ್ನು, ವಿಭಿನ್ನ ಮೂಲಗಳಿಂದ ಸಂಗ್ರಹಿಸಿ, ಕಲಾವಿದರನ್ನು ಸಂದರ್ಶಿಸಿ ಅರಿಯಲಾಗಿದೆ. ಅಲ್ಲಿರುವ ವೈಶಿಷ್ಟ್ಯಗಳನ್ನು ಅವರ ಮಕ್ಕಳ, ಮೊಮ್ಮಕ್ಕಳಾದಿಯಾಗಿ ಮುಂದಿನವರ ಅದರ ಕುರುಹುಗಳನ್ನು ಉಳಿಸಿಕೊಂಡು ಹೋಗಲು ಈ ಅಧ್ಯಯನ ಸಹಕಾರಿಯಾಗಿದೆ. ಪರದೆ ಕೇವಲ ರಾತ್ರಿ ಮಾಡುವ ನಾಟಕಗಳ ಹಿನ್ನೆಲೆಯ ಬಟ್ಟೆ ಎಂದು ಪರಿಗಣಿಸದೆ, ಅದೊಂದು ವಿಶಿಷ್ಟ ರಂಗತಂತ್ರದ 'ಕಲೆ' ಎಂದು ಪರಿಗಣಿಸಿ, ಅಳಿದು ಹೋಗುತ್ತಲಿರುವ ಆ ಕಲೆಯ ಮಹತ್ವ ತಿಳಿದು ಸಂರಕ್ಷಿಸುವ ಹಾಗೂ ಬೆಳೆಸಿಕೊಳ್ಳುವ ದೃಷ್ಟಿಯಿಂದ ಈ ಅಧ್ಯಯನ ಸಹಕಾರಿಯಾಗಿದೆ.

೭. ಬಟ್ಟೆಯಲ್ಲಿ 'ಕ್ಯಾನ್ವಾಸ್' ಎಂಬ ಪದಕ್ಕೆ ಹೆಚ್ಚು ಮಹತ್ವವಿರುವುದು ಚಿತ್ರಕಲೆಯಲ್ಲಿ. ಕ್ಯಾನ್ವಾಸ್ ಮೇಲೆ ರಚಿಸಿದ ಜಿಲ್ಲೆಯ ಹಿರಿಯ ಕಲಾವಿದರ, ಕಲಾ ಶಿಕ್ಷಕರ, ಯುವ ಕಲಾವಿದರ ಚಿತ್ರಗಳ ಪ್ರತ್ಯೇಕವಾದ ಅಧ್ಯಯನ ನಡೆಸಿದ್ದು, ಕೆಲವರ ಕಲಾಕೃತಿಗಳ ಮೇಲೆಯೇ ಒಂದು ವಿಸ್ತಾರವಾದ ಅಧ್ಯಯನ ನಡೆಸುವಷ್ಟು ಕಲಾಕೃತಿಗಳ ಮೂಲ ಸಾಮಗ್ರಿ ಇದೆ. ಅಲ್ಲಲ್ಲಿ ಸಂಗ್ರಹಿತವಾದ ಕೃತಿಗಳನ್ನು ಸಂರಕ್ಷಿಸುವ ಮತ್ತು ಅವುಗಳ ಮಹತ್ವವನ್ನು ಮುಂದಿನ ಪೀಳಿಗೆಗೆ ವರ್ಗಾಯಿಸುವ ಮಹತ್ವದ ಕೆಲಸಗಳತ್ತ ಗಮನ ಸೆಳೆಯುವುದು ಮತ್ತು ಅವುಗಳ ಶೈಲಿ, ತಂತ್ರಗಳನ್ನು ಪ್ರತ್ಯೇಕವಾಗಿ ಅಭ್ಯಸಿಸುವ ಅಗತ್ಯವನ್ನು ಸೂಚಿಸಿದೆ. ಅಲ್ಲದೆ ಆಯಾ ಕಲಾವಿದರ ಕಲಾಕೃತಿಗಳ ಸಂಯೋಜನಾ ಸಿದ್ಧತೆಗಳು ಮುಂದಿನ ಕಲಾವಿದ ಪೀಳಿಗೆಗೆ ಮಾರ್ಗದರ್ಶಿಯಾಗಬಲ್ಲವೆಂಬ ಆಶಯದೊಂದಿಗೆ ಈ ನಿಟ್ಟಿನ ಅಧ್ಯಯನ ನಡೆಸಲಾಗಿದೆ.

೮. ಗಾಜಿನ ಮೇಲಿನ ಚಿತ್ರಗಳನ್ನು ಜಿಲ್ಲೆಯಲ್ಲಿ ಸಂಗ್ರಹಿತ, ಸಂರಕ್ಷಿತ ಚಿತ್ರಗಳಲ್ಲಿನ ವಸ್ತುವಿಷಯ, ವಿನ್ಯಾಸ, ತಂತ್ರಾದಿಗಳಿಂದ ಅವುಗಳ ಬೆಲೆಯನ್ನು, ಮಹತ್ವವನ್ನು ಮನಗಾಣಿಸಲಾಗಿದೆ. ತುಂಬಾ ತಾಳ್ಮೆ ವಹಿಸಿ ಅಂದರೆ ಮೊದಲು ಹೊರ ರೇಖೆ ಕಣ್ಣು, ಮೂಗು, ಆಭರಣ ಎಲ್ಲಾ ಮಾಡಿಕೊಂಡು ಆಮೇಲೆ ಚಪ್ಪಟೆಯಾಗಿ ಬಣ್ಣವನ್ನು ಹಾಕಿ ವಿನ್ಯಾಸಗೊಳಿಸಿದ್ದು, ಕಲಾವಿದನ ಸೃಜನಶೀಲತೆ ಹಾಗೂ ಸಂಯೋಜನಾಶೀಲತೆಗಳಾಗಿದ್ದು, ಅದನ್ನು ಈ ಅಧ್ಯಯನಕ್ಕೆ ಒಳಪಡಿಸಿ, ಅವುಗಳ ಮಹತ್ವ ತಿಳಿಸಿ, ಅವುಗಳ ಸಂರಕ್ಷಣೆಗಾಗಿ ಅರಿವು ಮೂಡಿಸಲು ಈ ಅಧ್ಯಯನ ಸಹಕಾರಿಯಾಗಿದೆ.

'ಮ್ಯಾಕ್ರೊ' ಅಧ್ಯಯನಗಳು ವಿಸ್ತೃತ ವ್ಯಾಪ್ತಿಯವು. ಅಂಥವುಗಳಲ್ಲಿ 'ಮೈಕ್ರೊ' ಅಧ್ಯಯನಗಳು ಅಲಕ್ಷ್ಯಕ್ಕೆ ಒಳಗಾಗಬಹುದು ಅಥವಾ ವಿಸ್ತೃತ ಅಧ್ಯಯನದಲ್ಲಿ ಅವು ಮಸುಕಾಗಬಹುದು. ಅಂಥಲ್ಲಿ ಸ್ಥಳೀಯವಾದ ಕಲೆಗಳು, ಕಲಾ ಪ್ರಕಾರಗಳು, ಸ್ಥಳೀಯ ಪ್ರತಿಭೆಗಳು, ಸ್ಥಳೀಯ ನೈಪುಣ್ಯಗಳು, ಪ್ರಾದೇಶಿಕ ವೈಶಿಷ್ಟ್ಯಗಳು ಅಲಕ್ಷ್ಯಕ್ಕೆ ಗುರಿಯಾಗಬಹುದು. ಇಂಥದು ಕಲಾ ಪರಂಪರೆ, ಕಲಾ ಚರಿತ್ರೆಗೆ ಊನವನ್ನು ಉಂಟುಮಾಡುತ್ತದೆ. ಅಂಥ ಊನ ತುಂಬಲು 'ಮೈಕ್ರೊ' ಅಧ್ಯಯನಗಳು ಅವಶ್ಯ ಮತ್ತು ಅಗತ್ಯ. ಅಂಥ ಒಂದು ಮಹತ್ವದ ಉದ್ದೇಶದಿಂದಲೇ ಒಂದು ಜಿಲ್ಲೆ, ವಿಶೇಷವಾಗಿ ಹಲವಾರು ಕಲಾ ಪರಂಪರೆಗಳನ್ನು ಪೋಷಿಸುತ್ತಾ ಬಂದ ಬಾಗಲಕೋಟೆ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅದರಲ್ಲೂ ಕೃಷ್ಣಾ

ಮೇಲ್ದಂಡೆ ಯೋಜನೆಯಡಿ ಅನೇಕ ಗ್ರಾಮಗಳು ಮುಳುಗಡೆಯಾಗಿವೆ. ಇಲ್ಲಿ ಒಂದು ಸಾಂಸ್ಕೃತಿಕ ಸ್ಥಳಾಂತರವೇ ಆದಂತಿದೆ. ಆ ದೃಷ್ಟಿಯಿಂದಲೂ ಈ ಅಧ್ಯಯನಕ್ಕೆ ವಿಶೇಷ ಮಹತ್ವ ಪ್ರಾಪ್ತವಾಗುತ್ತದೆ. ಈ ಅಧ್ಯಯನದ ಮೂಲಕ ಇಂಥ ಕೊರತೆಯನ್ನು ನಿವಾರಿಸುವಲ್ಲಿ ಮತ್ತು ಚರಿತ್ರೆಗೆ ಹೊಸ ದಿಕ್ಕು ತೋರುವಲ್ಲಿ ತೋರುವಲ್ಲಿ ಇದು ನೆರವಾಗುತ್ತದೆ ಎಂದು ಸೂಚಿಸುತ್ತಾ ಇದೇ ಬಗೆಯಲ್ಲಿ ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳ ಈ ಬಗೆಯ ಅಧ್ಯಯನಕ್ಕೆ ನನ್ನ ಈ ಸಂಶೋಧನಾ ಪ್ರಬಂಧವು ಮಾದರಿಯಾಗಲಿ ಎಂಬ ಆಶಯ ನನ್ನದು.





ಅನುಬಂಧಗಳು

೧. ಗ್ರಂಥಋಣ

೨. ನಕ್ಷೆಗಳು

# ಗ್ರಂಥಋಣ

೧. ಅಚ್ಚರಿ ಮೂಡಿಸುವ ಗಾಜಿನ ಚಿತ್ತಾರ, ಮಹಾದೇವ ಮ. ಜಗತಾಪ(ಲೇ), ಸಂಯುಕ್ತ ಕರ್ನಾಟಕ, ೨೮.೧೧.೨೦೦೮.

೨. ಇಂಡಿಯನ್ ರಾಕ್ ಆರ್ಟ್, ಎಸ್.ಕೆ. ಪಾಂಡೆ, ಪು. ೩೫.

೩. ಇತಿಹಾಸ ದರ್ಶನ(ಸಂಪುಟ ೧೩), ಶಿಲಾಕಾಂತ ಪತ್ತಾರ್, ಮತ್ತೆರಡು ಚಾಲುಕ್ಯ ವರ್ಣಚಿತ್ರಗಳ ಶೋಧ, ಪು. ೧೧೭-೧೧೯.

೪. ಇಂಡಿಯನ್ ಮಲಯ ಆ್ಯಂಡ್ ಬ್ರೋನಿಯೋ-ಟಿವೋ ಮಿಲೇನಿಯಾ ಆಫ್ ಕಾಂಟ್ಯಾಕ್ಟ್ಸ್ ಆ್ಯಂಡ್ ಕಲ್ಚರಲ್ ಸಿಂತೆಸಿಸ್ ಇನ್ ಇಂಡಿಯಾಸ್ ಕಾಂಟ್ರಿಬ್ಯೂಷನ್ ಟು ವರ್ಲ್ಡ್ ತಾಟ್ ಆ್ಯಂಡ್ ಕಲ್ಚರ್, ದೇವಂತ ಡಿ. ಪು. ೫೧೯

೫. ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಡಾ. ಯಾದಪ್ಪ ಪರದೇಶಿ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೬. ಉತ್ತರ ಕರ್ನಾಟಕದ ಜನಪದ ಕಲೆ ಮತ್ತು ವಿಧಿಕ್ರಿಯೆ, ಎ.ವಿ. ಪಾಟೀಲ(ಲೇ), ಅಪ್ರಕಟಿತ ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೨.

೭. ಉದ್ಧರಣೆ ಸಾಹಿತ್ಯ, ಡಾ.ಕೆ. ರವೀಂದ್ರನಾಥ(ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೮. ಐತಿಹಾಸಿಕ ಬಾದಾಮಿ ಪರಿಚಯ, ಆನಂದ ಕೆ. ಪೂಜಾರ(ಲೇ), ಶಾಂಭವಿ ಪ್ರಕಾಶನ, ಬಾದಾಮಿ, ೨೦೦೦.

೯. ಕರ್ನಾಟಕದ ಜನಪದ ಚಿತ್ರಕಲೆ, ಡಾ.ಎಸ್.ಸಿ.ಪಾಟೀಲ(ಲೇ), ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೩.

೧೦. ಕರ್ನಾಟಕ ಚರಿತ್ರೆ ಮಾಲೆ ಸಂಪುಟಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೧೧. ಕರ್ನಾಟಕ ಜನಪದ ಚಿತ್ತಾರಗಳು ಹಾಗೂ ಶಿಲ್ಪಗಳು, ಮಹಾದೇವ ಜಗತಾಪ(ಲೇ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೧೨. **ಕಲಾಚರಿತ್ರೆ,** ಅಶೋಕ ಟಿ ಅಕ್ಕಿ, ಪು. ೧೦೮.

೧೩. **ಕರ್ನಾಟಕ ಚರಿತ್ರೆ(ಸಂಪುಟ ೬),** ಪರ್ವಿನ್ ಸುಲ್ತಾನ್, ಪು. ೧೭೭.

೧೪. **ಕರ್ನಾಟಕದ ಭಿತ್ತಿಚಿತ್ರ ಪರಂಪರೆ,** ಡಾ.ಅ.ಲ. ನರಸಿಂಹನ್(ಲೇ), ಲಲಿತಕಲಾ ಅಕಾಡೆಮಿ, ಬೆಂಗಳೂರು,

೧೫. **ಕರ್ನಾಟಕದ ಭಿತ್ತಿ ಚಿತ್ರಗಳು,** ಬಿ.ವಿ.ಕೆ.ಶಾಸ್ತ್ರಿ(ಲೇ), ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೮೩.

೧೬. **ಕರ್ನಾಟಕ ಹಸ್ತಪ್ರತಿಗಳು,** ಡಾ.ಬಿ.ಕೆ. ಹಿರೇಮಠ(ಲೇ), ವೀರಶೈವ ಅಧ್ಯಯನ ವೇದಿಕೆ, ಜಂಬಗಿ, ೧೯೯೨.

೧೭. **ಕರ್ನಾಟಕದಲ್ಲಿನ ಚಿತ್ರಕಲೆ,** ಶಿವರಾಂ ಕಾರಂತ(ಲೇ), ಪ್ರಸಾರಾಂಗ, ಮೈಸೂರು, ವಿಶ್ವವಿದ್ಯಾಲಯ, ೧೯೭೧.

೧೮. **ಕರ್ನಾಟಕ ಚಿತ್ರಕಲೆಯಲ್ಲಿ ಬಣ್ಣದ ಬಳಕೆ,** ಕೆ.ವಿ. ಕಾಳೆ(ಲೇ), ಲಲಿತಕಲಾ ಅಕಾಡೆಮಿ, ೫.೪.೧೯೫೫.

೧೯. **ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ,** ಸಿಂದಗಿ ರಾಜಶೇಖರ, ಸುಜಾತಾ ಪಬ್ಲಿಕೇಶನ್, ಧಾರವಾಡ.

೨೦. **ಕಲಾ ಪ್ರಪಂಚ,** ಡಾ. ಶಿವರಾಮಕಾರಂತ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೧. **Glass paintings continue to attract(ಲೇ),** visitors to guledgudd, ಪ್ರವೀಣರಾಜು ಸೊನ್ನದ.

೨೨. **ಗೊಂಬಿಗುಡ್ಡ ರಕ್ಷಣೆ,** ಡಾ.ಎಚ್.ಜಿ. ದಡ್ಡಿ ವೈದ್ಯರು(ಲೇ), ಸಂಯುಕ್ತ ಕರ್ನಾಟಕ.

೨೩. **ಚಾಲುಕ್ಯಶ್ರೀ,** ಅ. ಸುಂದರ, 'ವಿಶಿಷ್ಟ ವರ್ಣ ಚಿತ್ರಕಲೆಯ ಆಗರ', ಬಾದಾಮಿ, ಪು. ೧೧೮.

೨೪. **'ಚಿತ್ರಾಕ್ಷಿ' ಜನಪದ ಚಿತ್ರಕಲೆಯ ಪ್ರಾಚೀನತೆ,** ಡಾ.ಎಸ್.ಸಿ. ಪಾಟೀಲ(ಸಂ), ವಜ್ರಮಹೋತ್ಸವ ಸ್ಮರಣ ಸಂಚಿಕೆ, ೧೯೯೫.

೨೫. **ಚಿತ್ರಕಲಾ ಪ್ರಪಂಚ,** ಪಿ.ಆರ್. ತಿಪ್ಪೇಸ್ವಾಮಿ(ಸಂ), ಪು. ೧೫.

೨೬. **ಜನಪದ ವಿಶ್ವಕೋಶ,** ಬಿ.ಎಸ್. ಗದ್ದಗಿಮಠ, 'ಗರಡಿ', ಪು. ೪೨೫-೪೨೬.

27. **Techniques in Indian Mural Painting,** Jayanth Chakravarti.

೨೮. **ತ್ರೈಲೋಕ್ಯ(ಸಂಸ್ಮರಣ ಸಂಪುಟ),** ಡಾ. ವೀರೇಶ ಬಡಿಗೇರ, ಜಿಲ್ಲೆಯ ಹಸ್ತಪ್ರತಿ ಲಿಪಿಕಾರರ ಮತ್ತು ಪೋಷಕರ ಪರಂಪರೆ, ಪು. ೮೯-೯೯.

೨೯. ನಿಜದ ನೆಲೆ, ಪ್ರಾ.ಬಿ.ಕೆ. ಹಿರೇಮಠ ಅಭಿನಂದನ ಗ್ರಂಥ, ಬಿ.ಆರ್. ಹಿರೇಮಠ(ಪ್ರ.ಸಂ), ಎಸ್.ಸಿ. ಪಾಟೀಲ(ಸಂ), ಪ್ರ.ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ, ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟೆ.

30. **Pre-Historic Arts in India,** Gajendra S. Tyagi.

೩೧. **ಪ್ರಿ-ಹಿಸ್ಟಾರಿಕ್ ರಾಕ್ ಪೇಂಟಿಂಗ್ಸ್ ಆಫ್ ಬಿಂಬೇಟ್ಕಾ,** ಯಶೋಧರ ಮತಪಾಲಿ, ಪು. ೯.

೩೨. **ಪ್ರಬುದ್ಧ ಕರ್ನಾಟಕ(ಸಂಪುಟ ೨೩, ೩.೮.೧೯೪೩),** ಶ್ರೀ ಬಿ.ವಿ.ಕೆ. ಶಾಸ್ತ್ರಿ, 'ಪ್ರಾಚೀನ ಚಿತ್ರಕಲೆ'.

೩೩. **ಬಣ್ಣಗಳು ಮತ್ತು ಬಣ್ಣ ಹಾಕುವ ಕಲೆ,** ಜಿ.ಎ. ಕಲ್ಲೂರ.

೩೪. **ಬಾದಾಮಿ ಸಾಂಸ್ಕೃತಿಕ ಅಧ್ಯಯನ,** ಡಾ. ಶಿಲಾಕಾಂತ ಪತ್ತಾರ(ಲೇ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. **ಬಾದಾಮಿ ಒಂದು ಸಾಂಸ್ಕೃತಿಕ ಅಧ್ಯಯನ,** ಡಾ. ಶಿಲಾಕಾಂತ ಪತ್ತಾರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೩೬. **ಭಾರತೀಯ ಚಿತ್ರಕಲೆ,** ಬಿ.ಪಿ. ಬಾಯಿರಿ, ಪ್ರತಿಭಾ ಗ್ರಂಥಮಾಲೆ, ಧಾರವಾಡ.

೩೭. **ಬೆಳದಿಂಗಪ್ಪನ ಪೂಜೆ,** ಅಗ್ರಹಾರ ಕೃಷ್ಣಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

೩೮. **ಬೆಳದಿಂಗಳ ಚಿತ್ರಕಲೆ,** ಆನಂದ ಕೆ. ಪೂಜಾರ, ಪು. ೧೫-೧೬.

೩೯. **ಮಾದಕ ಚಲುವಿನ ಮದರಂಗಿ,** ಯು.ಬಿ. ರಾಜಲಕ್ಷ್ಮಿ, ತರಂಗ, ೨ ಸೆಪ್ಟೆಂಬರ್, ೧೯೯೦, ಪು.೨೫

40. **Lalitakala Western Chalukya Paintings,** C. Sivaramamurti(ಲೇ), at Badami, April, 1959.

೪೧. **ವರ್ಣಸಂಚಯ,** ಡಾ.ಎಸ್.ಸಿ. ಪಾಟೀಲ(ಲೇ), ವಿಜಯ ಚಿತ್ರಕಲಾ ಮಹಾವಿದ್ಯಾಲಯ, ಇಲಕಲ್ಲ, ೨೦೦೧.

೪೨. **ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ,** ಡಾ. ಮೋಹನ್‌ಕೃಷ್ಣ ರೈ, ಪು. ೪೯.

೪೩. **'ವರ್ಣಚಿತ್ರಗಳ ಪ್ರಾಚೀನ ಗವಿಗಳು ಪತ್ತೆ',** ಪ್ರಕಾಶ ಗುಳೇದಗುಡ್ಡ, ೨೮.೫.೨೦೧೩, ಪ್ರಜಾವಾಣಿ, ಪು.೧.

೪೪. **ವಿಜಾಪುರ ಜಿಲ್ಲೆಯ ಗ್ಯಾಸಿಟಿಯರ್,** ಆರ್.ಮುನಿಸ್ವಾಮಿ(ಮು.ಸಂ), ಕರ್ನಾಟಕ ರಾಜ್ಯ ಸರಕಾರ, ೧೯೯೯.

೪೫. **ಹಸ್ತಪ್ರತಿ ವ್ಯಾಸಂಗ,** ಪ್ರೊ.ಎ.ವಿ. ನಾವಡ, ಎಸ್.ಎಸ್. ಅಂಗಡಿ(ಸಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೪೬. **ಹಸ್ತಪ್ರತಿ ವ್ಯಾಸಂಗ,** ಡಾ.ಕೆ. ರವೀಂದ್ರನಾಥ(ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

## ○ ಬಾಗಲಕೋಟೆ ಜಿಲ್ಲೆಯ ವ್ಯಾಪ್ತಿ ನಕ್ಷೆ, ಅಧ್ಯಯನ ಉದ್ದೇಶಿತ ತಾಣಗಳು




೧) ಕುಲ್ಲೊಳ್ಳಿ – ಶಿಲಾಶ್ರಯ ಚಿತ್ರಗಳು
೨) ಜಮಖಂಡಿ – ಅರಮನೆ ಭಿತ್ತಿ ಚಿತ್ರಗಳು
೩) ಗುಳೇದಗುಡ್ಡ – ಭಿತ್ತಿ ಹಾಗೂ ಗಾಜಿನ ಚಿತ್ರಗಳು
೪) ಅಮೀನಗಡ – ಗಾಜಿನ ಚಿತ್ರಗಳು
೫) ಇಲಕಲ್ಲ – ಶ್ರೀಮಠ ಹಾಗೂ ರಂಗಪರದೆ ಚಿತ್ರಗಳು
೬) ಬಾಗಲಕೋಟೆ – ಬ.ವಿ.ವಿ ಸಂಘದಲ್ಲಿ ಹಸ್ತಪ್ರತಿಗಳು, ಮುಳುಗಡೆ ಜನಪದ ವಸ್ತು ಸಂಗ್ರಹಾಲಯ ಹಾಗೂ ಗಾಜಿನ ಚಿತ್ರಗಳು
೭) ಶಿವಯೋಗ ಮಂದಿರ – ಹಸ್ತಪ್ರತಿಗಳು
೮) ಕಾಕನೂರ – ತೊಗಲುಗೊಂಬೆ
೯) ಬಾದಾಮಿ – ಶಿಲಾಶ್ರಯ , ಭಿತ್ತಿ ಚಿತ್ರಗಳು , ಗರಡಿಮನಿ ಹಾಗೂ ಗಾಜಿನ ಚಿತ್ರಗಳು
೧೦) ಮಹಾಕೂಟ – ಶಿಲಾಶ್ರಯ ಚಿತ್ರಗಳು
೧೧) ಕುಟಕನಕೇರಿ – ಶಿಲಾಶ್ರಯ ಚಿತ್ರಗಳು
೧೨) ಮಹಾಲಿಂಗಪೂರ – ಭಿತ್ತಿ ಚಿತ್ರಗಳು
೧೩) ನೂತನವಾಗಿ ಆವಿಷ್ಕಾರಗೊಂಡ ಹುಲಿಘಡಿ

